# ಡಿ.ಎಲ್.ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕ
ವಿಜಯಶಂಕರ ಭರಮಪ್ಪ

ಮಾರ್ಗದರ್ಶಕರು
ಡಾ. ಎಸ್.ಎಸ್.ಅಂಗಡಿ
ಪ್ರಾಧ್ಯಾಪಕರು




ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಡಿ.ಎಲ್.ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕ

**ವಿಜಯಶಂಕರ ಭರಮಪ್ಪ**



ಮಾರ್ಗದರ್ಶಕರು

**ಡಾ. ಎಸ್.ಎಸ್.ಅಂಗಡಿ**

**ಪ್ರಾಧ್ಯಾಪಕರು**



**ಭಾಷಾ ನಿಕಾಯ**

**ಹಸ್ತಪ್ರತಿಶಾಸ್ತ್ರ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# ಪ್ರಮಾಣ ಪತ್ರ

**"ಡಿ.ಎಲ್. ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ"** ಎಂಬ ಶೀರ್ಷಿಕೆಯ ನಿಬಂಧವನ್ನು ೨೦೧೮-೧೯ನೇ ಶೈಕ್ಷಣಿಕ ಸಾಲಿನಲ್ಲಿ ವಿಭಾಗದ ಪ್ರಾಧ್ಯಾಪಕರಾದ ಡಾ.ಎಸ್.ಎಸ್. ಅಂಗಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ನಿಬಂಧವನ್ನು ಪೂರ್ಣವಾಗಿಯಾಗಲಿ, ಅಂಶಿಕವಾಗಿಯಾಗಲಿ ಯಾವುದೇ ಪದವಿಗಾಗಿ ಈ ಮೊದಲು ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೨.೪.೨೦೧೮
ಸ್ಥಳ : ವಿದ್ಯಾರಣ್ಯ

**ವಿಜಯಶಂಕರ ಭರಮಪ್ಪ**
ಎಂ.ಎ. ಪಿಎಚ್.ಡಿ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**"ಡಿ.ಎಲ್. ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ"** ಎಂಬ ಶೀರ್ಷಿಕೆಯ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ವಿಜಯಶಂಕರ ಭರಮಪ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪ್ರಸ್ತುತ ನಿಬಂಧವಾಗಲೀ ಅಥವಾ ಯಾವುದೇ ಭಾಗವನ್ನಾಗಲೀ ಈ ಮೊದಲು ಬೇರೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೨.೪.೨೦೧೮
ಸ್ಥಳ : ವಿದ್ಯಾರಣ್ಯ

ಡಾ. ಎಸ್.ಎಸ್.ಅಂಗಡಿ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

# ಡಿ.ಎಲ್. ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ

## ಪರಿವಿಡಿ

# ಅಧ್ಯಾಯ – ಒಂದು

## ಅಧ್ಯಯನದ ಉದ್ದೇಶ, ವಿಧಾನ ಮತ್ತು ವ್ಯಾಪ್ತಿ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವಿಧಾನ ಮತ್ತು ವ್ಯಾಪ್ತಿ

**ಪ್ರಸ್ತಾವನೆ :**

ಕನ್ನಡ ಸಾಹಿತ್ಯದ ಶ್ರೇಷ್ಠವಿದ್ವಾಂಸರಲ್ಲಿ ಡಿ.ಎಲ್.ನರಸಿಂಹಾಚಾರ್ಯರು ಒಬ್ಬರು. ಕನ್ನಡ ನಾಡು–ನುಡಿಯ ಸೇವೆಗೆ ಸತತವಾಗಿ ಶ್ರಮಿಸಿದವರು. ಸದಾ ಚಿಂತನಾಶೀಲ ವಿಚಾರಗಳನೊಂದಿದ ಕ್ರಿಯಾಶೀಲ ವ್ಯಕ್ತಿಯಾಗಿದ್ದ ಅವರು ಉತ್ತಮ ಸಂಶೋಧಕರೂ ಆಗಿದ್ದವರು. ಡಿ.ಎಲ್.ಎನ್. ಅವರು ಬಹುಭಾಷಾ ಪಂಡಿತರಾಗಿದ್ದರಲ್ಲದೇ, ೧೯ ಕ್ಕೂ ಅಧಿಕ ಪ್ರಾಚೀನ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ನಾಲ್ಕು ಕೃತಿಗಳನ್ನು ಸ್ವತಂತ್ರವಾಗಿ ರಚಿಸಿದ್ದು ಇದರಲ್ಲಿ ೯೦ ಕ್ಕೂ ಅಧಿಕ ಸಂಶೋಧನಾತ್ಮಕ ಲೇಖನಗಳನ್ನೊಂದಿದ ಪೀಠಿಕೆಗಳು ಲೇಖನಗಳು ಕೃತಿಯೂ ಒಂದಾಗಿದೆ. ತಮ್ಮ ಚಿಂತನಶೀಲ ವಿಚಾರಗಳನ್ನು ಶಿಷ್ಯ ಪರಂಪರೆಗೆ ಹಂಚುವ ಮೂಲಕ ಉತ್ತಮ ಹಾದಿಯನ್ನು ಹಾಕಿಕೊಟ್ಟವರಾಗಿದ್ದಾರೆ.

ಇನ್ನೊಂದು ರೀತಿಯಾಗಿ ಚರ್ಚಿಸುವುದಾದರೇ ನವೋದಯ–ನವ್ಯದ ವಸಾಹತು ಕಾಲಘಟ್ಟದ ವಿಚಾರವಾಗಿ ಹಲವಾರು ಸಂಚಲನಗಳು ಸೃಷ್ಠಿಯಾಗಿದ್ದವು. ಅದರ ಪರಿಣಾಮವಾಗಿ ಇಂಗ್ಲಿಷ್ ಶಿಕ್ಷಣವೆನ್ನುವುದು ಸಮಾಜಕ್ಕೆ ರೂಢಿಗತವಾಗಿ ರೂಪಗೊಂಡು ಶಿಕ್ಷಿತವರ್ಗದ ಆಲೋಚನೆ, ಅಭಿರುಚಿಗಳಲ್ಲಾದ ಬದಲಾವಣೆಗಳ ಪರಿಣಾಮವಾಗಿ ನಮ್ಮ ಭಾಷೆ, ಸಾಹಿತ್ಯ ಮುನ್ನೆಡೆ ಸಾಧಿಸಲು ನಾಂದಿಯಾಯಿತು. ಇದರ ಪರಿಣಾಮವಾಗಿ ಈ ವರೆಗೆ ನಾಡಿನೆಲ್ಲೆಡೆ ನೆಲೆನಿಂತಿದ್ದ ಸಂಸ್ಕೃತದ ಪ್ರಭಾವ ತಗ್ಗಿ ಜನಸಾಮಾನ್ಯರಿಗೂ ಅರ್ಥವಾಗುವ ಮಟ್ಟಿಗೆ, ಗದ್ಯ, ಪದ್ಯಶೈಲಿಗಳು ಸರಳ ಮಾದರಿಯಲ್ಲಿ ಬೆಳೆದು ಬಂದವಾಗಿವೆ. ಇನ್ನೊಂದು ಮುಖವಾಗಿ ಈ ಹಿಂದೆ ೧೯ನೇ ಶತಮಾನದ ಪೂರ್ವಾರ್ಧದಿಂದ ಪಾಶ್ಚಾತ್ಯ ವಿದ್ವಾಂಸರುಗಳ ಮಾಗದರ್ಶನದಲ್ಲಿ ಪ್ರಾಚೀನ ಕಾವ್ಯ, ಕೃತಿ ಇತರೆ ಸಾಹಿತ್ಯ ಇತ್ಯಾದಿಗಳನ್ನು ಸಂಪಾದಿಸಿ ಸಂಕಲಿಸುವ ಕಾರ್ಯವೂ ಕೊನೆಗೊಂಡು ಸ್ವತಂತ್ರವಾಗಿ ನಾಡಿನ ಪ್ರಮುಖ ವಿದ್ವಾಂಸರ ಸಂಪಾದನೆ, ಸಂಕಲನ ಕಾರ್ಯಭಾರಪೂರವಾಗಿ ನಡೆದದ್ದಾಗಿತ್ತು. ಇದಕ್ಕೆ ಪೂರಕವೆಂಬಂತೆ

ಅಂದಿನ ಪಂಡಿತವರ್ಗಗಳಲ್ಲಿ ಪ್ರಮುಖರಾದ, ಆರ್.ನರಸಿಂಹಾಚಾರ್ ಎಸ್.ಜಿ.ನರಸಿಂಹಾಚಾರ್, ಬಿ.ಎಂ.ಶ್ರೀಕಂಠಯ್ಯ, ತೀ.ನಂ.ಶ್ರೀಕಂಠಯ್ಯ, ಎ.ಆರ್.ಕೃಷ್ಣಶಾಸ್ತ್ರೀ, ತಿರುವಳ್ಳೂರು ಶ್ರೀನಿವಾಸ ಜೋಯಿಸರು, ಕುವೆಂಪು, ಬೇಂದ್ರೆ ಯಂತಹ ಮುಂತಾದ ವಿದ್ವತ್ ವಲಯವೇ ಸಂಘಟಿತವಾಗಿದ್ದು ಇಂತಹ ವಿದ್ಯುನ್ಮಾನಗಳಿಗೆ ಸಾರಥ್ಯವಾಗಿ ಇವರುಗಳ ಶಿಷ್ಯಪರಂಪರೆ ಅನುಸರಿತ ವಿದ್ವಾಂಸರಾಗಿ ಹಂಪನಾಗರಾಜಯ್ಯ, ಎಂ.ಚಿದಾನಂದಮೂರ್ತಿ, ಟಿ.ವಿ.ವೆಂಕಟಾಚಲಶಾಸ್ತ್ರೀ, ಎಂ.ಎಂ.ಕಲಬುರ್ಗಿ, ಚಂದ್ರಶೇಖರ ಕಂಬಾರ ರಂತಹ ಪರಂಪರೆಯು ಇಂದಿಗೂ ಮುನ್ನೆಡೆದಿದೆ. ಇವರುಗಳು ಸಾಹಿತ್ಯವಲಯದ ತಂತಮ್ಮ ವಿವಿಧ ಅಭಿರುಚಿ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡು ಕನ್ನಡದ ವಿಸ್ತಾರತೆಗೆ ಹಾದಿಯಾಗಿದ್ದಾರೆ. ಇಂತಹ ಪರಂಪರೆಗೆ ಸೇರಿದ್ದವರಲ್ಲೊಬ್ಬರು ಪ್ರೊ.ಡಿ.ಎಲ್.ನರಸಿಂಹಾಚಾರ್ಯರು.

ಈವರೆಗೆ ಡಿ.ಎಲ್.ನರಸಿಂಹಾಚಾರ್ ಅವರ ಒಟ್ಟು ಸಾಹಿತ್ಯವು ಇಡಿಯಾಗಿ ಆಗಲಿ ಅಥವಾ ಬಿಡಿಯಾಗಿ ಆಗಲಿ ಅಧ್ಯಯನಗಳು ನಡೆದಿಲ್ಲ. ಇದನ್ನು ಮನಗಂಡು 'ಡಿ.ಎಲ್.ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ' ಶೀರ್ಷಿಕೆಯಡಿಯಲ್ಲಿ ಡಿ.ಎಲ್.ಎನ್. ಅವರ ಒಟ್ಟು ಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಡಿ.ಎಲ್.ಎನ್. ರವರು ತಮ್ಮ ಜೀವಿತಾವಧಿಯಲ್ಲಿ ನಡೆಸಿದ ಸಾಹಿತ್ಯ ಕೃಷಿಯ ಸಂಪಾದನಾ ಸ್ವತಂತ್ರ ಇತರೆ ಸಂಶೋಧನಾತ್ಮಕ ಲೇಖನಗಳೊಂದಿಗೆ ಕನ್ನಡ ಸಾಹಿತ್ಯಪರ ಚಿಂತನೆಗಳನ್ನು ಸಮಗ್ರವಾಗಿ ನಿರೂಪಿತಗೊಳಿಸಲಾಗಿದೆ.

ಮುಂದುವರೆದು 'ವಡ್ಡಾರಾಧನೆ', 'ಶಬ್ದಮಣಿದರ್ಪಣ', 'ಗ್ರಂಥಸಂಪಾದನೆ'ಗಳಂತಹ ಕೆಲವು ಕೃತಿಗಳಿಂದ ಗುರುತಿಸಿಕೊಂಡ ಡಿ.ಎಲ್.ಎನ್ ಅವರು ತಮ್ಮ ಇತರೆ ಸಾಹಿತ್ಯ ಬರಹಗಳಾದ 'ಸುಕುಮಾರಚರಿತಂ', 'ಸಕಲವೈದ್ಯಸಂಹಿತಾಸಾರಾರ್ಣವಂ', 'ಪಂಪಭಾರತ ದೀಪಿಕೆ', 'ಕವಿ–ಕಾವ್ಯ ಕಾಲವಿಚಾರ' ಕಾವ್ಯ ವಿಮರ್ಶೆ, ಮುನ್ನುಡಿ ಲಲಿತ ಪ್ರಬಂಧ ಶಬ್ದಾರ್ಥ ನಿರ್ಣಯಗಳಂತಹ ಇತರೆ ಸಾಹಿತ್ಯವು ಎಲೆಮರೆಯ ಕಾಯಿಯಂತೆ ಉಳಿದುಕೊಂಡಿತ್ತು. ಇಂತಹ ಅವರ ಎಲ್ಲಾ ಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡಲು ಮುಂದಾದಾಗ ಅಧ್ಯಯನಕ್ಕೆ ಪೂರಕವೆಂಬಂತೆ, ಬಿ.ವಿ.ವೈಕುಂಠರಾಜು ಅವರ 'ಪ್ರೊ.ಡಿ.ಎಲ್.ನರಸಿಂಹಾಚಾರ್', ಎಸ್.ವಿದ್ಯಾಶಂಕರ ಅವರ 'ಡಿ.ಎಲ್.ನರಸಿಂಹಾಚಾರ್' ಎಂಬ ಕೃತಿಗಳು ಜ್ಞಾನೋಪಾಸಕ 'ಉಪಾಯನ', 'ಡಿ.ಎಲ್.ನರಸಿಂಹಾಚಾರ್ ಶತಮಾನಸ್ಮರಣೆ' ಎಂಬ ಅಭಿನಂದನಾ ಗ್ರಂಥಗಳು ಅಧ್ಯಯನ ಪೂರಕ ಸಹಾಯಕ ಗ್ರಂಥಗಳಾಗಿವೆ. ಆಗಸ್ಟ್ ೧೯೭೧ರ ಕನ್ನಡ ನುಡಿಯು, ಡಿ.ಎಲ್.ಎನ್. ಅವರ ಕುರಿತು ಪ್ರಕಟಗೊಂಡ ಸ್ಮರಣ ಸಂಚಿಕೆ. ಇತರೆ ಹತ್ತಾರು ಬಿಡಿ ಲೇಖನಗಳು ಇವರ ವ್ಯಕ್ತಿಗತ, ಸಾಹಿತ್ಯಿಕ ವಿಚಾರಗಳ ಕುರಿತು ಚಿತ್ರಿಸಿದ್ದು ಹೊರತು ಪಡಿಸಿದರೆ ವಿಸ್ತೃತವಾದ ಯಾವುದೇ ಗಂಭೀರ ಅಧ್ಯಯನಗಳು

ಈವರೆಗೆ ನಡೆದಿಲ್ಲ, ಆದ್ದರಿಂದ ಸಮಗ್ರವಾಗಿ ಸಂಶೋಧನೆ ಕೈಗೊಳ್ಳಲು ಈ ಅಧ್ಯಯನ ಪ್ರಸ್ತುತವಾಗಿದೆ.

ಡಿ.ಎಲ್.ಎನ್. ಅವರ ಕುರಿತು ಅಭ್ಯಾಸಿಸುತ್ತಿದ್ದಾಗ ಇಂತಹ ವ್ಯಕ್ತಿಯ ಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಬೇಕೆನಿಸುತ್ತಿತ್ತು. ಅಲ್ಲದೆ ಇದರ ಅಗತ್ಯವೂ ತುಂಬಾ ಇದೆ ಎನಿಸಿತ್ತು. ಅದು ಈಗ ಅವಶ್ಯಕವಾಗಿ ನೆರವೇರಿದೆ ಎನಿಸಿದೆ. ಏಕೆಂದರೆ ನಾಡು ನುಡಿಯ ಚಿಂತನೆಗಳು, ಕವಿ ಕಾಲ ನಿರ್ಣಯಾದಿಗಳಾಗಿ ಇತರೆ ಸಾಹಿತ್ಯಿಕ ಚರ್ಚೆಗಳಿಗೆ ಡಿ.ಎಲ್.ಎನ್ ಅವರ ವಿಚಾರಧಾರೆಗಳನ್ನು ಒರೆಗೆ ಹಚ್ಚಿ ನೋಡಬೇಕಾದ ಅಗತ್ಯವೂ ಒಂದಾಗಿದೆ. ಪೂರ್ವ ಸಾಹಿತ್ಯದ ಹಲವಾರು ವಿಚಾರಗಳನ್ನು ಸಾಮಾನ್ಯ ಜನರಿಗೆ ಅರ್ಥವಾಗುವ ರೀತಿಯಲ್ಲಿ ಹಿತವೆನಿಸುವಂತೆ ಬಿಡಿಸಿ ಹೇಳುವ ಪರಂಪರೆ ಅಭ್ಯಾಸಿತ ವರ್ಗಕ್ಕೆ ಪ್ರಯೋಜನಕಾರಿ ಆಗಬಲ್ಲದು, ಆದ್ದರಿಂದ ಡಿ.ಎಲ್.ಎನ್. ಅವರ ಸಾಹಿತ್ಯದ ಮೂಲಕ ಹಳಗನ್ನಡದ ಪೂರ್ವಪರತೆ ವಿಚಾರಗಳ ಚರ್ಚೆಯ ಅಗತ್ಯಕ್ಕಾಗಿ ಈ ಅಧ್ಯಯನ ಅವಶ್ಯಕವಾಗಿಬೇಕಾಗಿದೆ.

**೧.೧. ಅಧ್ಯಯನದ ಉದ್ದೇಶ**

ಡಿ.ಎಲ್.ನರಸಿಂಹಾಚಾರ್ ಅವರ ಬರಹಗಳನ್ನು ವರ್ಗೀಕರಿಸಿಕೊಂಡು ಅಭ್ಯಸಿಸುವುದು, ಬರವಣಿಗೆಯ ಹಿಂದಿನ ಮುಖ್ಯ ಧೋರಣೆಗಳು, ತತ್ವ ವಿಚಾರಗಳು ಯಾವರೀತಿ ಕೆಲಸ ಮಾಡಿವೆ ಎಂಬುದನ್ನು ತಿಳಿದು ಅವರ ಸಂಪಾದಿತ, ಸ್ವತಂತ್ರ ಕೃತಿ, ಲೇಖನಗಳ ಪ್ರಾಮುಖ್ಯತೆ, ಸಾಮಾಜಿಕ ಸಂದರ್ಭಗಳ ಸ್ವರೂಪವನ್ನು ವಿಶ್ಲೇಷಣೆ ಮೂಲಕ ವಿವರಿಸುವುದು. ಅವರು ಬರಹಗಳಲ್ಲಿ ಅಳವಡಿಸಿಕೊಂಡಿದ್ದ ಭಾಷೆ, ಶೈಲಿಗಳನ್ನು ಗುರುತಿಸಿ ವಿಶ್ಲೇಷಿಸುವುದಲ್ಲದೆ, ಅವರು ಸಂಪಾದಿಸಿ, ಸೃಜಿಸಿದ, ಕೃತಿ, ಕಾವ್ಯ, ಲೇಖನಗಳನ್ನು ಇತರೆ ಸಾಹಿತ್ಯಗಳೊಂದಿಗೆ ತೌಲನಿಕವಾಗಿ ನೋಡುವುದು. ಈ ಉದ್ದೇಶಗಳ ಪ್ರತಿ ಅಂಶವೂ ಒಂದೊಂದು ಮಹಾಪ್ರಬಂಧದ ವ್ಯಾಪ್ತಿಯನ್ನು ಪಡೆಯಬಲ್ಲಂಥವಾಗಿವೆ. ಹೀಗಿರುವಾಗ ಒಂದೇ ಮಹಾ ಪ್ರಬಂಧದಲ್ಲಿ ಇಷ್ಟೆಲ್ಲವನ್ನು ವಿಸ್ತಾರವಾಗಿ ವಿವೇಚಿಸುವುದು ಅಸಾಧ್ಯವಾಗಿದೆ. ಆದ್ದರಿಂದ ಮೇಲ್ಕಾಣಿಸಿದ ಉದ್ದೇಶಗಳನ್ನು ಒಂದು ಮಹಾ ಪ್ರಬಂಧದ ಚೌಕಟ್ಟಿನ ಮಿತಿಯಲ್ಲಿ ಡಿ.ಎಲ್.ನರಸಿಂಹಾಚಾರ್ ಅವರ ಸಾಹಿತ್ಯದ ಸ್ಥೂಲ ಅಧ್ಯಯನ ಇದಾಗಿದ್ದು ಸಾಧ್ಯವಾಗುವ ಮಟ್ಟಿಗೆ ಸಾಧಿಸಿಕೊಳ್ಳುವುದು ಇಲ್ಲಿನ ಉದ್ದೇಶವಾಗಿದೆ.

**೧.೨. ಅಧ್ಯಯನ ವಿಧಾನ**

ಡಿ.ಎಲ್.ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ ಅಧ್ಯಯನ ವಿಧಾನಕ್ಕೆ ಅವರ ಸ್ವತಂತ್ರ, ಸಂಶೋಧಿತ ಕೃತಿ ಲೇಖನಗಳನ್ನು ವಿವರಿಸಿ ವಿಶ್ಲೇಷಣೆಗೆ ಒಳಪಡಿಸಿದ್ದರ ಜೊತೆಗೆ ಅವರ ಸಾಹಿತ್ಯದಲ್ಲಿ ಪ್ರಕಾರದಿಂದ ಪ್ರಕಾರಕ್ಕೆ ಬದಲಾದ ವಿಧಾನವನ್ನು ಅರಿಯುವುದರ ಮೂಲಕ ಅವರ ಧೋರಣೆಗಳನ್ನು ಸ್ಪಷ್ಟಪಡಿಸಿದ್ದಲ್ಲದೆ, ಸಾಹಿತ್ಯದಲ್ಲಿ ಅವರು ಬಳಸಿದ

ಸಿದ್ಧಾಂತಗಳನ್ನು ತಿಳಿಸಿದೆ. ಡಿ.ಎಲ್.ಎನ್. ಅವರ ಸಾಹಿತ್ಯ ಕೃತಿಯೊಂದಿಗೆ ಇತರೆ ಪೂರಕವಾಗಿ ಬಂದಂತಹ ಕೃತಿರಚನೆಗಳನ್ನು ತೌಲನಿಕವಾಗಿ ನೋಡುವುದು ಮತ್ತು ಅವರು ಬಳಸಿದ ಭಾಷೆಗೆ ಇತರೆ ಸಾಹಿತ್ಯಿಕ ಶೈಲಿಗಳನ್ನು ಗಮನಿಸಿದ್ದಾಗಿದೆ.

ಇದೊಂದು ವ್ಯಕ್ತಿ ಅಧ್ಯಯನ ಎಂದು ಕಂಡುಬಂದಂತ್ತಿದ್ದರೂ ಇದನ್ನೊಂದು ವ್ಯಕ್ತಿ ಕೇಂದ್ರಿತ ಅಧ್ಯಯನವನ್ನಾಗಿ ನೋಡದೇ ಕನ್ನಡದ ವಿದ್ವತ್ ಪ್ರಕಾರಗಳಾದ ಗ್ರಂಥಸಂಪಾದನೆ, ಪಂಪಭಾರತ ದೀಪಿಕೆ ಇತರೆ ಒಂಭತ್ತಕ್ಕೂ ಅಧಿಕ ಕೃತಿಗಳು ೯೫ ಲೇಖನಗಳನ್ನು ಮಹಾಪ್ರಬಂಧದ ರಚನಾ ವಿಧಾನಕ್ಕೆ ಅಳವಡಿಸಿಕೊಂಡು ಅಧ್ಯಯನ ನಡೆಸಿದೆ. ಇಂತಹ ರಚನಾ ವಿಧಾನವನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

೧. ಡಿ.ಎಲ್.ಎನ್. ಬದುಕಿಗೆ ಸಂಬಂಧಿಸಿದ ಮಾಹಿತಿಗಳನ್ನು ಅವರನ್ನು ಹತ್ತಿರದಿಂದ ಬಲ್ಲ ಹಿತೈಷಿಗಳು ಶಿಷ್ಯಮಿತ್ರರೂ ಹಾಗೂ ಸಂಬಂಧಿಕರು ರಚಿಸಿರುವ ವಿವಿಧ ಲೇಖನಗಳು ಹಾಗೂ ಮತ್ತಿತರೆಡೆಗಳಲ್ಲಿ (ಅಂತರ್‌ಜಾಲ) ಅವರ ಜೀವನಕ್ಕೆ ಸಂಬಂಧಿಸಿದ ದಾಖಲೆಗಳ ವಿವರಗಳ ಸಂಗ್ರಹದ ಜೊತೆಗೆ ಅವರ ಕುಟುಂಬ ವರ್ಗವನ್ನು ಸಂದರ್ಶಿಸಿ ಹೆಚ್ಚಿನ ಮಾಹಿತಿಯನ್ನು ಕಂಡುಕೊಳ್ಳಲಾಗಿದೆ.

೨. ಕನ್ನಡದ ಸಂಶೋಧನೆಯ ಆರಂಭದ ಕಾಲಘಟ್ಟದಲ್ಲಿ ನಡೆದ ಸಂಶೋಧನೆಯ ಬಗೆಗಿನ ವಿವರಗಳನ್ನು ಸಂಗ್ರಹಿಸಲಾಗಿದೆ.

೩. ಇದುವರೆಗೆ ಡಿ.ಎಲ್.ಎನ್. ಅವರ ಕುರಿತಾಗಿ ಪ್ರಕಟವಾದ ವಿಷಯಗಳನ್ನು ಸಂಗ್ರಹಿಸಿ ಅವರ ಸಾಹಿತ್ಯಿಕ, ಶಾಸ್ತ್ರ, ವಿಷಯಗಳ ಕುರಿತ ಸಾಧನೆಯ ವಿವಿಧ ಮಗ್ಗಲುಗಳನ್ನು ತಿಳಿದುಕೊಳ್ಳಲಾಗಿದೆ.

ಸಂಗ್ರಹಿಸಿದ ಒಟ್ಟು ಮಾಹಿತಿಯನ್ನು ಅಧ್ಯಯನದ ಅನುಕೂಲಕ್ಕನುಗುಣವಾಗಿ ಮೂಲ ಆಕರ, ಆನುಷಂಗಿಕ ಆಕರಗಳನ್ನಾಗಿ ವಿಭಾಗಿಸಿಕೊಂಡು ಈ ಸಂಶೋಧನಾ ನಿಬಂಧವನ್ನು ರಚಿಸಲು ಪ್ರಯತ್ನಿಸಲಾಗಿದೆ.

ಡಿ.ಎಲ್.ಎನ್. ಅವರ ವಿದ್ವತ್ತನ್ನು ಅವರ ವಿದ್ವತ್‌ಪೂರಿತ ವಾದ ನೆಲೆಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ನಿಬಂಧದಲ್ಲಿ ಕೈಗೊಂಡಿದ್ದು, ಅಧ್ಯಯನದ ಅನುಕೂಲತೆ ಹಾಗೂ ಕ್ರಮಬದ್ಧತೆಯ ದೃಷ್ಟಿಕೋನದಿಂದ ಈ ಸಂಶೋಧನಾ ಮಹಾಪ್ರಬಂಧದ ಪ್ರಸ್ತಾವನೆ ಹಾಗೂ ಅನುಬಂಧವನ್ನು ಹೊರತುಪಡಿಸಿ ಒಟ್ಟು ಎಂಟು ಅಧ್ಯಾಯಗಳನ್ನಾಗಿ ವಿಭಜಿಸಿಕೊಂಡು ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

**೧.೩. ಅಧ್ಯಯನದ ವ್ಯಾಪ್ತಿ**

ಈ ಮಹಾಪ್ರಬಂಧದಲ್ಲಿ ಡಿ.ಎಲ್.ಎನ್. ಅವರ ಸಾಹಿತ್ಯ ಕೃಷಿಯನ್ನು ಕುರಿತು ಸಮಗ್ರವಾಗಿ ಎಂಟು ಅಧ್ಯಾಯಗಳ ಮೂಲಕ ಬರವಣಿಗೆ ರೂಪಕ್ಕಿಳಿಸಲಾಗಿದೆ.

ಮೊದಲನೆಯ ಅಧ್ಯಯನವಾಗಿ, ಅಧ್ಯಯನದ ಉದ್ದೇಶ, ವಿಧಾನ, ಮತ್ತು ವ್ಯಾಪ್ತಿ ಇದು ಮಹಾಪ್ರಬಂಧದ ಆರಂಭದ ಅಧ್ಯಾಯವಾಗಿದ್ದು ಇದರಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶ ವಿಧಾನ ಮತ್ತು ವ್ಯಾಪ್ತಿಯನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಡಿ.ಎಲ್.ಎನ್. ಅವರ ಜೀವನ ಹಾಗೂ ವ್ಯಕ್ತಿತ್ವವನ್ನು ಬಿತ್ತರಿಸಿದ್ದಲ್ಲದೆ ಡಿ.ಎಲ್.ಎನ್ ಅವರ ಮನೆತನದ ಹಿನ್ನೆಲೆಯ ವಿಚಾರ, ಕೌಟುಂಬಿಕ ಜೀವನ, ಶಿಕ್ಷಣ ಮತ್ತು ವೃತ್ತಿಜೀವನದ ವಿಚಾರ, ಬೋಧನಾಕ್ರಮ ಮತ್ತು ಶಿಷ್ಯಮಿತ್ರ ವಾತ್ಸಲ್ಯ, ನಿವೃತ್ತಿ ಕೊನೆಯ ದಿನಗಳು ಎಂದು ವಿಧವಾಗಿ ವಿವರಿಸಿ ಕೊನೆಯದಾಗಿ ಈವರೆಗೆ ಡಿ.ಎಲ್.ಎನ್. ಅವರ ಕುರಿತು ಅವರ ಸಾಹಿತ್ಯ ವಿಚಾರಗಳ ಕುರಿತು ನಡೆದು ಬಂದ ಅಧ್ಯಯನ ಕ್ರಮವನ್ನು ಸಮೀಕ್ಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಡಿ.ಎಲ್.ಎನ್ ಅವರ ಗ್ರಂಥಸಂಪಾದಿತ ಕೃತಿಗಳ ವೈಧಾನಿಕತೆಯ ಅಧ್ಯಾಯ ರೂಪಿತಗೊಂಡಿದ್ದು ಇದರಡಿಯಲ್ಲಿ ಡಿ.ಎಲ್.ಎನ್ ಅವರು ಸಂಪಾದಿಸಿ ಸಂಕಲಿಸಿದ ಒಟ್ಟು ಹತ್ತು ಕೃತಿಗಳನ್ನು ಭಾಷೆ, ಕಾಲಘಟ್ಟ ವಿಚಾರ, ಕೃತಿಯ ಮೂಲವಸ್ತು ವಿಚಾರ, ತಂತ್ರ ಹಾಗೂ ಆಯಾ ಕೃತಿಗಳಲ್ಲಿ ಪ್ರತಿಪಾದಿತಗೊಂಡ ತತ್ವಸಿದ್ಧಾಂತಗಳನ್ನೂ ವೈಧಾನಿಕತೆಯ ಹಿನ್ನೆಲೆಯಲ್ಲಿ ಗುರುತಿಸಿ ಕನ್ನಡ ಇತಿಹಾಸ ಸಂಸ್ಕೃತಿಯ ಚಿತ್ರಣವು ಸಂಶೋಧನಾ ಕ್ಷೇತ್ರದಲ್ಲಿ ಅಚ್ಚಳಿಯದೆ ಉಳಿದು ಕನ್ನಡ ಸಂಸ್ಕೃತಿಗೆ ವಿಶೇಷವಾದ ಹಾಗೂ ಮೌಲಿಕವೂ ಆದ ಕೊಡುಗೆಗಳನ್ನಿಸಿದ ಡಿ.ಎಲ್.ಎನ್. ಅವರ ಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕನ್ನಡ ಗ್ರಂಥಸಂಪಾದನೆಯ ತಾತ್ವಿಕತೆ ಮತ್ತು ಅನ್ವಯಿಕತೆಯ ವಿಚಾರವಾಗಿ ಕನ್ನಡ ಗ್ರಂಥಸಂಪಾದನೆಯ ಇತಿಹಾಸವನ್ನು ಡಿ.ಎಲ್.ಎನ್. ಅವರು ರೂಪಿಸಿದ ಗ್ರಂಥಸಂಪಾದನೆ, ನೆಲೆಯಾದಿಯಾಗಿ ಪೂರ್ವೋಕ್ತ ಗ್ರಂಥಸಂಪಾದನಾ ವಿಧಾನಕ್ಕೂ, ಡಿ.ಎಲ್.ಎನ್ ಗ್ರಂಥಸಂಪಾದನಾ ವಿಧಾನಕ್ಕೂ, ಇವರ ನಂತರದ ಗ್ರಂಥಸಂಪಾದನಾ ವಿಧಾನಕ್ಕೂ ಇರುವ ತುಲನೆಯನ್ನು ತಾತ್ವಿಕ, ಆನ್ವಯಿಕ ವಿಚಾರಾದಿಯಾಗಿ ಚರ್ಚಿಸಿ ಗ್ರಂಥಸಂಪಾದನೆ ವಿಧಾನವು ಪಾಶ್ಚಾತ್ಯ, ದೇಶಿ, ಡಿ.ಎಲ್.ಎನ್. ನಂತರದಲ್ಲಿ ಹೇಗೆ ಬೆಳೆದು ಬಂದಿದೆ ಹಾಗೂ ಗ್ರಂಥಸಂಪಾದನೆಯಲ್ಲಿ ತೊಡಗುವ ಇಂದಿನ ಪೀಳಿಗೆಗೆ ದಿಕ್ಕು ದೆಸೆಗಳನ್ನು ಮಾರ್ಗದರ್ಶನ ಮಾಡುವ ಪ್ರಯತ್ನ ಇಲ್ಲಿಯದಾಗಿದೆ.

ಅಧ್ಯಾಯ ಐದರಲ್ಲಿ, ಡಿ.ಎಲ್.ಎನ್. ಅವರ ಸಂಶೋಧನಾ, ಸಾಹಿತ್ಯ ವಿಚಾರವಾಗಿ ಬರವಣಿಗೆ ರೂಪಗೊಂಡಿದ್ದು ಇದರ ಒಡಲಲ್ಲಿ ಡಿ.ಎಲ್.ಎನ್. ಅವರ ಸಂಶೋಧನಾ ಪ್ರಕಾರಗಳಾದ ಕವಿ–ಕಾವ್ಯ–ಕಾಲ ವಿಚಾರ, ವಿಮರ್ಶೆ, ಛಂದೋಶೋಧಗಳೆಂದು ಒಟ್ಟು ಮೂರು ಭಾಗಗಳನ್ನಾಗಿಸಿಕೊಂಡು ಒಟ್ಟು ಎಪ್ಪತ್ತನಾಲ್ಕು ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ಆರರಲ್ಲಿ, ಪಂಪಭಾರತ ದೀಪಿಕೆ: ಒಂದು ವಿವೇಚನೆಯ ವಿಷಯವಾಗಿ ವಿಸ್ತೃತಗೊಂಡಿದ್ದು ಈ ಅಧ್ಯಾಯದಲ್ಲಿ ಪಂಪನ ವಿಕ್ರಮಾರ್ಜುನ ವಿಜಯಕ್ಕೆ ಮೊದಲ ಬಾರಿಗೆ ಸವಿಸ್ತಾರವಾಗಿ ಬರೆಯಲಾದ ವ್ಯಾಖ್ಯಾನ ಗ್ರಂಥ ಇದಾಗಿದ್ದು ಇದರಲ್ಲಿನ ಪೂರ್ವ ಕಥಾ ವೃತ್ತಾಂತ, ಶಬ್ದಾರ್ಥ ನಿರ್ಣಯ ವಿಚಾರವಾಗಿ ಈ ಕೃತಿಗೆ ಆಕರವಾದ ಗ್ರಂಥಗಳ ವಿಚಾರಗಳಲ್ಲದೆ ಡಿ.ಎಲ್.ಎನ್. ಅವರ ಭಾಷಾ ಪಾಂಡಿತ್ಯವನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳರಲ್ಲಿ, ಭಾಷಿಕ ಶೋಧಗಳು ಎಂಬ ಶೀರ್ಷಿಕೆಯಡಿ ಡಿ.ಎಲ್.ಎನ್. ಅವರು ನಿರೂಪಿಸಿದ ಪದಗಳ ನಿಷ್ಪತ್ತಿ ವಿಚಾರವಾಗಿ ಇಪ್ಪತ್ತನಾಲ್ಕು ವಿಷಯಗಳನ್ನು ಒಟ್ಟುಗೂಡಿಸಿ ಚರ್ಚಿಸಲಾಗಿದೆ.

ಅಧ್ಯಾಯ ಎಂಟು, ಇದರಾಳದಲ್ಲಿ ಇತರೆ ಸಾಹಿತ್ಯ ಎಂಬ ಶೀರ್ಷಿಕೆ ರೂಪದಲ್ಲಿ ಡಿ.ಎಲ್.ಎನ್. ಅವರ ಸಾಹಿತ್ಯ ಕೃಷಿಗಳಾದ ಮುನ್ನುಡಿಗಳು, ಲಲಿತ ಪ್ರಬಂಧಗಳು ಎಂಬ ಒಟ್ಟು ಹದಿನೇಳು ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ಒಂಭತ್ತು, ಕೊನೆಯ ಅಧ್ಯಾಯ ಇದಾಗಿದ್ದು ಇದರಲ್ಲಿ ಅಧ್ಯಯನದ ಸಂಕ್ಷಿಪ್ತ ರೂಪ, ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಕೇತಗಳನ್ನು ವಿಶ್ಲೇಷಿಸಿ ಅಧ್ಯಯನದ ಫಲಿತಗಳನ್ನು ನಿರೂಪಿಸಲಾಗಿದೆ. ಹಾಗೆಯೇ ಡಿ.ಎಲ್.ಎನ್. ಅವರು ಕನ್ನಡ ಸಾಹಿತ್ಯದಲ್ಲಿ ಮಾಡಿದ ಒಂದೊಂದು ಪ್ರಕಾರದ ಸಾಧನೆಯಲ್ಲಿ ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಇರುವ ಅವಕಾಶಗಳ ಕುರಿತು ಚರ್ಚಿಸಲಾಗಿದೆ.

**ಅನುಬಂಧ**

ಗ್ರಂಥಾಧ್ಯಯನಕ್ಕೆ ಅನುಕೂಲವಾಗುವಂತೆ ಅನುಬಂಧದ ಭಾಗವನ್ನು ಆರು ಕ್ರಮಗಳನ್ನಾಗಿಸಿ ವಿಂಗಡಿಸಿ ಸೃಜಿಸಲಾಗಿದೆ. ಮೊದಲನೆಯ ಭಾಗದಲ್ಲಿ ಡಿ.ಎಲ್.ಎನ್ ಅವರ ಬದುಕಿನ ಪ್ರಮುಖ ಘಟನಾವಳಿಗಳನ್ನು ಕ್ರಮವಾಗಿ ರೂಪಿಸಿದೆ, ಎರಡನೆಯ ಭಾಗವಾಗಿ ಡಿ.ಎಲ್.ಎನ್. ಅವರ ವಂಶವೃಕ್ಷವನ್ನು ಸೃಜಿಸಲಾಗಿದೆ, ಮೂರನೆಯ ಭಾಗವಾಗಿ ಡಿ.ಎಲ್.ಎನ್. ಅವರ ಸಾಹಿತ್ಯ ಸೇವೆಯ ಕೃತಿ–ಲೇಖನಗಳ ಸೂಚಿಯನ್ನು ಕ್ರಮವಾಗಿ ಕೊಡಲಾಗಿದೆ, ನಾಲ್ಕನೆಯ ಭಾಗವಾಗಿ ಡಿ.ಎಲ್.ಎನ್. ಅವರಿಗೆ ಸಂದಪ್ರಶಸ್ತಿಗಳ ಪಟ್ಟಿ ನೀಡಲಾಗಿದೆ. ಐದನೆಯ ಭಾಗವಾಗಿ ಸಂಕ್ಷೇಪಸೂಚಿ, ಆರನೇಯ ಭಾಗವಾಗಿ ಅಧ್ಯಯನ ಕ್ಕೊಳಪಡಿಸಿಕೊಂಡು ಪೂರಕ ಆಕರಗಳನ್ನಾಗಿಸಿಕೊಂಡ ಕೃತಿಗಳ ಸೂಚಿಯನ್ನು ನೀಡಿ ಮಹಾಪ್ರಬಂಧದ ಒಟ್ಟಾರೆ ವಿನ್ಯಾಸವನ್ನು ರೂಪುಗೊಳಿಸಲಾಗಿದೆ.

## ಅಧ್ಯಾಯ - ಎರಡು

## ಡಿ.ಎಲ್.ನರಸಿಂಹಾಚಾರ್ ಅವರ ಜೀವನ ಮತ್ತು ಪರಿಸರ

೨.೧. ಮನೆತನದ ಹಿನ್ನೆಲೆ ಮತ್ತು ಪರಿಸರ

೨.೨. ಡಿ.ಎಲ್.ನರಸಿಂಹಾಚಾರ್ ಅವರ ಸಾಹಿತ್ಯ ಕುರಿತು ಈವರೆಗಿನ ಅಧ್ಯಯನ ಸಮೀಕ್ಷೆ

# ಅಧ್ಯಾಯ - ಎರಡು

# ಡಿ.ಎಲ್.ನರಸಿಂಹಾಚಾರ್ ಅವರ ಜೀವನ ಮತ್ತು ಪರಿಸರ

## ೨.೧. ಮನೆತನದ ಹಿನ್ನೆಲೆ ಮತ್ತು ಪರಿಸರ

ಸುಸಂಸ್ಕೃತ ಅಯ್ಯಂಗಾರ್ ಮನೆತನದಲ್ಲಿ ಬೆಳಗಿ ಬಾಳಿದ ಡಿ.ಎಲ್. ನರಸಿಂಹಾಚಾರ್ಯರು ಹುಟ್ಟಿದ್ದು ತುಮಕೂರು ಜಿಲ್ಲೆಯ ತಾಯಿಯ ತವರಾದ ಚಿಕ್ಕನಾಯಕನಹಳ್ಳಿಯಲ್ಲಿ, ಇವರ ತಂದೆಯವರ ಊರು ತುಮಕೂರಿಗೆ ಹತ್ತಿರ ವಿರುವ ದೊಡ್ಡಬೆಲೆ. 'ತಾಯಿಯ ತಂದೆಯಾದ ಅಣ್ಣಾಸ್ವಾಮಿ ಅಯ್ಯಂಗಾರ್ ಅವರ ಮನೆಯಲ್ಲಿ ೨೭.೧೦.೧೯೦೬ ರಂದು ಜನಿಸಿದರು'[೧]

ಇವರ ಮನೆತನದ ಹಿನ್ನೆಲೆಯಾಗಿ ತಿಳಿಯುವುದಾದರೇ, ಮೂಲತಃ ಇವರ ಪೂರ್ವಿಕರದ್ದು 'ತಮಿಳುನಾಡಿನ ಸೇಲಂ ಜಿಲ್ಲೆಯ ಗಂಡಿಕೋಟೆ ಅವರ ನೆಲೆಯಾಗಿತ್ತು. ವಿಜಯನಗರದ ತಾತಾಚಾರ್ಯರ ಕಾಲದಲ್ಲಿ ಅವರು ತುಮಕೂರಿನ ಕಡೆಗೆ ವಲಸೆ ಬಂದು ನೆಲೆಸಿದ್ದರಂತೆ ಅವರು ಮೊದಲಿಗೆ ತಿರುಪತಿಯ ತಿಮ್ಮಪ್ಪನ ಒಕ್ಕಲಾಗಿದ್ದರು. ಈಚೆಗೆ ದೊಡ್ಡಬೆಲೆಗೆ ಬಂದು ನೆಲೆಸಿದ ಮೇಲೆ ದೇವರಾಯದುರ್ಗದ ಲಕ್ಷ್ಮೀನರಸಿಂಹನನ್ನು ಇವರ ಮನೆಯ ದೇವರನ್ನಾಗಿಸಿಕೊಂಡಿದ್ದರು. ಈ ಲಕ್ಷ್ಮೀ ನರಸಿಂಹನ ಮೇಲಿನ ಭಕ್ತಿಯಿಂದಾಗಿ ಹುಟ್ಟಿದ ಮಗನಿಗೆ ಶಾಮಯ್ಯಂಗಾರ್, ಲಕ್ಷ್ಮಮ್ಮ ದಂಪತಿಗಳು 'ಲಕ್ಷ್ಮೀನರಸಿಂಹಾಚಾರ್' ಎಂದು ಹೆಸರಿಟ್ಟರು.'[೨] ಅವರೇ ಮುಂದೆ ಡಿ.ಎಲ್. ನರಸಿಂಹಾಚಾರ್ (ಡಿ.ಎಲ್.ಎನ್) (ದೊಡ್ಡ ಬೆಲೆ ಲಕ್ಷ್ಮೀನರಸಿಂಹಾಚಾರ್) ಎಂದು ಸಾಹಿತ್ಯ ಲೋಕಕ್ಕೆಲ್ಲ ಹೆಸರುವಾಸಿಯಾಗಿದ್ದಾರೆ. ದೊಡ್ಡಬೆಲೆಯು ಲಕ್ಷ್ಮೀನರಸಿಂಹಾಚಾರ್ ಅವರ ಪೂರ್ವಿಕರ ಊರು ತುಮಕೂರಿಗೆ ಸಮೀಪವಿದೆ. ಆದರೆ ಡಿ.ಎಲ್.ಎಲ್. ಅವರು ಬುದ್ಧಿ ತಿಳಿದಾಗಿನಿಂದ ಎಂದೂ ಆ ಊರನ್ನು ಕಂಡವರಲ್ಲ (ಆದರೆ ಇವರು ಜೀವನದಲ್ಲಿ ಉನ್ನತ ಮಟ್ಟಕ್ಕೇರಿದ ನಂತರ ಊರೆಲ್ಲ ಸುತ್ತಿದ್ದಾರೆ). ಇವರ ತಂದೆಯ ತಂದೆಯವರಾದ (ತಾತ) 'ಕೃಷ್ಣಮಾಚಾರ್ ರವರು ದೊಡ್ಡಬೆಲೆಯಲ್ಲಿ ಕೂಲಿಮೇಷ್ಟ್ರಾಗಿ ಒಳ್ಳೆಯ ಹೆಸರು ಪಡೆದಿದ್ದರು'.[೩] ತಂದೆಯವರಾದ ಶಾಮೈಯಂಗಾರ್ ರವರು ಸಬ್‌ರಿಜಿಸ್ಟ್ರಾರ್ ಆಫೀಸಿನ ಗುಮಾಸ್ತರಾಗಿ ಕರ್ತವ್ಯದಲ್ಲಿದ್ದರು. ಕಾರ್ಯನಿಮಿತ್ತವಾಗಿ ನಿತ್ಯ ಊರಿಂದೂರಿಗೆ

ಅಲಿಯುವ ಕೆಲಸ ಇವರದಾಗಿತ್ತು. ಹೀಗಾಗಿ ಡಿ.ಎಲ್.ಎಲ್ ಅವರ ವಿದ್ಯಾಭ್ಯಾಸ ಮಧುಗಿರಿ, ಪಾವಗಡ, ಸಿರಾ, ತುಮಕೂರುಗಳಲ್ಲಿ ಹೈಸ್ಕೂಲ್ ಶಿಕ್ಷಣದವರೆಗೆ ನಡೆಯಿತು.[೪]

ನರಸಿಂಹಾಚಾರ್ ಅವರ ತಾಯಿಯ ತಂದೆಯವರಾದ ಅಣ್ಣಾಸ್ವಾಮಿ ಅಯ್ಯಂಗಾರ್ ಅವರು 'ವೃತ್ತಿಯಲ್ಲಿ ರೇಕಾರ್ಡ್ ಕೀಪರ್ ಆಗಿ ಕರ್ತವ್ಯದಲ್ಲಿದ್ದವರು ಅನಿವಾರ್ಯವಾಗಿ ಯಾವುದೇ ಒಬ್ಬ ಅಧಿಕಾರಿ ಇವರ ಮೇಲೆ ದರ್ಪ ತೋರಿಸಿದರೆಂದು ವೃತ್ತಿ ತ್ಯಜಿಸಿ ಸ್ವಾಭಿಮಾನಿಯಾಗಿ ಬಾಳಿದ ವ್ಯಕ್ತಿ ಇವರಾಗಿದ್ದಾರೆ. ಇವರು ತುಂಬಾ ಸೊಗಸಾಗಿ ಭಾರತ ವಾಚನ ಮಾಡುತ್ತಿದ್ದರಿಂದ ಜನಪ್ರಿಯರಾಗಿದ್ದರಂತೆ ಅಲ್ಲದೆ ಅವರು ವಾಚನ ಮಾಡುತ್ತಿದ್ದ ಕಟ್ಟೆಯನ್ನು ಚಿಕ್ಕನಾಯಕನಹಳ್ಳಿಯು ಬದಲಾಗುವವರೆಗೂ ಅಲ್ಲಿನ ಜನ ತೋರಿಸುತ್ತಿದ್ದರಂತೆ. ವೃತ್ತಿ ನಿರತವಾಗಿ ಡಿ.ಎಲ್.ಎನ್ ಅವರ ತಂದೆ ಊರಿಂದೂರಿಗೆ ತಿರುಗಾಡುತ್ತಿದ್ದರಿಂದ ನರಸಿಂಹಾಚಾರ್ಯರು ಈ ಅಜ್ಜನ ತೊಳಲ್ಲಿ ಬೆಳೆದವರು. ಇಂತಹ ವಾತಾವರಣದಲ್ಲಿ ಬೆಳೆದ ಇವರಿಗೆ ೧೨ನೇ ವಯಸ್ಸಿನಲ್ಲಿಯೇ ಜೈಮಿನಿ ಭಾರತ ಕಂಠಪಾಠವಾಗಿತ್ತು ಅಲ್ಲದೆ ಕುಮಾರವ್ಯಾಸ ಭಾರತ, ರಾಜಶೇಖರ ವಿಳಾಸ ಮೊದಲಾದ ಪ್ರೌಢ ಕೃತಿಗಳ ಅಭ್ಯಾಸದಲ್ಲಿಯೂ ತೊಡಗಿಕೊಂಡಿದ್ದರು.[೫] ಮುಂದೆ ತುಮಕೂರಿಗೆ ಬಂದು ನೆಲೆಸಿದ ನಂತರ ಪ್ರೌಢಶಾಲಾ ಅಭ್ಯಾಸದ ಅವಧಿಯಲ್ಲಿ ಖಾಸಗಿಯಾಗಿ ಸಂಸ್ಕೃತ ಕಲಿತರು. ಇವರ ಅಭ್ಯಾಸದ ಅಭಿರುಚಿ ಬಗ್ಗೆ ತಿಳಿಯುವುದಾದರೇ, ಬೆಳಗಿನ ಜಾವ ನಾಲ್ಕು ಗಂಟೆಗೆ ಎದ್ದು ಸಂಸ್ಕೃತವನ್ನು ಅಭ್ಯಾಸ ಮಾಡಿ ನಂತರ ಶಾಲೆಯ ಪಾಠವನ್ನು ಅಭ್ಯಾಸಿಸುತ್ತಿದ್ದರಂತೆ. ಫೋರ್ತ್ ಫಾರಂಗೆ ಬರುವ ಹೊತ್ತಿಗೆ ಇವರು ಗದಾಯುದ್ಧ, ಛಂದೋಂಬುಧಿ ಹಾಗೂ ಪದ್ಯಸಾರದ ಎರಡನೆಯ ಸಂಪುಟಗಳನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಂಡಿದ್ದರಲ್ಲದೆ ಪ್ರೌಢಶಾಲಾ ಅಭ್ಯಾಸದ ಅವಧಿಯಲ್ಲಿಯೇ ಸಾಹಿತ್ಯದ ಕಡೆಗೆ ಬಲವಾಗಿ ಪ್ರಾಚೀನ ಕವಿಗಳ ಕೃತಿಗಳನ್ನು (ತಾಳೆಯ ಪ್ರತಿಯಲ್ಲಿರುವವು) ಓದುವ ಅಭ್ಯಾಸ ರೂಢಿಸಿಕೊಂಡಿದ್ದರು.[೬] ಮುಂದೆ ಇದರಿಂದ ಸಾಹಿತ್ಯ ಲೋಕಕ್ಕೆ ಮಹತ್ವದ ಗ್ರಂಥಗಳು ಹುಟ್ಟಿ ಬರಲು ಕಾರಣವಾಯಿತು.

- **ಕೌಟುಂಬಿಕ ಜೀವನ**

ಪಾಂಡಿತ್ಯದ ಪ್ರತಿನಿಧಿಯಾಗಿ ಬೆಳೆದು ಬಂದ ಇವರು ತುಮಕೂರಿನ ಹೈಸ್ಕೂಲ್ ಶಿಕ್ಷಣದಿಂದ ಎಂಟ್ರೆನ್ಸ್ ಪರೀಕ್ಷೆಯಲ್ಲಿ ಉತ್ತಮವಾದ ಅಂಕ ಪಡೆದು ತೇರ್ಗಡೆ ಹೊಂದಿ ಮುಂದೆ ಬೆಂಗಳೂರಿನ ಸೆಂಟ್ರಲ್ ಕಾಲೇಜು ಸೇರಿ ೧೯೨೭ರ ಹೊತ್ತಿಗೆ ಪ್ರಥಮ ದರ್ಜೆಯಲ್ಲಿ ಬಿ.ಎ. ಪದವಿ[೭] ಉತ್ತೀರ್ಣಗೊಂಡರು. ಇದೇ ವರ್ಷ ಎಂ.ಎ.ಗೆ ಸೇರುವ ಉದ್ದೇಶದಿಂದ ಬೇಸಿಗೆ ರಜೆಗಾಗಿ ತಾಯಿಯೊಂದಿಗೆ ಮೈಸೂರಿನಲ್ಲಿದ್ದ ತಮ್ಮ ಸೋದರ ಮಾವನವರಾದ ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್[೮] ಅವರ ಮನೆಗೆ ಮೊದಲ ಸಲ ಬಂದಿದ್ದರು. ಮುಂದೆ ಇಲ್ಲಿಯೇ ಎಂ.ಎ. ವಿದ್ಯಾಭ್ಯಾಸ ಮುಂದುವರೆಸಿ ಇಲ್ಲಿಯೂ ಪ್ರಥಮ ದರ್ಜೆಯಲ್ಲಿ

ಉತ್ತೀರ್ಣಗೊಂಡು ೧೯೨೯ರಲ್ಲಿ ಪ್ರಾಚ್ಯ ವಿದ್ಯಾ ಸಂಶೋಧನಾಲಯದಲ್ಲಿ ಕನ್ನಡ ಪಂಡಿತರಾಗಿ ತಿಂಗಳಿಗೆ ೮೦ ರೂಪಾಯಿಗಳ ಸಂಬಳಕ್ಕೆ ನೇಮಕಗೊಂಡರು.[೯] ಇನ್ನೊಂದು ವಿಶೇಷವೆಂದರೆ ಈ ಅವಧಿಯಲ್ಲಿ ತಮ್ಮ ಸೋದರ ಮಾವನವರಾದ ತಿರುವಳ್ಳೂರು ರಾಘವಾಚಾರ್ ಅವರ ಐವರು ಪುತ್ರಿಯರಲ್ಲಿ ಕೊನೆಯವರಾದ ಶ್ರೀಮತಿ ಮುತ್ತಮ್ಮ[೧೦]ರವರನ್ನು ಕೈ ಹಿಡಿದರು.

ಸುಸಂಸ್ಕೃತ ಮನೆತನದಲ್ಲಿ ಬೆಳೆದು ಬಂದಿದ್ದ ಮುತ್ತಮ್ಮರವರು ಸುಶೀಲೆಯೂ, ಸದ್ಗುಣಮತಿಯು, ಸದಾಚಾರ ಸಂಪನ್ನೆಯೂ ಆಗಿದ್ದರಲ್ಲದೆ ತುಂಬಾ ಸಾತ್ವಿಕ ಜೀವಿಯಾಗಿ ಡಿ.ಎಲ್.ಎನ್ ಅವರನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು. ಅವರ ಸಾಹಿತ್ಯ ಸೇವೆಗೆ ನೆರಳಾದುದ್ದಲ್ಲದೆ ಅವರಿಗೆ ಪ್ರೇರಕ ಶಕ್ತಿಯಾಗಿದ್ದವರು.[೧೧] ಒಬ್ಬ ಪುರುಷನ ಸಾಧನೆಯಿಂದ ಒಬ್ಬ ಮಹಿಳೆಯು ಇರುತ್ತಾಳೆ ಎಂಬ ನುಡಿ ಮುತ್ತಮ್ಮರವರಿಗೂ ಅನ್ವಯಿಸಿದ್ದಾಗಿದೆ.

ಡಿ.ಎಲ್.ಎನ್. ಅವರ ಪಾಂಡಿತ್ಯಕ್ಕೆ ಸಮನಾಗಿ ತೂಗಬಲ್ಲ ವ್ಯಕ್ತಿತ್ವ ಶ್ರೀಮತಿ ಮುತ್ತುಮ್ಮರವರದಾಗಿತ್ತು. 'ಅಂಕಗಣಿತಾದರ್ಶ' ಮತ್ತು 'ಪ್ರಬಂಧಮಂಜರಿ' ಮೊದಲಾದ ಪುಸ್ತಕಗಳನ್ನು ಬರೆದಿರುವ ಕನ್ನಡ, ಸಂಸ್ಕೃತ, ಇಂಗ್ಲಿಷ ಭಾಷೆಗಳಲ್ಲಿ ಪ್ರಬುದ್ಧ ವಿದ್ವಾಂಸರೂ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರೂ ಆಗಿದ್ದ ಟಿ.ಎಸ್.ರಾಘವಾಚಾರ್–ವೆಂಕಟಲಕ್ಷ್ಮಮ್ಮ ದಂಪತಿಗಳ ಕಿರಿಯ ಪುತ್ರಿಯಾಗಿದ್ದ ಇವರು ಹುಟ್ಟಿ ಬೆಳೆದದ್ದು ಬೆಂಗಳೂರಿನಲ್ಲಿ ನಾಲ್ಕು ಜನ ಅಕ್ಕಂದಿರು ಇಬ್ಬರು ಅಣ್ಣಂದಿರ ಮಧ್ಯೆ ಬೆಳೆದುಬಂದ ಇವರು ಮನೆಯಲ್ಲಿ ಚಿಕ್ಕಮಗಳಾಗಿ ಎಲ್ಲರಿಗೂ ಅಚ್ಚುಮೆಚ್ಚಿನವಳಾಗಿ ಬೆಳೆದಿದ್ದಲ್ಲದೆ, ೪ನೇ ತರಗತಿಯವರೆಗೆ ಓದಿದ ಇವರಿಗೆ ೧೩ ವರ್ಷಗಳಿದ್ದಾಗ ಡಿ.ಎಲ್.ಎನ್. ಅವರೊಂದಿಗೆ ವಿವಾಹವಾಯ್ತು.[೧೨] ಚಿಕ್ಕಂದಿನಿಂದಲೂ ವೀಣೆ ನುಡಿಸುವ ಅಭ್ಯಾಸದಲ್ಲಿ ಪಾರಂಗತರಾಗಿದ್ದರಲ್ಲದೇ ಮಾತೃಭಾಷೆ ತಮಿಳಾದರೂ ಕನ್ನಡ, ತೆಲುಗು ಭಾಷೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವ ಕೌಶಲ್ಯವಂತೆಯೂ ಆಗಿದ್ದರು. ಇಷ್ಟೇ ಅಲ್ಲದೆ ಕುಶಲಕಲೆ, ಬೆತ್ತದ ಕೆಲಸ, ಹೊಲಿಗೆ, ರಿಬ್ಬನ್ ಕೆಲಸ, ಕಸೂತಿ ಮುಂತಾದ ಕಲೆಗಳಲ್ಲಿ ನಿಪುಣತೆ ಹೊಂದಿದವರಾಗಿದ್ದರು.

ಡಿ.ಎಲ್.ಎನ್. ಅವರ ಸಾಹಿತ್ಯ ಸೇವೆಯಲ್ಲಿ ತನ್ನ ಪಾತ್ರವೇನು? ಎಂದು ಕೇಳಿದರೆ? ಅದಕ್ಕೆ ಅವರು ಉತ್ತರಿಸಿದ ಬಗೆ 'ನನಗೇನು ಬರುವುದಿಲ್ಲ ಆದರೇ, ಸಾಹಿತ್ಯಿಕ ವಿಚಾರಗಳ ಚರ್ಚೆಗಾಗಿ ಎಷ್ಟೇ, ಜನ ಬರಲಿ ಅವರಿಗೆ ರುಚಿಯಾದ ಊಟ, ತಿಂಡಿ ತಯಾರಿಸಿ ಬಡಿಸುವುದೊಂದನ್ನೇ ಮಾಡುತ್ತೇನೆ.'[೧೩] ಎನ್ನುವ ಗುಣ ಸೌಜನ್ಯದ ಉತ್ತರದಿಂದ ಮುತ್ತಮ್ಮ ಎನ್ನುವ ಹೆಸರಿಗೆ ತಕ್ಕಂತೆ ಬಾಳಿದವರಾಗಿದ್ದಾರೆ. ಒಂದು ನಿದರ್ಶನವೆಂದರೆ ಡಿ.ಎಲ್.ಎನ್. ಅವರ ಕಾಲಾನಂತರ ೧೯೭೭ರಲ್ಲಿ 'ಡಿ.ಎಲ್.ಎನ್. ಅವರ ಆಯ್ದ ಲೇಖನಗಳು' ಎಂಬ ಕಿರು ಹೊತ್ತಿಗೆಯನ್ನು ಸಂಪಾದಿಸಿ ಪ್ರಕಟಿಸಿದ್ದೂ ಉಂಟು. ಏನೇ ಇರಲಿ ಮುತ್ತಮ್ಮ ರವರೂ ಸೃಜನಶೀಲ ವ್ಯಕ್ತಿತ್ವವುಳ್ಳ ಮನಸ್ಸಿನವರಾಗಿದ್ದು, ಸದಾ ಸಂಶೋಧನೆ, ತಾಳೆಯೋಲೆ, ಕೋರಿಕಾಗದ,

ಶಾಸನದ ಪಡಿಯಚ್ಚು ಮೊದಲಾದವುಗಳ ಅಧ್ಯಯನದಲ್ಲಿ ತೊಡಗಿದ್ದ ಡಿ.ಎಲ್.ಎನ್. ರವರಿಗೆ ತಮ್ಮ ೯೦ನೇ ವರ್ಷದ ಸಂಭ್ರಮಕ್ಕೆ ಶಿಷ್ಯ ಮಿತ್ರ ವೃಂದ ಅರ್ಪಿಸಿದ 'ಉಪಾಯನ' ಅಭಿನಂದನಾ ಗ್ರಂಥದಲ್ಲಿ ತಮ್ಮಷ್ಟಕ್ಕೆ ತಾವು ಓದಿ ಬರೆಯಲು ಬಿಟ್ಟುಕೊಟ್ಟು ತಮ್ಮ ಶ್ರೀಮತಿಯವರಿಗೂ ಈ ಸಂದರ್ಭ ಸಲ್ಲಬೇಕೆಂದಿದ್ದರಲ್ಲದೇ ಅವರ ಉದಾರ ಸಹಕಾರವಿಲ್ಲದೆ ಸಂಶೋಧನೆ, ಸಂಪಾದನೆ ಕಾರ್ಯ ನಡೆಸುತ್ತಿರಲಿಲ್ಲ ಎಂದಿದ್ದಾರೆ.[೧೪]

ಡಿ.ಎಲ್.ಎನ್. ಅವರು ಬೆಳೆದು ಬಂದಿದ್ದು ಮೂಲತಃ ಸಾಂಪ್ರದಾಯಕ ಅಯ್ಯಂಗಾರ್ ಕುಟುಂಬದ ಪರಿಸರದಲ್ಲಾದರೂ ಅವರು ಓದಿದ ಓದಿನಿಂದಾಗಿ ಅವರ ವ್ಯಕ್ತಿತ್ವ ಸಂಪ್ರದಾಯಕ್ಕೆ ಎಂದೂ ಹೊಂದಿಕೊಳ್ಳಲಿಲ್ಲ. "ಶ್ರೀವೈಷ್ಣವ ಎನ್ನುವ ಕಾರಣಕ್ಕೆ ಹಣೆಯ ಮೇಲೆ ಕೆಂಪು ನಾಮ ರಾರಾಜಿಸುವಂತೆ ಧರಿಸುತ್ತಿದ್ದರಂತೆ ಇವರಿಗೆ ದೇವರ ಮೇಲೆ ಭಕ್ತಿ ಇದ್ದರೂ ಅದನ್ನು ಅಂಧಶ್ರದ್ಧೆ ಮಟ್ಟಕ್ಕೆ ಏರಿಸಿಕೊಂಡಿದ್ದವರಲ್ಲ. ನಿತ್ಯ ಪೂಜೆ, ಪಠಣ ಇತ್ಯಾದಿಗಳಲ್ಲಿ ಅವರಿಗೆ ನಂಬಿಕೆ ಇರಲಿಲ್ಲವಾದರೂ ಮನೆಯವರ ಒತ್ತಾಯಕ್ಕೆ ಒಮ್ಮೆ ಮನೆ ದೇವರಿಗೆ ಕಲ್ಯಾಣೋತ್ಸವ ಏರ್ಪಡಿಸಿದ್ದರಂತೆ.[೧೫]

'ಇವರು ನಿತ್ಯ ಬೆಳಿಗ್ಗೆ ೬–೬.೩೦ಕ್ಕೆ ಎದ್ದು ಕಾಫಿ ಕುಡಿದು, ಪತ್ರಿಕೆ ಓದಿ, ಸ್ನಾನ ಮಾಡಿ ದೇವರಿಗೆ ಕೈ ಮುಗಿದು ಬೆಳಗಿನ ಉಪಹಾರ ಸ್ವೀಕರಿಸಿ ಓದಲು ಕುಳಿತು ಬಿಡುತ್ತಿದ್ದರು. ೧೦ ಘಂಟೆಯ ಸುಮಾರಿಗೆ ಕಾಲೇಜಿಗೆ ಹೋಗಲು ಸಿದ್ಧರಾಗುತ್ತಿದ್ದರು. ಕಾಲೇಜಿನಿಂದ ಹಿಂದಿರುಗಿದ ಮೇಲೆ ಕಾಫಿ ಕುಡಿದು ವಾಯು ವಿಹಾರಕ್ಕೆ ಹೊರಟು ಮನೆ ಹತ್ತಿರದಲ್ಲಿದ್ದ ಕೃಷ್ಣಾ ಬುಕ್ ಡಿಪೋಗೆ ಬರುತ್ತಿದ್ದರು. ಅಲ್ಲಿಗೆ ಪ್ರೊ. ಸುಬ್ರಮಣ್ಯಂ, ಕೃಷ್ಣಸ್ವಾಮಿ ಅಯ್ಯಂಗಾರ್, ಕೆ.ವಿ.ರಾಘವಾಚಾರ್ ಇತರೆ ಎಲ್ಲರೂ ಬಂದು ಸೇರಿ ಲಘು ಹರಟೆ, ಕೆಲವಾರು ಸಾಹಿತ್ಯಿಕ ವಿಚಾರಗಳ ಚರ್ಚೆ ನಡೆಸಿ ಸಂಜೆ ನಸುಕಿನ ಹೊತ್ತಿಗೆ ಬರುವಾಗ ಮನೆ ಬಳಕೆಗೆ ಬೇಕಾದ ನಿತ್ಯೋಪಯೋಗಿ, ತರಕಾರಿ ಹಣ್ಣು, ಇತರೆ, ಗೃಹ ಉಪಯೋಗಿ ಸಾಮಗ್ರಿಗಳನ್ನು ತರುತ್ತಿದ್ದರು. ಇವರು ಓದಿನಲ್ಲಿ ಎಷ್ಟು ಅಭಿರುಚಿ ಉಳ್ಳವರಾಗಿದ್ದರೂ ಊಟದಲ್ಲಿಯೂ ಅಷ್ಟೇ ಅಚ್ಚುಮೆಚ್ಚಾದ ರುಚಿಯಾದ ಭೋಜನ ಪ್ರಿಯರಾಗಿದ್ದರು. ಬಿಸಿ ಬಿಸಿಯಾದ ಊಟ, ಪ್ರಿಯವಾದ ಸಿಹಿ ಚಿರೋಟ, ಬೇಳೆ ಹೋಳಿಗೆ (ಒಬ್ಬಟ್ಟು) ಪುಳಿಯೋಗರೆ, ಇವರಿಗೆ ಬಹಳ ಪ್ರಿಯವಾದದಾಗಿದ್ದು ಅಷ್ಟೆ ಅಲ್ಲದೆ ಉಳುಂದೊಗರೆಯನ್ನು ಇಷ್ಟ ಪಡುತ್ತಿದ್ದರು. ಜೊತೆಗೆ ಬೆಂಡೆಕಾಯಿಗೊಜ್ಜು ಎಂದರೇ ಬಾಯಿ ಚಪ್ಪರಿಸಿ ಊಟ ಸವಿಯುತ್ತಿದ್ದರಲ್ಲದೇ ಬದನೆಕಾಯಿ ಪಲ್ಯವನ್ನು ಇಷ್ಟಪಡುತ್ತಿದ್ದರು.[೧೬]

ಡಿ.ಎಲ್.ಎನ್. ಅವರಿಗೆ ಮತೀಯವಾದ, ಸಂಕುಚಿತ ದೃಷ್ಟಿ, ಇರಲಿಲ್ಲ ಇವರು ಎಲ್ಲಾ ಧರ್ಮವನ್ನು ಗೌರವಿಸುತ್ತಿದ್ದವರು. ಇವರಿಗೆ ಮತಧರ್ಮದ ವಿಚಾರದಲ್ಲಿ ಬೇಹುಗಾರಿಕೆ ಓಡಿಸುತ್ತಿರಲಿಲ್ಲ, ಸರಸ್ವತಿಯ ರಾಜ್ಯದಲ್ಲಿ ಜಾತೀಯತೆ, ಮತೀಯತೆಗಳಿಗೆ ಸ್ಥಾನವಿಲ್ಲ.[೧೭]

ಎಂದು ಅವರು ಹೇಳಿರುವುದನ್ನು ತಿಳಿಯಬಹುದಾಗಿದೆ. ಇವರನ್ನು ಅರಿತುಕೊಂಡವರು ಯಾರೇ ಆಗಲಿ ಇವರೊಬ್ಬ ಮತೀಯ ಪಕ್ಷಭಾವನೆಯುಳ್ಳ ವ್ಯಕ್ತಿ ಎಂದು ಹೇಳಬಹುದು.

ಡಿ.ಎಲ್.ಎನ್ ದಂಪತಿಗಳಿಗೆ ಒಟ್ಟು ೬ ಜನ ಮಕ್ಕಳು, ಐದು ಜನ ಹೆಣ್ಣು ಮಕ್ಕಳಾದರೆ, ಒಬ್ಬನೇ ಗಂಡು ಮಗನು, ೧೯೪೦ರ ವೇಳೆಗೆ ಸರಸ್ವತಿಪುರಂನಲ್ಲಿ ಹೊಸ ಮನೆ ಕಟ್ಟಿಕೊಂಡು ಅಲ್ಲಿಯೇ ಸಂಸಾರ ಹೂಡಿದ್ದರು. (ಇಂದು ಆ ಜಾಗದಲ್ಲಿ ಮೂರನೆಯ ಮಗಳಾದ ಪ್ರಭಾ ಸೀತಾರಾಂ ಅಯ್ಯಂಗಾರ್ ಅವರು ಹೊಸ ಕಟ್ಟಡ ಕಟ್ಟಿಕೊಂಡು ವಾಸವಾಗಿದ್ದಾರೆ) ಇಲ್ಲಿ ವಾಸವಾದ ಒಂದು ವರ್ಷಕ್ಕೆ ಅಂದರೆ ೧೯೪೧ರಲ್ಲಿ ಮೊದಲ ಮಗಳ ರಾಜಲಕ್ಷ್ಮೀ ಜನನ ವಾಯ್ತು, ನಂತರ ೧೯೪೨ರ ವೇಳೆಗೆ ಪುತ್ರ ಸಂತಾನವಾಯ್ತು, ಆದರೇ ಜನನವಾದ ಒಂದೂವರೆ ವರ್ಷಕ್ಕೆ ವಿಪರೀತ ಜ್ವರದ ಬಳಲಿಕೆಯಿಂದ ಸರಿಯಾದ ವೈದ್ಯಕೀಯ ಚಿಕಿತ್ಸೆ ದೊರೆಯದೆ ಮಿದುಳಿನ ಜ್ವರ ಆವರಿಸಿ ಮಗು ತೀರಿಹೊಯ್ತು. ಇದರ ಆಘಾತದಿಂದ ದಂಪತಿ ಸಹಿತ ಕೊರಗಿ ಮನೋಬಲ ಕುಸಿತಕ್ಕೊಳಗಾಗಿ ನೆಮ್ಮದಿ ಅರಸಿ ರಮಣಮಹರ್ಷಿಗಳ ಆಶ್ರಮಕ್ಕೆ ಹೋಗಿ ಅಲ್ಲಿ ಆರು ತಿಂಗಳುಗಳ ಕಾಲ ಕಳೆದರು. ಇಲ್ಲಿಂದ ಸಮಾಧಾನ ಪಡಿಸಿ ಕರೆ ತಂದವರು ಇವರ ಕುಟುಂಬ ವತ್ಸಲರಾದ ಪಾರ್ಥಸಾರಥಿಯವರು.[೧೮] ಮೂರನೆಯವಳು ಪ್ರಭಾ ಹೆಸರಿಗೆ ತಕ್ಕಂತೆ ಪ್ರಭೆಯಾಗಿ ಹುಟ್ಟಿದ ಮನೆಗೂ ಕೊಟ್ಟ ಮನೆಗೂ ಕೀರ್ತಿವಂತಳಾಗಿ ಬೆಳಗುತ್ತಿದ್ದಾಳೆ. ಇವರು ಪತಿಭಕ್ತಿಯ ಜೊತೆಗೆ ಪಿತೃಭಕ್ತಿಯನ್ನು ಮೆರದವರಾಗಿದ್ದಾರೆ. ಮೈಸೂರಿನಲ್ಲಿಯೆ ವಾಸವಿರುವ ಸೀತಾರಾಂ ಅಯ್ಯಂಗಾರ್ ಎನ್ನುವವರಿಗೆ ಇವರನ್ನು ವಿವಾಹ ಮಾಡಿಕೊಡಲಾಗಿದೆ. ಪ್ರಸ್ತುತ ಇವರ ಕುಟುಂಬ 'ದೊಡ್ಡಬೆಲೆ' ಹೆಸರಿನ ಮನೆಯಲ್ಲಿ ಇಂದಿಗೂ ಅಲ್ಲೆ ವಾಸವಾಗಿದ್ದಾರೆ. ಈ ದಂಪತಿಗಳಿಗೆ ಇಬ್ಬರು ಪುತ್ರರಿದ್ದು ಒಬ್ಬರು ಅಮೇರಿಕಾದಲ್ಲಿ ವಾಸವಿದ್ದರೇ, ಇನ್ನೊಬ್ಬರು ಮೈಸೂರಿನಲ್ಲಿಯೇ ವಾಸವಿದ್ದಾರೆ.

ಸೀತಾರಾಂ ಅಯ್ಯಂಗಾರ್ ಅವರಿಗೆ ತಮ್ಮ ಪಿತೃ ಸಮಾನರಾದ ಮಾವನವರ ಮೇಲೆ ಎಲ್ಲಿಲ್ಲದ ಪ್ರೀತಿ, ಮಮಕಾರ ಅವರೂ ಅಷ್ಟೇ ಪ್ರೀತಿ, ವಾತ್ಸಲ್ಯದಿಂದ ಇವರನ್ನು ಕಾಣುತ್ತಿದ್ದರು. ಸೀತಾರಾಂ ಅವರಿಗೆ ಇವರ ಮೇಲಣ ಭಯ, ಭಕ್ತಿ ಬಹಳವಿದ್ದಿತ್ತಲ್ಲದೆ ಒಂದೆಡೆ ಅವರೇ ಹೇಳಿದಂತೆ ಮಾವನವರು ತಮಗೆ ತಂದೆ ಸಮಾನರು ಇವರ ಒಡನಾಟ, ಪ್ರೀತಿ ನಮಗೆ ದೊರೆತದ್ದು ತಮ್ಮ ಪುಣ್ಯವೆಂದು, ಇವರ ಸೇವೆ ಎಂದರೆ ತಮಗೊಂದು ಪವಿತ್ರಕಾರ್ಯ[೧೯]ವೆಂದು ತಿಳಿದಿದ್ದರು. ಡಿ.ಎಲ್.ಎನ್. ರವರು ಕಾಲವಾದ ನಂತರವೂ ಆ ಭಕ್ತಿ ಗೌರವಗಳೂ ಕಡಿಮೆಯಾಗಲಿಲ್ಲ ಇದಕ್ಕೆ ಪೂರಕವೆಂಬಂತೆ ವಿದ್ವಾಂಸರರೆ ಸಲಹೆ ಸೂಚನೆಗಳ ಮೇರೆಗೆ ತಾವೇ ಪ್ರೀತಿಪೂರ್ವಕವಾಗಿ ಉತ್ಸಾಹದಿಂದ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ(೨೦೦೫) ಡಿ.ಎಲ್.ಎನ್. ಅವರ ಹೆಸರಿನ ದತ್ತಿನಿಧಿ ಸ್ಥಾಪಿಸುವ ಮೂಲಕ ಅವರ ಸಾಹಿತ್ಯ ಬೆಳೆಯಲು ಪೋಷಕರಾಗಿದ್ದಾರೆ.

ಡಿ.ಎಲ್.ಎನ್. ಅವರು ಕುಟುಂಬ ವತ್ಸಲರು, ಗಂಡು ಮಕ್ಕಳಿಲ್ಲದ ನೋವು ಅವರ ಎದೆಯಾಳದಲ್ಲಿದ್ದರೂ ಅವರೆಂದೂ ಆ ನೋವನ್ನು ಪ್ರಕಟಪಡಿಸಿದವರಲ್ಲ ಅವರ ಐವರು ಹೆಣ್ಣು ಮಕ್ಕಳಲ್ಲಿ ಮೊದಲನೆಯವಳು ರಾಜಲಕ್ಷ್ಮೀ ಎಂ.ಎಸ್ಸಿ. ಮುಗಿಸಿ, ಎಫ್.ಟಿ.ಆರ್.ಐ.ನಲ್ಲಿ ಒಳ್ಳೆಯ ಹುದ್ದೆಯಲ್ಲಿದ್ದವರು. ಈಗ ಇವರು ಇಲ್ಲ ಕಾಲವಾಗಿದ್ದಾರೆ. ಈ ಹಿಂದೆ ಹೇಳಿದಂತೆ ಎರಡನೆಯವರು ಮೈಸೂರಿನಲ್ಲಿ ಈಗಲೂ ವಾಸವಾಗಿದ್ದಾರೆ. ಮೂರನೆಯವರು ಪದ್ಮಿನಿ ಬೊಂಬಾಯಿಯಲ್ಲಿ ಕುಟುಂಬ ಸಮೇತವಾಗಿ ನೆಲೆಸಿದ ಇವರು ಈಗ ಇಲ್ಲ ಕಾಲವಾಗಿದ್ದಾರೆ. ನಾಲ್ಕನೆಯವರು ಜಯಶ್ರೀ ಶೇಷಶಾಯಿ ಇವರು ಇಬ್ಬರು ಮಕ್ಕಳೊಂದಿಗೆ ಕುಟುಂಬ ಸಮೇತರಾಗಿ ತಿರುಪತಿಯಲ್ಲಿ ವಾಸವಿದ್ದಾರೆ. ಈಗೆ ಈ ಐವರು ಹೆಣ್ಣು ಮಕ್ಕಳಾದರೂ ವಿದ್ಯಾವತಿಯರಾಗಿ, ಸದ್ಗುಣ ಮತಿಯರಾಗಿ ಬಾಳಿನಲ್ಲಿ ನೆಮ್ಮದಿಯ ಬದುಕು ಕಂಡುಕೊಂಡಿದ್ದಾರೆ.

**• ಶಿಕ್ಷಣ ಮತ್ತು ವೃತ್ತಿ ಜೀವನ**

'ಮನೆಯೇ ಮೊದಲ ಪಾಠಶಾಲೆ ಜನನಿ ತಾನೆ ಮೊದಲ ಗುರು' ಎನ್ನುವ ಹಿತನುಡಿಯಂತೆ ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ ಅವರು ಆರಂಭದ ವಿದ್ಯಾಭ್ಯಾಸವನ್ನು ತಾಯಿಯ ತಂದೆಯಾದ ಅಣ್ಣಾಸ್ವಾಮಿ ಅಯ್ಯಂಗಾರ್ ಅವರ ಮಾರ್ಗೋಪಾಯದಲ್ಲಿ ನಡೆಸಿದ್ದರ ಕಾರಣ ತಂದೆಯವರ ಬಿಡುವಿಲ್ಲದ ವೃತ್ತಿಕಾರ್ಯದ ಒತ್ತಡವಾಗಿ ಇವರ ವಿದ್ಯಾಭ್ಯಾಸ ಮಧುಗಿರಿ, ಪಾವಗಡ, ಶಿರಾ, ತುಮಕೂರುಗಳಲ್ಲಿ ಮೆಟ್ರಿಕ್ಯುಲೇಷನ್‌ವರೆಗೆ ನಡೆಯಿತು. ಹಿಂದೆ ಹೇಳಿದಂತೆ ಇವರ ತಾತ ಅಣ್ಣಾಸ್ವಾಮಿ ಅಯ್ಯಂಗಾರ್ ತುಂಬಾ ವಾಗ್ಮಿಗಳಾಗಿದ್ದು ಉತ್ತಮ ಪಂಡಿತರಾಗಿದ್ದರಲ್ಲದೆ ತಮ್ಮಲ್ಲಿರುವ ವಿದ್ಯೆ, ಅಧ್ಯಯನದ ಶುಚಿತ್ವವನ್ನು ಚಿಕ್ಕಂದಿನಲ್ಲೆ ಇವರಿಗೆ ಧಾರೆ ಎರೆದು ಮುಂದೆ ಪ್ರಬುದ್ಧ ಮಟ್ಟದಲ್ಲಿ ಬೆಳೆಯಲು ಕಾರಣ ಪುರುಷರಾಗಿದ್ದಾರೆ. ೧೨ನೇ ವಯಸ್ಸಿನಲ್ಲಿಯೇ ಹಳಗನ್ನಡ ಪ್ರೌಢ ಗ್ರಂಥಗಳನ್ನು ಬಾಯಿಪಾಠವಾಗಿ ಪಠಿಸುವ ಅಭ್ಯಾಸದ ರುಚಿ ಡಿ.ಎಲ್.ಎನ್. ಅವರಿಗಿದ್ದಿತ್ತು. ಪಾವಗಡದ ಎ.ವಿ.ಸ್ಕೂಲ್ (ಆಂಗ್ಲೋವರ್ನಾಕ್ಯೂಲರ್ ಸ್ಕೂಲ್)ನಲ್ಲಿ ವಿದ್ಯಾಭ್ಯಾಸಕ್ಕೆಂದು ಸೇರಿದಾಗ ಶಿಕ್ಷಕರೊಬ್ಬರು ಇವರ ಹೆಸರು ದೊಡ್ಡದಾಯಿತೆಂದು (ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್) ಡಿ.ಎಲ್.ನರಸಿಂಹಾಚಾರ್ ಎಂಬುದನ್ನಾಗಿಸಿ ಹಾಜರಿ ಪುಸ್ತಕದಲ್ಲಿ ನಮೂದಿಸಿದ್ದರು.[೨೦] ಇಲ್ಲಿನ ಅಭ್ಯಾಸ ಮುಗಿಸಿ, ಐದನೇ ತರಗತಿಯ ಮಾಧ್ಯಮಿಕ ಅಭ್ಯಾಸಕ್ಕಾಗಿ ತುಮಕೂರು ಸೇರಬೇಕಾಯ್ತು.[೨೧] ಅಲ್ಲದೇ ಪೋರ್ತ್ ಫಾರಗೆ ಬರುವ ಹೊತ್ತಿಗಾಗಲೇ ಇವರು ಗದಾಯುದ್ಧ, ಛಂದೋಂಬುಧಿ, ಇತರೆ ಕೃತಿಗಳನ್ನು ಹಳಗನ್ನಡ ಸಂಸ್ಕೃತ ಅಭ್ಯಾಸವನ್ನು ಕರಗತ ಮಾಡಿಕೊಂಡಿದ್ದರು. ಇಲ್ಲಿನ ಅಭ್ಯಾಸದ ವೇಳೆಗಾಗಲೇ ಇವರಿಗೆ ಕನ್ನಡ ಸಾಹಿತ್ಯದ ಬಗೆಗೆ ಸಹಜವಾದ ಆಕರ್ಷಣೆ ಇದ್ದಿತ್ತು. ಪ್ರಾಚೀನ ಕವಿಗಳ ಕೃತಿ, ತಾಳೆಪ್ರತಿಗಳನ್ನು ಓದುವ

ಅಭ್ಯಾಸ ಇವರಿಗೆ ಆಗಿನಿಂದಲೇ ರೂಢಿಯಲ್ಲಿದ್ದಿತ್ತು. ಮುಂದೆ ಅದು ಅವರ ಹವ್ಯಾಸವಾದದ್ದು ಕುತೂಹಲದ ಸಂಗತಿಯಾಗಿದೆ.

ಇವರಿಗೆ ಕನ್ನಡ, ಸಂಸ್ಕೃತಗಳ ಮೇಲೆ ಇದ್ದಷ್ಟು ಆಸಕ್ತಿ ಇಂಗ್ಲಿಷ್‌ನ ಮೇಲೆ ಇದ್ದಿತ್ತು. ಇಂಗ್ಲಿಷ್ ಭಾಷೆ, ಸಾಹಿತ್ಯಗಳ ಬಗೆಗೆ ಸಾಕಷ್ಟು ಅಧ್ಯಯನ ಮಾಡಿದ್ದ ಇವರಿಗೆ ಈ ಭಾಷೆ ಕರತಲಾಮಲಕದ್ದಾಗಿತ್ತು. ಇಷ್ಟೇ ಅಲ್ಲದೇ ೨೫ ಭಾಷೆಗಳು[೨೨] ಇವರಿಗೆ ರೂಢಿಗತವಾಗಿದ್ದವೆಂದು ತಿಳಿದಿದೆ. ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ನಲ್ಲಪ್ಪ ಎನ್ನುವವರ ಮನೆಯಲ್ಲಿ ದೊರೆತ ಕಾಗದದ ಪ್ರತಿಯಲ್ಲಿ ಮೈಸೂರಿನ ಇತಿಹಾಸ ಇದ್ದುದ್ದನ್ನು ತಿಳಿದು ಅದನ್ನು ಇಂಗ್ಲೀಷ್‌ಗೆ ಭಾಷಾಂತರಿಸಿ ಎಂ.ಎಚ್.ಕೃಷ್ಣ ಅವರಿಗೆ ಕಳುಹಿಸಿದ್ದರಂತೆ ಇದೇ ವೇಳೆಗೆ ಮುಖ್ಯೋಪಾಧ್ಯಾಯರಾದ ಕೃಷ್ಣಸ್ವಾಮಿ ಅಯ್ಯಂಗಾರ್ ಅವರು ವಿದ್ಯಾರ್ಥಿಗಳಲ್ಲಿ ಹುದುಗಿರುವ ಪ್ರತಿಭೆಯನ್ನು ಹೊರಗೆಳೆಯಲು 'ಸ್ಕೂಲ್ ಫ್ಲೋಕ್' ಎಂಬ ಇಂಗ್ಲೀಷ-ಕನ್ನಡ ಪತ್ರಿಕೆಯನ್ನು ಪ್ರಾರಂಭಿಸಿದ್ದರು. ಆ ಪತ್ರಿಕೆಯಲ್ಲಿ ಡಿ.ಎಲ್.ಎನ್.ರವರು 'ದೊಡ್ಡ ಮನುಷ್ಯ ಯಾರು?' ಎಂಬ ಕನ್ನಡ ಲೇಖನ ಮತ್ತು 'The story of a cotton seed'[೨೩] ಎಂಬ ಇಂಗ್ಲಿಷ್ ಲೇಖನಗಳು ಪ್ರಕಟವಾದವು. ಇದೇ ವೇಳೆ ಖಾಸಗಿಯಾಗಿ ಸಂಸ್ಕೃತ ಹೇಳಿಸಿಕೊಂಡು 'ರಘುವಂಶ' ಮತ್ತು 'ಚಂಪೂ ರಾಮಾಯಣ'ಗಳನ್ನು ಕಲಿತರು. ಇಂಗ್ಲಿಷ್ ಸಾಹಿತ್ಯದ ಬಗೆಗೂ ಒಲವಿದ್ದ ಡಿ.ಎಲ್.ಎನ್. ತಮ್ಮ ಮನೋಧರ್ಮದ ಅನುಗುಣವಾಗಿ ಗೆಳೆಯರ ಸಹಾಯದಿಂದ 'ರೇನಾಲ್ಡ್ಸ್‌ನ' ಕಾದಂಬರಿಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡಿದ್ದರು.[೨೪]

ಇವರು ಓದಿನಲ್ಲಿ ಎಷ್ಟು ಮುಂದಿದ್ದರೂ ಆಟದಲ್ಲಿಯೂ ಅಷ್ಟೆ ಮುಂದಿದ್ದರು. 'ಪುಟ್‌ಬಾಲ್' ಆಟದಲ್ಲಿ ಉತ್ಸಾಹ ನಿಪುಣ ಆಟಗಾರರಾಗಿದ್ದು 'ರೈಟ್‌ಔಟ್' ಸ್ಥಾನದಲ್ಲಿ ಬಿರುಗಾಳಿಯಂತೆ ಓಡಿ ಚೆಂಡನ್ನು ಒದ್ದುಕೊಂಡು ಹೋಗುತ್ತಿದ್ದರಂತಲ್ಲದೇ, ಅದೇ ರೀತಿ ಕ್ರಿಕೆಟ್, ಗೋಲಿ ಆಟಗಳಲ್ಲಿಯೂ ನಿಪುಣತೆ ಹೊಂದಿದ್ದು ಯಾವಾಗಲೂ ಮೇಲುಗೈ ಸಾಧಿಸುತ್ತಿದ್ದರಂತೆ.[೨೫]

ತುಮಕೂರಿನಲ್ಲಿ ಮೆಟ್ರೀಕ್ಯೂಲೇಷನ್‌ನ ಎಂಟ್ರೆನ್ಸ್ ಅಭ್ಯಾಸದ ಅವಧಿಯಲ್ಲಿ (೧೯೨೪) ಡಿ.ಎಲ್.ಎನ್. ಅವರಿಗೆ ಆಚಾರ್ಯ ಬಿ.ಎಂ.ಶ್ರೀಕಂಠಯ್ಯ ಅವರನ್ನು ನೋಡುವ ಭಾಗ್ಯ ದೊರೆಯಿತು.[೨೬] ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಶ್ರೀ ಅವರಿಗೆ ಕನ್ನಡದ ಬಗ್ಗೆ ಒಲವಿತ್ತು. ಆಗತಾನೆ ಕನ್ನಡದ ದೀಕ್ಷೆ ಅವರಲ್ಲಿ ಅರಳಿದ್ದಾಗಿತ್ತು. ಡಿ.ಎಲ್.ಎನ್ ರವರು ಅಭ್ಯಾಸಿಸುವ ಶಾಲೆಗೆ ಬಂದಾಗ 'Stories from aeneid' ಎಂಬ ಪಠ್ಯದ ಮೇಲೆ ಉಪನ್ಯಾಸ ಮಾಡಿದ್ದರು. ಇದನ್ನು ಆಲಿಸಿದ ಡಿ.ಎಲ್.ಎನ್. ಅವರಿಗೆ ಶ್ರೀ ಅವರ ಮೇಲೆ ಗೌರವ ಭಾವನೆಗಳು ಇನ್ನಷ್ಟು ಹೆಚ್ಚಿದ್ದವು. ಯೋಗಾಯೋಗವೇನೋ ಮುಂದೆ ಅವರ ಶಿಷ್ಯರಾದರು. ಶ್ರೀ ಯವರ ಪಾಂಡಿತ್ಯ, ಪ್ರತಿಭೆ, ಮಾತುಗಾರಿಕೆ, ಡಿ.ಎಲ್.ಎನ್. ಅವರ ಮೇಲೆ ಗಾಢವಾಗಿ ಪ್ರಭಾವ ಬೀರಿತ್ತು.[೨೭] ಅಲ್ಲದೆ ಇವರ ಮೇಲಿನ ಗೌರವ ಹೃದಯಾಳದ್ದಾಗಿತ್ತು.

ಮುಂದಿನ ದಿನಗಳಲ್ಲಿ ಡಿ.ಎಲ್.ಎನ್. ಅವರು (೧೯೨೪ರಲ್ಲಿ) ಎಂಟ್ರೆನ್ಸ್ ಪರೀಕ್ಷೆ ಮುಗಿದ ಮೇಲೆ ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ವಿದ್ಯಾರ್ಥಿಯಾಗಿ ಸೇರಿದ್ದರು. ಬಿ.ಎ. ಪದವಿಯ ಮೊದಲ ವರ್ಷದ ಪರೀಕ್ಷೆಯ ರಸಾಯನಶಾಸ್ತ್ರ ವಿಭಾಗದಲ್ಲಿ ಶೇಕಡಾ ೬೦ರಷ್ಟು ಅಂಕಗಳನ್ನು ಪಡೆದಿದ್ದರೂ ಆಗಿನ ಅಧ್ಯಾಪಕರೊಬ್ಬರ ಪಕ್ಷಪಾತ ನೀತಿಯಿಂದ, ಪ್ರಭಾವ ಶಾಲಿಗಳ ಒತ್ತಾಸೆಗಳಿಲ್ಲದ್ದರಿಂದ ವಿಜ್ಞಾನ ವಿಭಾಗದಲ್ಲಿ ಸ್ಥಾನ ಸಿಗದೆ ಅನಿವಾರ್ಯವಾಗಿ ಬಿ.ಎ. ಆರ್ಟ್ಸ್ ವಿಭಾಗಕ್ಕೆ ಸೇರಿ ಭೌತಶಾಸ್ತ್ರ, ರಸಾಯನಶಾಸ್ತ್ರ, ಭಾಷೆ ವಿಷಯಗಳಲ್ಲಿ ಅಧ್ಯಯನ ಮುಂದುವರೆಸಿದ್ದರು.[೨೮]

ಮೊದಲಿನಿಂದಲೂ ಸಾಹಿತ್ಯಿಕವಾಗಿ ಕನ್ನಡದ ಬಗ್ಗೆ ಆಸಕ್ತಿ ಇದ್ದ ಡಿ.ಎಲ್.ಎನ್. ಅವರು ಇದರಿಂದಾಗಿ ಖಿನ್ನತೆಗೆ ಒಳಗಾಗಿರಲಿಲ್ಲ. ಒಂದೊಮ್ಮೆ ಇವರು ಕಾವ್ಯ ವಚನ ಸ್ಪರ್ಧೆಯಲ್ಲಿ ಭಾಗವಹಿಸಿದ್ದರು, ಆದರೆ ಇವರಿಗೆ ಬಹುಮಾನ ಸಿಗುವುದಿಲ್ಲ ಆಗ ಪ್ರಿಯ ಗುರುಗಳಾದ ಟಿ.ಎಸ್.ವೆಂಕಣ್ಣಯ್ಯನವರಿಗೆ ಶಿಷ್ಯ ವಾತ್ಸಲ್ಯದ ಕುರುಹುವಾಗಿ ಕೊಂಚ ಬೇಸರವಾಗಿತ್ತು. ಮುಂದೆ ಪದವಿ ತರಗತಿಯ ಎರಡನೆಯ ವರ್ಷದಲ್ಲಿದ್ದಾಗ 'ಕನ್ನಡ ಕಾವ್ಯಗಳಲ್ಲಿ ಋತುವರ್ಣನೆ' ಎಂಬ ವಿಷಯದ ಕುರಿತು ಸುದೀರ್ಘ ಲೇಖನವೊಂದನ್ನು ಬರೆದು ಅವರಿಗೆ ತೋರಿಸಿದ್ದರು. ಇದರಿಂದ ಶಿಷ್ಯನ ಆಳವಾದ ಪಾಂಡಿತ್ಯ, ಹೆಮ್ಮೆ ಎನ್ನಿಸಿತ್ತಲ್ಲದೆ ತತ್‌ಕ್ಷಣವೆ ಸಂತೋಷದಿಂದ ಪರಿಷತ್ ಪತ್ರಿಕೆಯಲ್ಲಿ ಪ್ರಕಟಣೆಗೆ ಅನುವುಮಾಡಿದ್ದರು.[೨೯]

ಈವರೆಗೆ ಡಿ.ಎಲ್.ಎನ್. ರವರು ಬೆಳೆಸಿಕೊಂಡಿದ್ದ ವ್ಯಾಸಂಗ ಪ್ರೀಯತೆ, ಸಂಶೋಧನಾಸಕ್ತಿ, ಹಳಗನ್ನಡ, ನಡುಗನ್ನಡ ಸಾಹಿತ್ಯಗಳ ಪ್ರೌಢಿಮೆಗೆ ಈ ಬರಹ ಕೈಗನ್ನಡಿಯಂತಹದ್ದಾಗಿ ಮುಂದೆ ಸಾಗಬೇಕಾದ ಹಾದಿಯನ್ನು ತೋರಿಸಿದೆ. ಈ ಅವಧಿಯಲ್ಲೆ ಇವರಿಗೆ ಪದ್ಯ ಬರೆಯುವ ಹವ್ಯಾಸವೂ ಇದ್ದಿತ್ತು. ಆದರೆ ಅವು ಗುರುಗಳ ಮನಸ್ಸಿಗೆ ತೃಪ್ತಿಕೊಡಲಿಲ್ಲವೆಂದು ಹವ್ಯಾಸವನ್ನು ಕೈ ಬಿಟ್ಟರು ಆದರೆ ಅದಕ್ಕಾಗಿ ಎಂದು ವಿಷದ ವ್ಯಕ್ತಪಡಿಸಲಿಲ್ಲ.

ಡಿ.ಎಲ್.ಎನ್. ಅವರು ಎಂ.ಎ ಪದವಿಗೆ ಸೇರಿದ್ದು ಅನಿರೀಕ್ಷಿತ, ೧೯೨೨ರಲ್ಲಿ ಆಗ ತಾನೇ ಬಿ.ಎ. ಪದವಿ ಮುಗಿಸಿದ್ದರು. ಫಲಿತಾಂಶ ಬಂದ ಬಳಿಕ ಯಾವುದಾದರೂ ಹುದ್ದೆಗೆ ಸೇರುವ ಉದ್ದೇಶ ಇವರದ್ದಾಗಿತ್ತು. ಬೇಸಿಗೆ ರಜೆಗೆಂದು ಮಾನವನ ಮನೆಗೆ ಬಂದಿದ್ದ ಇವರಿಗೆ ಆಗ ತಾನೇ ಮಹಾರಾಜ ಕಾಲೇಜಿನಲ್ಲಿ ಕನ್ನಡ ಎಂ.ಎ. ತರಗತಿಗಳು ಪ್ರಾರಂಭಿಸುವುರೆಂಬ ಸುದ್ಧಿ ಅವರ ಕಿವಿಗೆ ಬಿದ್ದಿತ್ತು. ಮನಸ್ಸು ಆ ಕಡೆಗೆ ವಾಲಿ ನೌಕರಿಗೆ ಸೇರ ಬಯಸುವ ಬಯಕೆ ಹಿಂದಿಕ್ಕಿ ಕನ್ನಡ ಎಂ.ಎ. ತರಗತಿಗೆ ಸೇರಿಕೊಂಡರು. ಬಾಡಿಗೆ

ಕೊಠಡಿ ಮಾಡಿಕೊಂಡು ವಿಶ್ವವಿದ್ಯಾಲಯದಲ್ಲಿ ಬಡ ವಿದ್ಯಾರ್ಥಿಗಳಿಗೆಂದು ಇದ್ದ ಹೋಟೆಲ್‌ನಲ್ಲಿ ಊಟ ಮಾಡಿಕೊಂಡು ಅಭ್ಯಾಸ ಮುಂದುವರಿಸಿದರು. ಈ ವೇಳೆಗೆ ತರಗತಿಯ ಸಹಪಾಠಿ ಮಿತ್ರರೆಂದರೆ, ಕೆ.ವಿ.ಪುಟ್ಟಪ್ಪ, ಕ.ವೆಂ.ರಾಘವಾಚಾರ್ಯ, ಅನಂತರಂಗಾಚಾರ್ಯ, ಕೆ. ವೆಂಕಟರಾಮಪ್ಪನವರು ಒಂದೇ ಕೊಠಡಿಯಲ್ಲಿದ್ದುಕೊಂಡು ಅಭ್ಯಾಸಿಸುತ್ತಿದ್ದರು. ಆಗ ಇವರಿಗೆ ಪಾಠ ಬೋಧಿಸುತ್ತಿದ್ದ ಗುರುವೃಂದವೆಂದರೆ ಬಿ.ಎಂ.ಶ್ರೀಕಂಠಯ್ಯ, ರಾಳ್ಳಪಳ್ಳಿ ಅನಂತಕೃಷ್ಣಶರ್ಮಾ, ಸಿ.ಆರ್.ನರಸಿಂಹಶಾಸ್ತ್ರೀ, ಟಿ.ಎಸ್.ವೆಂಕಟಣ್ಣಯ್ಯ, ಎ.ಆರ್.ಕೃಷ್ಣಾಶಾಸ್ತ್ರಿ, ಟಿ.ಎಸ್.ಸುಬ್ಬರಾಯ ಶಾಸ್ತ್ರೀಗಳಂತಹ ಪಾಂಡಿತ್ಯ ವೃಂದ ಸೇರಿತ್ತು.[೩೦]

ಬಿ.ಎಂ.ಶ್ರೀಕಂಠಯ್ಯನವರು ಕನ್ನಡದ ಸಾರಥ್ಯವಹಿಸಿದ್ದ ಸಂದರ್ಭದ ಹೊತ್ತಲ್ಲೇ ಡಿ.ಎಲ್.ಎನ್ ಅವರು ಜ್ಞಾನದ ಹಸಿವನ್ನು ಕಾಲೇಜಿನ ಬಳಿ ಇದ್ದ ಪ್ರಾಚ್ಯ ವಿದ್ಯಾ ಸಂಸ್ಥೆ ಪೂರೈಸಿತ್ತು. ಅಲ್ಲಿಯೇ, ನಿತ್ಯ ಅನೇಕ ಹಳಗನ್ನಡ ಕವಿಗಳ ಪದ್ಯಗಳನ್ನು ಹಸ್ತಪ್ರತಿಯ ರೂಪದಲ್ಲಿಯೇ ಅಭ್ಯಾಸಿಸುತ್ತಿದ್ದರು. ಮೈಸೂರು ವಿಶ್ವವಿದ್ಯಾಲಯದ ಆಗ ತಾನೆ ಆರಂಭವಾದ ಕನ್ನಡ ಎಂ.ಎ. ಪದವಿಯ ಮೊದಲ ತಂಡದ ಪದವೀಧರರಲ್ಲಿ, ಪ್ರಥಮ ದರ್ಜೆಯಲ್ಲಿ ವಿ.ವಿ.ಯ ಮೊದಲ ಕುಲಪತಿಗಳಾದ ಎಚ್.ವಿ.ನಂಜುಂಡಯ್ಯರವರ ಸ್ವರ್ಣ ಪದಕವನ್ನು ಗಳಿಸಿದ್ದು ಇವರ ಯೋಗಾಯೋಗವೇ ಸರಿ. ಇನ್ನೊಂದು ಸೌಭಾಗ್ಯವೆಂದರೆ, ೧೯೨೯ರಲ್ಲಿ ವಿಶ್ವವಿದ್ಯಾಲಯದ ಕನ್ನಡದ ಪ್ರಥಮ ಸಂಶೋಧನಾ ವೇತನ ಪಡೆದ ಮೊದಲ ವ್ಯಕ್ತಿ ಇವರಾಗಿದ್ದಾರೆ. ಹೀಗೆ ದೊರೆತ ಅವಕಾಶಗಳನ್ನು ಬಳಸಿಕೊಂಡ ಇವರು 'ವೀರಶೈವ ಸಾಹಿತ್ಯದ ಆರಂಭದ ಕಾಲ' ಎನ್ನುವ ವಿಷಯ ಕುರಿತು ಅಭ್ಯಾಸ ಮಾಡಿ ನಿಯಮಿತ ಅವಧಿಗಿಂತ ಮುಂಚೆಯೇ ತಮ್ಮ ನಿಬಂಧವನ್ನು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ್ದರು.[೩೧]

ಇವರ ವೃತ್ತಿ ಜೀವನದ ಬಗ್ಗೆ ತಿಳಿಯುವುದಾದರೆ ಡಿ.ಎಲ್.ಎನ್. ಅವರು ಎಂ.ಎ. ಮುಗಿದ ನಂತರ ೧೯೩೦ರಲ್ಲಿ ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆಯ 'ಪ್ರೆಸಿಡೆಂಟ್ ಕನ್ನಡ ಪಂಡಿತರಾಗಿ ನೇಮಕವಾದಾಗಿ'ನಿಂದ ಅವರ ವೃತ್ತಿ ಜೀವನ ಆರಂಭವಾಯಿತು.[೩೨] ಇದರ ಜೊತೆಗೆ ಮಹಾರಾಜ ಕಾಲೇಜಿನಲ್ಲಿ ಒಪ್ಪೊತ್ತಿನ ಉಪನ್ಯಾಸಕರಾಗಿ ಪಾಠ ಹೇಳುತ್ತಿದ್ದರು. ಇದಕ್ಕೆ ಇವರ ಸಂಭಾವನೆ ಮಾಸಿಕ ೨೫ ರೂಪಾಯಿಗಳಾಗಿತ್ತು.[೩೩] ವಿದ್ಯಾರ್ಥಿ ದೆಸೆಯಿಂದ ಈ ಬೋಧನಾ ಅವಧಿಯವರೆಗೆ ಇವರು ಪ್ರಾಚೀನ ಗ್ರಂಥಗಳನ್ನು ಮುದ್ರಿತವಿರಲಿ, ಹಸ್ತಪ್ರತಿಗಳಿರಲಿ ಸಾಕಷ್ಟು ಮಟ್ಟಿಗೆ ಅಭ್ಯಾಸ ಮಾಡಿದ್ದರು. ಬಿ.ಎಲ್.ರೈಸ್ ಅವರ ಕಾಲದಿಂದ ಸಜ್ಜಾಗುತ್ತಾ ಬಂದಿದ್ದ ಪ್ರಾಚ್ಯ ವಿದ್ಯಾ ಸಂಶೋಧನಾ ಸಂಸ್ಥೆಯಲ್ಲಿ ಗ್ರಂಥಭಂಡಾರದ ಪೂರ್ಣ ಪ್ರಯೋಜನವನ್ನು ಪಡೆದುಕೊಂಡಿದ್ದರು. ಇಲ್ಲಿ ಪಂಡಿತರಾಗಿದ್ದ ಅವಧಿಯಲ್ಲೇ (೧೯೩೨) 'ಸಕಲ ವೈದ್ಯ ಸಂಹಿತಾ ಸಾರಾರ್ಣವ' (೧೯೫೦) 'ಭೀಷ್ಮಪರ್ವ ಸಂಗ್ರಹ' ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದರು.

೧೯೩೨ ರಲ್ಲಿ ಶ್ರೀಯುತರು ಮಹಾರಾಜ ಕಾಲೇಜಿನಲ್ಲಿಯೇ ಪೂರ್ಣಕಾಲಿಕ ಪಂಡಿತರಾಗಿ ನೇಮಕಗೊಂಡಿದ್ದ. ಆಗ ಇವರ ಸಂಬಳ ೧೨೦ ರೂಪಾಯಿಗಳು ಇದ್ದಿತ್ತು. ಇಲ್ಲಿ ೭ ವರ್ಷಗಳ ಕಾಲ ಸೇವೆ ಸಲ್ಲಿಸಿ ೧೯೩೯ರಲ್ಲಿ ಮೈಸೂರಿನಲ್ಲಿಯೇ ಇಂಟರ್ ಮೀಡಿಯಟ್ ಕಾಲೇಜಿ(ಇಂದಿನ ಮಹಾರಾಜ ಕಾಲೇಜು)ನಲ್ಲಿಗೆ ಕನ್ನಡ ಉಪನ್ಯಾಸಕರಾಗಿ ಸೇವೆಗೆ ಸೇರಿದರು. ಎರಡು ವರ್ಷಗಳ ಕಾಲ ಸೇವೆಸಲ್ಲಿಸಿ ೧೯೪೧ರಲ್ಲಿ ಮತ್ತೆ ಮಹಾರಾಜ ಕಾಲೇಜಿಗೆ ಬಂದ ಬಳಿಕ ೧೯೪೫ರಲ್ಲಿ ಉಪ ಪ್ರಾಧ್ಯಾಪಕ ವೃತ್ತಿಯಿಂದ ಬಡ್ತಿ ಪಡೆದು ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ವರ್ಗವಾದರು. ಮುಂದೆ ಇಲ್ಲಿ ಮೂರು ವರ್ಷಗಳ ಕಾಲ ಸೇವೆಸಲ್ಲಿಸಿ ೧೯೪೮ರಲ್ಲಿ ಮತ್ತೆ ಮೈಸೂರು ಮಹಾರಾಜ ಕಾಲೇಜಿಗೆ ಹಿಂದುರಿಗಿ ೧೯೫೪ರವರೆಗೆ ಅಲ್ಲಿಯೇ ಸೇವೆ ಸಲ್ಲಿಸಿದ್ದರು. ಇದೇ ವೇಳೆಗೆ (೧೯೫೪) ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿ ಕನ್ನಡ-ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಅಧಿಕಾರ ವಹಿಸಿಕೊಂಡಿದ್ದರು. ಈ ಅವಧಿಯಲ್ಲೇ ಪ್ರಾಧ್ಯಾಪಕ ಹುದ್ದೆಗೆ ಬಡ್ತಿ ಪಡೆದು. ಇಲ್ಲಿಂದ ಮೈಸೂರು ಮಹಾರಾಜ ಕಾಲೇಜಿಗೆ ಮರಳಿ, ಮುಂದೆ ೭ ವರ್ಷಗಳ ಕಾಲ ಸೇವೆಸಲ್ಲಿಸಿ ೩೧-೩-೧೯೬೨ರಲ್ಲಿ ಅಧ್ಯಾಪಕ ವೃತ್ತಿಯಿಂದ ನಿವೃತ್ತರಾದರು. ಇಷ್ಟೆ ಅಲ್ಲದೆ ಇದೇ ಅವಧಿಯಲ್ಲಿ ಪ್ರಬುದ್ಧ ಕರ್ಣಾಟಕದ ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸಿದ್ದರು.[೩೪]

ಇವರು ವೃತ್ತಿಯಿಂದ ನಿವೃತ್ತರಾಗಿದ್ದ ತಮ್ಮ ನಿತ್ಯ ಜೀವನದಲ್ಲಿ ನಡೆಸಿಕೊಂಡು ಬಂದಿದ್ದ ಅಧ್ಯಯನ, ಸಂಶೋಧನೆ ಮತ್ತು ಬರವಣಿಗೆಯಿಂದ ನಿವೃತ್ತರಾಗಿರಲಿಲ್ಲ. ಅಧ್ಯಯನವನ್ನು ಇನ್ನಷ್ಟು ಚುರುಕುಗೊಳಿಸಿಕೊಂಡು ೧೯೬೩ರಿಂದ ೧೯೬೯ರ ವರೆಗೆ ೭ ವರ್ಷಗಳ ಕಾಲ ವಿಶ್ವವಿದ್ಯಾಲಯದ ಧನಸಹಾಯ ಆಯೋಗದ ಸಂಶೋಧನಾ ವಿದ್ವಾಂಸರಾಗಿ ಕಾರ್ಯನಿರ್ವಹಿಸಿ[೩೫] (೧೯೬೪) 'ಕನ್ನಡ ಗ್ರಂಥ ಸಂಪಾದನೆ' (೧೯೭೧) 'ಪಂಪಭಾರತ ದೀಪಿಕೆ' ಎಂಬ ಎರಡು ಅತ್ಯುತ್ತಮ ಕೃತಿಗಳನ್ನು ರಚಿಸಿದರು. ಅಲ್ಲದೆ ಹಲವು ವಿದ್ವತ್ ಪೂರ್ಣ ಲೇಖನಗಳನ್ನು ಬರೆದು ಪ್ರಕಟಿಸಿದ್ದರು. ಮುಂದೆ ೧೯೬೬ರಿಂದ ೭.೫.೧೯೭೧ರ ಕೊನೆಯ ದಿನಗಳವರಿರೆಗೆ ತೀ.ನಂ.ಶ್ರೀ ಯವರ ನಿಧನದಿಂದ ತೆರವಾಗಿದ್ದ ಕನ್ನಡ-ಕನ್ನಡ ನಿಘಂಟಿನ ಅಧ್ಯಕ್ಷ ಸ್ಥಾನವನ್ನೂ, ಪ್ರಧಾನ ಸಂಪಾದಕತ್ವದ ಜವಾಬ್ದಾರಿಯನ್ನು ನಿರ್ವಹಿಸಿದ್ದು ಇವರ ಜೀವನದ ಮಹತ್ವ ಘಟ್ಟವಾಗಿದೆ.

**• ಬೋಧನ ಕ್ರಮ, ಶಿಷ್ಯ ಮತ್ತು ಮಿತ್ರ ವಾತ್ಸಲ್ಯ**

ಡಿ.ಎಲ್.ಎನ್. ಅವರ ಶಿಷ್ಯ ಪರಂಪರೆಗೆ ತಾವು ಅಂತಹ ಪಂಡಿತೋರ್ವರ ಶಿಷ್ಯರೆಂದು ಹೇಳಿಕೊಳ್ಳಲು ಹೆಮ್ಮೆ, ಅದೆಷ್ಟು ಮಂದಿಯ ಪ್ರೀತಿ ವಾತ್ಸಲ್ಯಗಳಿಗೆ ಗೌರವ ಸ್ಮರಣೆಗೆ ಪಾತ್ರರಾದವರು ಡಿ.ಎಲ್.ಎನ್. ಅವರು. ಕನ್ನಡದ ಒಂದು ಆಚಾರ್ಯ ಪಂಥವನ್ನು ಉಳಿಸಿಕೊಂಡು ಬಂದಂತಹ ಪ್ರಾಧ್ಯಾಪಕರು. 'ನಹೀ ಜ್ಞಾನೇನ ಸದೃಶಂ' ಎನ್ನುವ

ಭಾರತೀಯ ಮಾರ್ಗ ಅವರದ್ದು. ತಮ್ಮ ನಿಶಿಮತನ, ಪ್ರಾಕಾಂಡ ಪಾಂಡಿತ್ಯ, ಸತ್ಯಾನ್ವೇಷಣೆಯ ಮಾರ್ಗ, ಮಾತುಮಾತಿಗೆ ಎಚ್ಚರದ ಎಲ್ಲಾ ಗುಣವನ್ನು ತಾವು ಮೈಗೂಡಿಸಿಕೊಂಡಿದ್ದಲ್ಲದೆ ತಮ್ಮ ಹತ್ತಿರ ಬರುವ ಶಿಷ್ಯ, ಮಿತ್ರ ಪರಂಪರೆಗೂ ಮೈಗೂಡುವಂತೆ ಮಾಡಿ ಕನ್ನಡ ಭಾಷೆ, ಶಾಸ್ತ್ರಕ್ಕೂ ಅಪಾರ ಸೇವೆಸಲ್ಲಿಸಿದ್ದಾರೆ. ಇವರೊಬ್ಬ ಸರ್ವಶ್ರೇಷ್ಠ ಸಾರ್ವಕಾಲಿಕ ವಿದ್ವಾಂಸರೆಂದರೂ ತಪ್ಪಾಗಲಾರದು. ಇನ್ನೊಬ್ಬರಿಗೆ ಮಾದರಿಯಾಗಬಲ್ಲ ಅಧ್ಯಾಪಕರಿಗೆ ಇರಬೇಕಾದ ಎಲ್ಲಾ ಲಕ್ಷಣಗಳು, ಭವ್ಯ ವ್ಯಕ್ತಿತ್ವ ಇವರಲ್ಲಡಗಿತ್ತು. ಇವರು ಉತ್ತಮ ವಿದ್ವಾಂಸರಾಗಿದ್ದರೂ ಸಹ ವಿದ್ವತ್ತು ಇವರ ಮೇಲೆ ಎಂದೂ ಸವಾರಿ ಮಾಡಿರಲಿಲ್ಲ. ಇವರ ಪಾಠ ವಿದ್ವತ್ತಿನ ಭಾರತದಿಂದ ಕುಗ್ಗುವಂತಹದ್ದಾಗಿರಲಿಲ್ಲ. ಅಪಾರ ಶ್ರಮದಿಂದ ಲಭ್ಯವಾದ ಪಾಂಡಿತ್ಯ, ತೀಕ್ಷ್ಣವಾದ ನೆನಪಿನ ಶಕ್ತಿ, ಸೂಕ್ಷ್ಮವಾದ ವಿಮರ್ಶಾಪ್ರಜ್ಞೆ, ಕಪಟವಿಲ್ಲದ ಸರಳ ವ್ಯಕ್ತಿತ್ವ ಈ ಎಲ್ಲಾ ಗುಣಭೂಷಣಗಳಿಂದ ವಿದ್ಯಾರ್ಥಿಗಳಿಗೆ ಆಕರ್ಷಿತವಾದ ಪಂಡಿತೋರ್ವರಾಗಿದ್ದವರು ಡಿ.ಎಲ್.ಎನ್.

ವಯಸ್ಸಿನ ದೆಸೆಯಿಂದಲ್ಲದೆ ಪಾಂಡಿತ್ಯದ ಭಾರದಿಂದ ನಸುಬಾಗಿದ್ದ ಸ್ವಲ್ಪ ಸ್ಥೂಲಕಾಯ, ಎಣ್ಣೆಗೆಂಪಿನ ಕಟ್ಟಾಳು, ಹಣೆಯ ಮೇಲೆ ಕೆಂಪುನಾಮ ಶುಭ್ರವಾದ ತೆಳ್ಳನೆಯ ಪಂಚೆ, ಕೊರಳು ಮುಚ್ಚಿದ ಕೋಟು, ತಲೆಗೊಂದು ಟೋಪಿ ಇಲ್ಲವೆ ಜರಿಯಂಚಿನ ಪೇಟ, ಬಲಗೈಯಲ್ಲಿ ಛತ್ರಿ, ಎಡಗೈಯಲ್ಲಿ ನಾಲ್ಕಾರು ಪುಸ್ತಕಗಳು ಇಷ್ಟೂ ಭಾರವನ್ನು ತಡೆದುಕೊಳ್ಳಬಲ್ಲ ಮಜಭೂತವಾದ ಎಕ್ಕಡಗಳು ಇವರೇ ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ಯರೆಂದು ಎಚ್.ದೇವಿರಪ್ಪ ನವರು 'ನಮ್ಮ ಮೇಷ್ಟ್ರು'[೩೬] ಎಂಬ ಲೇಖನದಲ್ಲಿ ಡಿ.ಎಲ್.ಎನ್. ಅವರ ಬಗ್ಗೆ ವ್ಯಕ್ತಿಚಿತ್ರ ಮೂಡಿಸಿದ್ದಾರೆ. ಡಿ.ಎಲ್.ಎನ್. ಅವರ ಧ್ವನಿ ಸ್ವಲ್ಪ ಗಡಸಾಗಿದ್ದು ಉಚ್ಚಾರಣೆಯಲ್ಲಿ ಅವರದೇ ಆದ ಒಂದು ಬಗೆಯ ಕಾಕು ಇದ್ದಿತ್ತು. ಅವರ ಪಾಠವನ್ನು ಹೊಸದಾಗಿ ಕೇಳಿದ ವಿದ್ಯಾರ್ಥಿಗಳಿಗೆ ಈ ಕೆಲವು ವೈಲಕ್ಷಣಗಳು ಸ್ವಲ್ಪ ಸೋಜಿಗವಾಗಿ ಕಂಡುಬರುತ್ತಿತ್ತಲ್ಲದೆ ಕೆಲವು ದಿನಗಳ ನಿರಂತರಯಿಂದ ಅವು ಒಗ್ಗಿದ ಮೇಲೆ ಅವರ ಪಾಠದ ಹಿರಿತನ ಎಂತಹದ್ದು ಎಂದು ತಿಳಿಯುತ್ತಿತ್ತಂತೆ. ಇವರು ತುಂಬಾ ಸಂಕೋಚ ಸ್ವಭಾವದ ವ್ಯಕ್ತಿಯಾಗಿದ್ದರಿಂದ ವಿದ್ಯಾರ್ಥಿಗಳಿಗೆ ಪಾಠ ಹೇಳುವಾಗಲೋ, ದೊಡ್ಡ ದೊಡ್ಡ ಸಭೆ ಸಮಾರಂಭಗಳಲ್ಲಿ ಭಾಷಣ ಮಾಡುವಾಗಲೂ ಅವರು ಮುಖವೆತ್ತಿ ಮಾತನಾಡುತ್ತಿದ್ದದು ಕಡಿಮೆ ಇತ್ತು. ತಲೆ ತಗ್ಗಿಸಿ ಮಾತುಗಳನ್ನು ಬಿರುಸಿನ ಬಾಣಗಳಂತೆ ಬಿಡುತ್ತಿದ್ದರಲ್ಲದೆ, ಬೇರೆತ್ತಲೋ ದೃಷ್ಟಿ ಇರಿಸಿ ವಿಚಾರೋಕ್ತಿಗಳನ್ನು ಆಡುವ ಸ್ವಭಾವದವರು ಇವರಾಗಿದ್ದರು. ಇವರ ಪಾಠ ಕೇಳಿದ ವಿದ್ಯಾರ್ಥಿಗಳ ಪಾಲಿಗೆ ಜ್ಞಾನದ ದೇಗುಲದಂತಿದ್ದು. ತಮ್ಮ ವಿದ್ಯಾರ್ಥಿಗಳಿಗೆ ತಮಗೆ ತಿಳಿದಿದ್ದನ್ನು ಹೇಳುವ ಉತ್ಸಾಹ, ಹೀಗಾಗಿ ಇವರು ಬಿ.ವೆಂಕಟಾಚಾರ್ಯರ 'ದೇವಿಚೌಧುರಾಣಿ'ಯನ್ನು ಪಾಠ ಮಾಡಲಿ ಇಲ್ಲವೆ 'ದುರ್ಗೇಶನಂದಿನಿ'ಯನ್ನು ಪಾಠ

ಮಾಡಲಿ ಕಾದಂಬರಿ ಲೋಕದ ವಿಶ್ವರೂಪ ದರ್ಶನವನ್ನೆ ಮೂಡಿಸುವಷ್ಟು ಪಾಶ್ಚಾತ್ಯ ಸಾಹಿತ್ಯ ವಿಮರ್ಶಾ ಜ್ಞಾನದಿಂದ ತರಗತಿಯನ್ನು ತುಂಬಿ ಬಿಡುತ್ತಿದ್ದರಂತೆ. ಛಂದಸ್ಸಿನ ಪಾಠ ಮಾಡುತ್ತಿದಂತೆ ಸಂಸ್ಕೃತ ಛಂದಸ್ಸಿನಿಂದ ಆರಂಭಿಸಿ ಕನ್ನಡ ಛಂದಸ್ಸಿಗೆ ಬರುವ ವೇಳೆಗೆ ಶಿಕ್ಷಣದ ಅವಧಿಯು ಮುಗಿಯುತ್ತಾ ಬರುತ್ತಿದ್ದರೂ ವಿದ್ಯಾರ್ಥಿಗಳನ್ನು ಮನೆಗೆ ಬರ ಮಾಡಿಕೊಂಡು ಚೊಕ್ಕವಾದ ತಿಂಡಿ-ತೀರ್ಥಗಳನ್ನು ಕೊಟ್ಟು ಪಾಠವನ್ನು ಪೂರೈಸಿ ಕೊಡುತ್ತಿದ್ದರು. ಡಿ.ಎಲ್.ಎನ್ ಅವರು ರಸದ್ರ್ಯಾನ ಮನೋಭಾವದೊಂದಿಗೆ ಕವಿಯ ಮನೋಭಾವವನ್ನು ಅಲಂಕರಿಸಿಕೊಂಡು ಭಾವತಲ್ಲೀನತೆಯಿಂದ ಪಾಠ ಮಾಡುವಾಗ, ಇವರು ಒಮ್ಮೊಮ್ಮೆ ಗದ್ಗರಿತರಾಗುತ್ತಾ ಹನಿಗಣ್ಣಾಗುತ್ತಿದ್ದದ್ದನ್ನು ಇವರ ಶಿಷ್ಯವೃಂದದ ಕೆಲವರು ಇಂದಿಗೂ ಸ್ಮರಿಸಿಕೊಳ್ಳುತ್ತಾರೆ.

ಡಿ.ಎಲ್.ಎನ್. ಅವರಿಗೆ ಬಹಳ ಪ್ರಿಯವಾಗಿದ್ದು 'ಕನ್ನಡ ಸಾಹಿತ್ಯ ಚರಿತ್ರೆ'ಯ ಪಾಠ, ಕನ್ನಡ ಕವಿಗಳ ಪ್ರಕಟಿತ-ಅಪ್ರಕಟಿತ ಕೃತಿಗಳೆಲ್ಲದರ ಗಾಢವಾದ ಅಧ್ಯಯನ ಅವರಲ್ಲಿದ್ದಿತ್ತು. ಆ ಕಾಲಕ್ಕೆ ವಿದ್ಯಾರ್ಥಿಗಳು, ಆರ್ ನರಸಿಂಹಾಚಾರ್ಯರ 'ಕವಿಚರಿತೆ'ಯ ಮೂರು ಸಂಪುಟಗಳು, ಎ.ವೆಂಕಟಸುಬ್ಬಯ್ಯ ಅವರ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಈ ಕೃತಿಗಳನ್ನು ಬಿಟ್ಟರೆ ಬೇರಾವ ಗ್ರಂಥಗಳು ಇರಲಿಲ್ಲ. ವಿದ್ಯಾರ್ಥಿಗಳಿಗೆ ಅಭ್ಯಾಸಕ್ಕೆ ಅನುಕೂಲವಾಗಲೆಂದು ಪಾಠ ಮಾಡುವಾಗ ಸಾಹಿತ್ಯ ಚರಿತ್ರೆಯನ್ನು ಹೇಳಿ ಬರೆಸುತ್ತಿದ್ದರಲ್ಲದೆ, ಕವಿಗಳಕಾಲ, ದೇಶ, ಮತ ಮೊದಲಾದ ವಿಷಯಗಳನ್ನು ಸಮರ್ಥಿಸುತ್ತಿದ್ದ ವಿಧಾನ ವಿದ್ಯಾರ್ಥಿಗಳ ಪಾಲಿಗೆ ಆಶ್ಚರ್ಯಕರವಾಗಿ ತೋರುತ್ತಿದ್ದಿತ್ತು.[೩೭]

ತಮ್ಮ ಮೆಚ್ಚಿನ ಕವಿಗಳಾದ ಪಂಪ, ಕುಮಾರವ್ಯಾಸ, ಹರಿಹರರನ್ನು ಕುರಿತು ಮಾತನಾಡುವಾಗ ಡಿ.ಎಲ್.ಎನ್. ಅವರು ಭಾವಪರವಶರಾಗುತ್ತಿದ್ದರಂತೆ, ಅವರ ಭಾವಪರವಶಾಭಿಪ್ರಾಯಗಳನ್ನು ಪಾಠ ಬೋಧನಾ ಅವಧಿಯಲ್ಲಿ ಕಾಣಬಹುದಾಗಿತ್ತು.[೩೮] ಹಳಗನ್ನಡ-ನಡುಗನ್ನಡ ಸಾಹಿತ್ಯದಲ್ಲಿ ಡಿ.ಎಲ್.ಎನ್. ಅವರಿಗಿಂತಲೂ ನಿಷ್ಣಾತರಾದ ವಿದ್ವಾಂಸರನ್ನು ಕಾಣುವುದು ಕಷ್ಟವೇ ಸರಿ ಎನಿಸುತ್ತದೆ. ತೀ.ನಂ.ಶ್ರೀ ಅವರು ಹೇಳಿದಂತೆ ಭಾಷೆಯ ರಹಸ್ಯ, ಸಾಹಿತ್ಯದ ಸ್ವಾರಸ್ಯ ಎರಡನ್ನು ಏಕ ರೀತಿಯಲ್ಲಿ ಉತ್ಸಾಹದಿಂದ ಮನಮುಟ್ಟಿಸಬಲ್ಲ ಸವ್ಯಸಾಚಿಗಳಾಗಿ, ಕವಿ ಹೃದಯವನ್ನು ಅರಿತು ಪ್ರವೇಶಿಸುವ ಮನೋಭಾವದಿಂದ ರಹಸ್ಯಂದಿಯಾದ ಪದ್ಯ ಭಾಗಗಳನ್ನು ಪಾಠ ಮಾಡುವಾಗ ಮೂರ್ನಾಲ್ಕು ಬಾರಿ ಓದುವುದು ಅವರ ಪರಿಪಾಠವಾಗಿತ್ತು. ಅಲ್ಲದೆ ಪದ್ಯವನ್ನು ಓದುವ ರೀತಿಯೇ ವಿಶಿಷ್ಟವಾದ್ದದ್ದಾಗಿತ್ತು. ಕೈಯನ್ನು ಅತ್ತ ಇತ್ತ ಆಡಿಸುತ್ತ, ತಲೆಯನ್ನು ತೂಗಿಸುತ್ತಾ ಓದಿ, ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಆಸ್ವಾದಿಸಿ ನಗುಮುಖದಿಂದ ವಿವರಿಸುತ್ತಿದ್ದರು. ಪಾಠ ಹೇಳುವಾಗ ಎಲ್ಲಿಯಾದರೂ ಅಪೂರ್ವ ಪದವೊಂದು ಬಂದರೆ ಪದ್ಯವನ್ನು ವಿವರಿಸಿಯಾದ ನಂತರ

ಕಪ್ಪು ಹಲಗೆಯ ಮೇಲೆ ಆ ಪದದ ನಿಷ್ಪತ್ತಿಯನ್ನು ಬರೆದು ವಿವರಿಸುತ್ತಿದ್ದ ಪರಿಯನ್ನು[೩೯] ಅವರ ವಿದ್ಯಾರ್ಥಿಗಳು ಇಂದಿಗೂ ಸ್ಮರಿಸುತ್ತಾರೆ.

ಡಿ.ಎಲ್.ಎನ್. ಅವರ ಬೋಧನಾ ವಿಧಾನದಲ್ಲಿನ ಅನನ್ಯತೆಯನ್ನು ಕುರಿತು ಹೇಳುವುದಾದರೆ, ಕನ್ನಡ ಕಾವ್ಯವೊಂದನ್ನು ಹಲವು ಬಾರಿ ಓದಿ ಮನನ ಮಾಡಿಕೊಂಡು ಅದರ ಅರ್ಥವನ್ನು ಪರಿಭಾವಿಸಿದ ಬಳಿಕ ಉತ್ಸಾಹದಿಂದ ವಿದ್ಯಾರ್ಥಿಗಳಿಗೆ ಮನ ಮುಟ್ಟುವಂತೆ ಬೋಧಿಸಿದ್ದು ಆಚಾರ್ಯರ ಪದ್ಧತಿಯಾಗಿತ್ತು.

ಡಿ.ಎಲ್.ಎನ್. ಅವರು ಭಾವುಕರು, ಏಕೆಂದರೆ ತರಗತಿಗಳಲ್ಲಿ ಪಾಠ ಮಾಡುತ್ತಿದ್ದಾಗ ಅವರ ಈ ಭಾವುಕತ್ವ ಗುಣದ ವಿಶಿಷ್ಟ ಪರಿಚಯ ವಿದ್ಯಾರ್ಥಿಗಳಿಗಾಗಿತ್ತಿತ್ತು.[೪೦] ಪಂಪನ ಆದಿಪುರಾಣವನ್ನು ಪಾಠ ಮಾಡುತ್ತಿರುವಾಗ ಸಹೃದಯಿಯಾಗಿ ಕವಿಯಲ್ಲಿನ ದೋಷವನ್ನು ಎತ್ತಿ ಹೇಳುತ್ತಿದ್ದರಂತೆ, ಅಲ್ಲದೆ ಅಲ್ಲಲ್ಲಿ ಅಪರೂಪಕ್ಕೆ ಸುಂದರವಾದ ವಿನೋದಗಳು ಸುಳಿದಾಡುತ್ತಿದ್ದದ್ದು ಇತ್ತು. ವಿಪುಲವಾದ ವಿಷಯ ಜ್ಞಾನದ ಬೋಧನೆಯಿಂದ ವಿಷಯದ ಆಳ ಹಾಗೂ ಸಮಗ್ರತೆಯ ಪರಿಚಯ ತರಗತಿಯಲ್ಲಿರುವರಿಗೆ ಆಗುತ್ತಿದ್ದಿತ್ತು.[೪೧] ಕೆಲ ಪ್ರಾಧ್ಯಾಪಕರು ವಿಷಯಗಳ ಪರಿಚಯದಿಂದ ತರಗತಿಗಳ ಪಾಠ ಬೋಧನೆ ಮಾಡುವ ವಿಧಾನಕ್ಕೂ ಡಿ.ಎಲ್.ಎನ್. ಅವರ ಬೋಧನೆ ಮಾಡುವ ವಿಧಾನಕ್ಕೂ ವ್ಯತ್ಯಾಸಗಳಿದ್ದದ್ದೂ ಉಂಟು. ಕನ್ನಡ ಸಾಹಿತ್ಯವಲ್ಲದೆ ಚರಿತ್ರೆ, ಸಂಸ್ಕೃತ ಇತರೆ ಪಾಂಡಿತ್ಯ ವಿಷಯಗಳ ಸಾರಸಂಗ್ರಹವಾಗಿದ್ದ ಇವರು ಭಾಷಾಶಾಸ್ತ್ರ ಛಂದಸ್ಸು, ಅಲಂಕಾರಶಾಸ್ತ್ರ, ಶಾಸನಶಾಸ್ತ್ರ, ಸಂಸ್ಕೃತಿ, ಚರಿತ್ರೆ ಇತರೆ ಭಾಷೆಗಳ ಪಾಂಡಿತ್ಯದಿಂದ ತುಂಬಿದ ಗ್ರಂಥಸಂಪಾದನಾದಿಯಾಗಿ ಎಲ್ಲಾ ವಿಷಯಗಳಲ್ಲೂ ಪ್ರಬುದ್ಧ ಮಟ್ಟದ ವಿಚಾರಗಳಿಂದ ಇವರ ಬೋಧನಾ ವಿಧಾನ ಉನ್ನತ ಮಟ್ಟದಾಗಿತ್ತು. ಇದು ಅವರ ಶಿಷ್ಯತ್ವ ವಹಿಸಿದ್ದ ಎಲ್ಲಾ ಶಿಷ್ಯ ಬಳಗದ ಅನುಭವಕ್ಕೆ ಬಂದಿರುತಕ್ಕಂತಹ ವಿಷಯ.

ಶಿಷ್ಯ ಮತ್ತು ಮಿತ್ರವಾತ್ಸಲ್ಯಾದಿಯಾಗಿ ಡಿ.ಎಲ್.ಎನ್. ಅವರು ಸಹೃದಯಿ ಗುಣವುಳ್ಳವರಾಗಿದ್ದರು. ಇವರ ಶಿಷ್ಯ ಮತ್ತು ಮಿತ್ರರು ಯಾವುದೇ ವಿಷಯದ ಚರ್ಚೆ, ಪದದ ಅರ್ಥ ಪದನಿಷ್ಪತ್ತಿಯ ವಿಚಾರಾದಿಗಳಾಗಿ ತರಗತಿಗಳಲ್ಲಿರಲಿ, ಮನೆಯಲ್ಲಿಯೇ ಅವರು ಉತ್ಸಾಹದಿಂದ ಇರಲಿ ಅಷ್ಟೇ ವಾತ್ಸಲ್ಯದಿಂದ ಉತ್ತರ ನೀಡುತ್ತಿದ್ದರು. ಇದಕ್ಕೂ ಮಿಗಿಲಾಗಿ ಮನೆಗೆ ಬಂದವರನ್ನಂತೂ ಸತಿಪತಿಗಳು ಹೊಂದಾಗಿ ಅನ್ನಪೂರ್ಣೆಯಾಗಿ 'ಮುತ್ತಮ್ಮ' ಅವರ ಉಟೋಪಚಾರ ವಿಧಾನ ಒಂದೆಡೆ ಆದರೆ, ಗುರುಗಳಾದ ಡಿ.ಎಲ್.ಎನ್ ಅವರು ವಿಷಯಕ್ಕೆ ಅನುಗುಣವಾಗಿ ಜ್ಞಾನದ ದಾಹ ನೀಗಿಸುವ ಪರಿಪಾಠ ಹೊಂದಿದ್ದ ಹೃದಯಾಂತರ್ಮಿಗಳಾಗಿದ್ದವರು. ಇವರು ಯಾವತ್ತೂ, ಯಾರೊಂದಿಗೂ ಸಿಟ್ಟು ಮಾಡಿಕೊಂಡವರಲ್ಲ, ಜಗಳಕ್ಕಂತೂ ಇಳಿದವರಲ್ಲ ಎಲ್ಲರನ್ನು ಪ್ರೀತಿ, ವಾತ್ಸಲ್ಯದಿಂದ ಕಾಣುವ ಸದಭಿರುಚಿಯ ವ್ಯಕ್ತಿತ್ವವುಳ್ಳ ಪಾಂಡಿತ್ಯದ ನಿಧಿ ಇವರಾಗಿದ್ದರು.

ಇವರ ಅನರ್ಘ್ಯ ವ್ಯಕ್ತಿತ್ವ ಗುಣಗ್ರಾಹಿಗಳಿಗೆ ಸ್ಪಂದಿಸಿದ ಹೃದಯಗಳಾದ ಶಿಷ್ಯ–ಮಿತ್ರವೃಂದ ಇವರಿಗೆ ಅಕ್ಷರ ನಮನವಾಗಿ 'ಉಪಾಯನ', 'ಜ್ಞಾನೋಪಾಸಕ', 'ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ' ಕೃತಿಗಳಾದಿಯಾಗಿ 'ಕನ್ನಡ ನುಡಿ', 'ಪ್ರಬುದ್ಧ ಕರ್ಣಾಟಕ', 'ಲೋಚನ' ಇತ್ಯಾದಿ ಮಾಸಿಕ, ತ್ರೈಮಾಸಿಕ ಪತ್ರಿಕೆಗಳಲ್ಲಿ ಇವರ ವ್ಯಕ್ತಿತ್ವ, ಪಾಂಡಿತ್ಯ, ಪ್ರೀತಿ–ವಾತ್ಸಲ್ಯಾಧಾರೆಗಳನ್ನು ಕುರಿತು ಚರ್ಚಿಸಿದ್ದಾರೆ.

**• ನಿವೃತ್ತಿ ಮತ್ತು ಕೊನೆಯ ದಿನಗಳು**

೧೯೪೫ರಲ್ಲಿ ಅಂದಿನ ಸರಕಾರ ಡಿ.ಎಲ್‌ಎನ್ ಅವರನ್ನು ಕನ್ನಡ–ಕನ್ನಡ ನಿಘಂಟಿನ ಪ್ರಧಾನ ಸಂಪಾದಕರನ್ನಾಗಿ ನೇಮಕ ಮಾಡಿತ್ತು. ಇದರಿಂದ ಸಂಸಾರ ಸಮೇತರಾಗಿ ಬೆಂಗಳೂರಿನಲ್ಲಿ ವಾಸವಾಗಿ, ನಿಘಂಟಿನ ಮೊದಲ ಸಂಪುಟವನ್ನು ೧೯೭೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ಅಂಗವಾಗಿ ಬಿಡುಗಡೆ ಮಾಡಿದ್ದರು.

ಈ ಹಿಂದೆ ೧೯೫೬ರಲ್ಲಿ ಕೆ.ವಿ. ಪುಟ್ಟಪ್ಪ ಅವರು ಮೈಸೂರು ವಿಶ್ವವಿದ್ಯಾಲಯದ ಉಪ ಕುಲಪತಿಯಾಗಿ ನೇಮಕಗೊಂಡ ಮೇಲೆ ಕನ್ನಡ ವಿಭಾಗಕ್ಕೆ ತಮ್ಮಿಂದ ತೆರವಾದ ಸ್ಥಾನಕ್ಕೆ ತೀ.ನಂ.ಶ್ರೀ ಅವರನ್ನು ನೇಮಕ ಮಾಡಿದ್ದರು.[೪೨] ಆದರೆ ತೀ.ನಂ.ಶ್ರೀ ಹಾಗೂ ಡಿ.ಎಲ್.ಎನ್. ಅವರು ಒಂದೇ ದಿನ ಅಂದರೆ ೧೯೪೨ರ ಮಾರ್ಚ್ ೩೧ರಂದು ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾದರು[೪೩] ಇದೊಂದು ಆತ್ಮೀಯತೆಯ ವಿಶೇಷ ಸನ್ನಿವೇಶವಾಗಿದೆ.

ನಿವೃತ್ತಿಯ ನಂತರ ವಿಶ್ವವಿದ್ಯಾಲಯದ ಧನಸಹಾಯ ಆಯೋಗವು ಸಂಶೋಧನೆಗೆ ನೆರವು ನೀಡಿದ್ದರಿಂದ ವೃತ್ತಿಯಿಂದ ನಿವೃತ್ತರಾದರೂ ಅಭ್ಯಾಸದಿಂದ ನಿವೃತ್ತರಾಗದೆ ಇಲ್ಲಿಯೆ ಮೂರು ವರ್ಷಗಳ ಕಾಲ ಸಂಶೋಧನೆ ಕೈಗೊಂಡಿದ್ದರ ಫಲವಾಗಿ 'ಕನ್ನಡ ಗ್ರಂಥ ಸಂಪಾದನೆ' ಕೃತಿಯು ಹೊರಬಂದಿತು. ಈ ಮಧ್ಯೆ ತೀ.ನಂ.ಶ್ರೀ ಯವರ ಆಗಲಿಕೆ ಇವರ ಮನಸ್ಸಿಗೆ ಘಾಸಿಗೊಂಡತ್ತಾಗಿ ಬಿಕ್ಕಿ–ಬಿಕ್ಕಿ ಅತ್ತದ್ದು ಮಿತ್ರ ವಾತ್ಸಲ್ಯಕ್ಕೆ ಸಾಕ್ಷೀಕರಿಸಿದೆ.[೪೪]

ಡಿ.ಎಲ್.ಎನ್. ಅವರ ಪ್ರತಿಭೆ ಅಸಾಧಾರಣವಾಗಿದ್ದಲ್ಲದೆ, ಇವರ ಪಾಂಡಿತ್ಯ ಹಳೆಯ ತಲೆಮಾರಿಗೆ ಗೌರವ ತರುವಂತಹದಾಗಿತ್ತು.[೪೫] ಈ ನಿರಂತರತೆಯ ಕಾರ್ಯದ ಒತ್ತಡದಲ್ಲಿ ತೊಡಗಿದ ಇವರಿಗೆ ೧೯೫೬ರ ಏಪ್ರಿಲ್ ೦೧ರಂದು ಮೊದಲನೆ ಬಾರಿಗೆ ಲಘು ಹೃದಯಾಘಾತವಾಗಿತ್ತು.[೪೬] ಆದರೆ ಮನೆಯವರು ಹರಸಾಹಸ ಮಾಡಿ ಆಸ್ಪತ್ರೆಗೆ ಸೇರಿಸಿ ಯೋಗ್ಯಚಿಕಿತ್ಸೆ ನೀಡಿಸಿದ್ದರಿಂದ ಸಾವಿನ ಹಂಚಿನಿಂದ ಪಾರಾದರು. ಈ ಹಿಂದೆ ಒಂದು ದಿನ ಸಂಜೆ ವಾಯುವಿಹಾರ ಮುಗಿಸಿಕೊಂಡು ಕೋರ್ಟ್ ಹಾಯ್ದು ಬರುತ್ತಿದ್ದಾಗ ನಾಗರಹಾವೊಂದು ಕಚ್ಚಿತ್ತು. ಮನೆಗೆ ಬರುವಷ್ಟರಲ್ಲಿ ಕಾಲು ಊನವಾಗಿ ಬೆಂಡಾಗಿತ್ತು ಆಗ ಹಾವಿನ ವಿಷಕ್ಕೆ ಮಂತ್ರ ಚಿಕಿತ್ಸೆ ಮಾಡುವ ವ್ಯಕ್ತಿಯಿಂದ ಸಮಯಕ್ಕೆ ಸರಿಯಾಗಿ ಚಿಕಿತ್ಸೆ ಸಿಕ್ಕಿ

ಬದುಕುಳಿದಿದ್ದರು.[೪೭] ೧೯೭೧ ಏಪ್ರಿಲ್ ತಿಂಗಳು ಮೈಸೂರು ವಿಶ್ವವಿದ್ಯಾಲಯದ 'ಆಲೋಕ' ಭವನದಲ್ಲಿ ಸಮಾವೇಶಗೊಂಡ ಕನ್ನಡ–ಕನ್ನಡ ನಿಘಂಟು ಸಮಿತಿಯು ಎಂಟು ದಿನಗಳ ಎರಡು ಹೊತ್ತಿನ ದೀರ್ಘಾಧಿವೇಶನವನ್ನು ಹಮ್ಮಿಕೊಂಡಿತ್ತು. ಈ ಅಧಿವೇಶನಕ್ಕೆ ಮುಂಚೆ ಒಂದು ತಿಂಗಳು ಹಗಲಿರುಳೆನ್ನದೆ ಕ.ವೆಂ.ರಾಘವಾಚಾರ್ ಅವರ ಸಹಾಯದಲ್ಲಿ ದೀರ್ಘ ಚರ್ಚೆ, ತಿದ್ದುಪಡಿಯೊಂದಿಗೆ ಕರಡು ಸಿದ್ಧಪಡಿಸಿದ್ದರು. ಈ ಶ್ರಮದ ಜೊತೆಗೆ ಆಲೋಕ ಭವನದ ಎಂಟು ದಿನದ ಅಧಿವೇಶನದಲ್ಲಿ ಶರೀರ ಹರೆಯದ ಜೀವ ಆಯಾಸದಿಂದ ಬಳಲಿತ್ತು. ಮೇ ೧೧ರ ಮಧ್ಯಾಹ್ನದ ವೇಳೆ ತೀವ್ರ ಹೃದಯಾಘಾತದಿಂದ ಅಸ್ವಸ್ಥರಾದರು. ಇದರಿಂದ ಕುಟುಂಬ ವರ್ಗದವರೆಲ್ಲ ತುಂಬಾ ಭಯಭೀತಿಗೊಂಡಿದ್ದರು. ಆದರೆ ವಿಧಿ ಸಹಿಸಲಿಲ್ಲ ಒಂದು ವಾರದ ಅನಾರೋಗ್ಯದ ನರಳಿಕೆ, ಮೂತ್ರಪಿಂಡದ ತೀವ್ರ ಸಮಸ್ಯೆಯಿಂದ ಜ್ಞಾನಶೂನ್ಯದ ಸ್ಥಿತಿ ಆವರಿಸಿದ್ದರೂ ನಿಘಂಟು ಶಬ್ದಗಳ ಉಚ್ಚಾರಣೆಯಲ್ಲಿ ೧೯೭೧ ಮೇ, ೭ರ ರಾತ್ರಿ ಶಬ್ದಗಳ ಹುಟ್ಟು ಸಾವಿನ ಬಗೆಗೆ ಸದಾ ವಿಚಾರ ಮಾಡುತ್ತಿದ್ದ ನಡೆದಾಡುವ ನಿಘಂಟು ಇಹಲೋಕ ತ್ಯಜಿಸಿ ನಿಘಂಟು ಲೋಕದಲ್ಲಿ ಲೀನವಾಯಿತು.[೪೮] ಇದರಿಂದ ಕನ್ನಡ ನಾಡಿನ ಸಾವಿರಾರು ವಿದ್ಯಾರ್ಥಿ, ನೂರಾರು ಮಿತ್ರವೃಂದ ಒಬ್ಬ ಪ್ರಾಮಾಣಿಕ ಮಾರ್ಗದರ್ಶಕನನ್ನು ಕಳೆದುಕೊಂಡರು. ಅಲ್ಲದೆ ಕನ್ನಡ ನಾಡು ಒಂದು ಪ್ರಬುದ್ಧ ಜ್ಞಾನ ಸಂಪತ್ತನ್ನು ಕಳೆದುಕೊಂಡಂತಾಯ್ತು. ಆದರೆ ಇವರ ಶ್ರಮದ ಸಂಪತ್ತಾದ ಅಕ್ಷರ ರೂಪದ ಸಂಪಾದನಾ ಸಾಹಿತ್ಯ ನಿತ್ಯ ನೂತನತೆಯಿಂದ ಜೀವಂತವಾಗಿ ಸಾಗಿರುವುದು ನಮ್ಮೆಲ್ಲರ ಅದೃಷ್ಟವೇ ಸರಿ.

'ಹೃದಯ ವಿಹಾರಿ', 'ಶಬ್ದಬ್ರಹ್ಮ', 'ಜಂಗಮ ಬೃಹತ್‌ಕೋಶ' ಎಂಬುದಾಗಿ ಬಿರುದಾಂಕಿತರಾದ ಇವರ ಆಶಯವನ್ನು ವಿಸ್ತರಿಸಲು, ಶಿಷ್ಯ–ಮಿತ್ರ ಪರಂಪರಾದಿಯಾಗಿ ಇವರು ಬೆಳೆಸಿದ ಸಾಹಿತ್ಯ ರಥವನ್ನು ಇಂದಿಗೂ ಎಳೆದು ಸಾಗಿಸಿದ್ದಾರೆ.

### ೨.೨. ಡಿ.ಎಲ್.ನರಸಿಂಹಾಚಾರ್ ಅವರ ಸಾಹಿತ್ಯ ಕುರಿತು ಈವರೆಗಿನ ಅಧ್ಯಯನ ಸಮೀಕ್ಷೆ

ಕನ್ನಡ ಸಾಹಿತ್ಯ ಸಂಶೋಧನಾ ಕ್ಷೇತ್ರದಲ್ಲಿ ಡಿ.ಎಲ್.ಎನ್. ಅವರು ಒಂದು ಹೊಸ ಸಾಹಿತ್ಯ ಪಂಕ್ತಿಯನ್ನು ಹಾಕಿದವರಾಗಿದ್ದಾರೆ. ವಿಷಯಕ್ಕೆ ಪೂರಕವಾದ ಸಾಮಗ್ರಿ ಸಂಗ್ರಹ, ವ್ಯಾಖ್ಯಾನದ ವಿಶ್ಲೇಷಣೆ, ನಿರೂಪಣೆಗಳಲ್ಲಿನ ನಿಖರತೆ ನೀಡುವುದರ ಮೂಲಕ ಗ್ರಂಥಸಂಪಾದನಾ ಅಧ್ಯಯನಕ್ಕೆ ಅಡಿಪಾಯ ಹಾಕಿದವರಲ್ಲಿ ಪ್ರಮುಖರಾಗಿದ್ದಾರೆ. ಪ್ರಸ್ತುತ ಅಧ್ಯಯನದ ವಿಷಯಕ್ಕನುಗುಣವಾಗಿ ಇವರ ಸಾಹಿತ್ಯಕೃಷಿ ಕುರಿತು ಈವರೆಗೆ ನಡೆದ ಅಧ್ಯಯನ ಅಧ್ಯಾಪನದ ಸಮೀಕ್ಷೆ ತಿಳಿಯುವುದು ಪ್ರಮುಖ ಉದ್ದೇಶವಾಗಿದೆ.

೧೯೭೧ರಲ್ಲಿ ಡಿ.ಎಲ್.ಎನ್. ಅವರು ನಿಧನ ಹೊಂದಿದಾಗ ಅವರ ನೆನಪಿಗಾಗಿ ಶಿಷ್ಯ ಈ ಗೆಳೆಯವೃಂದ ಸೇರಿ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನುಡಿ ಮಾಸಪತ್ರಿಕೆಯಲ್ಲಿ ವಿಶೇಷವಾಗಿ ಇವರ ವಿದ್ವತ್ತು ಮತ್ತು ವ್ಯಕ್ತಿತ್ವದ ವಿವಿಧ ಮುಖಗಳ ಕುರಿತು ಪತ್ರಿರದಿಂದ

ಕಂಡ ಒಡನಾಡಿಗಳು ಶಿಷ್ಯಮಿತ್ರರೂ ಸೇರಿ ಇವರೊಂದಿಗಿನ ಕಾಲಕಳೆದ ಕ್ಷಣ ಇತರೆ ಸಾಹಿತ್ಯಪರ ಅವರು ಚರ್ಚಿತ ವಿಷಯಗಳನ್ನು ಪರಿಯಾಗಿ ವಿವರಿಸಿದ್ದನ್ನು ೨೧ ಲೇಖನಗಳಲ್ಲಿ ಮೂಡಿಬಂದ ಸ್ಮರಣಿಕೆಯಿಂದ ತಿಳಿಯಬಹುದಾಗಿದೆ.

ಡಿ.ಎಲ್.ಎನ್. ಅವರ ಕುರಿತು ಅವರ ಸಾಹಿತ್ಯ ಕುರಿತು ಮೊದಲು ಕೃತಿ ರಚಿಸಿದರು. ಡಿ.ಎಲ್.ನರಸಿಂಹಾಚಾರ್ ಎಂಬ ಶೀರ್ಷಿಕೆಯ ಕೃತಿಯಲ್ಲಿ ಡಿ.ಎಲ್.ಎನ್ ಅವರ ಬದುಕು, ಸಾಧನೆಗಳ ಸ್ಥೂಲವಿವರಣೆ ಕೃತಿ ಉದ್ದಕ್ಕೂ ವಿಸ್ತರಿಸಿದ್ದು ಅಧ್ಯಯನದ ಹಿನ್ನೆಲೆಯಲ್ಲಿ ಇದೊಂದು ಉತ್ತಮ ಸಾಹಿತ್ಯ ಪ್ರಜ್ಞೆಯನ್ನು ಒದಗಿಸುವ ಕೃತಿ ಎಂದರೂ ತಪ್ಪಾಗಲಾರದ್ದಾಗಿದೆ.

೧೯೯೨ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಹೊರತಂದಿರುವ ಹೊಸಗನ್ನಡ ಸಾಹಿತ್ಯ ನಿರ್ಮಾಪಕರು ಮಾಲಿಕೆಯಲ್ಲಿ ೧೨ನೇ ಕೃತಿಯನ್ನು ಡಾ.ಎಸ್.ವಿದ್ಯಾಶಂಕರ ಅವರು "ಡಿ.ಎಲ್.ನರಸಿಂಹಾಚಾರ್ ಶೀರ್ಷಿಕೆಯಲ್ಲಿ ಪರಿಚಯಿಸಿದ್ದು ಇದರಾಳದಲ್ಲಿನ ಅಧ್ಯಾಪನಕ್ಕೆ ಅಣಿಯಾದಾಗ ಡಿ.ಎಲ್.ಎನ್ ಅವರ ವ್ಯಕ್ತಿತ್ವ ಚಿತ್ರ ಬೋಧನಾಕ್ರಮ, ಶಿಷ್ಯಮಿತ್ರವಾತ್ಸಲ್ಯ, ನಿಘಂಟು ಸೇವೆ ಸ್ವತಂತ್ರ ಸಂಪಾದಿತ ಕೃತಿಗಳ ಪರಿಚಯ, ಮುನ್ನುಡಿಗಳ ಪರಿಚಯ, ಗ್ರಂಥವಿಮರ್ಶೆಗಳ ಜೊತೆಗೆ ಆಧುನಿಕ ಸಾಹಿತ್ಯದೊಂದಿಗೆ ಡಿ.ಎಲ್.ಎನ್. ಅವರ ವಿಚಾರಗಳನ್ನು ಹೊರಗೆ ಬಿಚ್ಚಿನೋಡುವಿಕೆ ಅಲ್ಲದೆ ಡಿ.ಎಲ್.ಎನ್. ಅವರ ಬದುಕಿನ ಪ್ರಮುಖ ಘಟನಾವಳಿಗಳು ಅವರ ಕೃತಿಗಳ ಕುರಿತು ಪರಿಚಯಾತ್ಮಕ ವಿಷಯ ತಿಳಿಸಿದ್ದು ಮನಗಾಣಬಹುದಾಗಿದೆ.

ಡಿ.ಎಲ್.ಎನ್. ಅವರು ೧೯೬೦ರಲ್ಲಿ ಬೀದರ್‌ನಲ್ಲಿ ನಡೆದ ಅಖಿಲ ಭಾರತ ೪೧ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿ ನಿಯುಕ್ತಿಗೊಂಡಾಗ ಅವರ ವಿದ್ಯಾರ್ಥಿ ಮಿತ್ರ ವೃಂದ ಸೇರಿ ೨೪ ಲೇಖನಗಳ ಜ್ಞಾನೋಪಾಸಕ ಎಂಬ ಅಭಿನಂದನ ಗ್ರಂಥವನ್ನು ಇವರಿಗೆ ಸಮರ್ಪಿಸಿದ್ದಾರೆ. ಈ ಕೃತಿಯೊಳಗಿನ ಹೊರಣವಾಗಿ ಡಿ.ಎಲ್.ಎನ್ ಸಂಪಾದಿತ ಸಂಶೋಧಿತ ಸಾಹಿತ್ಯದ ಸಾರಾಂಶ ರೂಪದ ಬರವಣಿಗೆ ಈಕೃತಿಯಲ್ಲಿ ಕಾಣಬಹುದಾಗಿದೆ.

ಇವರ ವ್ಯಕ್ತಿತ್ವ ಶ್ರಮಕ್ಕೆ ತಕ್ಕ ಫಲವಾಗಿ ಉತ್ತಮ ಪ್ರಾಧ್ಯಾಪಕರು, ನಾಡಿನ ಶ್ರೇಷ್ಠವಿದ್ವಾಂಸರು, ಹಳೆಗನ್ನಡ ನಡುಗನ್ನಡ ಸಾಹಿತ್ಯದಲ್ಲಿನ ಪರಿಣಿತರುಗಳಾಗಿ ನಾಡಿನ ಸಾವಿರಾರು ವಿದ್ಯಾರ್ಥಿಗಳ ಮನಗೆದ್ದ ಇವರಿಗೆ ೬೦ರ ಷಷ್ಟಬ್ದ ಸಂದರ್ಭದಲ್ಲಿ ಮಿತ್ರ-ಶಿಷ್ಯ ವೃಂದಸೇರಿ ೧೯೬೭ರಲ್ಲಿ ಉಪಾಯನ ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿದ್ದಾರೆ. ಈ ಕೃತಿಯಲ್ಲಿ ಕನ್ನಡ ಭಾಷೆ, ಸಾಹಿತ್ಯಿಕ ಚಿಂತನೆಗಳ ಕುರಿತ ಹಾಗೂ ಡಿ.ಎಲ್.ಎನ್. ಪ್ರೀತಿಯ ವ್ಯಾಕರಣ ಛಂದಸ್ಸು ನಿಘಂಟು, ಪ್ರಾಚೀನ ಸಾಹಿತ್ಯ ಒಟ್ಟು ೬೦ ಲೇಖನಗಳ ಗುಚ್ಛ ಇದಾಗಿದ್ದು ಅಧ್ಯಾಪನ ಪೂರಕ ವಿಷಯಗಳನ್ನು ಈ ಕೃತಿಯಿಂದ ಮನಗಂಡದ್ದಾಗಿದೆ.

೨೦೦೫ರಲ್ಲಿ ಡಿ.ಎಲ್.ಎನ್. ಅವರ ಶತಮಾನ ಸ್ಮರಣೆ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಹಾಗೂ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ

ದಶಮಾನೋತ್ಸವದ ನೆನಪಿಗಾಗಿ ವಿಭಾಗದ ೨೦ನೇ ಮಾಲಿಕೆಯಾಗಿ ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ ಎಂಬ ಕೃತಿಯನ್ನು ಡಾ.ಎಫ್.ಟಿ.ಹಳ್ಳಿಕೇರಿ ಅವರು ಸಂಪಾದಿಸಿದ್ದಾರೆ. ಕೃತಿಯು ೨ ಭಾಗಗಳಲ್ಲಿ ಅಧ್ಯಯನಕ್ಕೆ ಪೂರಕವಾಗಿದ್ದು ಮೊದಲನೆ ಭಾಗದಲ್ಲಿ ಡಿ.ಎಲ್.ಎನ್. ಅವರ ವ್ಯಕ್ತಿತ್ವ ಕುರಿತು ವಿವಿಧ ವಿದ್ವಾಂಸರ ಒಟ್ಟು ೪೩ ಲೇಖನಗಳು ಬಿತ್ತರಗೊಂಡಿದ್ದು ೨ನೇ ಭಾಗದಲ್ಲಿ ಡಿ.ಎಲ್.ಎನ್ ಅವರ ಸಾಹಿತ್ಯ ಕುರಿತು ವಿವಿಧ ವಿದ್ವಾಂಸರ ೧೩ ಲೇಖನಗಳು ಅಧ್ಯಯನ ದೃಷ್ಟಿಯಿಂದ ಸರಳೀಕೃತ ರೂಪದಲ್ಲಿ ಮೂಡಿಬಂದ ಕೃತಿಗೆ ತಕ್ಕಂತೆ ೫ ಭಾಗಗಳ ಉತ್ತಮ ಅನುಬಂಧ ಮೂಡಿಬಂದು ಕೃತಿಯ ಬಂಧವನ್ನು ಪೂರ್ಣಪ್ರಮಾಣದಲ್ಲಿ ಕಟ್ಟಿಕೊಟ್ಟದ್ದಾಗಿದೆ.

ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ೨೦೦೮ರಲ್ಲಿ ಪ್ರಕಟಣೆಗೆ ಅಣಿಗೊಳಿಸಿದ ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು ಎಂಬ ಕೃತಿಯು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಿಂದ ಪ್ರಕಟಗೊಂಡಿದ್ದು ಈ ಕೃತಿಯಲ್ಲಿನ ಅಧ್ಯಯನದ ರೂಪವಾಗಿ ಡಿ.ಎಲ್.ಎನ್ ಅವರು ತಮ್ಮ ಕಾಲಘಟ್ಟದಲ್ಲಿ ಪ್ರಕಟಿಸದೆ ಉಳಿಸಿದ ವಿಚಾರಗಳನ್ನು ೬ ಭಾಗಗಳಾಗಿ (ಲೇಖನಗಳು, ಭಾಷಣಗಳು, ಮುನ್ನುಡಿಗಳು ಗ್ರಂಥ ಸಂಪಾದನೆ ಲಲಿತ ಪ್ರಬಂಧಗಳು, ಕವಿತೆಗಳು, ತರಗತಿಯ ಪಾಠಗಳು) ವಿಭಜಿಸಿ ಇದರಡಿಯಲ್ಲಿ ೩೯ ವಿಚಾರಗನ್ನು ಚರ್ಚಿಸಿದ್ದು ಕಂಡುಬಂದಿದೆ.

ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ ಎಂಬ ಪಿಎಚ್.ಡಿ ಸಂಶೋಧನಾ ಮಹಾಪ್ರಬಂಧವನ್ನು ಡಾ.ಎಂ.ರವೀಂದ್ರ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೨೦೧೫ರಲ್ಲಿ ಸಲ್ಲಿಸಿದ್ದು ಈ ಪ್ರಬಂಧದಲ್ಲಿ ಒಟ್ಟು ಒಂಬತ್ತು ಅಧ್ಯಯನಗಳು ಮೂಡಿಬಂದ ಕನ್ನಡ ಸಾಹಿತ್ಯದ ವಿದ್ವತ್ ಪರಂಪರೆ, ಡಿ.ಎಲ್.ಎನ್. ಬದುಕಿನ ಹೆಜ್ಜೆಗುರುತುಗಳು, ಕನ್ನಡ ಇತಿಹಾಸ ಸಂಸ್ಕೃತಿ ಅಧ್ಯಯನಕ್ಕೆ ಡಿ.ಎಲ್.ಎನ್ ಕೊಡುಗೆ ಕನ್ನಡ ಸಾಹಿತ್ಯ ಪರಂಪರೆ ವಿಸ್ತರಣೆಯಲ್ಲಿ ಡಿ.ಎಲ್.ಎನ್. ಪಾತ್ರ ಕನ್ನಡ ಗ್ರಂಥಸಂಪಾದನೆ ಡಿ.ಎಲ್.ಎನ್. ಶಾಸ್ತ್ರ ಸಾಹಿತ್ಯ ಡಿ.ಎಲ್.ಎನ್. ನಿಘಂಟು ಶಾಸ್ತ್ರ, ಡಿ.ಎಲ್.ಎನ್. ಕನ್ನಡ ವಿದ್ವತ್ ಪರಂಪರೆಯಲ್ಲಿ ಡಿ.ಎಲ್.ಎನ್. ಸ್ಥಾನ ಹಾಗೂ ಡಿ.ಎಲ್.ಎನ್. ಶಿಷ್ಯಪರಂಪರೆ ಎಂದು ಉತ್ತಮ ವಿಷಯಗಳನ್ನು ಪ್ರಸ್ತಾಪಿಸಿದ್ದರ ಜೊತೆಗೆ ಕೃತಿಯ ಕಟ್ಟಳೆಗೆ ಪೂರ್ಣಪ್ರಮಾಣದ ಬಂದ ಒದಗಿಸಿದ ಅಧ್ಯಯನ ಫಲಿತಗಳು, ಅನುಬಂಧದ ಭಾಗಗಳು ಮಹಾಪ್ರಬಂಧದ ಮಹತ್ವವನ್ನು ಹೆಚ್ಚಿಸಿವೆ. ಅಧ್ಯಯನದ ದೃಷ್ಟಿಯಿಂದ ಹೊಸಬಗೆಯ ಅಧ್ಯಯನದ ವಿಸ್ತೃತತೆಗಳು ಕೃತಿಯುದ್ದಕ್ಕೂ ಕಂಡುಬಂದವಾಗಿವೆ.

ಇಷ್ಟೇ ಅಲ್ಲದೆ, ಪ್ರಬುದ್ಧ ಕರ್ನಾಟಕ (೫೩–೨) ರಸಘಲ ಗೊರೂರು ರಾಮಸ್ವಾಮಿಯವರ ಕೃತಿ ಸಪ್ತಶೃಂಗ, ಬಿ.ವಿ.ವೈಕುಂಠರಾಜು ಅವರ ಕೃತಿ ಸಾಹಿತ್ಯರತ್ನ ಸಂಪುಟ ಮಾರ್ಗದರ್ಶಕ ಮಹನೀಯರು ಕರ್ನಾಟಕ ಗ್ರಂಥಸಂಪಾದನೆ ಸಿರಿಗನ್ನಡ ಸಾರಸ್ವತರು (ಜಿ.ವೆಂಕಟಸುಬ್ಬಯ್ಯ)

ಮಹಾಮಾರ್ಗ ಎಂ.ಎಂ.ಕಲಬುರ್ಗಿ ಅವರ ಅಭಿನಂದನ ಗ್ರಂಥ ಇತರೆ ಹತ್ತಾರು ಕೃತಿಗಳಲ್ಲಿ ಮಾಸ, ತ್ರೈಮಾಸಿಕ ಪತ್ರಿಕೆಗಳಲ್ಲಿ ಡಿ.ಎಲ್.ಎನ್. ಅವರ ಕುರಿತ ಅವರ ಸಾಹಿತ್ಯ ವಿಷಯ ಕುರಿತ ಹತ್ತಾರು ಚಿಂತನ ಮಂಥನಗಳು ಮೂಡಿಬಂದು ಇಂದಿಗೂ ಹೊಸ ಅಧ್ಯಯನ ನೆಲೆಯಲ್ಲಿ ಡಿ.ಎಲ್.ಎನ್. ಸಾಹಿತ್ಯ ಅಧ್ಯಯನಗೊಳ್ಳುತ್ತಾ ಇಂತಹ ಉತ್ತಮ ವಾಗ್ಮೀಯ ಸಾಗಿದ್ದಾಗಿಲ್ಲದೆ ಸಮರ್ಥ ಗ್ರಂಥ ಸಂಪಾದಕನ ಸಮಗ್ರ ಸಾಹಿತ್ಯವನ್ನು ಕ್ರೋಡಿಕರಿಸಿ ಹೊಸ ಓದಿಗೆ ಹೊರೆ ಹಚ್ಚಿ ನೋಡಿ ಅವರ ಸಂಶೋಧನೆಯನ್ನು ವಾಸ್ತವಕ್ಕೆ ಅಣಿಗೊಳಿಸುವ ಪ್ರಯತ್ನದ ರೂಪ ಈ ಮಹಾಪ್ರಬಂಧದ್ದಾಗಿದೆ.

ಡಿ.ಎಲ್.ಎನ್. ಅವರ ಸಾಹಿತ್ಯಿಕ ಕೃತಿ, ಭಾಷೆ, ಸಂಸ್ಕೃತಿ, ಇತಿಹಾಸ, ನಿಘಂಟುಕಾರ್ಯ ಇತರೆ ಸಂಶೋಧನಾ ಕ್ಷೇತ್ರಗಳಲ್ಲಿನ ಅನುಪಮವಾದ ಸೇವೆಯಿಂದ ಕನ್ನಡ ಸಾಹಿತ್ಯ ವಿಶೇಷವಾಗಿ ಅಧುನಿಕ ಪೂರ್ವದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಲಿ ನೋಡಿದ್ದನ್ನು ಇವರ ಎಲ್ಲಾ ಅಧ್ಯಯನ ಕ್ರಮದಿಂದ ತಿಳಿದುಬಂದಿದ್ದಾಗಿದೆ. ಇಂದಿನ ಪೀಳಿಗೆಯು ಹಳಗನ್ನಡ ಸಾಹಿತ್ಯದಲ್ಲಿನ ಆಸಕ್ತಿ ಜ್ಞಾನದಾಹ ತಣಿಸಲು ಈ ಎಲ್ಲಾ ಸಾಹಿತ್ಯ ಪೂರಕವಾಗಬಹುದೆಂಬಂತಹ ಪ್ರಾಮಾಣಿಕ ಪ್ರಯತ್ನವನ್ನು ಈ ನಿಬಂಧದ ಮೂಲಕ ಮಾಡಲಾಗಿದೆ.

**ಕೊನೆಟಿಪ್ಪಣಿಗಳು**

೧. ಡಿ.ಎಲ್.ನರಸಿಂಹಾಚಾರ್ (ಲೇ), ವಿದ್ಯಾಶಂಕರ ಎಸ್, (೧೯೯೨) ಪು.ಸಂ.೦೨
೨. ಅದೇ ಪುಸ್ತಕ, ಪು.ಸಂ. ೦೨
೩. ಅದೇ ಪುಸ್ತಕ, ಪು.ಸಂ. ೦೨
೪. ಅದೇ ಪುಸ್ತಕ, ಪು.ಸಂ. ೦೨
೫. ಅದೇ ಪುಸ್ತಕ, ಪು.ಸಂ. ೦೨
೬. ಅದೇ ಪುಸ್ತಕ, ಪು.ಸಂ. ೦೨
೭. ಅದೇ ಪುಸ್ತಕ, ಪು.ಸಂ. ೦೬
೮. ಅದೇ ಪುಸ್ತಕ, ಪು.ಸಂ. ೦೬
೯. ಅದೇ ಪುಸ್ತಕ, ಪು.ಸಂ. ೦೭
೧೦. ಅದೇ ಪುಸ್ತಕ, ಪು.ಸಂ. ೦೭
೧೧. ಆಮುಖ (ಲೇ) ಕಮಲಾ ಹಂಪನಾ (೧೯೮೫) ಪು.ಸಂ. ೪೬
೧೨. ಅದೇ ಪುಸ್ತಕ, ಪು.ಸಂ. ೪೬
೧೩. ಅದೇ ಪುಸ್ತಕ, ಪು.ಸಂ. ೪೬
೧೪. ಡಿ.ಎಲ್.ನರಸಿಂಹಾಚಾರ್ (ಲೇ), ವಿದ್ಯಾಶಂಕರ ಎಸ್, (೧೯೯೨) ಪು.ಸಂ.೦೮
೧೫. ಅದೇ ಪುಸ್ತಕ, ಪು.ಸಂ. ೦೮
೧೬. ಅದೇ ಪುಸ್ತಕ, ಪು.ಸಂ. ೦೯೬
೧೭. ಅದೇ ಪುಸ್ತಕ, ಪು.ಸಂ. ೧೦
೧೮. ಅದೇ ಪುಸ್ತಕ, ಪು.ಸಂ. ೧೨
೧೯. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ), ಹಳ್ಳಿಕೇರಿ ಎಫ್.ಟಿ., ೨೦೦೫, ಪು.ಸಂ. ೨೫೨
೨೦. ಡಿ.ಎಲ್.ನರಸಿಂಹಾಚಾರ್, (ಲೇ), ವಿದ್ಯಾಶಂಕರ ಎಸ್, ೧೯೯೨, ಪು.ಸಂ. ೦೨
೨೧. ಅದೇ ಪುಸ್ತಕ, ಪು.ಸಂ. ೦೨
೨೨. ಅದೇ ಪುಸ್ತಕ, ಪು.ಸಂ. ೦೨
೨೩. ಅದೇ ಪುಸ್ತಕ, ಪು.ಸಂ. ೦೩

೨೪. ಅದೇ ಪುಸ್ತಕ, ಪು.ಸಂ. ೦೩

೨೫. ಅದೇ ಪುಸ್ತಕ, ಪು.ಸಂ. ೦೪

೨೬. ಅದೇ ಪುಸ್ತಕ, ಪು.ಸಂ. ೦೪

೨೭. ಅದೇ ಪುಸ್ತಕ, ಪು.ಸಂ. ೦೪

೨೮. ಅದೇ ಪುಸ್ತಕ, ಪು.ಸಂ. ೦೫

೨೯. ಅದೇ ಪುಸ್ತಕ, ಪು.ಸಂ. ೦೬

೩೦. ಅದೇ ಪುಸ್ತಕ, ಪು.ಸಂ. ೦೬

೩೧. ಅದೇ ಪುಸ್ತಕ, ಪು.ಸಂ. ೦೭

೩೨. ಅದೇ ಪುಸ್ತಕ, ಪು.ಸಂ. ೦೭

೩೩. ಅದೇ ಪುಸ್ತಕ, ಪು.ಸಂ. ೦೭

೩೪. ಅದೇ ಪುಸ್ತಕ, ಪು.ಸಂ. ೦೯

೩೫. ಅದೇ ಪುಸ್ತಕ, ಪು.ಸಂ. ೦೮

೩೬. ಅದೇ ಪುಸ್ತಕ, ಪು.ಸಂ. ೧೪೨

೩೭. ಅದೇ ಪುಸ್ತಕ, ಪು.ಸಂ. ೧೪೨

೩೮. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ), ಹಳ್ಳಿಕೇರಿ ಎಫ್.ಟಿ, ೨೦೦೫, ಪು.ಸಂ. ೮೬

೩೯. ಡಿ.ಎಲ್.ನರಸಿಂಹಾಚಾರ್ (ಲೇ), ವಿದ್ಯಾಶಂಕರ ಎಸ್, ೧೯೯೨, ಪು.ಸಂ.೨೮

೪೦. ಅದೇ ಪುಸ್ತಕ, ಪು.ಸಂ. ೨೯

೪೧. ಅದೇ ಪುಸ್ತಕ, ಪು.ಸಂ. ೨೯

೪೨. ಅದೇ ಪುಸ್ತಕ, ಪು.ಸಂ. ೩೧

೪೩. ಅದೇ ಪುಸ್ತಕ, ಪು.ಸಂ. ೩೨

೪೪. ಅದೇ ಪುಸ್ತಕ, ಪು.ಸಂ. ೦೯

೪೫. ಅದೇ ಪುಸ್ತಕ, ಪು.ಸಂ. ೦೯

೪೬. ಅದೇ ಪುಸ್ತಕ, ಪು.ಸಂ. ೦೮

೪೭. ಅದೇ ಪುಸ್ತಕ, ಪು.ಸಂ. ೨೨

೪೮. ಅದೇ ಪುಸ್ತಕ, ಪು.ಸಂ. ೨೪

# ಅಧ್ಯಾಯ – ಮೂರು

## ಡಿ.ಎಲ್.ನರಸಿಂಹಾಚಾರ್ ಅವರ ಗ್ರಂಥ ಸಂಪಾದಿತ ಕೃತಿಗಳ ಸ್ವರೂಪ

೩.೧. ಸಕಲ ವೈದ್ಯ ಸಂಹಿತಾಸಾರಾರ್ಣವಂ
೩.೨. ಪಂಪರಾಮಾಯಣ ಸಂಗ್ರಹ
೩.೩. ಸಿದ್ಧರಾಮ ಚಾರಿತ್ರ್ಯ
೩.೪. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ
೩.೫. ಕರ್ನಾಟಕ ಮಹಾಭಾರತ ಭೀಷ್ಮಪರ್ವ ಸಂಗ್ರಹ
೩.೬. ತುರುಗಾಯಿ ರಾಮಣ್ಣನ ವಚನಗಳು
೩.೭. ರಾಘವಾಂಕ ಕವಿಯ ಸಿದ್ಧರಾಮ ಚರಿತೆಯ ಸಂಗ್ರಹ
೩.೮. ಸುಕುಮಾರ ಚರಿತಂ
೩.೯. ಗೋವಿನ ಹಾಡು
೩.೧೦. ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ

## ಅಧ್ಯಾಯ - ಮೂರು

# ಡಿ.ಎಲ್.ನರಸಿಂಹಾಚಾರ್ ಅವರ ಗ್ರಂಥ ಸಂಪಾದಿತ ಕೃತಿಗಳ ಸ್ವರೂಪ

### ೩.೧. ಸಕಲ ವೈದ್ಯ ಸಂಹಿತಾಸಾರಾರ್ಣವ :

ಕಳಲೆ ವೀರರಾಜೇಂದ್ರ ವಿರಚಿತ ಸಕಲವೈದ್ಯ ಸಂಹಿತಾ ಸಾರಾರ್ಣವ ಅಥವಾ ವೀರರಾಜೇಂದ್ರೋಕ್ತಿ ವಿಲಾಸ (ಸಂಪುಟ–೧) ಈ ಕೃತಿಯನ್ನು ಡಿ.ಎಲ್.ನರಸಿಂಹಾಚಾರ್ಯರು, ಡಿ.ಶ್ರೀನಿವಾಸಾಚಾರ್ ಅವರು ಒಡಗೂಡಿ ೧೯೩೨ರಲ್ಲಿ ಪ್ರಥಮಬಾರಿಗೆ ಗೌರ್ನ್‌ಮೆಂಟ್ ಓರಿಯಂಟಲ್ ಲೈಬ್ರೆರಿ ಮೂಲಕ ಸಂಪಾದಿಸಿ ಪ್ರಕಟಣೆಗೆ ಅಣಿಮಾಡಿದ್ದರು. ಮುಂದೆ ೧೯೬೪ರಲ್ಲಿ ಪ್ರಾಚ್ಯ ವಿದ್ಯಾಸಂಶೋಧನಾಲಯದ ೪೧ನೆಯ ಕನ್ನಡ ಗ್ರಂಥಮಾಲೆಯಾಗಿ ಎಚ್.ದೇವೀರಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ ಎರಡನೆಯಬಾರಿಗೆ ಮರು ಮುದ್ರಣ ಕಂಡುದಾಗಿದೆ.

ಹದಿನೆಂಟು ವಿದ್ಯೆಗಳಲ್ಲಿ ದೃಷ್ಟಾರ್ಥ ಪ್ರಯೋಜಕವಾದ ಆಯುರ್ವೇದವೂ ಒಂದಾಗಿದ್ದು ಪ್ರಸ್ತುತ ಕಾಲಘಟ್ಟದಲ್ಲಿ ಪ್ರಬುದ್ಧಮಾನವಾಗಿ ಬೆಳೆಯುತ್ತಿರುವ ಒಂದು ಪ್ರಮುಖ ಅಧ್ಯಯನ ಶಾಖೆ ಎಂದರೂ ತಪ್ಪಾಗಲಾರದು. ಆದರೆ ಈ ಕುರಿತು ಸಂಸ್ಕೃತದಲ್ಲಿ ಹಲವಾರು ಗ್ರಂಥಗಳು ಮೂಡಿಬಂದಿವೆ. ಆದರೆ ಕನ್ನಡ ಸಾಹಿತ್ಯದಲ್ಲಿ ಈ ಕುರಿತು ಗ್ರಂಥಗಳು ಬಂದಿದ್ದು ಅತಿ ವಿರಳವಾಗಿದೆ. ಅಲ್ಲಲ್ಲಿ ಔಷಧಿಗಳ ಸಂಗ್ರಹ ರೂಪವಾದ ಕೆಲವಾರು ಓಲೆ ಗರಿಗಳು ಕಾಣಸಿಗುವುದು ವಿಸ್ತೃತ ಅಧ್ಯಯನದ ಮೂಲಕ ತಿಳಿದುಬಂದಿದೆ.

ಈ ಕೃತಿಯ ಎರಡನೆಯ ಮುದ್ರಣಕಾರ್ಯ ಭಾಗವಾಗಿ ಪ್ರಥಮ ಹಂತದ ಕೃತಿಯನ್ನು ಪರಿಶೀಲಿಸಿ ತಿದ್ದುಪಡಿಗೊಳಿಸಿದ್ದವರು ಮೈಸೂರು ಆಯುರ್ವೇದ ಕಾಲೇಜಿನ ಅಂದಿನ ಅಧ್ಯಾಪಕರೂ ಆಯುರ್ವೇದದ ವಿದ್ವಾಂಸರೂ ಆಗಿದ್ದ ಶ್ರೀ ಮಹಾದೇವ ಶಾಸ್ತ್ರಿಗಳು ಈ ಗ್ರಂಥದ ಭಾಗವನ್ನು ಆಮೂಲಾಗ್ರವಾಗಿ ಅವಲೋಕಿಸಿ ತೆಲುಗು ಭಾಷೆಯಲ್ಲಿರುವ ಗ್ರಂಥಭಾಗವನ್ನು ಕನ್ನಡಕ್ಕೆ ಪರಿವರ್ತಿಸಿಕೊಟ್ಟಿರುತ್ತಾರೆ.[೧] ಅಲ್ಲದೇ ಮೂಲಿಕಾ ಸಂಗ್ರಹಣ,

ಮೂಲಿಕಾಪ್ರಯೋಗ ಕ್ರಮವು ಹಾಗೂ ಕೃತಿಯಲ್ಲಿ ಉಪಯೋಗಿಸಿದ ತೂಕ ಅಳತೆಗಳಿಗೆ ಸಂಬಂಧಪಟ್ಟ ಕೋಷ್ಟಕವನ್ನು ಸೇರಿಸಿದ್ದು ಎರಡನೆ ಮುದ್ರಣದ ವಿಶಿಷ್ಟತೆಯಾಗಿ ಕೃತಿಯ ಪ್ರತಿಷ್ಠತೆಯನ್ನು ಹೆಚ್ಚಿಸಿದೆ. ಈ ವೈದ್ಯ ಕೃತಿಯನ್ನು ಬರೆದವನು ಕಳಲೆಯ ಪ್ರಭುವಾದ ವೀರರಾಜೇಂದ್ರನು. ಇವನು ೧೮ನೇ ಶತಮಾನದಲ್ಲಿ ಮೈಸೂರು ಪ್ರಾಂತ್ಯದ ಕಳಲೆ ಮನೆತನದ ದಳವಾಯಿ ವಂಶಕ್ಕೆ ಸೇರಿದವನಾಗಿದ್ದನು, ಈತನ ವಿಷಯವಾಗಿ ಈತನ ವಂಶಿಕರ ವಿಷಯವಾಗಿ ಕೆಲವು ಸಂಗತಿಗಳನ್ನು ತಿಳಿಯುವುದಾದರೆ, ಕಳಲೆ ಅರಸುಗಳ ವಂಶಾವಳಿ ಎಂಬ ಕೈ ಬರಹದ ಕಾಗದದ ಪ್ರತಿಯಿಂದ ಮಾಹಿತಿ ಸಂದಿದ್ದು ಇದನ್ನು ಕಳಲೆ ನಿವಾಸಿಗಳಾದ ಮ॥ರಾ॥ ಶ್ರೀ ಕಳಲೆ ರಂಗಸ್ವಾಮಿ ಅಯ್ಯಂಗಾರ್‌ರ ಮೂಲ ಪ್ರತಿಯಿಂದ ಬರೆಯಲಾಗಿದೆ. ಇದಕ್ಕೆ ಪ್ರತಿಯಾಗಿ ಬರೋಡದ ಓರಿಯಂಟಲ್ ಇನ್‌ಸ್ಟಿಟ್ಯೂಟ್ ನವರು ಪ್ರಕಟಿಸಿರುವ 'ನಂಜರಾಜ ಯಶೋಭೂಷಣ ಯಂಬಾರ್ ಕೃಷ್ಣಮಾರ್ಯರು' ಸಂಪಾದಿಸಿರುವ ಈ ಶಾಸ್ತ್ರ ಗ್ರಂಥದ ಉಪೋದ್ಘತದಿಂದ ವಿಷಯ ಸಂಗ್ರಹಣೆ ಮಾಡಿ ವೀರರಾಜನ ವಂಶಾವಳಿಯನ್ನು ಡಿ.ಎಲ್.ಎನ್. ಅವರು ತೀರ್ಮಾನಿಸಿ ನಿಖರೀಕರಿಸಿರುವ ಪಟ್ಟಿಯನ್ನು ಕೃತಿಯ ಪ್ರಸ್ತಾವನೆ ಭಾಗದಲ್ಲಿ ಕಾಣಬಹುದಾಗಿದೆ. ಈ ವಿಷಯಕ್ಕೆ ಪೂರಕವಾಗಿ ವೀರರಾಜನ ಕಾಲಮಾನದ ಕುರಿತು ಕವಿ ಚರಿತೆಕಾರರು ಉಲ್ಲೇಖಿಸಿದಂತೆ ೧೭೨೦[೨] ಎಂಬ ಕಾಲಮಾನವನ್ನು ಒಪ್ಪಿದ ಡಿ.ಎಲ್.ಎನ್ ಅವರು ವೀರರಾಜೇಂದ್ರನು ೧೬೯೧ ರಿಂದ ೧೭೩೪ರ ವರೆಗೆ[೩] ಜೀವಿಸಿದ್ದಿರಬೇಕೆಂದು ಹೇಳಿದ್ದಾರೆ.

ಈ ಗ್ರಂಥ ಅಭ್ಯಾಸದಿಂದ ತಿಳಿದ ವಿಷಯವಾಗಿ ವೀರರಾಜೇಂದ್ರ (ವಿರಾಜ)ನು ಬಹು ಉದಾರನೂ, ದಾನಶೂರನು ಇದ್ದಂತೆ ತಿಳಿದು ಬಂದಿದ್ದು ಕಾವ್ಯ, ನಾಟಕ, ಅಲಂಕಾರ, ವ್ಯಾಕರಣ, ಕರ್ಣಾಯುರ್ವೇದ, ಧನುರ್ವೇದ ಮುಂತಾದ ಹಲವಾರು ವಿದ್ಯೆಗಳನ್ನು ಶೈಶವದಲ್ಲೆ ಕಲಿತವನೆಂದು ಗ್ರಂಥದಲ್ಲಿ ಉಲ್ಲೇಖಗೊಂಡಿದೆ. ಅಲ್ಲದೆ ತನ್ನ ತಂದೆ ದೊಡ್ಡೆಂದ್ರನ ಪರಾಕ್ರಮ ಕುರಿತು ಒಂದು ಯುದ್ಧ ಸನ್ನಿವೇಶವನ್ನು ವಿರಾಟಮಾನವಾಗಿ ವರ್ಣಿಸಿದ್ದು ಕಾಣಬಹುದಾಗಿದೆ. ಈತನಿಗೆ ಆಯುರ್ವೇದದಲ್ಲಿ ಹೆಚ್ಚು ಪರಿಶ್ರಮ ವಿದ್ದಿರಬೇಕೆಂದು ಸಂಪಾದಕರ ವಾದ ೧೮೩೮ರಲ್ಲಿ ದೇವಚಂದ್ರ ಬರೆದ 'ರಾಜಾವಳಿ ಕಥಾಸಾರ'ದಲ್ಲಿ ಉಲ್ಲೇಖಿತಗೊಂಡಂತೆ 'ಅನೇಕ ವೈದ್ಯಶಾಸ್ತ್ರಂಗಳೊಳಿರ್ಪರೋಗಪರಮಪ್ಪಿ ಚಿಕಿತ್ಸೆಂಗಳಂ ಕನ್ನಡ ವಾಕ್ಯದೊಳ್ ವೀರರಾಜೋಕ್ತಿ ವಿಲಾಸವೆಂದು ಬರೆಯಿಸಿದಂ' ಎಂದು ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಇದರಿಂದ ವೀರರಾಜೇಂದ್ರೋಕ್ತಿವಿಲಾಸ ಕೃತಿಯನ್ನು ಇನ್ನಾರೋ ರಚಿಸಿರಬಹುದೆಂಬ ಸಂದೇಹಕ್ಕೆ ಅವಕಾಶವಿದೆ.[೪]

ಈ ಕೃತಿಯು ಎರಡು ಪ್ರತಿಗಳ ಆಧಾರದಿಂದ ಮುದ್ರಿತಗೊಂಡಿದೆ. ಮೊದಲನೆಯದು ಓಲೆಯ ಪ್ರತಿ ಇದ್ದು ಅದನ್ನು 'ಕ' ಪ್ರತಿ ಎಂದು ಸಂಪಾದಕರು ಸಂಕೇತಿಸಿದ್ದಾರೆ. ಇದು

ತಕ್ಕಮಟ್ಟಿಗೆ ಶುದ್ಧವಾಗಿದೆ ಇದರಲ್ಲಿನ ತೆಲುಗು ಭಾಷೆಯು ಇನ್ನೊಂದು ಪ್ರತಿಯಲ್ಲಿನ ಭಾಷೆಗಿಂತ ಶುದ್ಧವಾಗಿದ್ದು ಇದನ್ನೇ ಸಾಧಾರಣವಾಗಿ ಆಧಾರವಾಗಿಟ್ಟುಕೊಂಡು ಕೃತಿ ಸಂಪಾದಿಸಿದ್ದಾರೆ. ಎರಡನೆಯದು ಕಾಗದದ ಪ್ರತಿಯಾಗಿದ್ದು ಇದಕ್ಕೆ 'ಗ' ಪ್ರತಿ ಎಂದು ಸಂಕೇತಿಸಲಾಗಿದ್ದು ಇದು ಅಶುದ್ಧತೆಯಿಂದ ಕೊಡಿದ್ದಲ್ಲದೆ ಮೊದಲನೆ ಪ್ರತಿಗೆ ಅಲ್ಲಲ್ಲಿ ಪರಿಷ್ಕರಣೆಗಾಗಿ ಸಹಾಯಕವಾದದ್ದಾಗಿತ್ತು. ಅಷ್ಟೆ ಅಲ್ಲದೆ ವೀರರಾಜೇಂದ್ರನು ಈ ಗ್ರಂಥವನ್ನು ರಚಿಸುವಲ್ಲಿ ಬಹುಭಾಗಗಳನ್ನು ಕನ್ನಡದಲ್ಲಿ ಬರೆದಿರುವ ವಿಚಾರ ಪೂರಕ ಮಾಹಿತಿಗಳನ್ನು ಹೆಚ್ಚಿನ ಉಳಿದ ಭಾಗಗಳನ್ನು ತೆಲುಗು ಭಾಷೆಯ ಗದ್ಯ ಸರಣಿಯಲ್ಲಿ ಬಂದಿರುವ ಅಧ್ಯಾಯಗಳನ್ನು ಡಿ.ಎಲ್.ಎನ್. ಸ್ಪಷ್ಟಪಡಿಸಿದ್ದಾರೆ.[೫]

ವೀರರಾಜೇಂದ್ರನು ಈ ಶಾಸ್ತ್ರಕೃತಿಯನ್ನೂ ಬಹುಭಾಗ ಕನ್ನಡದಲ್ಲಿ ಬರೆದಿದ್ದಾನೆ. ಉಳಿದ ಭಾಗವನ್ನು ತೆಲುಗು ಭಾಷೆಯ ಗದ್ಯ ಸರಣಿಯಲ್ಲಿ ಬರೆದಿದ್ದು ಪೀಠಿಕಾ ಪ್ರಕರಣದಿಂದ ಚಿಕಿತ್ಸಾ ಸಂಹಿತೆಗಳವರೆಗೆ ಒಟ್ಟು ೧೪೯ ವಿಧವಾದ ಪ್ರಯೋಗಗಳನ್ನು ಅಧ್ಯಾಯ ರೂಪದಲ್ಲಿ ರೋಗವಿಧಾನ, ರೋಗಪರೀಕ್ಷೆ, ರೋಗಲಕ್ಷಣ, ಹೀಗೆ ಇತರೆ ಚಿಕಿತ್ಸಾ ವಿಧಾನಗಳ ಕುರಿತು ವಿಸ್ತೃತತೆಗೆ ಒಡ್ಡಿಕೊಂಡು ಕಲ್ಕ, ಚೂರ್ಣ, ಕಷಾಯ, ಗುಳಿಗೆ, ಲೇಹ್ಯ, ನಷ್ಯ, ತೈಲ, ಗಂಜಿ, ಇತರೆ ರಸಾಯನಗಳ ಬಗ್ಗೆ ಪರಿಯಾಗಿ ವಿವರಿಸಿದ್ದು ಅಧ್ಯಯನದ ಮೂಲಕ ತಿಳಿದಿದೆ. ಅಲ್ಲದೆ ಕೃತಿಯ ಕೊನೆಯ ೧೦೪ ಪುಟಗಳಲ್ಲಿ ಬಿತ್ತರಗೊಂಡ ಪರಿಶಿಷ್ಟ ಭಾಗದಲ್ಲಿ ತೆಲುಗಿನಲ್ಲಿರುವ ಔಷಧಿಗಳ ಕನ್ನಡ ಭಾಷಾಂತರ ಅವತರಣಿಕೆ ಅಭ್ಯಾಸಕ್ಕೆ ಸಹಾಯ ಯೋಗ್ಯವೆಂದು ಗ್ರಹಿಸಬಹುದಾಗಿದೆ.

ಮೂಲಿಕಾ ಸಂಗ್ರಹಣ ಮತ್ತು ಅವುಗಳನ್ನು ಉಪಯೋಗಿಸುವ ರೀತಿ ಹಾಗೂ ಔಷಧಗಳನ್ನು ತಯಾರು ಮಾಡುವ ಮತ್ತು ಉಪಯೋಗಿಸುವ ಮಾಪನದ ಕೋಷ್ಟಕವನ್ನು ಕೃತಿಯ ಪ್ರಸ್ತಾವನೆ ಭಾಗದಲ್ಲಿ ಕಾಣಬಹುದಾಗಿದ್ದು, ಮೊದಲನೆಯದಾಗಿ ಮೂಲಿಕೆಗಳನ್ನು ಸಂಗ್ರಹಿಸಲು ಕೆಲವು ಕಾಲಗಳನ್ನು ಗೊತ್ತು ಮಾಡಲಾಗಿದೆ. ಮೂಲಿಕೆಗಳು ಸಂಪೂರ್ಣ ಶಕ್ತಿಯನ್ನು ಪಡೆದಿರುವುದಕ್ಕೆ ಅವು ಸರಿಯಾದ ಸ್ಥಳದಲ್ಲಿ ಯಾವ ಬಾಧೆಯೂ ಇಲ್ಲದಂತೆ ಬೆಳೆದಂತಹವಾಗಿರಬೇಕು. ಸಾಮಾನ್ಯವಾಗಿ ಎಲ್ಲಾ ಔಷಧ ದ್ರವ್ಯಗಳನ್ನು ಶರತ್ಕಾಲದಲ್ಲಿಯೇ ಸಂಗ್ರಹಿಸಬೇಕಾಗಿದ್ದು ಅತ್ಯಾವಶ್ಯಕವಾಗಿದೆ. ಶರೀರ ಶೋಧನೆಗಾಗಿ ಉಪಯೋಗಿಸುವ ವಮನ ಮತ್ತು ವಿರೇಚನ ದ್ರವ್ಯಗಳನ್ನು ವಸಂತ ಋತುವಿನ ಕೊನೆಯಲ್ಲಿ ಸಂಗ್ರಹಿಸಿ ಇಟ್ಟುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಈ ಕಾಲದಲ್ಲಿ ಅವು ಪೂರ್ಣ ವೀರ್ಯವತ್ತಾಗಿದ್ದು ತುಂಬಾ ಈ ಹಳೆಯದಾದರೆ ತಮ್ಮ ಶಕ್ತಿಯನ್ನು ಕಳೆದುಕೊಳ್ಳುವುವಾಗಿವೆ. ಆದ್ದುದರಿಂದ ಒಣಗಿದ ಮೂಲಿಕೆಗಳಾದರೆ ಹೊಸದಾಗಿಯೇ ಇರಬೇಕು ಅಲ್ಲದೇ ಔಷಧಿಯೋಗಗಳಲ್ಲಿ ಹೇಳುವ ಗಿಡಗಳ ಆಯಾ ಭಾಗಗಳನ್ನೇ ತೆಗೆದುಕೊಳ್ಳಬೇಕು. ಉದಾ : ಬೇರು, ನಾರು, ತೊಗಟೆ,

ಎಲೆ, ಚಿಗುರುಗಳಿತ್ಯಾದಿಗಳಾಗಿಯೇ ಸಂಗ್ರಹಿಸುವುದು ಅತಿಮುಖ್ಯ ಅಂಶವಾಗಿದೆ. ಸಣ್ಣಗಿಡಗಳಾದರೆ, ಉದಾ : ಗರಿಕೆ, ಉತ್ರಾಣಿ, ತಂಗಡಗಿ ಇತರೆಗಳನ್ನು ಬೇರು ಸಮೇತ ಉಪಯೋಗಿಸುವುದು ಒಳಿತು, ದೊಡ್ಡ ಮರಗಳಾದರೇ ಉದಾ: ಆಲ, ಬಿಲ್ವ, ಬೇವು ಇತ್ಯಾದಿಗಳಾದಲ್ಲಿ ಅವುಗಳ ಬೇರು ತೊಗಟೆ, ಕಾಂಡ, ಇತ್ಯಾದಿಗಳಾಗಿ ಸಂಗ್ರಹಿಸಿ ಬಳಸಬೇಕು.

ಯೋಗಗಳಲ್ಲಿ ದ್ರವ್ಯಗಳ ಪ್ರಮಾಣ ಹೇಳಿರದಿದ್ದರೆ ಅವನ್ನು ಸಮತೂಕದಲ್ಲಿ ಹಾಕಿ ಬಳಸಬೇಕು, ಔಷಧ ತಯಾರಿಸಲು ಪಾತ್ರೆ ತಿಳಿಸದಿದ್ದಲ್ಲಿ ಮಣ್ಣಿನ ಪಾತ್ರೆ ಬಳಕೆ ಮಾಡಬೇಕು ಇಲ್ಲದಿದ್ದಲ್ಲಿ ಸಾಮಾನ್ಯವಾಗಿ ಬಾಯಿ ಅಗಲವಿರುವ ಕಂಚು ಅಥವಾ ಹಿತ್ತಾಳೆ ಪಾತ್ರೆಗಳನ್ನು ಉಪಯೋಗಿಸುವುದು ಒಳಿತು! ದ್ರವ್ಯವನ್ನು ಹೇಳದಿರುವಾಗ ಸಾಮಾನ್ಯವಾಗಿ ನೀರನ್ನು ಉಪಯೋಗಿಸಬೇಕು, ಇದೇ ರೀತಿ ಔಷಧಿ ಸೇವನೆಗೆ ಸಮಯ ನಿಗದಿಪಡಿಸದಿದ್ದಾಗ ಪ್ರಾತಃಕಾಲವೆಂದು ತಿಳಿದು ಬಳಸಬೇಕಾಗಿದ್ದು ಅತ್ಯಾವಶ್ಯಕ ಅಂಶಗಳಾಗಿ ತಿಳಿಯುವುದು ಔಚಿತ್ಯವೆನಿಸಿದೆ.[೬] ಇದೇ ರೀತಿ ಮಾಪನ ಕೋಷ್ಠಕದ ಬಗ್ಗೆ ತಿಳಿಯುವುದಾದರೆ, ಈ ಕೃತಿಯಲ್ಲಿ ಕಾಳಿಂಗ ಮಾನದ ಹೆಸರುಗಳು ಕಂಡುಬಂದಿವೆ. ಅದನ್ನು ಇಂದಿನ ತೂಕಮಾನಕ್ಕಾನುಗುಣವಾಗಿ ಕೋಷ್ಟಕವನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

೮ ಗುಂಜಿತೂಕ – ೧ ಮಾಷ ೧.೨ ಗ್ರಾಂ

೪ ಮಾಷ – ೧ ಶಾಣ ೪.೮. ಗ್ರಾಂ

೬ ಮಾಷ – ಗದ್ಯಾಣ (ಒಂದು ವರಹಾ) ೭.೨ ಗ್ರಾಂ

೧೦ ಮಾಷ – ೧ ಕರ್ಷ (ಒಂದು ತೊಲ ಅಥವಾ ೧೧.೬ ಗ್ರಾಂ)

೪ ಕಷ – ೧ ಫಲ (ಅರ್ಧ ಪಾವು) (ಸು.೧೨. ಗ್ರಾಂ)

೪ ಫಲ – ೧ ಕುಕುವ (ಅರ್ಧ ಸೇರು)

೨ ಕುಡುವ – ೯ ಮಾಸಿಕಾ (ಶರಾಮ ಸೇರು –೮ ಫಲ)

೨ ಕರಾವ – ೧ ಪ್ರಸ್ಥ

೪ ಪ್ರಸ್ಥ – ೧ ಅಡಕ (೮ ಸೇರು)

೪ ಅಡಕ – ೧ ದ್ರೋಣ (೩೨ ಸೇರು)

೨ ದ್ರೋಣ – ೧ ಕಂಭ"[೭]

ಎಂದು ಇಲ್ಲಿ ವಿಶೇಷವಾಗಿ ಔಷಧಿ ತಯಾರು ಮಾಡುವವರು ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಅತಿಸೂಕ್ತ ವಿಚಾರವಾಗಿದ್ದು, ರೋಗವಿಧಾನದಲ್ಲಿಯಾಗಲಿ, ಚಿಕಿತ್ಸಾ

ವಿಧಾನದಲ್ಲಿ ಆಗಲಿ ಇರುವ ಭಿನ್ನಾಭಿಪ್ರಾಯಗಳನ್ನು 'ಮತಾಂತರೇ' ಎಂದು ಬರೆದು ಸೂಚಿಸಿರುವುದು ಹಾಗೂ ಅಲ್ಲಲ್ಲಿ ವೈದ್ಯಶಾಸ್ತ್ರದಲ್ಲಿ ಪ್ರವೀಣರಾದ ಪೂರ್ವಾಚಾರ್ಯರ ಹೆಸರುಗಳನ್ನು ಉಲ್ಲೇಖಿಸಿದ್ದು ಅಧ್ಯಯನದುದ್ದಕ್ಕೂ ಕಾಣಬಹುದಾಗಿದೆ. ಅಲ್ಲದೇ ಕೃತಿಯ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಯಾವುದೇ ಔಷಧೋಪಚಾರಕ್ಕೆ ಅನುಭವುಳ್ಳ ವೈದ್ಯರ ಅನುಮತಿಯನ್ನು, ಸಲಹೆಯನ್ನು ಪಡೆದು ಅದರಂತೆ ಪಾಲಿಸಬೇಕಲ್ಲದೆ ಬರಿಯ ಪುಸ್ತಕವನ್ನು ನೆಚ್ಚಿಕೊಂಡು ಪ್ರಯೋಗಿಸಬಾರದು ಎಂಬ ಎಚ್ಚರಿಕೆಯ ನುಡಿಯನ್ನು ಈ ಕೃತಿಯ ಅಭ್ಯಾಸಿಗರು ಗಮನಿಸಬೇಕಾದ ಮುಖ್ಯ ಅಂಶವೆನಿಸಿದೆ.

ಕಳಲೆ ಮನೆತನದ ದಳವಾಯಿಗಳ ಕಾಲದ ಕನ್ನಡ ಸಾಹಿತ್ಯವು ಸಾಹಿತ್ಯೇತಿಹಾಸಕ್ಕೆ ಕೆಲವೊಂದು ಜೋಡಣೆಗಳನ್ನು ಕಲ್ಪಿಸಿವೆ ಎನ್ನುವುದು ಖಚಿತತೆಯಿಂದ ಕೂಡಿರುವ ಅಂಶವಾಗಿದೆ. ಕನ್ನಡ ಸಾಹಿತ್ಯವು ಪದ್ಯ ಕಾವ್ಯಗಳನ್ನು ಹಿಂದೆ ಸರಿಸಿ ಗದ್ಯದ ಪ್ರಾಚುರ್ಯಕ್ಕೆ ಮುಂದಡಿ ಇಟ್ಟುದು ಈ ಕಾಲದಲ್ಲೆ, ೧೯ನೆಯ ಶತಮಾನದ ಆರಂಭ ಕಾಲಘಟ್ಟದ ಕೆಂಪುನಾರಾಯಣನ ಗದ್ಯಕ್ಕೆ ಅಡಿಪಾಯ ಬಿದ್ದಿದ್ದು ಕಳಲೆ ದಳವಾಯಿಗಳ ಕಾಲಾವಧಿಯಲ್ಲಿ ಎನ್ನುವುದು ಗಮನಾರ್ಹ ಸಂಗತಿಯಾಗಿದೆ. ಆಕಾಲದಲ್ಲಿ ಬಂದ ಲೌಕಿಕಶಾಸ್ತ್ರವಾದ ಸಕಲವೈದ್ಯ ಸಂಹಿತಾ ಸಾರಾರ್ಣವ ಕೃತಿಯು ಭಾಷೆ ಹಾಗೂ ಸಾಮಗ್ರಿಯ ದೃಷ್ಟಿಯಿಂದ ತುಂಬಾ ಮಹತ್ವದ ಕೃತಿಯಾಗಿ ತೆಲುಗು ಕನ್ನಡಗಳ ನಡುವೆ ಸಾಹಿತ್ಯಿಕ ಕೊಡುಕೊಳ್ಳುವಿಕೆಗಳು ಈ ಕಾಲಾವಧಿಯಲ್ಲಿಯೇ ಅಪಾರವಾಗಿ ನಡೆದಿದ್ದಾವೆಂದು ತಿಳಿದು ಬಂದಿದೆ. ಕನ್ನಡದಲ್ಲಿ ಕೆಲವೊಂದು ಪ್ರಕಾರಗಳ ನಿರೂಪಣೆಯಲ್ಲಿ ತೆಲುಗು ಸಾಹಿತ್ಯದ ಕೈವಾಡ ಇದೆ ಎನಿಸಿದೆ. ಭಾರತ, ಭಾಗವತ, ಹರಿವಂಶ ಇತ್ಯಾದಿ ಕನ್ನಡದ ಕೃತಿಗಳ ಅನುವಾದ ಪ್ರಕ್ರಿಯೆಯೂ ತುಂಬಾ ಗಾಢವಾಗಿ ಸಾಗಿ ಬಂದಿತ್ತು ವೈಷ್ಣವ ಪರವಾಗಿದ್ದ ಕನ್ನಡ ಸಾಹಿತ್ಯ ಮತ್ತೆ ಶೈವ ಪರವಾಗಿ ಮಾರ್ಪಡುವುದರಲ್ಲಿ ಕಳಲೆ ಮನೆತನದ ದಳವಾಯಿಗಳ ಪಾತ್ರ ಮಹತ್ವದ್ದಾಗಿ ಇತಿಹಾಸ ಪುನರ್ರಚನೆ ನೆಲೆಯಲ್ಲಿ ಅಗತ್ಯ ಸಾಹಿತ್ಯ ಕೃತಿಗಳು ಮೂಡಿಬಂದು ಕನ್ನಡ ಸಾಹಿತ್ಯದ ವಿಸ್ತರಣೆ ನಡೆದದ್ದು ಈ ಕಾಲಘಟ್ಟದ ವಿಶೇಷವೆನಿಸಿದೆ.

ಈ ಕೃತಿಯ ಸಂಪಾದನೆಯ ಒಟ್ಟಾರೆ ವಿಚಾರವಾಗಿ ಡಿ.ಎಲ್.ಎನ್. ಅವರ ನಿಲುವು ಗಮನಿಸುವುದಾದರೆ, ಇವರ ತೌಲನಿಕ ದೃಷ್ಠಿ ವ್ಯುತ್ಪತ್ತಿ ಮೂಲವಾದದು ಹಾಗೂ ಸಂಶೋಧನಾತ್ಮಕವಾದದ್ದು ಏಕೆಂದರೆ ಪಾಠ ಕ್ಲಿಷ್ಟತೆ ಬಿಡಿಸುವಲ್ಲಿ, ಪಾಠಾಂತರಗಳನ್ನು ಆಯ್ಕೆ ಮಾಡುವಲ್ಲಿ ಹಾಗೂ ಪದಾರ್ಥ ನಿರ್ಣಯಕೊಡುವಲ್ಲಿ ಈ ಬಹುಶ್ರುತತೆಯನ್ನು ಅವರು ಬಹುವ್ಯಾಪಕವಾಗಿ ಬಳಸಿದ್ದು ಕಂಡು ಬಂದಿದೆ. ಕೃತಿಯ ವಸ್ತು ವಿನ್ಯಾಸಗಳ ವೈಶಿಷ್ಟ್ಯವನ್ನು ಕಾಣುವಲ್ಲಿ ಕೂಡಾ ಅವರ ತೌಲನಿಕ ದೃಷ್ಠಿ ಎದ್ದು ಕಂಡಿದೆ. ಸಾಂಸ್ಕೃತಿಕ ಪಾರಂಪರಿಕ ಅಧ್ಯಯನದ ವಿಧಾನ ಹಾಗೂ ವಿಸ್ತೃತತೆ ಮುಂದಿನ ಅಧ್ಯಯನಕಾರರಿಗೆ

ಬೇಕಾದ ಮುನ್ನೋಟದ ಚಹರೆಗಳನ್ನು ಕೃತಿ ಆರಂಭದಿಂದ ಅಂತ್ಯದವರೆಗೂ ಬಿತ್ತರಗೊಳಿಸಿದ್ದು ಇವರ ಚಾಕ್ಷುಷತ್ವ ಮೌಲ್ಯವನ್ನು ಎತ್ತಿಹಿಡಿದಿದ್ದಾಗಿದೆ.

**೩.೨. ಪಂಪರಾಮಾಯಣ ಸಂಗ್ರಹ**

ಹಳಗನ್ನಡ ಸಾಹಿತ್ಯ ಕೃತಿಗಳಲ್ಲಿನ ಉತ್ತಮ ರಸವತ್ತಾದ ಭಾಗವನ್ನು ಆಯ್ದು ಸಹೃದಯರಿಗೆ ಒದಗಿಸುವ ರೂಢಿ ೨೦ನೇ ಶತಮಾನದ ೩ನೇ ದಶಕದಲ್ಲಿ 'ವಿದ್ಯಾರ್ಥಿಗಳ' ಬೋಧನಾ ದೃಷ್ಟಿಯನ್ನಿರಿಸಿಕೊಂಡು ಸಂಗ್ರಹ ಕಾರ್ಯ ಆರಂಭವಾಯಿತು. ಈ ಪಃಕ್ತಿಗೆ ನಾಂದಿ ಹಾಡಿದ ಮೊದಲ ಕನ್ನಡಿಗರೆಂದರೆ, ಎ. ಆರ್. ಕೃಷ್ಣಶಾಸ್ತ್ರಿಯವರು. ಇವರು ೧೯೩೧ರಲ್ಲಿ ಸಂಪಾದಿಸಿ ಸಂಗ್ರಹಿಸಿದ್ದ ಹರಿಶ್ಚಂದ್ರ ಕಾವ್ಯ ಸಂಗ್ರಹವೇ ಮೊದಲನೆಯದು. ಈ ಹಿಂದೆ ಹರ್ಮನ್ ಮೊಗ್ಲಿಂಗ್ ರಂತಹ ಕೆಲವು ಪಾಶ್ಚಾತ್ಯ ವಿದ್ವಾಂಸರು ೧೯ನೇಯ ಶತಮಾನದ ವೇಳೆಗೆ ಹಸ್ತಪ್ರತಿಗಳು ಸುಲಭವಾಗಿ ದೊರೆಯದಿದ್ದ ಸಂದರ್ಭದಲ್ಲಿ ಜೈಮಿನಿ ಭಾರತ (೧೮೪೮) ಚೆನ್ನಬಸವ ಪುರಾಣಗಳಂತಹ ಕೃತಿಗಳ ಕೆಲವು ಭಾಗಗಳನ್ನು ಕರ್ನಾಟಕ ಪ್ರಾಕಾವ್ಯ ಮಾಲಿಕೆಯಲ್ಲಿ ಸಂಪಾದಿಸಿ ಪ್ರಕಟಿಸಿದ್ದೂ ಉಂಟು. ಆದಾಗ್ಯೂ, ಕನ್ನಡ ಗ್ರಂಥ ಸಂಪಾದನೆಯ ಸಂಗ್ರಹ ಆವೃತ್ತಿಯ ಇತಿಹಾಸ ಮೈಸೂರು ವಿ.ವಿ.ಯ ಕನ್ನಡ ಗ್ರಂಥಮಾಲೆ ಮೂಲಕ ಪ್ರಕಟಗೊಂಡ ಸಂಗ್ರಹ ಆವೃತ್ತಿಗಳ ಮೂಲಕ ಗುರುತಿಸಲಾಗಿದೆ. ಇಲ್ಲಿ ಟಿ.ಎಸ್.ವೆಂಕಣ್ಣಯ್ಯನವರು ಕರ್ಣಾಟಕ ಕಾದಂಬರಿ ಸಂಗ್ರಹವನ್ನು ಸಿದ್ಧಪಡಿಸಿದ್ದರು. ನಂತರ ಎಂ.ಆರ್.ಶ್ರೀ ಹಾಗೂ ಬಸವಲಿಂಗಯ್ಯನವರು ಸೇರಿ ೧೯೩೪ರಲ್ಲಿ ಹೊರತಂದ ಚಾಮರಸನ ಪ್ರಭುಲಿಂಗಲೀಲೆಯ ಸಂಗ್ರಹಗಳು ಮುಂದಿನ ದಿನಗಳಲ್ಲಿ ಬಂದ ಸಂಗ್ರಹ ಆವೃತ್ತಿಗಳಿಗೆ ಮಾದರಿಯಾದವೆಂದರೂ ತಪ್ಪಾಗಲಾರದ್ದಾಗಿದೆ. ಮುಂದಿನ ದಿನಗಳಲ್ಲಿ ಈ ಸಂಗ್ರಹ ಆವೃತ್ತಿಗಳಿಗೆ ಪ್ರೇರಕರಾದವರು ಬಿ.ಎಂ.ಶ್ರೀ ಅವರು ಇವರು ಮೈ.ವಿ.ವಿ.ಯ ಕನ್ನಡ ಪ್ರಕಟಣಾ ಸಮಿತಿಯ ಅಧ್ಯಕ್ಷರಾಗಿದ್ದಾಗ ಕನ್ನಡ ಗ್ರಂಥಮಾಲೆಯ ಮೂಲಕ ನೂರಾರು ಕೃತಿಗಳನ್ನು ಪ್ರಕಟಿಸಲು ಪ್ರೇರಕರಾಗಿದ್ದವರು.

"ಸಂಗ್ರಹ ಆವೃತ್ತಿಯ ಮುಖ್ಯ ಉದ್ದೇಶವು ಕನ್ನಡದ ಪೂರ್ವ ಸಾಹಿತ್ಯ ಕೃತಿಗಳಲ್ಲಿನ ಪ್ರಮುಖವಾದವುಗಳನ್ನು ಜನತೆಯಲ್ಲಿಯೂ, ವಿದ್ಯಾರ್ಥಿವರ್ಗದಲ್ಲಿಯೂ ಹೆಚ್ಚು ಪ್ರಚಾರಕ್ಕೆ ತರುವುದಕ್ಕಾಗಿ ಮತ್ತು ವಿದ್ಯಾರ್ಥಿಗಳ ಪಾಠಕ್ಕೆ ಅನುಕೂಲವಾಗುವಂತೆ ಸಿದ್ಧಪಡಿಸುವುದಾಗಿತ್ತು." ಕನ್ನಡ ಕಾವ್ಯಗಳ ಸಂಗ್ರಹ ಆವೃತ್ತಿಗಳ ಸ್ವರೂಪ ಹಾಗೂ ಸಂಗ್ರಹ ಆವೃತ್ತಿಗಳ ಸಂಪಾದಕನಿಗಿರಬೇಕಾದ ಅರ್ಹತೆಯ ಬಗ್ಗೆ ಬಿ.ಎಂ.ಶ್ರೀ ಅವರು ಈ ರೀತಿಯಾಗಿ ಹೇಳಿದ್ದಾರೆ. ಮೂಲ ಪ್ರತಿಗಳನ್ನು ಪರಿಶೋಧಿಸಿ ಶುದ್ಧ ಪಾಠವನ್ನು ಒಳಗೊಂಡ ಪೀಠಿಕೆ, ಶಬ್ದಕೋಶ ಅವಶ್ಯವಾದ ಟಿಪ್ಪಣೆಗಳೊಡನೆ ಕೂಡಿರಬೇಕು. ಒಂದು ಕಾವ್ಯದ ಸೊಬಗನ್ನು ಒಬ್ಬ ಕವಿಯ ಕವಿತಾ ಶಕ್ತಿಯನ್ನು ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ಓದಬೇಕು, ಇಲ್ಲವೆ

ಉತ್ತಮ ಭಾಗಗಳನ್ನಾದರೂ ನೋಡಬೇಕು. ಈ ಸಮದೃಷ್ಟಿ ಸಾಧ್ಯವಾಗುವಂತೆ ಪಾಠಕ್ಕೆ ತಕ್ಕ ಪ್ರಮಾಣ ಅತಿ ಮೀರದಂತೆ ಕಾವ್ಯಗಳನ್ನು ಅದರದರ ಸ್ವಭಾವಕ್ಕೆ ಉಚಿತವಾಗಿ ಸಂಗ್ರಹಿಸಿದರೆ ವಿದ್ಯಾರ್ಥಿಗಳಿಗೂ, ಜನಸಾಮಾನ್ಯಕ್ಕೂ ಹಿತಕರವೂ ಪ್ರಯೋಜನವೂ ಆಗಬಹುದೆಂಬ ನಂಬಿಕೆಯಿಂದ ಈ ಸಂಗ್ರಹವನ್ನು ಮಾಡುತ್ತಾರೆ. ಇದರಲ್ಲಿ ಮುಖ್ಯ ಗಗನಿಕೆ ಎಂದರೆ, ಕಥಾ ಸರಣಿ–ಕೆಡದಂತೆ ನೋಡಿಕೊಳ್ಳಬೇಕಾದದ್ದು ಅತಿ ಅವಶ್ಯಕವಾಗಿದೆ. ಒಟ್ಟು ಕಥೆಯ ಸ್ವಾರಸ್ಯಕ್ಕೆ ಪಾತ್ರ ನಿರೂಪಣಕ್ಕೆ ಹೋಗಬಾರದು. ಎಲ್ಲಕ್ಕಿಂತ ಪ್ರಧಾನವಾದದ್ದು ಕವಿಯ ವ್ಯಕ್ತಿತ್ವಕ್ಕೆ ಆತನ ವಿಶೇಷ ಪ್ರತಿಭೆಗೆ ಲೋಪ ಬರದಂತೆ ನೋಡಿಕೊಳ್ಳಬೇಕು. ಇಷ್ಟನ್ನು ಸಾಧಿಸುವುದು ಸಂಗ್ರಹಕಾರನ ಕರ್ತವ್ಯ[೮] ಈ ಉದ್ದೇಶಗಳ ಹಿನ್ನೆಲೆಯಲ್ಲಿ ಕನ್ನಡದ ಸಂಗ್ರಹದ ಆವೃತ್ತಿಗಳು ಮೊದಲಿಗೆ ಮೈಸೂರು ವಿಶ್ವವಿದ್ಯಾಲಯ ಗ್ರಂಥಮಾಲೆಯ ಮೂಲಕ ಹೊರಬಂದವು.

"ಸಂಗ್ರಹ ಆವೃತ್ತಿಗಳಲ್ಲಿ ಒಂದು ಕೃತಿಯ ಮೂಲಗುಣಗಳು ಯಾವುವೆಂಬುದನ್ನು ವಿಶ್ಲೇಷಣೆ ಮಾಡಿ ಅದರ ಶೈಲಿ, ಕಾವ್ಯ ಗುಣಗಳನ್ನು ಆಶ್ರಯಿಸಿ ಅದರ ರಸಾಧ್ರಾವವನ್ನು ಕಂಡು ಹಿಡಿಯುವುದಕ್ಕಾಗಿ ರೂಪುಗೊಂಡವುಗಳಾಗಿದ್ದು."[೧೦] ಈ ವಿಧಾನವು ಗ್ರಂಥಸಂಪಾದನೆ ಹಿನ್ನೆಲೆಯಲ್ಲಿ ಎ.ಆರ್.ಕೃಷ್ಣಶಾಸ್ತ್ರೀ, ಟಿ.ಎಸ್.ವೆಂಕಣ್ಣಯ್ಯ, ಎಂ.ಆರ್.ಶ್ರೀನಿವಾಸಮೂರ್ತಿ, ತೀ.ನಂ.ಶ್ರೀಕಂಠಯ್ಯ, ಎಲ್.ಗುಂಡಪ್ಪ, ಡಿ.ಎಲ್.ಎನ್. ತ.ಸು.ಶಾಮರಾವ್, ಶಿ.ಶಿ. ಬಸವನಾಳರು ಸಂಪಾದಿಸಿದ ಆವೃತ್ತಿಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆ ಪಡೆದುಕೊಂಡದ್ದಾಗಿವೆ.

ಮೂಲವನ್ನು ಸಂಶೋಧಿಸಿ ಸರಿಪಾಠಗಳನ್ನು ನಿಷ್ಕರ್ಷಿಸಿ ಓದುಗರ ಅಭಿಪ್ಸೆಗೆ ತಕ್ಕಂತೆ ವಿಸ್ತಾರವಾದ ಮೂಲಗ್ರಂಥವನ್ನು ಸಂಗ್ರಹಿಸುವುದು ಗ್ರಂಥಸಂಪಾದನೆಯ ಒಂದು ವಿಧಾನವೇ ಆಗಿದೆ. ಬಿ.ಮಲ್ಲಪ್ಪನವರ 'ಕರ್ನಾಟಕ ಕಾದಂಬರಿ' ಎಂ.ಆರ್.ಶ್ರೀ ಅವರ ಪ್ರಭುಲಿಂಗಲೀಲೆ ಸಂಗ್ರಹ, ತೀ.ನಂ.ಶ್ರೀ ಅವರ ಗದಾಯುದ್ಧ ಸಂಗ್ರಹ, ಇತರೆ ಕೃತಿಗಳೊಂದಿಗೆ ಡಿ.ಎಲ್.ಎನ್. ಅವರ 'ಪಂಪರಾಮಾಯಣ ಸಂಗ್ರಹ' ಈ ಸಂಪಾದನಾ ವಿಧಾನಕ್ಕೆ ಹೊರತಾಗಿಲ್ಲದ್ದಾಗಿ ಮೂಡಿಬಂದಿದೆ.

ಡಿ.ಎಲ್.ಎನ್. ಅವರು ಪಂಪ ರಾಮಾಯಣ ಸಂಗ್ರಹಕ್ಕೆ ಬರೆದ ಮುನ್ನುಡಿಯನ್ನು ಹೋಲಿಸುವಂತಹದ್ದು ಕನ್ನಡದ ಸಂಗ್ರಹ ಆವೃತ್ತಿಗಳಲ್ಲಿ ಇನ್ನೊಂದಿಲ್ಲವೆಂದೆ ಹೇಳಬಹುದು. ಪೀಠಿಕಾ ಭಾಗವು ಸಂಶೋಧನಾತ್ಮಕವಾದ ಸಾಮಗ್ರಿ ಚರ್ಚೆಗಳ ಜೊತೆಗೆ ಸಾಹಿತ್ಯ ವಿಮರ್ಶೆಯನ್ನು ಒಳಗೊಂಡಿದ್ದು, ತಾವು ಸಂಪಾದಿಸುತ್ತಿರುವುದು ಒಂದು ಕಾವ್ಯ ಎಂಬುದನ್ನು ಮನಗಂಡಿದ್ದ ಇವರು ಅದರ ರಸಾದ್ರಾವವನ್ನು ಮೂಲದ ಆರಂಭದಲ್ಲಿ ಅತ್ಯುತ್ತಮವಾಗಿ ಪ್ರಸ್ತಾವನೆ ಮೂಲಕ ಅಭಿವ್ಯಕ್ತಿಸಿದ್ದನ್ನು ಕಾಣಬಹುದು.

ಮೂಲಕೃತಿಯನ್ನು ಅಭ್ಯಾಸಿಸಿ ಮನವರಿಕೆ ಮಾಡಿಕೊಂಡು ಆಯ್ದ ಭಾಗಗಳನ್ನು ಮೊದಲು ಗುರುತಿಸಿ ಆನಂತರ ಮೂಲ ಕೃತಿಯಲ್ಲಿ ಬಿಡಬಹುದಾದ ಭಾಗಗಳನ್ನು ಬಿಟ್ಟು ಉಳಿದುದರಲ್ಲಿ ಸೂಕ್ತಪಾಠಗಳನ್ನು ಆಯ್ದು ಸಂಪಾದಿಸುವ ಕಾರ್ಯ ಎಲ್ಲರಿಗೂ ಸಾಧನವಾಗದ್ದು. ಈ ಕಾರ್ಯವನ್ನು ಡಿ.ಎಲ್.ಎನ್ ಅವರು ಪಂಪರಾಮಾಯಣದಲ್ಲಿ ಮೂಲಕ ಮಾಡಿ ತೋರಿಸಿದ್ದಾರೆ. ಮೂಲದ ಸಮಸ್ತ ಪದ್ಯಗಳನ್ನು ಅಭ್ಯಾಸಿಸಿ ಮನನ ಮಾಡಿಕೊಂಡು ಕಥೆಯು ಸರಾಗವಾಗಿ ಸಾಗಲು ಯಾವುದೇ ವ್ಯತ್ಯಯವೂ ಉಂಟಾಗದಂತೆ ಉತ್ತಮ ವರ್ಣನಾ ಭಾಗಗಳನ್ನು ಬಿಡದಂತೆ ಸಂಗ್ರಹಿಸಿ ಕೊಟ್ಟಿರುವುದು ಅವರ ವಿದ್ವತ್ತನ್ನು ಸಾಕ್ಷೀಕರಿಸಿದ್ದಾಗಿದೆ.

ಹಳಗನ್ನಡ ಸಾಹಿತ್ಯವು ೧೦ನೇ ಶತಮಾನದಲ್ಲಿ ಪಂಪ, ರನ್ನಾದಿ ಕವಿಗಳಿಂದ ಮೇರುಸ್ಥಿತಿಯಲ್ಲಿದ್ದಿತ್ತು. ಪಂಪನನ್ನು ಅನುಸರಿಸಿ ಅವನ ಮಾರ್ಗದಲ್ಲಿಯೇ ನಡೆದವನು ಹನ್ನೇರಡನೆಯ ಶತಮಾನದ ಪೂರ್ವಾರ್ಥದಲ್ಲಿದ್ದ 'ನಗೆಚಂದ್ರ' ಇವನು ಈಗಿನ ವಿಜಯಪುರದವನೆಂದು ಇವನೇ 'ಮಲ್ಲಿನಾಥಪುರಾಣ'ವೆಂಬ ತನ್ನ ಕಾವ್ಯದಲ್ಲಿ ಉಲ್ಲೇಖಿಸಿಕೊಂಡಿದ್ದು ಮಲ್ಲಿಜಿನೇಂದ್ರ ಬಸದಿಯನ್ನು ಕಟ್ಟಿಸಿದ್ದೇನೆಂದು ಹೇಳಿಕೊಂಡಿದ್ದಾನೆ. ಇವನ ಕಾಲ, ಹೆಸರು, ಕೃತಿಗಳ ವಿಚಾರವಾಗಿ ಜಿ.ವೆಂಕಟಸುಬ್ಬಯ್ಯ, ಎಂ.ಗೋವಿಂದ ಪೈ ದ.ರಾ.ಬೇಂದ್ರೆ, ಡಿ.ಎಲ್.ಎನ್.ಗಳಾದಿಯಾಗಿ ಹಲವಾರು ವಿದ್ವಾಂಸರು ಈಗಾಗಲೇ ಹತ್ತಾರು ಕೃತಿ, ಲೇಖನಗಳಲ್ಲಿ ಚರ್ಚಿಸಿದ್ದಾರೆ. ಇವೆಲ್ಲವನ್ನು ಅನುಲಕ್ಷಿಸಿ, ಇವನ ಹೆಸರು 'ನಾಗಚಂದ್ರ' (ಅಭಿನವ ಪಂಪ)ನೆಂದು ಇವನೊಬ್ಬ ಜೈನಕವಿಯಾಗಿದ್ದು ಇವನ ಗುರು ಬಾಲಚಂದ್ರಮುನಿ ಯಾಗಿದ್ದನೆಂದು ೧೯ನೆಯ ತೀರ್ಥಂಕರನಾದ ಮಲ್ಲಿದೇವನು ತನ್ನ 'ಮಲ್ಲಿನಾಥಪುರಾಣದ' ೧೪ನೇ ಭಾಗದಲ್ಲಿ ಹೇಳಿಕೊಂಡಿದ್ದಾನೆ. ಇವನ ಸಮಕಾಲೀನರಾಗಿ ಕಂತಿ (ಕಂತಿಹಂಪನ ಸಮಸ್ಯೆಗಳು) ನಯಸೇನ (ಧರ್ಮಮೃತ)ರನ್ನು ಗುರುತಿಸಿಬಹುದಾಗಿದೆ.

ಇವನು ಪಂಪನ ಬಗ್ಗೆ ಅವಿರತ ಗೌರವ ಹೊಂದಿದ್ದವನಾಗಿದ್ದು ಅವನಂತೆಯೇ ಎರಡು ಕಾವ್ಯಗಳನ್ನು ರಚಿಸಿದ್ದಾನೆ ಅವುಗಳೆಂದರೆ, ಮಲ್ಲಿನಾಥಪುರಾಣ ಮತ್ತು ರಾಮಚಂದ್ರ ಚರಿತ ಪುರಾಣ (ಪಂಪರಾಮಾಯಣ)ಗಳಾಗಿವೆ. ಪಂಪನಿಗೂ ಅಭಿನವ ಪಂಪನಿಗೂ ಕಾವ್ಯ ರಚಿಸುವಲ್ಲಿನ ಒಂದು ಭಿನ್ನತೆ ಎಂದರೆ, ಪೂರ್ವದ ಪಂಪನು ಒಂದು ಅಲೌಕಿಕ (ವಿಕ್ರಮಾರ್ಜುನ ವಿಜಯ) ಇನ್ನೊಂದನ್ನು ಅಲೌಕಿಕ (ಆದಿಪುರಾಣ) ಕೃತಿಗಳೆಂದು ರಚಿಸಿದ್ದರೆ. ಅಭಿನವ ಪಂಪನೆನಿಸಿದ ಇವನು ಎರಡೂ ಕಾವ್ಯಗಳನ್ನು ಧಾರ್ಮಿಕತೆ ನೆಲೆಯಲ್ಲಿ ರಚಿಸಿದವನಾಗಿದ್ದಾರೆ. ಮೊದಲನೆಯದಾಗಿ ಮಲ್ಲಿನಾಥ ಪುರಾಣವು ಹತ್ತೊಂಭತ್ತನೇಯ ತೀರ್ಥಂಕರನಾದ ಮಲ್ಲಿದೇವನ ಚರಿತ್ರೆಯು ಈ ಕಾವ್ಯಕ್ಕೆ ವಿಷಯ ವಸ್ತುವಾಗಿದೆ. ಈ ಕಥೆಯ ವಿಷಯವಸ್ತುವನ್ನವಲೋಕಿಸಿ ಹೇಳುವುದಾದರೆ, ಕವಿಯೇ ಹೇಳಿದ ಹಾಗೆ, ಇದರ

ಕಥೆಯು ಸಣ್ಣದೆಂದು ಅದನ್ನು ವಿಸ್ತರಿಸಿ ಹೇಳಿದ್ದೇನೆಂದು ಕವಿಯ ಮಾತು ಕಿರಿದೀ ಕಥಾಪರಿಸ್ಪಂದಂ ಇದಂ ನಿರ್ಮಿರ್ಚಿ ಕವಿತಾ ರಸವಾಂನೆರೆ ಪೇಟ್ದರಿಲ್ಲ[೧೧] ಎಂದು ನಾಗಚಂದ್ರನು ತನ್ನ ಕಾವ್ಯದ ಅಪೂರ್ವತೆಯನ್ನು ಹೇಳಿಕೊಂಡಿದ್ದಾನೆ.

ತೀರ್ಥಂಕರ ಜನ್ಮಾವಳಿಗಳನ್ನು ಕವಿಯು ಹೆಚ್ಚಾಗಿ ಹೇಳುವ ಗೋಜಿಗೇ ಹೋಗದೆ, 'ವೈಶ್ರವಣನೆಂಬ ಸಿಡಿಲೆರಗಿ ಸುಟ್ಟು ಬೂದಿಯಾದ ಆಲದ ಮರವೊಂದನ್ನು ಕಂಡು ವಿರಕ್ತಿಹೊಂದಿ ತಪಸ್ಥನಾಗಿ, ಅಹಿಂದಕನಾಗಿ ಹುಟ್ಟಿ ಆಜೀವಕುಂಭ ಮಹಾರಾಜನಿಗೆ ಮಗನಾಗಿ ಮಲ್ಲಿನಾಥನಾಗುತ್ತಾನೆ. ತೀರ್ಥಂಕರನ ಚರಿತ್ರೆಯಲ್ಲಿ ಬರುವ ಪಂಚಕಲ್ಯಾಣಗಳ ವರ್ಣನೆ ವಿಸ್ತಾರವಾಗಿ ವಿಸ್ತರಿಸಿ ಮುಂದೆ ಮಲ್ಲಿನಾಥನು ಮದುವೆಯಾಗಲು ಇಷ್ಟವಿಲ್ಲದೆ ವಿರಕ್ತಿಹುಟ್ಟಿ ತಪಸ್ಸಿಗೆ ಹೋಗಿ ಘಾತಕರ್ಮಗಳನ್ನು ಕೆಡಿಸಿ ಕೇವಲ ಜ್ಞಾನಿಯಾಗುತ್ತಾನೆ. ನಂತರ ಲೋಕದ ಮೇಲೆ ಜಿನಾಗಮನ ಉಪದೇಶ ಮಾಡುತ್ತಾ ತಿರುಗಿ ತಪಸ್ಸನ್ನಾಚರಿಸುತ್ತಾ ಆಘಾತಿ ಕರ್ಮೋನ್ಮೋಲನ ದಿಂದ ಮೋಕ್ಷಕ್ಕೆ ಹೋಗುತ್ತಾನೆ. ಇದು ಕಥೆಯ ಸಂಗ್ರಹವಾಗಿದ್ದು ಇದರಲ್ಲಿ ಯಾವುದೇ ಭವಾವಳಿಗಳ ಗೋಜಲುಗಳಿಲ್ಲ, ಹಾಗೆಯೇ ಚಕ್ರವರ್ತಿಯೊಬ್ಬನ ಕಥೆಯ ತಳುಕು ಇಲ್ಲದಂತೆ ಸಾಗಿದ್ದಾಗಿದೆ.

ಪ್ರಸ್ತುತ ಸಂದರ್ಭಪೂರಿತ ವಿಷಯಕ್ಕೆ ಬರುವುದಾದರೇ ನಾಗಚಂದ್ರನಿಗೆ ಹೆಸರು ತಂದಿರುವ ಕಾವ್ಯ ರಾಮಚಂದ್ರಚರಿತ ಪುರಾಣ ಅಥವಾ ಪಂಪರಾಮಾಯಣ ಕೃತಿಯಾಗಿದೆ. ಈ ಕಾವ್ಯದಲ್ಲಿ ಜೈನರಾಮಾಯಣವನ್ನು ನಾಗಚಂದ್ರನು ನಿರೂಪಿಸಿದ್ದು ಇದಕ್ಕೆ ಪೂರಕವಾಗಿ ವಿಮಲಸೂರಿಯ ಪವಾಮಚರಿಯ (ಕ್ರಿ.ಶ. ೭ನೇ ಶತಮಾನದ) ಸ್ಮರಿಸಿ ರವಿಷೇಣನು ಸಂಸ್ಕೃತದಲ್ಲಿ ರಚಿಸಿದ್ದ ಪದ್ಮಪುರಾಣ ಗ್ರಂಥವನ್ನು ಮೂಲವನ್ನಾಗಿಸಿಕೊಂಡು (ಜೈನದೃಷ್ಟಿನ್ನನುಸರಿಸಿ) ಅಭಿನವ ಪಂಪ ಈ ಕೃತಿಯನ್ನು ರಚಿಸಿದ್ದಾನೆ.

ಈ ಕೃತಿಯನ್ನು ಡಿ.ಎಲ್.ಎನ್. ಅವರು ತಿರುವಳ್ಳೂರ್ ಶ್ರೀನಿವಾಸ ರಾಘವಾಚಾರ್ ಅವರ ಒಡಗೂಡಿ ೧೯೫೧ರಲ್ಲಿ ಸಂಪಾದಿಸಿ ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟಣೆಗೆ ಅಣಿಗೊಳಿಸಿದ್ದಾರೆ. ಈ ಕೃತಿಯು ಈವರೆಗೆ ೬ಕ್ಕೂ ಹೆಚ್ಚು ಬಾರಿ ಮರುಮುದ್ರಣ ಹೊಂದಿದ ಕೃತಿಯಾಗಿದ್ದು ಇದರ ಸಂಗ್ರಹ ಕಾರ್ಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ್ದ 'ಪಂಪರಾಮಾಯಣ' ಕೃತಿಯನ್ನು ಪೂರಕವಾಗಿ ಬಳಸಿಕೊಂಡಿದ್ದರು. ಮೂಲ ಕಾವ್ಯದಲ್ಲಿ ಮೂಡಿ ಬಂದಿರುವ ಪಾಠಾಂತರಗಳು ಸಮರ್ಪಕವಾಗಿದ್ದರಿಂದ ಅವುಗಳನ್ನು ಈ ಸಂಪಾದನೆಗೆ ಮೂಲ ಆಕರವನ್ನಾಗಿ ಬಳಸಿಕೊಳ್ಳಲಾಗಿದೆ.

ಗ್ರಂಥ ಸಂಪಾದನಾ ಕಾರ್ಯದಲ್ಲಿ ಮೂಲ ಪಾಠವನ್ನು ಪರಿಷ್ಕರಿಸಿ ಓದುಗರಿಗೆ ತಕ್ಕಂತೆ ಸಂಸ್ಕರಿಸಿ ಸರಿಪಾಠಗಳನ್ನು ನೀಡುವುದೂ ಒಂದು ವಿಧಾನವಾಗಿದೆ. ಈ ವಿಧಾನವನ್ನು ಡಿ.ಎಲ್.ಎನ್ ಅವರು ಪೂರ್ಣಪ್ರಮಾಣದಲ್ಲಿ ಅನುಸರಿಸಿದ್ದನ್ನು ಕಾಣಬಹುದಾಗಿದೆ.

ಸಂಗ್ರಹ ಕಾರ್ಯವೆಂದರೆ, ಮೂಲ ಮುಖ್ಯ ಕಥೆಗೆ ಧಕ್ಕೆಬಾರದಂತೆ ಅಲ್ಲಿನ ಸೊಗಸು ಬಿಟ್ಟು ಹೋಗದಂತೆ, ಕವಿಯ ಪ್ರತಿಭೆಗೆ ಕಿಂಚತ್ತು ಊನ ಉಂಟಾಗದಂತೆ ನಡೆಸುವ ಸಂಗ್ರಹ ಕಾರ್ಯವೇ ಪ್ರಧಾನದ್ದಾಗಿದೆ. ಈ ವಿಷಯಕ್ಕೆ ಪೂರಕವೆಂಬಂತೆ ಡಿ.ಎಲ್.ಎನ್ ಅವರ ಈ ಪಂಪರಾಮಾಯಣ ಸಂಗ್ರಹ ಕೃತಿಯು ಹೊರತಾಗಿಲ್ಲದ್ದಾಗಿದೆ.

ಈ ಸಂಗ್ರಹದ ವಿಚಾರವಾಗಿ ನಿರೂಪಿತಗೊಂಡ ಚರ್ಚೆಗಳನ್ನು ಸಂಪಾದಕರು ಕೃತಿಯ ಆರಂಭದ ವಿಸ್ತೃತ ಪೀಠಿಕಾ ಭಾಗದಲ್ಲಿ ವಿವರಿಸಿದ್ದು ಕಂಡು ಬಂದಿದೆ. ಇದರಲ್ಲಿ ನಾಗಚಂದ್ರನ ಗುರು ಬಾಲಚಂದ್ರಮುನಿಯ ವಿಚಾರ ನಾಗಚಂದ್ರನ ಬಿರುದು, ಕಾಲ, ಇತರೆ ವಿಚಾರಾದಿಗಳಾಗಿ ರಾ.ನರಸಿಂಹಾಚಾರ್ಯರು ಉಲ್ಲೇಖಿಸಿರುವ ವಿವರ, ಎ.ವೆಂಕಟಸುಬ್ಬಯ್ಯ, ಎಂ.ಗೋವಿಂದ ಪೈ ಗಳವರ ವಿಚಾರವಾಗಿ ಮದ್ರಾಸಿನ ಓರಿಯಂಟಲ್ ಲೈಬ್ರರಿಯಲ್ಲಿ ಸಿಕ್ಕ ಶಾಸನ ಪತ್ರ್ಯ ವಿಜಯಪುರದ ಶಿಲಾಲೇಖಗಳಾದಿಯಾಗಿ ಚರ್ಚೆಗೊಂಡು ಎಂ.ಗೋವಿಂದ ಪೈಗಳ ವಾದ ಇಲ್ಲಿ ಚರ್ಚೆಗೆ ಪುಷ್ಠಿಕೊಟ್ಟು ನಾಗಚಂದ್ರ, ಅವನ ಕಾಲ, ಗುರುವಿನ ವಿಚಾರಗಳ ಬಗ್ಗೆ ಸತ್ಯಾಸತ್ಯತೆಗಳು ಬಿಂಬಿತವಾಗಿದ್ದು. ನಾಗಚಂದ್ರನ ಕಾಲ ಸುಮಾರು ಕ್ರಿ.ಶ. ೧೧೪೦ ಎಂಬ ತೀರ್ಮಾನವು ಒಪ್ಪತಕ್ಕದ್ದಾಗಿದೆ. ಜೈನರಾಮಾಯಣ ಪರಂಪರೆಗಳನ್ನು ಅದರಲ್ಲೂ ಪಉಮಚರಿಯದ ಪರಂಪರೆಯನ್ನು ಪ್ರಸ್ತಾಪಿಸಿದ್ದು ಇದು ವಿಮಲಸೂರಿ ಕವಿಯು ಚಿತ್ರಿಸಿರುವ ರಾವಣನ ಬಗ್ಗೆ ಬರೆದಿರುವ ಭಾಗವನ್ನೇ ಪ್ರತ್ಯೇಕಿಸಿ ಒಂದು ಸೋಗಸಾದ ಸಾಹಿತ್ಯವಾಗಿ, ಬಿಂಬಿತವಾದ ರಸಪೂರ್ಣ ಕೃತಿಯಾಗಿ ಮೂಡಿ ಬಂದಿದೆ. ಕವಿಕೊಟ್ಟಿರುವ ರುದ್ರಪಾತ್ರವನ್ನು ನಾಗಚಂದ್ರ ಎಷ್ಟರಮಟ್ಟಿಗೆ ಇಲ್ಲಿ ಬಳಸಿಕೊಂಡಿದ್ದಾನೆಂಬ ಔಚಿತ್ಯವನ್ನು ಕಾಣಬಹುದು. ನಾಗಚಂದ್ರನಲ್ಲಿ ಮೂಲದಲ್ಲಿರುವಷ್ಟು ಸೌಂದರ್ಯ ಗಾಂಭೀರ್ಯಗಳಿಲ್ಲ ಎಂಬ ಮಾತು ಸಂಪಾದಕರ ಶ್ರೇಷ್ಠ ತೌಲನಿಕ ವಿಮರ್ಶನಾ ಶಕ್ತಿಗೆ ಸಾಕ್ಷೀಕರಿಸಿದ ಮಾತಾಗಿದೆ. ಈ ಸಂಗ್ರಹ ಕೃತಿಯ ಪೀಠಿಕಾ ಭಾಗವು ಬರಿಯ ಸಂಶೋಧನಾತ್ಮಕವಾದ ಸಾಮಗ್ರಿ ಚರ್ಚೆಗಳಿಂದ ಕೂಡಿರದೆ ಸಾಹಿತ್ಯ ವಿಮರ್ಶೆಯನ್ನು ಮೈದಾಳಿಕೊಂಡದ್ದಾಗಿದೆ.

ಈ ಕೃತಿಯು ಮೂಲ ವಾಲ್ಮೀಕಿ ರಾಮಾಯಣವನ್ನು ಅನುಸರಿಸದೇ ಜೈನ ಪರಂಪರೆಯನ್ನು ಅನುಸರಿಸಿ ರಾಮಕಥೆಯನ್ನು ನಿರೂಪಿಸುವ ಕಾವ್ಯವಾಗಿ ಉದಾತ್ತ ರಾಘವನ ಕಥೆಯನ್ನೊಳಗೊಂಡುದ್ದಾಗಿದೆ. ಈ ಕಾವ್ಯವು ಸಂಪಾದಕರಿಗೆ ದೊರೆತಂತೆ ೯ ಅಧ್ಯಾಯಗಳಲ್ಲಿ ನಿರೂಪಿತಗೊಂಡದ್ದು ಮೊದಲನೇಯ ಅಧ್ಯಾಯದಲ್ಲಿ ರಾಮಲಕ್ಷ್ಮರ ಜನನ, ಎರಡನೆಯ ಅಧ್ಯಾಯದಲ್ಲಿ ಸೀತಾಸ್ವಯಂವರಂ, ಮೂರನೆಯ ಅಧ್ಯಾಯದಲ್ಲಿ ವನ ಪ್ರಯಾಣಂ, ನಾಲ್ಕನೆಯ ಅಧ್ಯಾಯದಲ್ಲಿ ಸೀತಾಪಹರಣಂ, ಐದನೇಯ ಅಧ್ಯಾಯದಲ್ಲಿ ರಾವಣ ದಿಗ್ವಿಜಯವರ್ಣನೆ ಆರನೆಯ ಅಧ್ಯಾಯದಲ್ಲಿ ಲಂಕಾದಹನಂ, ಏಳನೆಯ ಅಧ್ಯಾಯವಾಗಿ ರಾಮಲಕ್ಷ್ಮಣರ ಪುಣ್ಯಪ್ರಭಾವಂ, ಎಂಟನೆಯ ಅಧ್ಯಾಯವಾಗಿ ರಘುವೀರ ವಿಜಯಂ, ಒಂಬತ್ತನೆಯ ಅಧ್ಯಾಯವಾಗಿ ಸೀತಾಪರಿತ್ಯಾಗಂ ರಾಮಪರಿನಿರ್ವಾಣಂಗಳಾದಿಯಾಗಿ

ಮೂಡಿಬಂದು ಸಂಪಾದಕರು ಕೊನೆಗೆ ಅಧ್ಯಾಯಕ್ಕನುಗುಣವಾದ ಟಿಪ್ಪಣಿ, ಶಬ್ದಕೋಶ ಅಲ್ಲದೇ ಅಭ್ಯಾಸ ಪೂರಕ ಅಡಿಟಿಪ್ಪಣಿಗಳು ಸಂಪಾದಿತ ಕೃತಿಯನ್ನು ಒಂದು ರೂಪವಾಗಿಸಿವೆ.

ಈ ಹಿಂದೆ ಹೇಳಿದಂತೆ ಪದ್ಮ ಪುರಾಣದಿಂದ ನಾಗಚಂದ್ರನು ಪಂಪರಾಮಾಯಣವನ್ನು ರಚಿಸಿದ್ದು ಮೂಲ ಗ್ರಂಥದಲ್ಲಿ ಸಮರ್ಪಕವಾಗಿ ಹೇಳದಿರುವ ಸಂದರ್ಭಗಳನ್ನು ಇಲ್ಲಿ ವಿಸ್ತಾರವಾಗಿ ಹೇಳಿಯೂ ಹೊಸ ಸಂದರ್ಭಗಳನ್ನು ಸೃಷ್ಟಿಸಿಕೊಂಡು ತನ್ನ ರಸಿಕತೆಯನ್ನು, ಪ್ರತಿಭೆಯನ್ನು ಮೆರೆದಿದ್ದಾನೆ. ಈ ಕೃತಿಯಲ್ಲಿನ ವೈಶಿಷ್ಟ್ಯಗೆ, ಜೀವತುಂಬಿದ್ದು ರಾವಣನ ಪಾತ್ರ ರಚನೆ ವಾಲ್ಮೀಕಿಯ ಕಾವ್ಯದಲ್ಲಿ ರಾಕ್ಷಸನಾಗಿ ನಾನಾರೂಪಾದಿಗಳಾಗಿ ಹೇಯ ಕೃತ್ಯವೆಸಗಿದ ರಾವಣನನ್ನು ಜೈನಕವಿಯಾದ ನಾಗಚಂದ್ರ, ರಾವಣನನ್ನು ಜೈನನನ್ನಾಗಿ ಮುಂದುವರೆಸಿಕೊಂಡು ಕಾವ್ಯದ ವಿಸ್ತಾರತೆಯನ್ನು ಹೆಚ್ಚಿಸಿದವನಾಗಿದ್ದಾನೆ. ಈ ಪರಿವರ್ತಕ ಪಾತ್ರದಿಂದ ಕಾವ್ಯದಲ್ಲಿ ಸತ್ಯ, ಅಹಿಂಸೆ, ಶೌಚ, ಮುಂತಾದ ಸದ್ಗುಣಗಳು ತುಂಬಿಕೊಂಡಿವೆ. ರಾವಣ ಕಂಟಕನಲ್ಲ, ಲೋಕದ ಹಿತಕಾಯುವನಾಗಿ ಪ್ರತಿ ವಾಸುದೇವನಾಗಿ ಬಿಂಬಿತನಾಗಿದ್ದಾನೆ. ವಾಸುದೇವನ ಕೈಯಲ್ಲಿ ಪ್ರತಿ ವಾಸುದೇವನು ಅವನತಿಯಾಗಬೇಕು ಇದು ವಿಧಿನಿಯಮವನ್ನಾಗಿಸಿ, ರಾವಣನು ಸೀತಾಪಹರಣದಂತಹ ಒಂದು ತಪ್ಪನ್ನು ಮಾಡುವಂತಾಗಿ ದುರಂತತೆಗೆ ಈಡಾಗುವಂತಾಗುತ್ತದೆ. ಈ ಒಂದು ಸೂತ್ರವನ್ನು ಹಿಡಿದು ನಾಗಚಂದ್ರ ರಾವಣನ ಪಾತ್ರವನ್ನು ಬೆಳಗಿದ್ದಾನೆ ಅಲ್ಲದೆ ದುರಂತ ನಾಯಕನಾಗಿ ಕಾವ್ಯಕ್ಕೆ ರಸಾನುದಾನವನ್ನು ಮಾಡಿದ್ದಾನೆ.[೧೨] ಪಾತ್ರಸೃಷ್ಠಿಗೆ ತಕ್ಕಂತೆ ನಾಗಚಂದ್ರ ನಾಯಕಪಾತ್ರಧಾರಿಯಾದ ರಾವಣನ ಕಷ್ಟದಲ್ಲಿ ಭಾಗಿಯಾಗಿ ಅನುಕಂಪದಿಂದ ಮರುಗಿದ್ದ ಚಿತ್ರಣ ವಿಶಿಷ್ಟವಾದುದ್ದಾಗಿದೆ. ಕೃತಿಯಲ್ಲಿನ ಪಾತ್ರಗಳ ಆತ್ಮೀಯತೆಯ ವರ್ಣನೆ, ಇತರೆ ಪಾತ್ರ ರಚನೆ, ಕಥೆಯ ಕಷ್ಟದ ಕವಿಯ ಅಭಿರುಚಿ ಎಲ್ಲವೂ ಉತ್ಕೃಷ್ಟವಾಗಿವೆ.

ಕೃತಿಯುದ್ದಕ್ಕೂ ನಾಗಚಂದ್ರನ ಕಾವ್ಯಶೈಲಿ ತನ್ನದೇ ರೂಪು ಪಡೆದು ನಿರೂಪಣೆಗೊಂಡಿದ್ದು ಇವನ ಮೃದುಬಂಧು ಕವಿತಾ ಕಳೆಯನ್ನು ಹಲವು ಕವಿಗಳು ಅನುಸರಿಸಿ ಮೆಚ್ಚಿದ್ದಾರೆ. ಜೈನ ರಾಮಾಯಣದ ಸಂಪ್ರದಾಯವೊಂದನ್ನು ಇವನು ಕನ್ನಡಕ್ಕೆ ಅತ್ಯುತ್ತಮವಾಗಿ ನೀಡಿದ ಕವಿಯಾಗಿದ್ದಾನೆ. ನಂತರ ಬಂದ ಕವಿವರ್ಮರಾದ ಕುಮುದೇಂದು, ದೇವಪ, ಚಂದ್ರಸಾಗರವರ್ಣಿ, ದೇವಚಂದ್ರ ಇತ್ಯಾದಿ ಕವಿಗಳು ಇವನ ರಾಮಾಯಣದ ಕಥೆಯನ್ನೇ ಅನುಸರಿಸಿ ಷಟ್ಪದಿಯಲ್ಲೂ ಸಾಂಗತ್ಯದಲ್ಲೂ ಕೃತಿಗಳನ್ನು[೧೩] ರಚಿಸಿದ್ದಾರೆ.

ಚಂಪೂಕಾವ್ಯಕ್ಕೆ ಪಂಪನು ಹೇಗೆ ಮಾದರಿಯಾದನೋ ಹಾಗೆಯೇ ಅಭಿನವ ಪಂಪನೂ ಜೈನರಾಮಾಯಣ ಸಂಪ್ರದಾಯಕ್ಕೆ ಮೊದಲಿಗನಾಗಿದ್ದಾನೆ. ಇಷ್ಟವಿಲ್ಲದೆ ಅವನ ನಂತರ ಬಂದ ರುದ್ರಭಟ್ಟ, ಜನ್ನಗಳಾದಿಗಳು ಇವನ ಪದ ಪ್ರಯೋಗವನ್ನು ಅಲ್ಲಲ್ಲಿ ಬಳಿಸಿದ್ದು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ, ಕೃತಿಯನ್ನು ಮೂಲದ ಸ್ವಾರಸ್ಯ ಕೆಡದಂತೆ, ಅರ್ಥಕ್ಕೆ ಧಕ್ಕೆ ಬಾರದ ಹಾಗೆ ರಸವತ್ತಾದ ವಿಚಾರಗಳ ಚರ್ಚೆಯ ಮೂಲಕ ಕೃತಿಯ ಮರುಸೃಷ್ಟಿಗೆ ಸಂಪಾದಕರ ಗ್ರಹಣಶಕ್ತಿ ಸಾಕ್ಷೀಕರಿಸಿದೆ. ಡಿ.ಎಲ್.ಎನ್. ಅವರು ತಮ್ಮ ಸಂಪಾದನಾ ಕಾರ್ಯದಲ್ಲಿ ಉಲ್ಲೇಖಿಸಿ ಪ್ರಸ್ತಾಪಿಸಿರುವ ಪೀಠಿಕಾ ಭಾಗದ ಸಂಗತಿಗಳು ಇಂದಿಗೂ ವಿದ್ವಾಂಸರ ಮನ್ನಣೆಯಲ್ಲಿ ಒಪ್ಪಿತವಾಗಿ ಸಾಗಿವೆ. ಅಲ್ಲದೆ, ನಾಗಚಂದ್ರನ ಕೃತಿಗೆ ಮೂಲಗಳಾದ ವಿಮಲಸೂರಿಯ ಕೃತಿ ರವಿಷೇಣನ ಕೃತಿಗೆ ಮೂಲಗಳಾದ ಕೃತಿಗಳನ್ನು ಪಂಪರಾಮಾಯಣ ಕೃತಿಗೆ ತೌಲನಿಕವಾಗಿ ಅಭ್ಯಾಸಿಸುತ್ತಾ ಅವನು ಪ್ರಭಾವಗೊಂಡ ವಿಷಯವಸ್ತು, ಈ ವಸ್ತುವಿಗೆ ಪೂರಕವಾಗಿ ಕಂಡುಬಂದ ಕೃತಿಯಲ್ಲಿನ ಬದಲಾವಣೆ, ಕವಿಯ ಸ್ವತಂತ್ರ್ಯತೆ ಸೋಪಜ್ಞತೆಗಳಾದಿಯಾಗಿ ಮುಂತಾದ ಅಂಶಗಳನ್ನು ಇಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.[೧೪] ಪರಿಶಿಷ್ಠವಾಗಿ ಕೃತಿಯ ಅಂಚಿನಲ್ಲಿ 'ಪಉಮಚರಿಯ' ರಾವಣನ ಪಾತ್ರಕ್ಕೆ ಸಂಬಂಧಿಸಿದ ಕೆಲವು ಭಾಗಗಳನ್ನು ಗಮನಿಸಬಹುದಾಗಿದ್ದಲ್ಲದೆ ಗ್ರಂಥದ ಕೊನೆಯಲ್ಲಿ ಟಿಪ್ಪಣಿ ರೂಪದ ಜೈನಧರ್ಮದ ಪಾರಿಭಾಷಿಕ ಪದಕೋಶ ಅಭ್ಯಾಸ ಪೂರಕವಾಗಿ ಉಪಯುಕ್ತದ್ದಾಗಿದೆ. ಈ ಕೃತಿಯಲ್ಲಿಯ ಅನುಬಂಧ ಅಥವಾ ಉಪೋದ್ಘಾತ ಬರಹಗಳೇ ಕೃತಿಯ ಜೀವಾಳ ಎನಿಸಿವೆ. ವೈಜ್ಞಾನಿಕವಾದ ಗ್ರಂಥ ಸಂಪಾದನೆಯ ತತ್ವಗಳನ್ನು ಅಂದಿನ ಕಾಲಘಟ್ಟಕ್ಕನುಗುಣವಾಗಿ ಬಳಸಿಕೊಂಡು ಸಂಪಾದಿಸಿದ್ದು ಇವರ ವಿದ್ವತ್ ರಸಜ್ಞತೆಯನ್ನು ಸಾಕ್ಷೀಕರಿಸಿದ್ದಾಗಿದೆ.

ಗ್ರಂಥಸಂಪಾದನೆಯ ಚರಿತ್ರೆಯು ಅನೇಕ ಗ್ರಂಥಗಳ ಸಂಪಾದನೆಯ ಮೂಲಕ ಹಾಗೂ ಚರ್ಚೆಗಳ ಮೂಲಕ ನಡೆದಿದೆ. ಕೆಲವು ಗ್ರಂಥ ಸಂಪಾದಕರ ಗ್ರಂಥಸಂಪಾದನೆಯ ನೆಲೆ ಸಾಮರ್ಥ್ಯ ಪಠ್ಯ ನಿರ್ಮಾಣದ ಜೊತೆಗೆ ಕಾವ್ಯಾಭ್ಯಾಸಕ್ಕೆ ಒದಗಿಬರುವ ಅಂತರ್ ಸಂಬಂಧಿ ನೆಲೆಗಳ ಸೂಕ್ಷ್ಮಾಂಶಗಳನ್ನು ಒಳಗೊಂಡಿದೆ. ಕೆಲವು ಸಂಗ್ರಹ ಆವೃತ್ತಿಗಳಲ್ಲಿ ಕೊಡಮಾಡಿರುವ ಕನ್ನಡ ಕಾವ್ಯದ ಸ್ವರೂಪ ಮತ್ತು ಅದರ ರಾಚನಿಕ ವ್ಯವಸ್ಥೆಯ ಅನೇಕ ನೆಲೆಗಳನ್ನು ಸಂಯೋಜನೆಗೆ ಗುರಿಪಡಿಸಿರುವುದಾಗಿದೆ. ಕಾವ್ಯದ ಆಶಯ, ವ್ಯಾಕರಣ ಸಮಸ್ಯೆ, ಕ್ಲಿಷ್ಟಪಾಠದ ಅರ್ಥೈಸುವಿಕೆ, ಶೈಲಿಯ ವಿಭಿನ್ನ ಸ್ತರಗಳು ಹಾಗೂ ಕನ್ನಡ ಸಂಸ್ಕೃತಿಯ ಜೀವಂತ ವಿವರಗಳು ಇದರಡಿಯಲ್ಲಿ ಮಹತ್ವವನ್ನು ಪಡೆದುಕೊಂಡಿವೆ. ಇವೆಲ್ಲವೂ ನಾಗಚಂದ್ರನ ಈ ಸಂಪಾದಿತ ಕೃತಿಗೆ ಹೊರತಾಗಿಲ್ಲದ್ದಾಗಿವೆ.

ಒಟ್ಟಾರೆಯಾಗಿ, ವೈವಿಧ್ಯಪೂರ್ಣವೂ ಮಾಹಿತಿಭರಿತವಾದ ಸಾಹಿತ್ಯಿಕ ರಸಾದ್ರಾವದಿಂದ ಕೂಡಿದ ಈ ಉಪೋದ್ಘಾತ ಬರವಣಿಗೆಯ ಉಳ್ಳ, ಸಂಪಾದಿತ ಕೃತಿಯಾಗಿ ವೈಜ್ಞಾನಿಕವಾದ ಗ್ರಂಥ ಸಂಪಾದನೆಯ ತತ್ವಗಳನ್ನು ಬಳಸಿಕೊಂಡು ನಿತ್ಯ ನೂತನತೆಯ ಅಧ್ಯಯನಕ್ಕೆ ಒಳಗೊಳ್ಳುವಿಕೆಯ ಜೊತೆಗೆ ಕನ್ನಡ ಸಾಹಿತ್ಯದ ಜೀವಂತಿಕೆಯ ಸಂಸ್ಕೃತಿಯನ್ನು ಎತ್ತಿ ತೋರಿಸುವಲ್ಲಿ ಮಹತ್ವ ಪಡೆದ ಕೃತಿ ಎನಿಸಿದೆ.

**೩.೩. ಸಿದ್ಧರಾಮ ಚಾರಿತ್ರ್ಯ**

ಕನ್ನಡ ಸಾಹಿತ್ಯದಲ್ಲಿ ವಿದ್ವತ್‌ಪೂರಿತ ಚರ್ಚೆಗಳನ್ನು ಹೊತ್ತು ತಂದ ಕೃತಿಗಳಲ್ಲೊಂದಾದುದು ಸಿದ್ಧರಾಮ ಚಾರಿತ್ರ ರಾಘವಾಂಕನಿಂದ ರಚಿತವಾದ ಈ ಕೃತಿಯನ್ನು ಟಿ.ಎಸ್.ವೆಂಕಣ್ಣಯ್ಯ ನವರ ಜೊತೆಗೂಡಿ ಡಿ.ಎಲ್.ನರಸಿಂಹಾಚಾರ್ಯರು ಕರ್ಣಾಟಕ ಸಂಘ ಶಿವಮೊಗ್ಗದಿಂದ ೧೯೪೧ರಲ್ಲಿ ಮೊದಲನೆ ಬಾರಿಗೆ ಪ್ರಕಟಣೆಗೆ ಅಣಿಗೊಳಿಸಿದ್ದರು.

ಈ ಕೃತಿಯು ಶಾಸ್ತ್ರೀಯ ಸಂಪಾದನೆಯನ್ನು ಮೈಗೂಡಿಸಿಕೊಂಡದ್ದಾಗಿದ್ದು ಅಭ್ಯಾಸ ವಲಯದ ವಿಸ್ತೃತತೆ, ಅವಶ್ಯಕತೆಗಾಗಿ ಎರಡನೆಯ ಬಾರಿಗೆ ಅಂದರೆ ೩೪ ವರ್ಷಗಳ ತರುವಾಯ ೧೯೭೫ರಲ್ಲಿ ತ.ವೆಂ.ಸ್ಮಾರಕ ಗ್ರಂಥಮಾಲೆ, ಮೈಸೂರು ಅವರಿಂದ ಮರು ಮುದ್ರಣಗೊಂಡು ಓದುಗರ ಮನೆ, ಮನ ತಲುಪಿದ ಕೃತಿ ಇದಾಗಿದೆ.

ಮೊದಲನೆಯ ಪ್ರಕಟಣೆಗೆ ಪೂರ್ವವಾಗಿ ಟಿ.ಎಸ್.ವೆಂಕಣ್ಣಯ್ಯ ಅವರು ಡಿ.ಎ.ಎನ್ ಅವರ ಜೊತೆಗೂಡಿ ೧೯೩೭ರಲ್ಲೇ ಈ ಕೃತಿಯ ಸಂಪಾದನೆ, ಅಧ್ಯಯನ ವಿಷಯಕ್ಕಾಗಿ ಪೂರ್ವ ತಯಾರಿ ಕೈಗೊಂಡಿದ್ದರು. ಅದರೇ ವೆಂಕಣ್ಣಯ್ಯ ನವರ (೨೪.೨.೧೯೩೯) ಅಕಾಲಿಕ ಮರಣದಿಂದ ತೀ.ನಂ.ಶ್ರೀಯವರ ನೆರವು ಪಡೆದ ಡಿ.ಎಲ್.ಎನ್ ಸಿದ್ಧರಾಮ ಪುರಾಣವನ್ನು ಮುದ್ರಿಸಬೇಕೆಂಬ ವೆಂಕಣ್ಣಯ್ಯನವರ ಸಂಕಲ್ಪವನ್ನು ಮುಂದುವರೆಸಿ ಪೂರ್ಣಗೊಳಿಸಿದ್ದಾರೆ.

ಈ ಕೃತಿಯು ಬೆಳಕು ಕಾಣಲು ಮೂಲ ಉದ್ದೇಶವಾಗಿ, ಅಂದಿನ ಪಠ್ಯಪುಸ್ತಕವಾಗಿ ವೀರಶೈವ ಪುರಾಣವನ್ನು ಬೋಧಿಸುವ ವಿಚಾರ ಪ್ರಮುಖದ್ದಾಗಿತ್ತು. ಈ ವಿಚಾರವಾಗಿ ಕೃತಿ ರಚನೆಗೆ ಮುಂದಾದ ಟಿ.ಎಸ್.ವೆಂಕಣ್ಣಯ್ಯನವರು ತಮ್ಮ ತಮ್ಮನಾದ ಟಿ.ಎಸ್.ಶಾಮರಾಯರಿಂದ ಪಾಠಾಂತರಗಳನ್ನು ಗುರುತು ಮಾಡಲು ಅನುಕೂಲವಾಗುವಂತೆ, ಅಚ್ಚಾದ್ದ ಸಿದ್ಧರಾಮ ಪುರಾಣವನ್ನು ನಕಲು ಮಾಡಿ ಇದಕ್ಕೆ 'ಘ' ಪ್ರತಿ ಎಂದು ಹೆಸರಿಸಿದ್ದರು. ಮುಂದೆ ಶ್ರೀ ಹಾಲಬಾವಿ ಧಾರವಾಡ ಇವರ ಬಳಿ ಇದ್ದ ಒಂದು ಪ್ರತಿಯನ್ನು ತರಿಸಿಕೊಂಡು ಇದಕ್ಕೆ 'ಕ' ಪ್ರತಿ ಎಂದು ಗುರುತು ಮಾಡಿ ಅಭ್ಯಾಸಿಸಿ ಪಾಠಾಂತರಗಳನ್ನು ಗುರುತಿಸಿ ೧೯೩೭ರಲ್ಲಿ ಈ ಕಾರ್ಯಪೂರ್ಣಗೊಳಿಸಿದರು. ನಂತರ ಎಚ್.ಶೇಷ್ಯಾಂಗಾರ್ ಅವರು ೧೯೩೭ ನವ್ಹೆಂಬರ್ ವೇಳೆಗೆ ಮದ್ರಾಸ್‌ನಲ್ಲಿದ್ದ ಪ್ರತಿಯೊಂದನ್ನು ಅಭ್ಯಾಸಕ್ಕೆ ಯೋಗ್ಯವಾಗಿ ನಕಲಿ ಮಾಡಿ ಕಳುಹಿಸಿದ್ದರು. ಇದನ್ನು 'ಖ' ಪ್ರತಿ ಎಂದು ಗುರುತಿಸಿ ಸಂಪಾದಕರು ಅಭ್ಯಾಸಕ್ಕೆ ಬಳಸಿಕೊಂಡಿದ್ದಾರೆ. ಮುಂದೆ ಉತ್ತರ ಕರ್ನಾಟಕ ಭಾಗದಲ್ಲಿ ಮೈಸೂರು ಓರಿಯೆಂಟಲ್ ಲೈಬ್ರೆರಿಯ ಕ್ಯೂರೇಟರ್‌ಗೆ ದೊರೆತಿದ್ದ ಸಿದ್ಧರಾಮ ಪುರಾಣದ ಪ್ರತಿಯನ್ನು ವೆಂಕಣ್ಣಯ್ಯ ನವರು ತರಿಸಿ ಡಿ.ಎಲ್.ಎನ್. ಅವರೊಂದಿಗೆ ಪಾಠಾಂತರಗಳನ್ನು ಗುರುತು ಹಾಕಿಸಿದ್ದರು. ಇದಕ್ಕೆ 'ಗ' ಪ್ರತಿ ಎಂದು ಗುರುತಿಸಿ ಅಭ್ಯಾಸಕ್ಕೆ ಅನುವು ಮಾಡಿಕೊಂಡಿದ್ದರು. ನಂತರದಲ್ಲಿ

ಡಿ.ಎಲ್.ಎನ್. ಪಾಠಾಂತರಗಳನ್ನೆಲ್ಲ ಗುರುತಿಸಿದ ಮೇಲೆ ಪಾಠನಿರ್ಣಯವನ್ನು ತೀ.ನಂ.ಶ್ರೀ ಅವರೊಂದಿಗೆ ಜೊತೆಗೂಡಿ ನಿರ್ವಹಿಸಿದ್ದರು. ಮುಂದೆ ೧೯೩೯ರಲ್ಲಿ ಟಿ.ಎಸ್.ವೆಂಕಣ್ಣಯ್ಯನವರು ಕಾಲವಾದ ಮೇಲೆ ಈ ಕಾರ್ಯದ ಸರ್ವಾಧಿಪತ್ಯವನ್ನು ಡಿ.ಎಲ್.ಎನ್. ಅವರು ವಹಿಸಿಕೊಂಡು ೧೯೪೧ರಲ್ಲಿ ಈ ಕೃತಿಯನ್ನು ಓದುಗರ ಮನ ತಲುಪಿಸಿದ್ದಾರೆ.

ಡಿ.ಎಲ್.ಎನ್. ಅವರು ಈ ಕೃತಿಗೆ ಉಪಯುಕ್ತ ಪ್ರಸ್ತಾವನೆಯನ್ನು ಬರೆದಿದ್ದು ಒಟ್ಟಾರೆ ನಾಲ್ಕು ಪ್ರತಿಗಳನ್ನು ಬಳಸಿಕೊಂಡು ರೂಪಿತಗೊಂಡ ಈ ಕೃತಿಯು ಎಲ್ಲಾ ಪ್ರತಿಗಳ ಗುಣಾಂಶಗಳನ್ನೊಳಗೊಂಡ ಮಿಶ್ರ ಪಾಠವಾಗಿದೆ.

ಕವಿಯ ವೃತ್ತಿವಿಚಾರ, ಸಿದ್ಧರಾಮನ ಕಾಲ ವಿಚಾರ, ಹೀಗೆ ಅನೇಕ ವಿಷಯಗಳನ್ನು ತಲಸ್ಪರ್ಶಿಯಾಗಿ ವಿವೇಚಿಸಿದ್ದು ಕೃತಿಯ ಅಧ್ಯಯನದ ಪ್ರಸ್ತಾವನೆ ಭಾಗದಲ್ಲಿ ಎಂದು ಕಂಡಿದೆ.

'ಸಿದ್ಧರಾಮ ಚಾರಿತ್ರ'ದ ಸಂಪಾದನೆಯ ಮೂಲಕ ಸಾಹಿತ್ಯ ಚರಿತ್ರೆಯಲ್ಲಿ ಅಡಕವಾಗಿರವ ರಾಘವಾಂಕ ಕವಿಯನ್ನು ಕನ್ನಡಿಗರಿಗೆ ಪರಿಚಯಿಸಲು ಡಿ.ಎಲ್.ಎನ್. ಅವರು ವಿಸ್ತಾರವಾದ ಪ್ರಸ್ತಾವನೆಯನ್ನು ರಚಿಸಿ ಇದರಾಳದಲ್ಲಿ ಕವಿಯ ಇತಿವೃತ್ತಿ ವಿಚಾರ, ಸಿದ್ಧರಾಮನ ಐತಿಹಾಸಿಕತೆ ಮತ್ತು ಮೂರ್ತಿ ಸ್ವರೂಪದ ಕಥಾಸಾರ, ಕಥೆಯ ಮೂಲವಿಚಾರಗಳು, ವಿಮರ್ಶೆಯ ವಿಚಾರಗಳು ಗ್ರಂಥಪಾಠದ ವಿಚಾರ ಸಿದ್ಧರಾಮನ ಲಿಂಗವಂತಿಕೆ ಸಮಸ್ಯೆ ಇವೆಲ್ಲವನ್ನು ವಿವರವಾಗಿ ಓದುಗರಿಗೆ ಅರ್ಥವಾಗುವಂತೆ ನಿರೂಪಿಸಿದ್ದಲ್ಲದೆ, ಕೃತಿಯ ಕೊನೆಯ ಭಾಗವಾಗಿ ೧೯ ಪುಟಗಳ ಆಕಾರಾದಿ ಶಬ್ದಕೋಶವನ್ನು ೧೫ ಪುಟಗಳ ಟಿಪ್ಪಣಿ ಭಾಗವನ್ನು ಅಭ್ಯಾಸಕ್ಕೆ ಪೂರಕವಾಗಿ ನಿರೂಪಿಸಿದ್ದಾರೆ.

ಡಿ.ಎಲ್.ಎನ್ ಅವರು ಈ ಕೃತಿಗೆ ಬರೆದ ಪ್ರಸ್ತಾವನೆಯಲ್ಲಿ ಹರಿಹರ-ರಾಘವಾಂಕರ ಕಾಲನಿರ್ಣಯವನ್ನು ಸಮರ್ಪಕವಾಗಿ ನೀಡಿದ್ದಾರೆ. ಅವರ ಅಭಿಪ್ರಾಯದಂತೆ ಹರಿಹರನು ಒಂದನೇ ನರಸಿಂಹನ ಆಳ್ವಿಕೆಯಲ್ಲಿಯೋ ಅವನ ಮಗನಾದ ಎರಡನೆಯ ವೀರಬಲ್ಲಾಳನಲ್ಲಿಯೂ (೧೧೭೭-೧೨೭೦) ಕೆಲವು ವರ್ಷ ಕರಣಿಕನಾಗಿದ್ದು ಮುಂದೆ ಹಂಪೆಗೆ ಬಂದು ನೆಲೆಸಿದ ನಂತರ ಪಂಪಾ ಶತಕ, ಗಿರಿಜಾ ಕಲ್ಯಾಣಗಳನ್ನು ರಚಿಸಿದ ಮೇಲೆ ರಗಳೆಗಳನ್ನು ಬರೆದು ೭ನೇ ನರಸಿಂಹನ ಆಳ್ವಿಕೆ ಪ್ರಾರಂಭದಲ್ಲಿ ಅಂದರೇ ೧೨೨೫ರ ವೇಳೆಗೆ ಹಂಪೆಯಲ್ಲಿ ಐಕ್ಯನಾಗಿದ್ದನೆಂದು ಊಹಿಸಿದ್ದಾರೆ. ಇದರ ಜೊತೆಗೆ ಕೆರೆಯ ಪದ್ಮರಸನೂ ಮೇಲೆ ಹೇಳಿದ ರಾಜರ ಆಳ್ವಿಕೆಗಳಲ್ಲಿ ಬಾಳಿದ್ದು ಹರಿಹರು ಐಕ್ಯನಾದ ಸುಮಾರಿನಲ್ಲಿ ಗುರುತಿಸಿರಬೇಕು. ಇವರಿಬ್ಬರಿಗಿಂತಲೂ ೧೫-೨೦ ವರ್ಷ ಕಿರಿಯನಾಗಿದ್ದವನು ರಾಘವಾಂಕ ಪದ್ಮರಸರು ೧೨೫೬ ರವರೆಗೂ ಆಳಿದ ವೀರಸೋಮೇಶ್ವರನ ಆಳ್ವಿಕೆಯಲ್ಲಿ ಕೆಲವು ವರ್ಷಗಳವರೆಗೂ ಇದ್ದು ಸು. ೧೨೪೦ ರಲ್ಲಿ ಗತಿಸಿರಬೇಕು. ಈ ವಿಷಯಗಳನ್ನು

ಖಚಿತವಾಗಿ ಹೇಳಲು ತಕ್ಕ ಆಧಾರಗಳು ಸಾಲವಾದರೂ ವಸ್ತುಸ್ಥಿತಿಗೆ ಇದು ಅವಿರೋಧವಾಗಿರುವಂತೆ ಕಾಣುತ್ತದೆ.[೧೫] ಸಿದ್ಧರಾಮ ಚಾರಿತ್ರ್ಯದ ಕಥಾಸಾರ ವಿಚಾರವಾಗಿ ಸವಿಸ್ತಾರ ಚರ್ಚೆ ನಡೆಸಿದ ಡಿ.ಎಲ್.ಎನ್. ಮೂಲಕಥೆಯು ರಾಘವಾಂಕನಿಗೆ ಹರಿಹರ ಬರೆದಿರಬಹುದೆಂದೂ ಸಿದ್ಧರಾಮನ ಬದುಕಿನ ಕೆಲವು ಜನರ ಬಾಯಲ್ಲಿದ್ದುದ್ದನ್ನು ರಾಘವಾಂಕ ಕೇಳಿ ಅವನ್ನು ತನ್ನ ಕೃತಿಯಲ್ಲಿ ಬಳಸಿಕೊಂಡಿರಬಹುದೆಂದು ಅವರು ಊಹಿಸಿದ್ದಾರೆ. ರಾಘವಾಂಕನ ನಂತರ ಬಂದ ವೀರಶೈವ ಕವಿಗಳು ಸಿದ್ಧರಾಮನಿಗೆ ಸಂಬಂಧಿಸಿದ ಕಥೆಗಳನ್ನು ತಮ್ಮ ಕೃತಿಗಳಲ್ಲಿ ಹೇಳಿರುವುದನ್ನು ಕೂಡ ಡಿ.ಎಲ್.ಎನ್. ಪ್ರಸ್ತಾಪಿಸಿದ್ದಾರೆ. ಮೂಲಕಥೆ ಕಾಲದಿಂದ ಕಾಲಕ್ಕೆ ಹೇಗೆ ಬೆಳೆದು ಬಂದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಸಿದ್ಧರಾಮನ ವ್ಯಕ್ತಿತ್ವ, ಮೂರ್ತಿಸ್ವರೂಪ ಎಂತಹದ್ದನ್ನು ಕವಿಯ ದೃಷ್ಟಿ ಯಾವುದು? ಎಂಬುದನ್ನು ಡಿ.ಎಲ್.ಎನ್. ಸೊಗಸಾಗಿ ನಿರೂಪಿಸಿದ್ದನ್ನು ಸಿದ್ಧರಾಮನ ಬಾಯಿಂದಲೇ ಕವಿ ಅವನ ಜೀವನಾದರ್ಶವನ್ನು ಸಾಕಾರನಿಷ್ಠೆ ಭೂತುಗಳ್ನೊನುಕಂಪೆ ತಾನೆಪರಬೊಮ್ಮ ಎಂದು ಹೇಳಿಸಿದ್ದಾನೆ. ಈ ಸೂತ್ರವು ಸಿದ್ಧರಾಮನ ಬದುಕಿನ ಸೂತ್ರವಾಗಿತ್ತೆಂದು ಡಿ.ಎಲ್.ಎನ್ ಕೃತಿಯ ಆಳಕ್ಕೊರಗಿ ಮನಗಾಣಿಸಿದ್ದು ಎದ್ದುಕಂಡಿದೆ. ಕೃತಿ ಉದ್ದಕ್ಕೂ ಹರಡಿದ ಎಲ್ಲಾ ಸಂದರ್ಭಗಳನ್ನೂ ಆನ್ಯಾಯಗಳನ್ನು ಪೋಣಿಸಿ ಕಥೆಯ ಮೂಲಾಕಾರವನ್ನಾಗಿ ಮಾಡಲಾಗಿದೆ ಇದು ಕವಿಯ ರೂಪನಿಷ್ಠೆಗೆ ಹಿಡಿದ ಕೈಗನ್ನಡಿ ಎನ್ನಬಹುದು.[೧೬]

ಈ ಕಾವ್ಯದ ಕಥಾ ನಾಯಕನಾದ ಸೊನ್ನಲಿಗೆಯ ಸಿದ್ಧರಾಮನು ಪ್ರಸಿದ್ಧ ಶಿವಭಕ್ತನೂ ವಚನಕಾರನೂ ಆಗಿದ್ದನು. ಕಪಿಲಸಿದ್ಧ ಮಲ್ಲಿಕಾರ್ಜುನ ಎಂಬುದು ಇವನ ವಚನದ ಅಂಕಿತವಾಗಿತ್ತು. ೧೨೫೯ರ ವೇಳೆಗೆ ಸಿದ್ಧರಾಮನು ಕೀರ್ತಿವಂತನಾಗಿದ್ದನೆಂದು ಆತನು ಚಾರಿತ್ರಿಕ ವ್ಯಕ್ತಿ ಎಂದೂ ಅಭಿನವ ಶ್ರೀಶೈಲ (ಸೊನ್ನಲಿಗೆ) ನಿರ್ಮಾಣ ಮಾಡಿ ಅದಕ್ಕೆ ಅನೇಕ ಮಾನ್ಯಗಳನ್ನು ಪಡೆದಿದ್ದನೆಂದು ಆರ್.ಎಸ್. ಪಂಚಮುಖಿಯವರು ತಮ್ಮ 'ಎಫಿಗ್ರಾಫಿಯಾ ಇಂಡಿಯಾ' ಕೃತಿಯಲ್ಲಿ ದಾಖಲಿಸಿದ್ದು ತಿಳಿದುಬಂದಿದೆ.

ವಚನಗಳ ವಿಚಾರವಾಗಿ ಹೇಳುವುದಾದರೆ, ೬೮೦೦೦ ವಚನಗಳನ್ನು ಸಿದ್ಧರಾಮ ಹೇಳಿದ್ದಾನೆಂದು ಸಿದ್ಧರಾಮನ ವಚನಗಳು ಕೃತಿಯ ಪುಟ ೬೭ರಲ್ಲಿ ಉಲ್ಲೇಖಿತಗೊಂಡಿದ್ದು, ಇದು ನಿಜವಿದ್ದ ಪಕ್ಷದಲ್ಲಿ ವಿಶೇಷವೇ ಸರಿಯಾಗಿದೆ, ಅವನು ಕೆರೆ, ಬಾವಿ, ಹೂದೋಟ, ಚೌಕ, ಛತ್ರಗಳನ್ನು ಕಟ್ಟಿಸಿ ತನ್ನ ಅಣ್ಣನಾದ ಬೊಮ್ಮಯ್ಯನಿಗೆ ಉಪದೇಶಮಾಡಿ ಶ್ರೀಶೈಲದ ಮಲ್ಲಿನಾಥನನ್ನು ಒಲಿಸಿಕೊಂಡು ಅವನು ಸೊನ್ನಲಿಗೆಗೆ ಬಂದು ನೆಲೆಸುವಂತೆ ಮಾಡಿದನು. ಮಲ್ಲಿನಾಥನು ಲಿಂಗ ಪ್ರತಿಷ್ಠೆ ಮಾಡುವಂತೆ ನಿರೂಪಿಸಲು ಅದರಂತೆ ಸಕಲ ಲಿಂಗವನ್ನು ಹಿಡಿದು ನಡೆದನು, ಶ್ರೀಶೈಲದ ಮಹಿಮೆ ಅವನಿಗೆ ಕರ್ಣಾಭರಣವಾಗಿದ್ದಲ್ಲದೆ, ಸಿದ್ಧರಾಮನು ಸೊನ್ನಲಾಪುರದಲ್ಲಿ ಪರೋಪಕಾರದಲ್ಲಿ ನಿರತನಾದಾಗ ಶೈವನಾಗಿದ್ದನೆಂದೂ ಪ್ರಭುವಿನ

ಕರುಣೆಯಿಂದ ಆತನಿಗೆ ಬಸವ, ಚೆನ್ನಬಸವರ ಪರಿಚಯವುಂಟಾಗಿ ಅವನು ವೀರಶೈವನಾದನೆಂದು ಕೆಲವಚನಗಳಿಂದ ತಿಳಿದುಬಂದಿದೆ. ನಂಬಬಹುದಾದರೆ ಊಹಿಸಲು ಸಾಧ್ಯವಾಗಿದೆ. ಈ ವಿಷಯಕ್ಕೆ ಪೂರಕವೆಂಬಂತೆ ಯೋಗಿನಾಥ ಎಂಬ ಅಂಕಿತವುಳ್ಳ ವಚನಗಳು (ಸ್ತೋತ್ರಗಳು) ಸಿದ್ಧರಾಮನ ಹೆಸರಿನಲ್ಲಿವೆ. ಅವುಗಳನ್ನು ಈತನೇ ಬರೆದನೋ? ಅಥವಾ ಬೇರೆ ಯಾರಾದರೂ ಬರೆದು ಅವನ ಹೆಸರಿಗೆ ಆರೋಪಿಸಿದ್ದಾರೆಯೇ? ತಿಳಿಯದಾಗಿದ್ದು ಈ ಸಂದೇಹಾಸ್ಪದ ವಿಚಾರವಾಗಿ ಡಿ.ಎಲ್.ಎನ್. ತುಂಬಾ ಟೀಕೆಗಳಿಗೆ ಗುರಿಯಾಗಿದ್ದ ಅಂಶವು ಇಲ್ಲಿ ಗಮನಿಸಬೇಕಾಗಿದ್ದು ಅವಶ್ಯ. ಈ ವಿಷಯಕ್ಕನುಗುಣವಾಗಿ ಒಂದು ವಚನವನ್ನು ನೋಡುವುದಾದರೆ,

'ಹಸುಳೆಯಾಗಿಯು ನಾನು ಕೆರೆಬಾವಿ ದೇವಾಲಯ
ವಿರಚಿಸಿ ಭವಕೆ ಬಂದು ಫಲವನುಂಡು
ನರಕಕೆ ಬೀಳುವನ ಕರುಣ ಕರದಿಂದೆತ್ತಿ
ನಿನ್ನ ಹೊರೆಯೊಳಗಿರಿಸಿದೆ ಯೋಗಿನಾಥ'[೧೭]

ಎಂದು, ತಾನು ಕರ್ಮಮಾರ್ಗದಲ್ಲಿ ನಡೆಯುತ್ತಿದ್ದು ಉದಾರಿವಾದನೆಂದು ವರವೀರಭದ್ರಾವತಾರ ಬಸವಣ್ಣನ ಕರುಣದ ಕಂದನು ತಾನಾಗಿದ್ದೆನೆಂದು ಅವನು ಭಕ್ತಿಯಿಂದ ಹೇಳಿಕೊಂಡಿದ್ದಾನೆ.

ಕಥಾಸಾರವಾಗಿ ಶಿವಸ್ವರೂಪಿಯಾದ ಸಿದ್ಧರಾಮನನ್ನು ಅವನ ಶಿಷ್ಯಕುಲವನ್ನು ಸ್ತುತಿಸಿ ಕಾವ್ಯದ ರೀತಿ ಉದ್ದೇಶಗಳನ್ನು ನಿರೂಪಿಸಿ ಸಿದ್ಧಕುಲ ಕಮಲರವಿಯಾದ ಸಿದ್ಧರಾಮನ ಚರಿತ್ರೆಯನ್ನು ಸಮುದ್ರ ವರ್ಣನೆಯಿಂದ ರಾಘವಾಂಕನು ಕಥಾರಂಭ ಮಾಡಿದ್ದಾನೆ.

ಕೈಲಾಸದಲ್ಲಿ ಶಿವನು ಗಿರಿಜೆಯೊಡನೆ ಓಲಗದಲ್ಲಿರುವಾಗ ಅವನ ದರ್ಶನಕ್ಕಾಗಿ ಆಧ್ರಿಶಿರ ಊರ್ಧ್ವಶಿರರೆಂಬ ಇಬ್ಬರು ಗಂಧರ್ವರು ದಾರಿಯಲ್ಲಿ ಬರುವಾಗ ಎದುರಿಗೆ ಸಿಕ್ಕಿದ್ದ ಭೃಂಗಿಯನ್ನು ಕಂಡು ನಕ್ಕು ಅವನ ಶಾಪಕ್ಕೆ ಗುರಿಯಾಗಿ ಇದರ ವಿಮೋಚನೆಗೋಸ್ಕರ ಮರಳಿ ಅತ್ತು ಕೈಮುಗಿದಾಗ ತಮಟೆ ಶಿವಜ್ಞಾನಿಯೊಬ್ಬ ಮಗನಾಗಿ ಹುಟ್ಟುವನು ಅವನಿಂದ ನಿಮಗೆ ವಿಶಾಪ ಎಂದು ಹೇಳಿ ಮುಂದಿನ ಸಂಪೂರ್ಣ ಶಾಪ ವಿಮೋಚನೆಗಾಗಿ ಶಿವನನ್ನು ಕಾಣಿ ಎಂದು ಹೇಳಿದ್ದನಂತೆ. ಇದಕ್ಕೆ ಶಿವನ ಹತ್ತಿರ ಬಂದು ಬೇಡಿಕೊಂಡಾಗ ಶಿವ ತನ್ನ ಅಭಯವನ್ನಿತ್ತು ನೀವಿಬ್ಬರೂ ಸೊನ್ನಲಿಗೆಯಲ್ಲಿ ಮಾನವ ಜನ್ಮತಾಳಿ ನಿಮಗೆ ಮಗನಾಗುತ್ತಾನೆಂದು ಸಂತೈಸಿ ಅವರನ್ನು ಬೀಳ್ಕೊಟ್ಟನು. ಅವರಿಬ್ಬರೂ ಸುವರ್ಣವಲ್ಲಿ ಪುರದ ಒಕ್ಕಲಿಗ ಗೌಡರುಗಳ ಮನೆಯಲ್ಲಿ ಹುಟ್ಟಿ ಮೂರಡಿಯ ಮುದ್ದನೆಂದು, ಹುಡುಗಿಗೆ ಸುಗ್ಗವ್ವೆಯೆಂದೂ ಹೆಸರಾಗಿ ಮುಂದೆ ದಂಪತಿಗಳಾಗಿ ಐದಾರು ಸೂಲು ಕಳೆದ ಮೇಲೆ ಹೊಲೆನಿಂತು ಮುಪ್ಪು ಆವರಿಸಿತು

ಒಂದು ದಿನ ರೇವಣಸಿದ್ಧನು ಆ ಊರಿಗೆ ಬಂದು ಮುಂದೆ ಈ ಸ್ಥಳ ಲಿಂಗಬೀಡಾಗಿ ಸಿರಿಗೆ ಕುರುಹುವಾಗಿ ಪುಣ್ಯದ ಪುಂಜವಾಗಿ ಪವಿತ್ರ ಸ್ಥಳವಾಗುತ್ತದೆ, ಎಂದು ಹಿತನುಡಿದು ಸುಗ್ಗೆವ್ವೆಯ ಮನೆಗೆ ಬಂದು ಆಕೆಯ ಹೊಟ್ಟೆಮುಟ್ಟಿ ನಮಸ್ಕರಿಸಿ ನಿನಗೆ ಶಿವಯೋಗಿ ಪುತ್ರ ಹುಟ್ಟುತ್ತಾನೆಂದು ಹೇಳಿದಾಗ, ವಯಸ್ಸಾದ ಈ ಇಳಿವಯಸ್ಸಿಗೆ ನಮಗೆ ಮಕ್ಕಳಾಗುತ್ತವೆಂದು ಆಶ್ಚರ್ಯದಿಂದ ಕೇಳಿದಾಗ ಈ ಮಾತಿಗೆ, ಪರಮ ದಂಪತಿಗಳ ವಿಕಾರಾನುಭವದ ಹೇಯದಲ್ಲಿ ಎಲ್ಲರಂತೆ ಈ ಮಗು ಹುಟ್ಟುವುದಿಲ್ಲವೆಂದೂ ಒಂದೆರಡು ತಿಂಗಳಿಗೆ ಅವನ ಜನನವಾಗುವುದೆಂದು ಅವನಿಗೆ ಸಿದ್ಧರಾಮ ಎಂಬ ಹೆಸರಿಡಬೇಕೆಂದೂ ಉತ್ತರಿಸಿ ಮುಂದೆ, ಈ ವಿಷಯವಾಗಿ ಊರಿನ ರಾಜ ನನ್ನಪ್ಪನ ಅರಸಿ ಚಾಮಲಾದೇವಿಗೂ ಈ ವಿಷಯ ತಿಳಿಸಿ ಹೊರಟು ಹೋದನು.

ಇತ್ತ ಸುಗ್ಗವ್ವೆಯ ಬಸುರಿನಲ್ಲಿ ಶಿವನು ಚಿಕ್ಕ ಬೊಂಬೆಯನ್ನು ನಿರ್ಮಿಸಿ ಇರಿಸಿದನು ಐದು ತಿಂಗಳಲ್ಲೆ ಮಗುವಿನ ಜನನವಾಗಿರಲು ಗಿರಿಜೆ ಬಂದು ಜೋಗುಳಹಾಡಿ ಮಗುವಿಗೆ 'ಸಿದ್ಧರಾಮ' ಎಂದು ನಾಮಕರಣ ಮಾಡಿ ಹೋದಳು. ಮುಂದೆ ಈ ಹೆಸರನ್ನು ಬಿಟ್ಟು 'ಧೂಳಿಮಾಕಾಳ' ಎಂದು ತಮ್ಮ ಕುಲದೈವದ ಹೆಸರನ್ನು ಇಟ್ಟರು. ಮಗು ಈ ಹೆಸರನ್ನು ಕರೆದಾಗ ಆಟವಾಡದೆ, ಅಳದೆ, ನಗದೆ ಇದ್ದು ಸಿದ್ಧರಾಮ ಎಂದು ಕರೆದಾಗ ಮಾತ್ರ ತಿರುಗಿ ನೋಡುತ್ತಿದ್ದನು. ಮುಂದೆ ಇವನು ಸೌಮ್ಯವಾಗಿರುವುದನ್ನು ಕಂಡ ತಂದೆಯು ಜೊತೆ ಹುಡುಗರನ್ನು ಕೂಡಿಸಿ ದನಕಾಯುವ ಕೆಲಸಕ್ಕೆ ಹಚ್ಚಿದನು. ಕೆಲಸಕ್ಕೆ ಹೋದ ಅವನು ದಿನವೂ ಲಿಂಗಪೂಜೆಯಲ್ಲಿ ಮಗ್ನನಾಗಿರುತ್ತಿದ್ದನು. ಬುತ್ತಿ ಅನ್ನವನ್ನು ಜೊತೆಯವರಿಗೆ ಹಂಚಿ ಮನೆಗೆ ಬರುತ್ತಿದ್ದನು. ಮುಂದೆ ಒಂದು ಜಂಗಮವೇಷದ ಶಿವನನ್ನು ಕಂಡು ಅವನ ನಿಜಸ್ವರೂಪ ತಿಳಿದು ತಾನು ಭೂಮಿಗೆ ಬಂದ ಉದ್ದೇಶ ತಿಳಿದು ಲೋಕಾಂತರ ಹೊರಟನು. ಮುಂದೆ ಶ್ರೀಶೈಲಕ್ಕೆ ತೆರಳಿ ಅಲ್ಲಿ ಶಿವ ಪಾರ್ವತಿಯರ ದರ್ಶನ ಪಡೆದು ಭೈರವನಿಂದ ಶ್ರೀಶೈಲದ ಅದ್ಭುತ ದೃಶ್ಯಗಳನ್ನೆಲ್ಲ ಕಂಡು ನಂತರ ಶಿವನ ಆಜ್ಞೆಯಂತೆ ಸೊನ್ನಲಿಗೆಗೆ ಬಂದು ಮಂದಾರದ ಮರದಡಿ ಲಿಂಗವನ್ನು ಪೂಜಿಸುತ್ತಾ ಕಾಲ ಕಳೆದನು.

ತಂದೆ ತಾಯಿಗಳು ತಾನು ಪೂಜಿಸುವ ದೇವರನ್ನು ಬಿಟ್ಟು ಧೂಳಿಯಾಕಾಳನನ್ನೂ ಪೂಜಿಸಿದ್ಧರಿಂದ ಜಿಗುಪ್ಸೆಬಂದು ಮನೆ-ತೊರೆದು ಬೇರೆ ಮಠವನ್ನು ಕಟ್ಟಿ ಹಿಂದೆ ಬಂದ ಬೊಮ್ಮಣ್ಣನಿಗೆ ದೀಕ್ಷೆಯಿತ್ತು ಮಲ್ಲಯ್ಯನ ಆರಾಧನೆಯಲ್ಲಿ ನಿರತನಾದನು. ಶಿವನು ಆರಾಜ್ಯದ ರಾಣಿ ಚಾಮಲಾದೇವಿಗೆ ಕನಸಿನಲ್ಲಿ ಬಂದು ಸಿದ್ಧರಾಮನಿಗೆ ಪುರವ ರಚಿಸಲು ಒಂದು ಕ್ರೋಶ ಭೂಮಿಯನ್ನು ಕೊಡುವಂತೆ ಹೇಳಿ ಮಾಯವಾದನು. ಈ ಕ್ರಮವಾಗಿ ಚಾಮಲಾದೇವಿ ಶಿವನಿಲಯದ ರಚನೆಗಾಗಿ ಭೂಮಿಯನ್ನು ಕೊಟ್ಟಳು ಆಜಾಗೆಯಲ್ಲಿ ಹೊನ್ನಹಿರಿಯ ಕೊಪ್ಪರಿಕೆ ಸಿಕ್ಕಿ ದೇವಾಲಯದ ರಚನೆ ಶಿಲ್ಪಜ್ಞರಿಂದ ನಡೆದು ಹದಿನೇಳು ಲಿಂಗಗಳು ನಿರ್ಮಿತವಾದವು.

ಆ ಊರಿನ ಬರಡು ಹಸುವಿನಲ್ಲಿ ಆಗಲೇ ಹುಟ್ಟಿ ಆಗಲೇ ಬೆಳೆದು ಬಂದ ವೃಷಭನು ಲಿಂಗ ಪ್ರತಿಷ್ಠೆಗೆ ಆಚಾರ್ಯನಾದನು.

ಸಿದ್ಧರಾಮನು, ಮುಂದಿನ ದಿನಗಳಲ್ಲಿ ಭೂದಾನ, ಕನ್ಯಾದಾನ, ವಸ್ತ್ರದಾನ, ಅನ್ನದಾನಾದಿಗಳನ್ನು ಮಾಡಿ ಲೋಕ ಕಾರುಣ್ಯದಿಂದ ನಿತ್ಯ ಹೋಮವನ್ನು ಕೈಗೊಂಡು ಪಟ್ಟಣವನ್ನು ರಚಿಸಿದನು. ಇದಕ್ಕೆ ಅಪ್ಪಣೆಯಂತೆ ಅಷ್ಟ ಭೈರವರೂ, ದೇವಾಂಗನೆಯರೂ, ಲಕ್ಷ್ಮೀಯರೂ ರಕ್ಷಕರಾಗಿ ನಿಂತರು. ಸಿದ್ಧರಾಮನ ಕೀರ್ತಿ ಲೋಕದೆಲ್ಲಡೆ ಹರಡಿತು. ಲೋಕಕಲ್ಯಾಣಕ್ಕಾಗಿ ಮೃಗ, ಖಗಗಳಿಗೆ ಆಸರೆಯಾಗಲೆಂದು ಸಿದ್ಧರಾಮ ಕೆರೆಕಟ್ಟಿಸುತ್ತಿರಲು ತಾನೂ ಕೆಲಸ ಕೈಗೊಂಡು ಅಗೆಯುತ್ತಿರಲು ಅಲ್ಲಿ ಪುಣ್ಯ ನದಿಗಳೆಲ್ಲಾ ಸೇರಿ ಪವಿತ್ರ ಕೆರೆ ನಿರ್ಮಾಣವಾಯಿತು. ಇಲ್ಲಿ ಜಿಂಕೆಯ ಪವಾಡದಿಂದ ವಡಬ ಮುಖವೆಂಬ ಕತ್ತಿ ಪಡೆದಿದ್ದು, ಮೀನಿನ ದುರ್ಗಂಧದಿಂದ ವಿಮೋಚನೆ ಪಡೆದ ಕುಮುದಶೇಖರನ ಪವಾಡ, ಅತಿಹಂಸನೆಂಬ ಮುನಿಯ ಪವಾಡ, ಫಣಿಲೋಕಕ್ಕೆ ಹೋಗಿ ಅಮೃತವನ್ನು ತಂದು ಆದಿಲಿಂಗಾಭಿಷೇಕ ಮಾಡಿದ ಹಾವಿನಾಳ ಕಲ್ಲಯ್ಯ, ಕೇತಾರಗುರುಗಳು ಸಿದ್ಧರಾಮನ ಮಹತ್ವವನ್ನು ಲೋಕಕ್ಕೆ ಸಾರಲು ಒಬ್ಬ ಅಧಮನು ಸೊನ್ನಲಿಗೆ ಮಹಿಮೆ ಲೋಕಕ್ಕೆ ತಿಳಿಯುವಂತೆ ಮಾಡಲು ಸಿದ್ಧನು ಕಾಸಿದ ಪಂಚಲೋಹದ ಗುಂಡನ್ನು ಕೈಯಲ್ಲಿ ಹಿಡಿದು 'ಇನ್ನಾದೊಡಂ ನಂಬಿರೇ ಮಲ್ಲಿಕಾರ್ಜುನನ್ನು' ಎಂದು ಸಾರುತ್ತಾ ದಿವ್ಯವನ್ನು ಗೆದ್ದು ಕೀರ್ತಿಶಾಲಿ ಆಗುವಂತೆ ಮಾಡಿದನು.

ಬಿಲ್ಲೇಶ ಬೊಮ್ಮಯ್ಯನು ಸಾಲಕ್ಕಂಜಿ ಬಡತನದ ಬೇಗೆಯಲ್ಲಿ ಬೆಂದು ಸೊನ್ನಲಿಗೆ ಓಡಿಬಂದ ಸಿದ್ಧರಾಮನ ಶಿಷ್ಯವರ್ಗದಲ್ಲಿ ಸೇರಿದ್ದನು. ಇದನ್ನು ತಿಳಿದು ಸಾಲಗಾರರೆಲ್ಲ ಇವನ ಸುಳಿವಿಡದು ಬಂದು ಸಿದ್ಧರಾಮನಿಗೆ ವಿಷಯ ತಿಳಿಸಿದರು. ಅವನಿಂದಲೂ ಇವನಿಗೆ ಅರಿವು ಮೂಡದಿದ್ದಾಗ ಇವನನ್ನು ಧರ್ಮಸ್ಥಾನಗಳಿಗೆ ಕರೆದೊಯ್ಯುವಾಗ ಬಿಲ್ಲೇಶನು ನಾಚಿಕೆಯಿಂದ ತನ್ನ ಶಿರವನ್ನು ಕಡಿದುಕೊಂಡು ಸತ್ತನು. ಇದರಿಂದ ಇವನ ಸಾಲವನ್ನೆಲ್ಲ ಸಿದ್ಧರಾಮ ಆಮೇಲೆ ತೀರಿಸಿದನು. ಮುಂದೆ ಅನೇಕ ಪವಾಡಗಳು ನಡೆದಂತಾಗಿ ಸೊನ್ನಲಿಗೆಯಲ್ಲಿ ಕೆರೆ ಕಟ್ಟುತ್ತಿರುವಾಗ ಕೆರೆ ನಡುವೆ ಗೊಡೆಯನ್ನು ಕಟ್ಟಿಸಿ ಅಲ್ಲಿ ಸಮಾಧಿಸ್ಥ ನಾಗಬೇಕೆಂದು ನಿಶ್ಚಯಿಸಿ, ಹಾವಿನಾಳ ಕಲ್ಲಯ್ಯನಿಗೆ, ನರರು ಸುರರಿಗಿಂತ ಬಲ್ಲದರು ಆದ್ದರಿಂದ ಈ ಕ್ಷೇತ್ರದಲ್ಲಿ ಇದ್ದು ಇಲ್ಲದಂತೆ ಸಮಾಧಿಯಲ್ಲಿ ನಿಲ್ಲುವೆನೆಂದು ಹೇಳಿ ಮಲ್ಲಿಕಾರ್ಜುನನ ಸೇವೆ ನಡೆಯುತ್ತಿರಲಿ ಎಂದು ಅಣ್ಣ ಬೊಮ್ಮಯ್ಯನಿಗೂ ಕೇತಾರ ಗುರುಗಳ ಸಮ್ಮುಖದಲ್ಲಿ ತಿಳಿಸಿ ಇತರ ಶಿಷ್ಯರಿಗೂ ನೇಮವಿತ್ತು ಕೆರೆಯ ನಡುವೆ ಯೋಗಾರೂಢನಾಗಿ ಸುಖದಲ್ಲಿದ್ದವನಾಗಿದ್ದನು.

ಈವರೆಗೂ ಬಿತ್ತರಗೊಂಡ ಕಥೆಯ ಕೆಲ ವಿಚಾರಗಳು ರಾಘವಾಂಕನಿಗೆ ಹೇಗೆ ಮೂಡಿದ್ದು, ಅವನ ನಂತರದ ಕಾಲದಿಂದೀಚೆಗೆ ಕಥೆ ಹೇಗೆ ಬೆಳೆಯಿತು ಎಂಬಿತ್ಯಾದಿ ಅಂಶಗಳ ಕುರಿತು ಅರಿಯಬೇಕಾಗಿದೆ.

'ಈ ಕಾವ್ಯವನ್ನು ರಾಘವಾಂಕ ಬರೆಯುವ ವೇಳೆಗೆ ಸಿದ್ಧರಾಮನ ವಿಷಯವಾಗಿ ಜನರಲ್ಲಿ ಹಲವು ಕಥೆಗಳು ಪ್ರಚಾರವಾಗಿರಬೇಕು. ಅವುಗಳಲ್ಲಿ ಕೆಲವನ್ನು ಮಾತ್ರ ಕವಿ ತನ್ನ ಕಾವ್ಯದಲ್ಲಿ ಸೇರಿಸಿರಬಹುದು. ಸಿದ್ಧರಾಮನ ವಚನಗಳ ಪರಿಚಯದಿಂದ ಅವನ ಬದುಕಿನ ಕೆಲವು ಸಂಗತಿಗಳು ಕವಿಗೆ ತಿಳಿದಿದ್ದವಾಗಿರಬಹುದು. ಇವೆರಡಕ್ಕಿಂತ ಮಿಗಿಲಾಗಿ ಹರಿಹರನ ರಗಳೆಗಳಿಂದ ಅವನಿಗೆ ಬಹಳ ಸಹಾಯವಾಗಿರಬೇಕು. ರಾಘವಾಂಕನು 'ಸೋಮನಾಥ ಚರಿತೆ'ಯನ್ನು ಹರಿಹರನ ಆದಯ್ಯನ ರಗಳೆಯ ಆಧಾರದ ಮೇಲೆ ಬರೆದಿರುವುದರಿಂದ ಸಿದ್ಧರಾಮ ಚಾರಿತ್ರ್ಯಕ್ಕೂ ಅಂತಹದ್ದೆ ಒಂದು ಮೂಲವಿರಬಹುದೇನೋ? ಎಂಬ ಶಂಕೆ ಸಹಜವಾಗಿ ಏಳುತ್ತದೆ. ಹರಿಹರನಿಗೆ ಸಿದ್ಧರಾಮನು ಅಪರಿಚಿತ ವ್ಯಕ್ತಿ ಅಲ್ಲ ಇವನ ಕುರಿತು 'ಲಿಂಗಾರ್ಚನೆಯ' ರಗಳೆಯಲ್ಲಿ ಸಿದ್ಧರಾಮನ ಹೆಸರನ್ನು ಉಲ್ಲೇಖಿಸಿದ್ದಾನೆ. ಎರಡನೆಯದಾಗಿ, ಅಲ್ಲಮಪ್ರಭು ಸೊನ್ನಲಿಗೆಗೆ ಬಂದು ಸಿದ್ಧನನ್ನು ಕಂಡು ಕಲಿಯುಗಂ ಪೊಲ್ಲೆಂದು ಬುದ್ಧಿಯಂ ಪೇಳುತಂ ಸಲೆ ಸಮಾಧಿಗೆ ಪೊಗೆನ್ನುತ್ತಿಚ್ಚೆದೋಜಿತಂ ಶ್ರೀ ಪರ್ವತಾಭಿಮುಖನಾದನೆಂದು' ಪ್ರಭುದೇವರ ರಗಳೆಯಲ್ಲಿ ಹೇಳಿದ ಹಾಗೆಯೇ ರೇವಣಸಿದ್ಧೇಶ್ವರ ರಗಳೆಯಲ್ಲಿ ರೇವಣನು ಸೊನ್ನಲಿಗೆಗೆ ಬಂದು ಆನೆಯಿಂದಿಳಿದು ಹಾವುಗೆಗಳನ್ನು ಮೆಟ್ಟದೆ ಕಾಲ್ನಡಿಗೆಯಲ್ಲಿ ನಡೆಯುತ್ತ ಚಾಮಲದೇವಿಗೆ ಸಿದ್ಧರಾಮನ ಜನನವನ್ನು ನಿರೂಪಿಸಿ ಸುಗ್ಗವ್ವೆಯ ಪುಣ್ಯೋದರವನ್ನು ಮುಟ್ಟಿ ಭವಿತವಿಟ್ಟು ಆಕಾಶಕ್ಕೆ ನೆಗೆದನೆಂಬ ಕಥೆ ಇದೆ. ನಾಲ್ಕನೆಯ ವಿಷಯವಾಗಿ, ಏಕಾಂತರಾಮಯ್ಯನ ಶಿರವು ಸೊನ್ನಲಿಗೆಯೊಳು ಜಗದ್ಗುರು ಸಿದ್ಧರಾಮಂಗೆ ನಿನ್ನ ಪ್ರಸಾದವೀಯನುತ ಕರುಣಂ ಬಡೆಯಿತೆಂದು ಹೇಳಿದೆ. ಐದನೆಯ ವಿಷಯವಾಗಿ ಅವಲೋಕಿಸಿದ್ದಾದರೆ ಹಾವಿನಾಳ ಕಲ್ಲಯ್ಯನ ತಂದೆ ಮಗನಿಗೆ ಮದುವೆ ಮಾಡಲು ಪ್ರಯತ್ನಿಸಿದಾಗ ಅವನು ಒಪ್ಪದೆ ಎಲ್ಲವನ್ನೂ ತೊರೆದು ಸೊನ್ನಲಿಗೆಗೆ ಓಡಿಬಂದು ಸಿದ್ಧರಾಮನಿಗೆ ಶರಣಾಗಿ ಅವನ ಸ್ನೇಹಕ್ಕೆ ಭಾಗಿಯಾಗಿದ್ದನು.[೧೮] ಈ ಆಧಾರಗಳಿಂದ ಹರಿಹರನಿಗೆ ಸಿದ್ಧರಾಮನ ಕಥೆ ತಿಳಿದಿತ್ತೆಂದು ಅರ್ಥೈಸಿಕೊಳ್ಳಬಹುದಾಗಿದ್ದು ರಾಘವಾಂಕನಿಗೆ ಇದು ಮೂಲವಾಗಿರಲು ಸಾಧ್ಯವೆನಿಸುತ್ತದೆ. ಮೇಲೆ ಸೂಚಿಸಿರುವಂತೆ ಕಥಾಂಶಗಳಲ್ಲಿ ಕೆಲವು ರಾಘವಾಂಕನ ಕೈಯಲ್ಲಿ ವಿಸ್ತಾರವಾದ ಆಕಾರವನ್ನು ತಾಳಿವೆ. ಉದಾ: ಸಿದ್ಧರಾಮನ ಜನನವನ್ನು ಹೇಳುವ ಮೂರನೇ ಕಥೆಯನ್ನು ರಾಘವಾಂಕನು ಒಂಭತ್ತು ಪದ್ಯಗಳಲ್ಲಿ ವಿವರಿಸಿದ್ದು, ಅಲ್ಲಿ ಸಿದ್ಧರೇವಣನು ಆನೆಯಿಂದಿಳಿದರೆ ಇಲ್ಲಿ ಪಲ್ಲಕ್ಕಿಯಿಂದಿಳಿಯುತ್ತಾನೆ, ಅಲ್ಲಿ ಶಿಷ್ಯರು ಏಕ ಪಾದಚಾರಿಗಳಾಗಿ ಹೊರಡಿರಿ ಎಂದು ಗುರುವನ್ನು ಕೇಳುವುದಿಲ್ಲ, ಇಲ್ಲಿ ಅವರ ಸಂಭಾಷಣೆ ಇದೆ. ಇಂಥಹ ಕೆಲವು ವ್ಯತ್ಯಾಸಗಳನ್ನು ರಾಘವಾಂಕ ಮಾಡಿ ಈ ಕಥಾಭಾಗವನ್ನು ವರ್ಣಿಸಿದ್ದು ಕಾಣಬಹುದಾಗಿದೆ. ಹೀಗೆ ಹರಿಹರನಲ್ಲಿದ್ದ ಕೆಲ ಉಪಕಥೆಗಳನ್ನು ರಾಘವಾಂಕನು ಸ್ವೀಕರಿಸಿ ಅವುಗಳಲ್ಲಿ ಕೊಂಚ ವ್ಯತ್ಯಾಸಮಾಡಿ ಕಥೆಯ ಹಂದರವನ್ನು ಹೆಚ್ಚಿಸಿದವನಾಗಿದ್ದಾನೆ.

ರಾಘವಾಂಕನ ದೃಷ್ಟಿಯಲ್ಲಿ ಸಿದ್ಧನು ಕೇವಲ ಪವಾಡ ಪುರುಷನಲ್ಲ, ಶಿವನ ಅನುಭವವನ್ನು ಪಡೆದಿದ್ದು ಸಾಧಕನೂ ಹೌದು, ಕಾವ್ಯದುದ್ದಕ್ಕೂ ಅಲ್ಲಲ್ಲಿ ಉಪಕಥೆಗಳಲ್ಲಿ ಕಾಣಿಸಿಕೊಂಡ ನಾಗಾರ್ಜುನರಂತಹ ಸಿದ್ಧರು ಯಂತ್ರಮಂತ್ರಗಳಲ್ಲಿಯೂ ಪ್ರತಿವಾದದಲ್ಲಿಯೂ ನಿಪುಣರಾದ ಹಲವರು ಅನೇಕ ಅದ್ಭುತಕಾರ್ಯಗಳನ್ನೆಸೆಗಿ ಜನರನ್ನು ಬೆರಗುಗೊಳಿಸಿರಬಹುದು. ಕೊನೆಗೆ ಅವರಿಗೆ ಉಂಟಾದ ದುರ್ಗತಿ ಮಾತ್ರ ಯಾರಿಗೂ ಬೇಡ, ಅವರಲ್ಲಿನ ಪಾರಮಾರ್ಥಿಕ ದೃಷ್ಟಿ ಇಲ್ಲದಿರುವಿಕೆಯಿಂದ ಅವರ ಬಾಳು ನಿರರ್ಥಕವಾಗಿ, ಅವರೆಲ್ಲಾ ಕುಟಿಲ ಸಿದ್ಧರಾಗಿ ರೂಪಿತಗೊಂಡಿದ್ದಾರೆ. ಸಿದ್ಧರಾಮನು ಈಗೆಲ್ಲಾ ಪವಾಡಗಳನ್ನು ಮಾಡುವುದು ಅವನ ಜೀವನದ ಪರಮಾರ್ಥವಾಗಿಸಿಕೊಳ್ಳದೆ, ಜೀವನ ಪೂಜೆಯಲ್ಲಿನ ನಿಷ್ಠೆ, ಸಾರ್ವಜನಿಕ ಸೇವಾ ಕೈಂಕರ್ಯಗಳು ಸರ್ವಜೀವಿಗಳಲ್ಲಿನ ದಯೆ ತೋರುವಿಕೆಯೂ ಸಿದ್ಧರಾಮನಲ್ಲಿ ಮೇಳೈಸಿದ್ದರಿಂದ ಅವನು ಘನತೆಗೆ ತಕ್ಕ ಯೋಗಿಯಾಗಿದ್ದನು. ರಾಘವಾಂಕನ ಮನಸ್ಸನ್ನು ಹಿಡಿದಿಟ್ಟದ್ದು ಸಿದ್ಧರಾಮನ ಈ ಮತತತ್ವ, ತಾನು ಕಂಡ ಮಹಿಮೆ ಸಿದ್ಧನಲಿಲ್ಲ ಎಂದು ವಾದಿಸಿದವರಿಗೆ ಬಿರುಮಾತುಗಳಿಂದ ಬಾಯಿ ಮುಚ್ಚಿಸಿದ್ದಾನೆ; 'ಶಿರದಿಂ ಪಾಳಯಂಗೆಲುವೆನೆಂದು' ಪ್ರತಿಜ್ಞೆ ಮಾಡಿರುವನು. ಆದ್ದರಿಂದ ಅವನ ಕಾವ್ಯರಚನೆಗೆ ಪ್ರೇರಕವಾದ ಸಿದ್ಧರಾಮನ ಈ ವ್ಯಕ್ತಿತ್ವವನ್ನೇ, ಮೂರ್ತಿ ಸ್ವರೂಪವಾಗಿಸಿಕೊಂಡ ಕವಿಯ ದೃಷ್ಠಿ ಅರ್ಥಪೂರ್ಣವಾಗಿರುವಂತೆ ಗೋಚರಿಸಿದೆ.

ಕೃತಿಯ 'ಪೀಠಿಕೆ ಭಾಗದ ಒಂದು ಸಮಸ್ಯೆ' ಶೀರ್ಷಿಕೆಯಡಿಯಲ್ಲಿ ಡಿ.ಎಲ್.ಎನ್. ಸಿದ್ಧರಾಮನು ಶೈವನೋ? ವೀರಶೈವನೋ? ಎಂಬ ವಿಚಾರವನ್ನು ಹಲವು ಆಧಾರಗಳ ಮೂಲಕ ಮಂಡಿಸಿದ್ದಾರೆ. ಈ ವಿಷಯವಾಗಿ ಕೃತಿಯ ಮೊದಲನೆಯ ಮುದ್ರಣ ಅವಧಿಯಲ್ಲಾದ ವಿಷಯ ದೋಷವನ್ನು ತಮ್ಮ ಶಿಷ್ಯರೊಬ್ಬರು ತಿಳಿಸಿದ ಹಾಗೆ 'ಸಿದ್ಧರಾಮನಿಗೆ ಚೆನ್ನಬಸವಣ್ಣನಿಂದ ಲಿಂಗದೀಕ್ಷೆಯಾಗಿದ್ದಿತ್ತೆಂಬ ವಿಚಾರದಲ್ಲಿ ವಚನವೊಂದನ್ನು ಅವರ ಗಮನಕ್ಕೆ ತಂದಾಗ ಅದನ್ನು ಒಪ್ಪಿಕೊಂಡು ತಮ್ಮ ತಪ್ಪನ್ನು ತಿದ್ದಿಕೊಂಡರು. ಅಲ್ಲದೆ ಈ ವಿಷಯದ ಕುರಿತು ಟೀಕೆಗಳು ಎದುರಾದಾಗ ಅವರು ಕೊಟ್ಟ ಉತ್ತರವೆಂದರೆ, ಸಿದ್ಧರಾಮನು ಶೈವನೋ? ವೀರಶೈವನೋ? ಎಂಬ ಸಮಸ್ಯೆಯನ್ನು ನಾನು ವಿದ್ವಾಂಸನ ದೃಷ್ಠಿಯಲ್ಲಿ ನೋಡಿದ್ದೇನೆ. ಎರಡು ಆಧಾರಗಳಿಂದ ದೊರೆತ ವಿಷಯವನ್ನು ತಾತ್ಕಾಲಿಕವಾಗಿ ಪ್ರಸ್ತಾಪಿಸಿದ್ದೇನೆ. ಇದು ತಪ್ಪೆ ಇರಬಹುದು. ಹಾಗೆಂದು ಆಧಾರಗಳನ್ನು ಕಂಡುಹಿಡಿದು ಹೇಳಬೇಕಲ್ಲದೆ? ಇದಕ್ಕಾಗಿ ಇನ್ನೂ ಬೆಳಕಿಗೆ ಬಾರದ ವಿಷಯಗಳನ್ನು ಹೊರಕ್ಕೆಳದು ಓದಿ ಆಧಾರ ತೋರಸಲಿ, ತೀರ್ಮಾನವನ್ನು ಮಾರ್ಪಡಿಸಲಿ ಆಗ ವಿದ್ವತ್ತು ಬೆಳೆಯುತ್ತದೆ. ಇದರಿಂದ ಹೊಸ ವಿಷಯ ವಿದ್ವಾಂಸರಿಗೆ ದೊರೆತಂತಾಗುತ್ತದೆ ಅದಕ್ಕಾಗಿ ಟೀಕೆ ಮಾಡಿದರೆ ಏನು ಪ್ರಯೋಜನ? 'ಸರಸ್ವತಿಯ ರಾಜ್ಯದಲ್ಲಿ ಜಾತೀಯತೆ, ಮತಿಯತೆಗಳಿಗೆ ಸ್ಥಾನವಿಲ್ಲ, ಸಿದ್ಧರಾಮನಂತಹ

ಮಹಾವ್ಯಕ್ತಿ ಯಾವ ಸಮಾಜಕ್ಕೆ ಸೇರಿದ್ದರೂ ಅದಕ್ಕೆ ಘನತೆ ಗೌರವ ಉಂಟಾಗುತ್ತದೆ. ಒಟ್ಟಿನಲ್ಲಿ ಕವಿ, ವಿಮರ್ಶಕ, ಜಾತೀಯತೆಯ ವಿಷಯಗಳಿಗೆ ಸಂಬಂಧಿಸಿದ ಮನಃ ಕಷಾಯಗಳು ತೊಲಗಿ ಶುದ್ಧವಾಯುಗುಣ ನೆಲೆಗೊಂಡ ಹೊರತು ಕನ್ನಡ ಸಾಹಿತ್ಯ ವಿಮರ್ಶೆ ಬೆಳೆಯಲಾರದು.[೧೯] ಎಂದು ಸಿದ್ಧರಾಮನ ಜಾತೀಯತೆ ಬಗ್ಗೆ ಉದ್ಗರಿಸಿದ್ದಾರೆ.

ಅಲ್ಲಮನ ವಿಷಯವಾಗಿ ಡಿ.ಎಲ್.ಎನ್ ಹೇಳುತ್ತಾ 'ಅವನೊಬ್ಬ ವ್ಯಕ್ತಿವಾದಿ, ತನ್ನ ಸುಖವನ್ನು ತಾನು ಗಳಿಸಿಕೊಂಡರೆ ಸಾಕೆಂಬ ಸಿದ್ಧಾಂತ ಹೊಂದಿದ್ದವನು. ಆದರೆ ಸಿದ್ಧರಾಮನು ಸಮಾಜವಾದಿ, ಸಮಾಜದ ಯೋಗಕ್ಷೇಮದಲ್ಲಿ ವ್ಯಕ್ತಿ ಭಾಗವಹಿಸಬೇಕೆಂದು ಅವನ ದೃಷ್ಟಿ ಎಂದಿದ್ದಾರೆ.'[೨೦] ಇದನ್ನು ಒಪ್ಪದ ಎಂ.ಆರ್.ಶ್ರೀನಿವಾಸಮೂರ್ತಿ ಅವರು ತಮ್ಮ ಸಾಹಿತ್ಯಾವಲೋಕನ ಕೃತಿಯಲ್ಲಿ ಈ ವಿಚಾರದ ಕುರಿತು ಪ್ರಸ್ತಾಪಿಸುವಾಗ, ರಾಘವಾಂಕನು ಅಲ್ಲಮನ ಸಂಕುಚಿತ ಮನೋಭಾವವನ್ನಾಗಲಿ ನಿಷ್ಕರುಣೆಯನ್ನಾಗಲಿ ತೋರಿಸುವುದಕ್ಕೆ ಪ್ರಯತ್ನಿಸಿಲ್ಲ, ಸಿದ್ಧರಾಮನ ವಾದವನ್ನೂ ಅಲ್ಲಮನು ಒಪ್ಪಿಕೊಂಡು ಹೊಗಳಿ ಹೋದಂತೆ ನಿರೂಪಿಸುವುದು ರಾಘವಾಂಕನ ಆಶಯವಲ್ಲವೆಂದು ಸಾಧಾರಣ ಪೂರ್ವಕವಾಗಿ ತಿಳಿಸಿದ್ದಾರೆ. ಇದಕ್ಕೆ ಪೂರಕವಾಗಿ ಒಪ್ಪಿಕೊಂಡ ಡಿ.ಎಲ್.ಎನ್. ಅವರು ಸಿದ್ಧರಾಮನ ಬಾಳಿಗೆ ತಕ್ಕುದಾದ ಮುಕ್ತಾಯವನ್ನು ಅಲ್ಲಮ ಕರುಣೆಯಿಂದ ತೋರಿಸಿದ್ದಾನೆ ಎಂದು ಮುಕ್ತ ಮನಸ್ಸಿನಿಂದ ಪ್ರತಿಕ್ರಿಯಿಸಿ ಒಪ್ಪಿಕೊಂಡಿದ್ದಾರೆ.

ಒಟ್ಟಾರೆಯಾಗಿ, ಸಿದ್ಧರಾಮ ಚಾರಿತ್ರ ಇದು ಉತ್ಕೃಷ್ಟ ವೀರಶೈವ ಕಾವ್ಯ ಪುರಾಣದ ಪದ್ಧತಿಯ ಮೇಲ್ಪಂಕ್ತಿಗೆ ಸೇರಿದ್ದಾಗಿದೆ. ಚೆನ್ನಬಸವ ಪುರಾಣದಂತಹ ಇತರೆ ಕಾವ್ಯಗಳು ರಾಘವಾಂಕನ ಈ ಜಾಡನ್ನೇ ಹಿಡಿದಿವೆ. ಅವುಗಳ ಬೆಲೆ ಏರುತ್ತಿತ್ತೆಂಬ ಪ್ರಮುಖ ಅಂಶ ಎಲ್ಲಾ ಕಾಲಕ್ಕೂ ಒಪ್ಪುವಂತಹ ಮಾತಾಗಿದೆ. ಅಲ್ಲದೆ ರಾಘವಾಂಕನು ಸಿದ್ಧರಾಮನ ಮೂಲಕ ಜಗತ್ತಿಗೆ ಸಾರಿದ ಸಂದೇಶಗಳು ಇಂದಿಗೂ ಸಮಾಜದಲ್ಲಿ ಹೇಗೆ ಮಾರ್ಗದರ್ಶಕವಾಗಿ ಸಾಗಿವೆ ಎಂಬುದನ್ನು ಸಿದ್ಧಿಸಿಕೊಳ್ಳುವುದು ಪ್ರಮುಖ ಅಂಶವಾಗಿದೆ.

**೩.೪. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ**

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಾಚೀನ ಸಾಹಿತ್ಯವು ಮಹತ್ವದ ಸ್ಥಾನವನ್ನು ಗಿಟ್ಟಿಸಿಕೊಂಡಿದೆ. ಭಾಷೆ, ಸಾಹಿತ್ಯದವಸ್ತು, ಕಥಾ-ಹಂದರ, ಬರವಣಿಗೆಯ-ಶೈಲಿ, ಶಾಸ್ತ್ರದ ಚೌಕಟ್ಟು, ಧರ್ಮದ ಪ್ರಭಾವದಂತಹ ಎಲ್ಲಾ ಅಂಶಗಳಿಂದಲೂ ತನ್ನದೇ ಆದ ವಿಭಿನ್ನ ಹಾಗೂ ವಿಶಿಷ್ಟತೆಯಿಂದ ಕೂಡಿಕೊಂಡುದಾಗಿದೆ. ಈ ಸಾಹಿತ್ಯವನ್ನು ಮೈಗೂಡಿಸಿಕೊಂಡು ಅಂದಿನ ಸಮಕಾಲೀನ ಸಮಾಜದ ಬದುಕಿಗೆ ಸ್ಪಂದಿಸಿದ ಕವಿಗಳು ಇದಕ್ಕೆ ಪ್ರತಿಫಲನದಂತೆ ಕಾವ್ಯ, ಗದ್ಯ ಇತರೆ ಸಾಹಿತ್ಯ ರಚನೆ ಮಾಡಿದ್ದರು. ಇಂತಹ ಪ್ರಾಚೀನ ಸಾಹಿತ್ಯವನ್ನು

ಸಂಪಾದನೆ, ವಿಶ್ಲೇಷಣೆ, ವ್ಯಾಖ್ಯಾನ, ಇತರೆ ಅಧ್ಯಯನ ಪೂರಕ ಚರ್ಚೆಗಳನ್ನು ನಡೆಸುವುದರ ಮೂಲಕ ಕ್ರಿಯಾಶೀಲ ಅಧ್ಯಯನ ನಡೆಸಿದವರೆಲ್ಲೊಬ್ಬರು ಡಿ.ಎಲ್.ಎನ್.

ಡಿ.ಎಲ್.ಎನ್. ಅವರನ್ನು ಕನ್ನಡದ ಕಟ್ಟಾಳು ಎಂದರೂ ತಪ್ಪಾಗದ್ದಾಗಿದೆ. ಈ ಮಾತಿಗೆ ಪೂರಕವೆಂಬಂತೆ ಕನ್ನಡ ಸಾಹಿತ್ಯಕ್ಕೆ ಅವರು ನೀಡಿದ ಕೊಡುಗೆ ಅಪರಾವಾದದ್ದಾಗಿದೆ, ಆದರೂ ಕನ್ನಡದ ಮೊದಲ ಗದ್ಯಕೃತಿ ಎಂದು ಪ್ರಸಿದ್ಧವಾದ 'ವಡ್ಡಾರಾಧನೆ'ಯನ್ನು ಸಾಹಿತ್ಯಲೋಕಕ್ಕೆ ಪರಿಚಯಿಸಿದ ತನ್ನಿಮಿತ್ತ ಈ ಮೇಲಿನ ಮಾತಿಗೆ ಹೊರತಾಗಿಲ್ಲದ್ದಾಗಿದ್ದಾರೆ. ಡಿ.ಎಲ್.ಎನ್ ಅವರು ೧೯೩೦ರಲ್ಲಿ ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿ ರೆಸಿಡೆಂಟ್ ಕನ್ನಡ ಪಂಡಿತರಾಗಿ ನೇಮಕಗೊಂಡಿದ್ದರು. ಅವರು ಕವಿಚರಿತೆ ಸಂಪುಟಗಳಲ್ಲಿ ಸೇರದೆ ಇರುವ ಯಾವುದಾದರೂ ಪ್ರಾಚೀನ ಕೃತಿಗಳಿವೆಯೋ ಏನೋ? ಎಂದು ತಿಳಿಯುವ ಕುತೂಹಲದಲ್ಲಿ ೧೯೩೦ರ ವೇಳೆಗೆ ಮೈಸೂರಿನ ಓರಿಯಂಟಲ್ ಲೈಬ್ರೆರಿಯಲ್ಲಿ ಕನ್ನಡ ಹಸ್ತಪ್ರತಿಗಳ ಪಟ್ಟಿಯಲ್ಲಿ ಕವಿಯ ಹೆಸರೇ ಇಲ್ಲದ ಒಂದು ಕೃತಿಯು ದೊರೆತು ಅದು ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದೆ ಎಂದು ಆ ಪಟ್ಟಿಯಲ್ಲಿ ಉಲ್ಲೇಖಿಸಿದ್ದು ತಿಳಿದು ಬಂದಿತ್ತು. ಈ ವಿಷಯವನ್ನು ಪರಿಶೀಲಿಸಿ ನೋಡಿ ಅದು ವಾರ್ಧಕ ಷಟ್ಪದಿಯಲ್ಲಿ ಇರದೆ ಗದ್ಯಶೈಲಿಯಲ್ಲಿ ರಚಿತವಾಗಿರುವುದು ತಿಳಿಯಿತು. ಆರಂಭದ ಕಲೆ ಓಲೆಗಳನ್ನು ಓದುತ್ತಾ ಹೋದಂತೆ ಅಲ್ಲಿನ ಗದ್ಯಶೈಲಿ ಅವರನ್ನು ಆಕರ್ಷಿಸಿ ಇಂತಹ ಒಳ್ಳೆಯ ಗದ್ಯ ಹಳೆಗನ್ನಡದಲ್ಲಿ ರಚಿತವಾದದ್ದನ್ನು ಕಂಡು ಪರಿಶೀಲಿಸುತ್ತಿರುವಾಗ ಇದರ ಇಪ್ಪತ್ತನೆಯ ಗರಿಯಲ್ಲಿ 'ವೊಡ್ಡಾರಾಧಣಂ' ಎಂಬ ವಿವರಗಳಿದ್ದವನ್ನು ಕುತೂಹಲದಿಂದ ಅಭ್ಯಾಸಿಸಿ ೧೯೩೧ರ ವೇಳೆಗೆ ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆಯ ಸಂಪಾದಕರಾದ ಬೆಳ್ಳಾವೆ ವೆಂಕಟನಾರಾಯಣಪ್ಪ ಅವರ ಅವಧಿಯಲ್ಲಿ ಆ ಓಲೆಯ ಪ್ರತಿಯಲ್ಲಿನ ೧೯ ಕಥೆಗಳಲ್ಲಿ ಮೂರನ್ನು ಮಾತ್ರ ಆರಿಸಿಕೊಂಡು ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟಪಡಿಸಿದ್ದರಲ್ಲದೆ ಗ್ರಂಥದ ಮತ್ತು ಅದರ ಕರ್ತೃವಿನ ವಿಷಯವಾಗಿ ತಮಗೆ ತಿಳಿದಷ್ಟು ವಿಚಾರಗಳನ್ನು ಈ ಪ್ರಕಟಣೆಯ ಮುನ್ನುಡಿಯಲ್ಲಿ ಸಂಕಲಿಸಿದ್ದು ವಿಶೇಷವಾಗಿದೆ. ಲಭ್ಯವಾದ ಈ ಒಂದೇ ಪ್ರತಿಯಿಂದ ಗ್ರಂಥ ಪರಿಷ್ಕರಣೆ ಸಾಧ್ಯವಿಲ್ಲವೆಂದು ತಿಳಿದು ಹೆಚ್ಚಿನ ಅಭ್ಯಾಸದಲ್ಲಿ ತೊಡಗಿ ೧೯೩೪ರ ವೇಳೆಗೆ ಮೂಡಬಿದರೆಯ ಶ್ರೀಲೋಕನಾಥ ಶಾಸ್ತ್ರಿಗಳ ಬಳಿ 'ವಡ್ಡಾರಾಧನೆಯ' ಒಂದು ಓಲೆಯ ಪ್ರತಿ ಇರುವುದು ತಿಳಿದು ಅದರಲ್ಲಿನ ಪಾಠಾಂತರಗಳನ್ನು ಎನ್.ಅನಂತರಂಗಾಚಾರ್ ಅವರ ಸಹಾಯದಿಂದ ಪಡೆದರು. ಈ ಹೊತ್ತಿಗಾಗಲೇ ಆಚಾರ್ಯ ಬಿ.ಎಂ.ಶ್ರೀ. ಅವರು ಈ ಕೃತಿಯನ್ನು ಪರಿಷತ್ ಪತ್ರಿಕೆಯಲ್ಲಿ ಭಾಗಶಃ ಮುದ್ರಿಸುವ ಆಶ್ವಾಸನೆ ಪ್ರೋತ್ಸಾಹಗಳನ್ನು ಡಿ.ಎಲ್.ಎನ್. ಅವರಿಗೆ ನೀಡಿದ್ದರು. ಆಗ ಈವರೆಗೂ ದೊರೆತ ೨ ಪ್ರತಿಗಳ ಸಹಾಯದಿಂದ 'ಸುಕುಮಾರ ಸ್ವಾಮಿಯ ಕಥೆ'ಯನ್ನು ಸಿದ್ಧಗೊಳಿಸಿ ಪರಿಷತ್ ಪತ್ರಿಕೆಯ ಸಂಪುಟ ೨೪

ಸಂಚಿಕೆ ೪ ರಲ್ಲಿ ಪ್ರಕಟಣೆಗೊಳಿಸಿದರು. ಮುಂದೆ ಸಾಹಿತ್ಯ ಪರಿಷತ್ತು ಇಡೀ ಗ್ರಂಥವನ್ನು ಮುದ್ರಣ ಮಾಡಲು ಮುಂದಾದಾಗ ಅದನ್ನು ತಿಳಿದ ಸಾಲಿಗ್ರಾಮದ ಸರಾಫ್ ಶ್ರೀ ಪದ್ಮರಾಜಯ್ಯನವರು ತಮ್ಮಲ್ಲಿದ್ದ ಮೂರು ಪ್ರತಿಗಳನ್ನು ಡಿ.ಎಲ್.ಎನ್. ಅವರಿಗೆ ಕಳುಹಿಸಿಕೊಟ್ಟರು. ಇದಾದ ಮೇಲೆ ಸೆಂಟ್ರೆಲ್ ಜೈನ ಲೈಬ್ರರಿಯಲ್ಲಿದ್ದ ಇನ್ನೊಂದು ಪ್ರತಿಯನ್ನು ಸಾಹಿತ್ಯ ಪರಿಷತ್ತು ತರಿಸಿಕೊಂಡಿತು. ಈ ಆರು ಪ್ರತಿಗಳ ಸಹಾಯದಿಂದ ಗ್ರಂಥದ ಪರಿಷ್ಕರಣೆ ಕಾರ್ಯವು ನಡೆದು ಜೊತೆಗೆ ಸಂಪುಟ ೨೪ ಸಂಚಿಕೆ ೪ ರಿಂದ ಆರಂಭವಾದ ಪರಿಷತ್ ಪತ್ರಿಕೆಯಲ್ಲಿನ ಕಥೆಗಳ ಪ್ರಕಟಣೆ ಸಂಪುಟ ೨೮ ಸಂಚಿಕೆ ೨-೩ರ ವರೆಗೆ ಒಟ್ಟು ೫ ಸಂಚಿಕೆಗಳಲ್ಲಿ ೧೯ ಕಥೆಗಳು ಬಿಡಿ ಬಿಡಿಯಾಗಿ ಪ್ರಕಟಗೊಂಡು ನಾಡಿನ ಓದುಗ ವಲಯದ ವಿದ್ವತ್ ಲೋಕದಲ್ಲಿ ಬಿತ್ತರಗೊಂಡವು.

ಈಗ ಪ್ರಕಟಗೊಂಡ ೧೯ ಕಥೆಗಳ ಸಾರ ಒಟ್ಟಾಗಿ ಈವರೆಗೂ ದೊರೆತ ಆರು ಹಸ್ತಪ್ರತಿಗಳ ಸಹಾಯದಿಂದ ಗ್ರಂಥಪರಿಷ್ಕರಣೆ, ಗ್ರಂಥರಚನೆ, ಕಾರ್ಯವು ನಡೆದು ೧೯೪೯ನೇಯ ವರ್ಷದ ಆಗಸ್ಟ್ ತಿಂಗಳು 'ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ' ಎಂಬ ಶೀರ್ಷಿಕೆಯಲ್ಲಿ ಈ ಕೃತಿಯು ಸಾಹಿತ್ಯ ಪರಿಷತ್ತಿನಿಂದ ಪೂರ್ಣ ಪ್ರಮಾಣದಲ್ಲಿ ಅಚ್ಚಾಗಿ ಹೊರಬಂದಿತು. ಈಗ ರೂಪುಗೊಳ್ಳಲು ಒಟ್ಟು ೧೯ ವರ್ಷಗಳ ಅವಧಿಯು ಬೇಕಾಯಿತು. ಇದು ಸಂಪಾದಿತ ಕೃತಿಯ ಸಂಪಾದನೆ, ಸಂಕಲನದ ಪೂರ್ವ ಇತಿಹಾಸ. ಈ ವಿಷಯಗಳು ಕೃತಿಯ ಗಟ್ಟಿಗೊಳ್ಳುವಿಕೆಗೆ ಭದ್ರಬುನಾದಿ ಆಗಿವೆ. ಕೇವಲ ಒಂದೇ ಒಂದು ಪ್ರತಿಯ ಸಹಾಯದಿಂದ ಆರಂಭವಾದ ವಡ್ಡಾರಾಧನೆಯ ಸಂಪಾದನೆಯ ಯಾತ್ರೆ ಕೊನೆಗೆ ಆರು ಪ್ರತಿಗಳ ಪರಮರ್ಶನ ವಿಚಾರಗಳೊಂದಿಗೆ ಬೆರೆತು ಯಶಸ್ವಿಯಾಗಿ ಪೂರ್ಣಗೊಂಡು ಲೋಕಾರ್ಪಣೆಯಾಯಿತು. ಈ ಕೃತಿಯ ಸಂಪಾದನೆಗೆ ಸಹಾಯಕವಾದ ಹಸ್ತಪ್ರತಿ ದಾನಿಗಳು ಹಾಗೂ ಹಸ್ತಪ್ರತಿಗಳನ್ನು ಈ ಕೆಳಗಿನಂತೆ ವಿವರವಾಗಿ ಕಾಣಬಹುದಾಗಿದೆ.

೧) 'ಕ' ಪ್ರತಿ ಇದು ಮೈಸೂರಿನ ಓರಿಯಂಟಲ್ ಲೈಬ್ರೆರಿಯ ಕೆ ೪೧೫ನೇ ಸಂಖ್ಯೆಯ ಓಲೆಯ ಪ್ರತಿಯಾಗಿದ್ದು ಇದು ಮೊದಲಿಗೆ ಸರಾಫ್ ಪದ್ಮರಾಜಯ್ಯನವರಲ್ಲಿದ್ದು ನಂತರದ ದಿನಗಳಲ್ಲಿ ಅಂದರೆ ೧೯೨೦ರಲ್ಲಿ ಈ ಪ್ರತಿಯನ್ನು ಓರಿಯೆಂಟಲ್ ಲೈಬ್ರೆರಿಗೆ ಕೊಟ್ಟಿದ್ದಾರೆಂದು ತಿಳಿದುಬಂದಿದೆ. ಇದರಲ್ಲಿ ಒಟ್ಟು ೧೦೮ ಪತ್ರಗಳಿದ್ದು ಅಲ್ಲಲ್ಲಿ ಪ್ರತಿ ನಷ್ಟ ಕಂಡುಬಂದಿದೆ. ಪ್ರತಿಗಳ ಉದ್ದ ೧೭.೫ ಅಂಗುಲಗಳು, ಅಗಲ ೧.೯ ಅಂಗುಲಗಳಿದ್ದು ಪ್ರತಿಯೊಂದು ಪತ್ರದ ಒಂದೊಂದು ಪಾಶ್ವದಲ್ಲಿ ೯ ಸಾಲುಗಳಿಂದ ಲಿಖಿತಗೊಂಡಿದೆ. ಈ ಪ್ರತಿಯಲ್ಲಿರುವ ಲಿಪಿಯ ರೂಪ ವಿಜಯನಗರ ಕಾಲದ ಕನ್ನಡ ಶಾಸನಾಕ್ಷರಗಳನ್ನು ಹೋಲುವಂತದ್ದಾಗಿವೆ. ಈ ಎಲ್ಲಾ ಓಲೆಗಳ ಜೀರ್ಣಾವಸ್ಥೆಯನ್ನು ಲಿಪಿರೂಪವನ್ನು ಗ್ರಹಿಸಿ, ಇದು ಬಹುಶಃ ಕ್ರಿ.ಶ. ೧೪೩೪ರಲ್ಲಿ ಲಿಖಿತವಾಗಿರಬಹುದೆಂದು ಸಂಪಾದಕರು ಕೃತಿಯಲ್ಲಿ

ಈ ಪ್ರತಿಯ ಇತರೆ ವಿಚಾರಗಳನ್ನು ಸಮೀಕರಿಸಿಕೊಂಡು ಸವಿವರವಾಗಿ ದಾಖಲಿಸಿದ್ದು ತಿಳಿದುಬಂದಿದೆ.

೨) 'ಖ' ಪ್ರತಿ ಇದು ಓಲೆಯ ಪ್ರತಿಯಾಗಿದ್ದು ಇದರಲ್ಲಿನ ಪಂಕ್ತಿ ಅಕ್ಷರಗಳ ವಿವರಣೆಯನ್ನು ಅನಿವಾರ್ಯ ಕಾರಣಗಳಿಂದ ಪ್ರತಿ ದೊರೆತಾಗ ಸಂಪಾದಕರು ದಾಖಲಿಸಿಕೊಂಡಿಲ್ಲವೆಂದು ಕೃತಿಯ ಪ್ರಸ್ತಾವನೆಯಲ್ಲಿ ಉಲ್ಲೇಖಿಸಿದ್ದಾರೆ. ಈ ಪ್ರತಿಯು ಮೂಡಬಿದರೆಯ ಶ್ರೀ ಶ್ರೀ ಚಾರುಕೀರ್ತಿ ಪಂಡಿತಾಚಾರ್ಯರ ಶ್ರೀಮಠಕ್ಕೆ ಸೇರಿದ್ದಾಗಿದೆ. ಇದು ಅದೇ ಊರಿನ ಎಚ್. ಲೋಕನಾಥಶಾಸ್ತ್ರಿಗಳಿಂದ ಎನ್. ಅನಂತರಂಗಾಚಾರ್ ಅವರಿಗೆ ದೊರೆತು ಇವರು ಡಿ.ಎಲ್.ಎನ್. ಅವರ ಸಹಾಯಾರ್ಥಕ್ಕಾಗಿ ಇದರಲ್ಲಿನ ಪಾಠಾಂತರಗಳನ್ನು ಗುರುತು ಮಾಡಿಕೊಟ್ಟಿದ್ದರು. ಈ ಪ್ರತಿಯಲ್ಲಿ ಕೆಲ ಓಲೆಗಳು ನಷ್ಟವಿದ್ದು ದೀರ್ಘವಾದ ಗ್ರಂಥಪಾಠಗಳು ಹೆಚ್ಚಿನ ಪ್ರಮಾಣದಲ್ಲಿ ಮೂಡಿಬಂದಿವೆ ಎಂದು ತಿಳಿದುಬಂದಿದೆ. ಈ ಪ್ರತಿಯಲ್ಲಿನ ಕೆಲ ವಿದ್ವತ್ ಭಾಗಗಳನ್ನು ಗ್ರಹಿಸಿದ ಸಂಪಾದಕರ ನಿರ್ಣಯದಂತೆ ಇದರ ಕಾಲ ಕ್ರಿ.ಶ. ೧೯೦೩ ಇದ್ದು ಇದು ಮೈಸೂರಿನ ಓರಿಯಂಟೆಲ್ ಲೈಬ್ರರಿಯ ಕೆ.ಎ.೨೩೯ರ ಸಂಖ್ಯೆಯ ಕಾಗದದ ಹಸ್ತಪ್ರತಿಯ ನಕಲಾಗಿದೆ ಎಂದು ತಿಳಿಸಿದ್ದಾರೆ.

೩) 'ಗ' ಪ್ರತಿ ಇದರ ವಿಚಾರವಾಗಿ ತಿಳಿದು ಬಂದ ಅಂಶಗಳೆಂದರೇ, ಈ ಪ್ರತಿಯು ಸಾಲಿಗ್ರಾಮದ ಸರಾಫ್ ಪದ್ಮರಾಜಯ್ಯನವರ ಭಂಡಾರಕ್ಕೆ ಸೇರಿದ್ದಾಗಿದ್ದು ಇದು ದಪ್ಪಕಾಗದದ ಪ್ರತಿಗಳನ್ನು ಹೊಂದಿದ್ದಾಗಿದೆ. ಈ ಪ್ರತಿಯ ವಿಚಾರವಾಗಿ ಸಂಪಾದಕರು ತಿಳಿಸಿದಂತೆ ಇದರ ಒಟ್ಟು ಹಾಳೆಗಳ ಸಂಖ್ಯೆ ೧೧೯ ಇದ್ದು ಪ್ರತಿ ಹಾಳೆಯ ಉದ್ದ ೧೨ ಅಂಗುಲ, ಅಗಲ–೭ ಅಂಗುಲವಿದ್ದು ಪ್ರತಿ ಹಾಳೆಯ ಎರಡೂ ಬದಿ ಬರಹದಿಂದ ಕೂಡಿದ್ದಾಗಿದೆ. ಪ್ರತಿ ಪುಟದ ಸಾಲುಗಳ ಸಂಖ್ಯೆ ೧೫ ಇದ್ದು ಪ್ರತಿ ಸಾಲಿನ ಅಕ್ಷರಗಳ ಸಂಖ್ಯೆ ೨೮ರಿಂದ ೩೮ ರವರೆಗೆ ಲಿಖಿತಗೊಂಡು ಸಂಕಲಿತಗೊಂಡದ್ದಾಗಿದೆ. ಇದು 'ಕ' ಪ್ರತಿಯ ನಕಲಾಗಿದ್ದು ಇದರ ಕಾಲ ಕ್ರಿ.ಶ. ೧೮೯೮ ಎಂದು ಇತರೆ ವಿಚಾರಗಳೊಂದಿಗೆ ಪ್ರತಿ ನಿರ್ಣಯವನ್ನು ಸಾದಾರಪೂರ್ವಕವಾಗಿ ಸಂಪಾದಕರು ಚರ್ಚಿಸಿದ್ದು ಕೃತಿಯ ಪ್ರಸ್ತಾವನೆ ಭಾಗದಲ್ಲಿ ಉದ್ಧೃತಗೊಂಡಿದೆ.

೪) 'ಘ' ಪ್ರತಿ ಇದು ಓಲೆಯ ಪ್ರತಿಯಾಗಿದ್ದು ಇದೂ ಕೂಡಾ ಸರಾಫ್ ಪದ್ಮರಾಜಯ್ಯನವರ ಭಂಡಾರಕ್ಕೆ ಸೇರಿದ್ದಾಗಿತ್ತು. ಇದರಲ್ಲಿ ೧೧೯ ಓಲೆಯ ಪ್ರತಿಗಳಿದ್ದು ಗ್ರಂಥ ಸಮಗ್ರವಾಗಿದೆ ಎಂದು ಸಂಪಾದಕರು ಪ್ರತಿಯನ್ನು ಅನುಲಕ್ಷಿಸಿ ತಿಳಿಸಿದ್ದಾರೆ. ಇದರ ಇತರೆ ವಿಷಯಗಳನ್ನು ಕೃತಿಯ ಪ್ರಸ್ತಾವನೆ ಭಾಗದಲ್ಲಿ ಉಲ್ಲೇಖಿಸಿದ್ದು ಪ್ರತಿ ಓಲೆಯಗರಿಗಳ ಅಳತೆಯು ೧೩ ಅಂಗುಲವಿದ್ದು ಒಂದೊಂದು ಭಾಗದಲ್ಲಿ ೮–೯ ಪಂಕ್ತಿಗಳಿಂದ ಕೂಡಿದೆ. ಪ್ರತಿ ಪಂಕ್ತಿಯ ಅಕ್ಷರಗಳು ೭೪ ರಿಂದ ೬೬ರ ವರೆಗೆ ಆವೃತವಾಗಿವೆ ಎಂದು ತಿಳಿದುಬಂದಿದೆ.

ಇತರೆ ವಿಚಾರಾದಿಗಳಾಗಿ ಕಂಡು ಬಂದ ಅಂಶಗಳೆಂದರೆ, 'ಱ', 'ೞ' ಕಾರದ ಬಳಕೆಯ ವಿಚಾರ ಸ್ವರಾಂತ್ಯಗಳ ವಿಚಾರಗಳೊಂದಿಗೆ ಪ್ರತಿ ನಷ್ಟ ವಿಚಾರಗಳನ್ನು ತಿಳಿಸಿದ್ದು ಇದರ ಕಾಲ ನಿರ್ಣಯವಾಗಿ ಸುಮಾರು ೧೭ನೆಯ ಶತಮಾನದ ಕೊನೆಯ ಭಾಗವೆಂದು ಉಲ್ಲೇಖಿಸಿದ್ದಾರೆ.

೫) 'ಚ' ಪ್ರತಿ ಇದು ಮೈಸೂರು ಜಿಲ್ಲೆಯ ಹೆಗ್ಗಡೆದೇವನಕೋಟೆ ತಾಲೂಕಿನ ಸರಗೂರಿಗೆ ಸೇರಿದ ಪ್ರತಿಯಾಗಿದ್ದು ಇದೂ ಕೂಡ ಸರಾಫ್ ಪದ್ಮರಾಜಯ್ಯನವರಿಂದಲೇ ಸಂಪಾದಕರಿಗೆ ದೊರೆತದ್ದಾಗಿದೆ. ಇದರಲ್ಲಿನ ಓಲೆಗಳ ಸಂಖ್ಯೆ ೧೨೭ ರಿಂದ ೧೯೦ ಇದ್ದು ಓಲೆಗಳ ಉದ್ದಗಲ ೧೮x೨.೪ ಇದ್ದು ಪ್ರತಿ ಪುಟದಲ್ಲಿ ೧೦ ರಿಂದ ೧೧ ಸಾಲುಗಳಿವೆ ಎಂದು ಸಂಪಾದಕರು ತಿಳಿಸಿದ್ದಾರೆ. ಪ್ರತಿ ಸಾಲಿನಲ್ಲಿ ೮೦ ಅಕ್ಷರಗಳಿದ್ದು ಅಲ್ಲಲ್ಲಿ ಕೃತಿಯ ತ್ರುಟಿತ ಭಾಗ ಎದ್ದುಕಂಡಿದೆ ಒಟ್ಟಾರೆ ಈ ಪ್ರತಿಯು ಸುಮಾರು ೧೭ ನೆಯ ಶತಮಾನದ ಕಾಲಘಟ್ಟದಲ್ಲಿ ರೂಪುಗೊಂಡಿದ್ದೆನ್ನಲಾಗಿದೆ.

೬) 'ಛ' ಪ್ರತಿ ಇದು ಆರಾಧನಾ ಸೆಂಟ್ರಲ್ ಜೈನ್ ಲೈಬ್ರರಿಗೆ ಸೇರಿದ ಪ್ರತಿಯಾಗಿದ್ದು, ಇದು ಅಸಮಗ್ರವಾದದ್ದಾಗಿದೆ ಎಂದು ಸಂಪಾದಕರು ತಿಳಿಸಿದ್ದಾರೆ. ಪ್ರತಿಯ ವಿಚಾರವಾಗಿ ತಿಳಿಸುತ್ತಾ ಪ್ರತಿಯಲ್ಲಿನ ಓಲೆಗಳ ಸಂಖ್ಯೆ ಒಟ್ಟು ೮೦ ಇದ್ದು ಅಲ್ಲಲ್ಲಿ ಪ್ರತಿ ನಷ್ಟ ವಿಪರೀತವಾಗಿ ಎದ್ದು ಕಂಡದ್ದಾಗಿದೆ. ಪ್ರತಿ ಓಲೆಯ ಉದ್ದxಅಗಲ ೧೧x೧.೮ಇದ್ದು ಪ್ರತಿಯಲ್ಲಿನ ಸಾಲುಗಳ ಸಂಖ್ಯೆ ೭ರಿಂದ ೮ ಇವೆ. ಅಕ್ಷರಗಳ ಸಂಖ್ಯೆ ೪೨–೪೬ ಇದ್ದು ಇದರ ಆಯುಷ್ಯ ೯ ವರ್ಷ ಹೆಚ್ಚಾಗಿದ್ದಾಗಿದೆ. ಒಟ್ಟಾರೆ, ಈ ಪ್ರತಿಯ ಕಾಲಮಾನ ಸುಮಾರು ೧೭ನೆಯ ಶತಮಾನ ಎಂದು ಗುರುತಿಸಲಾಗಿದ್ದು ಇದರ ಸಂಪಾದನೆ ಕಾಲಕ್ಕಾಗಲೇ ೩೦೦ ವರ್ಷಗಳಷ್ಟು ಹಳೆಯ ಪ್ರತಿಯಾಗಿ ತೋರುತ್ತದೆ ಎಂದು ಡಿ.ಎಲ್.ಎನ್. ಸ್ಪಷ್ಟೀಕರಿಸಿದೆ.

ಡಿ.ಎಲ್.ಎನ್ ಅವರು ಮುಂದೆ ಈ ಆರು ಪ್ರತಿಗಳ ಸಹಾಯದಿಂದ ಪಾಠಾಂತರ ಸಂಕಲನ ಮಾಡಿದ ಮೇಲೆ ಆ.ನೆ. ಉಪಾಧ್ಯೆ ಅವರ ಮೂಲಕ ಇನ್ನೊಂದು ಓಲೆಯ ಪ್ರತಿ ದೊರೆತಿದ್ದು ಇದರ ಸಂಕೇತ ಸಂಖ್ಯೆ ೪೫ ಎಂದು ಉಲ್ಲೇಖಿಸಿದ್ದಾರೆ. ಇದು ತಾಳೆಯ ಓಲೆ ಪ್ರತಿಯಾಗಿದ್ದು ಇದರಲ್ಲಿನ ಕೆಲ ಪ್ರತಿಗಳನ್ನು ಉಳಿಸಿಕೊಂಡು ಪಾಠಾಂತರಗಳನ್ನು ಗಮನಿಸಿದ ಸಂಪಾದಕರು ಇದು ಈಗಾಗಲೇ ಈ ಹಿಂದೆ ದೊರೆತಿದ್ದ 'ಘ', 'ಚ', 'ಛ' ಪ್ರತಿಗಳ ಸಂಪ್ರದಾಯಕ್ಕೆ ಸೇರಿದ್ದೆಂದು ಖಚಿತಪಡಿಸಿ ಇದರ ಮೂಲಸ್ಥಾನ ಕೊಲ್ಲಾಪೂರದ ಲಕ್ಷ್ಮೀಸೇನ ಭಟ್ಟಾರಕರ ಜೈನಮಠಕ್ಕೆ ಸೇರಿದ ೧೭ನೇ ಶತಮಾನದ ಪ್ರತಿ ಇದೆಂದು ಗುರುತಿಸಿದ್ದಾರೆ. ನಂತರ ಈ ಪ್ರತಿಯಲ್ಲಿನ ಕೆಲವು ಕಥೆಗಳನ್ನು ಪರಿಷ್ಕರಣೆಗೆ ಮಾತ್ರ ಬಳಸಿಕೊಂಡಿದ್ದು ಕಂಡುಬಂದಿದೆ.

'ಡಿ.ಎಲ್.ಎನ್. ಅವರು ಈ ಕೃತಿಯ ಸಂಪಾದನೆಗೆ ಒಟ್ಟಾರೆಯಾಗಿ ಏಳು ಹಸ್ತಪ್ರತಿಗಳನ್ನು ಬಳಸಿದ್ದು ಕಂಡುಬಂದಿದ್ದು, ಈ ಏಳು ಹಸ್ತಪ್ರತಿಗಳಲ್ಲಿನ ಸಾಮಿಪ್ಯ ವ್ಯತ್ಯಾಸಗಳ ಆಧಾರದಿಂದ

ಅವುಗಳ ಪೀಳಿಗೆಯನ್ನು ಗುರುತಿಸಿದ್ದಾರೆ. ಅವರ ಪ್ರಕಾರ 'ಕ', 'ಖ', ಪ್ರತಿಗಳದ್ದು ಒಂದು ಗುಂಪು ಉಳಿದ 'ಘ' 'ಚ' 'ಛ' ಮತ್ತು ಕೊಲ್ಲಾಪುರದ ಪ್ರತಿಗಳದ್ದು ಒಂದು ಗುಂಪು 'ಗ' ಪ್ರತಿಯು 'ಕ' ಪ್ರತಿಯ ನಕಲು ಎಂಬುದನ್ನು ಇವರು ಗುರುತಿಸಿದ್ದಾರೆ. ಎರಡನೆಯ ಗುಂಪಿನ ನಾಲ್ಕು ಹಸ್ತಪ್ರತಿಗಳಲ್ಲೂ ಸಮಾನವಾದ ಸ್ಖಾಲಿತ್ಯಗಳಿರುವುದನ್ನು ಗಮನಿಸಿದ್ದಾರೆ. ಈ ಕೃತಿಯ ಪೀಠಿಕೆಯಲ್ಲಿ ಸಂಪಾದನೆಗೆ ಬಳಸಲಾಗಿದ್ದ ಹಸ್ತಪ್ರತಿಗಳ ಸಂಭಂದವನ್ನು ವೈಜ್ಞಾನಿಕ ನೆಲೆಯಲ್ಲಿ ಗುರುತಿಸುವುದರ ಮೂಲಕ ಹಸ್ತಪ್ರತಿಗಳ ಪೀಳಿಗೆಯ ನಿರ್ಣಯವನ್ನು ಕಷ್ಟಸಾಧ್ಯವಾದರೂ ಖಚಿತವಾಗಿ ಹೇಳಿರುವುದು ಡಿ.ಎಲ್.ಎನ್. ಅವರ ಅಧ್ಯಯನದ ವಿಸ್ತೃತತೆಯನ್ನು ತಿಳಿಸುವುದಾಗಿದೆ. ಸಂಪಾದನೆಗಾಗಿ ಬಳಸಲಾಗಿದ್ದ ಎಲ್ಲಾ ಹಸ್ತಪ್ರತಿಗಳ ಪೀಳಿಗೆಯ ಪಾಠಗಳನ್ನು ಮುಂದಿಟ್ಟುಕೊಂಡು ಮಾಡಬೇಕಾದ ಈ ಕೆಲಸದಲ್ಲಿ ಡಿ.ಎಲ್.ಎನ್. ಅವರು ತೋರಿರುವ ಶ್ರದ್ಧೆ ನಿಷ್ಠೆ ಇತರರಿಗೆ ಮಾದರಿಯಾಗಿದೆ.'[೨೧]

ಡಿ.ಎಲ್.ಎನ್. ಅವರು ಈ ಕೃತಿ ಸಂಪಾದನೆಯ ನಂತರ ಪ್ರಕಟಣೆ ಅವಧಿಯಲ್ಲಿ ಒಟ್ಟು ೩೬೫ ಪುಟಗಳಲ್ಲಿ ಅಚ್ಚುಕಟ್ಟಾಗಿ ಈ ಕೃತಿಯನ್ನು ರಚಿಸಿ ತಮ್ಮ ಆದ್ಯಗುರುಗಳಾದ ಬಿ.ಎಂ.ಶ್ರೀ ಅವರಿಗೆ ಅರ್ಪಿಸುವುದರ ಮೂಲಕ ಪುಟ ೯ರಿಂದ ೩೫೩ರ ವರೆಗೆ ವಿಷಯ ಸೂಚಿ, ೩೫ ಪುಟಗಳ ವಿಸ್ತಾರವಾದ ಪ್ರಸ್ತಾವನೆ ನಿರೂಪಣೆಯಲ್ಲಿ ಕೃತಿಯ ಸಂಪಾದನೆಯ ಪೂರ್ವ ಪರ ವಿಚಾರಗಳು, ಕೃತಿಗೆ ಸಹಾಯಕವಾದ ಹಸ್ತಪ್ರತಿಗಳ ವಿಚಾರಗಳು, ಹಸ್ತಪ್ರತಿಗಳ ಪರಸ್ಪರ ಸಂಬಂಧದ ಸವಿಸ್ತಾರತೆ, ಗ್ರಂಥದ ಹೆಸರಿನಲ್ಲಿ ವಿಸ್ತೃತ ಚರ್ಚೆ, ಕರ್ತೃತ್ವ ವಿಚಾರ, ಕಾಲನಿರ್ಣಯ, ದೇಶ, ಹಿನ್ನೆಲೆಯಾದಿಯಾಗಿ ಸವಿಸ್ತಾರ ಚರ್ಚೆ ನೀಡಿದ್ದಾರೆ. ಮುಂದುವರೆದು ೪೫ನೇ ಪುಟದಿಂದ ೨೩೮ ನೆಯ ಪುಟದವರೆಗೆ ಒಟ್ಟು ೧೯೪ ಪುಟಗಳಲ್ಲಿ ೧೯ ಕಥೆಗಳನ್ನು ಬಿತ್ತರಿಸಿದ್ದು ಕಂಡುಬಂದು ಕಥೆಗಳಿಗೆ ಪೂರಕವೆಂಬಂತೆ ಪ್ರತಿಪುಟಗಳಲ್ಲಿನ ಅಡಿಟಿಪ್ಪಣಿಗಳು ಕೃತಿಯ ಪ್ರಬುದ್ಧತೆಯನ್ನು ಹೆಚ್ಚಿಸಿದ್ದಾಗಿವೆ. ಪುಟ ೨೩೯ ರಿಂದ ೩೦೮ರ ವರೆಗೆ ಒಟ್ಟು ೬೩ ಪುಟಗಳಷ್ಟು ಟಿಪ್ಪಣೆಗಳು ಕೃತಿಯನ್ನು ಪುಷ್ಟೀಕರಿಸಿವೆ, ಮುಂದುವರೆದು ಟಿಪ್ಪಣೆಯ ೨ನೆಯ ಭಾಗವಾಗಿ ಹರಿಷೇಣನ ಬೃಹತ್ ಕಥಾಕೋಶದ ಕಥೆಗಳ ಸಾರಾಂಶವನ್ನು ೨೭ ಪುಟಗಳಷ್ಟು ಅಂದರೇ ೩೦೯ರಿಂದ ೩೩೫ರವರೆಗೆ ವಿವರಿಸಿದ್ದು ಕೃತಿಯ ಗಟ್ಟಿತನವನ್ನು ಕಟ್ಟಿಕೊಟ್ಟದ್ದಾಗಿದೆ. ೩ನೇ ಭಾಗವಾಗಿ ೬ ಪುಟಗಳ ಕಠಿಣ ಪದಕೋಶ ಪುಟ ೩೩೬ರಿಂದ ೨೪೧ರ ವರೆಗೆ, ೪ನೇ ಭಾಗವಾಗಿ ೭ ಪುಟಗಳ ಜೈನ ಪಾರಿಭಾಷಿಕಕೋಶ ಪುಟ ೩೪೨ರಿಂದ ೩೪೮ರ ವರೆಗೆ, ೫ನೇಯ ಭಾಗವಾಗಿ ಉದ್ಧೃತ ಪದ್ಯಗಳ ಅಕಾರಾದಿಗಳನ್ನು ಪ್ರಾಕೃತ, ಸಂಸ್ಕೃತ, ಕನ್ನಡ ಪದಗಳನ್ನು ೪ ಪುಟಗಳಲ್ಲಿ ಪುಟ ೩೪೯ರಿಂದ ೩೫೨ರ ವರೆಗೆ ವಿವರಿಸಿದ್ದಾರೆ. ಕೊನೆಯ ಭಾಗವಾಗಿ ೨ ಪುಟಗಳ ಸಂಕೇತಗಳ ವಿವರವಾಗಿ ಪುಟ ೩೫೨ರಿಂದ ೩೫೪ರವರೆಗೆ ಕೊಟ್ಟಿದ್ದಾರೆ. ಈ ಎಲ್ಲಾ ಮೂಲಗಳಿಂದ ಕನ್ನಡದ ಮೊದಲ

ಪದ್ಯ–ಗದ್ಯ ಗ್ರಂಥದ ಭದ್ರಬುನಾದಿಯನ್ನು ನೆಟ್ಟ ಹಿರಿಮೆ ಡಿ.ಎಲ್.ಎನ್. ಅವರಿಗೆ ಸಲ್ಲುವುದರಲ್ಲಿ ಎರಡು ಮಾತಿಲ್ಲದ್ದಾಗಿದೆ.

ಬೌದ್ಧ, ಜೈನ, ವೈಷ್ಣವ ಮುಂತಾದ ಮತ, ಧರ್ಮದ ಸಂಪ್ರದಾಯಗಳು ಮಧ್ಯಕಾಲದಲ್ಲಿ ತಳೆದ ರೂಪವನ್ನು ಆಯಾ ಕಾಲಘಟ್ಟದ ರಾಜ್ಯಾಡಳಿತ ಸಂಸ್ಕೃತಿಯಲ್ಲಿಟ್ಟು ನೋಡಿದರೆ ನಮಗೆ ಅವುಗಳ ರಚನಾ ವಿನ್ಯಾಸ ಸಿಗುತ್ತದೆ. ಈ ಸಂಪ್ರದಾಯಗಳು ಆಯಾ ಕಾಲದ ರಾಜ್ಯಗಳಲ್ಲಿ ಗಳಿಸಿದ ಅಧಿಕಾರ ಹಾಗೂ ಸ್ಥಾನಮಾನಗಳಿಗೆ ಅವು ಅಳವಡಿಸಿಕೊಂಡ ಸಾಮುದಾಯಿಕ ಶ್ರದ್ಧಾ ಜಗತ್ತುಗಳಲ್ಲಿ ನಿರ್ಣಾಯಕವಾಗಿ ಮೂಡಿಬಂದಿದ್ದು ಕಂಡುಬರುತ್ತದೆ. ಈ ರೀತಿಯಾಗಿ ಜನರ ಅಲೌಕಿಕ ಕಲ್ಪನೆಯನ್ನು, ಆಳುವ ಶಕ್ತಿಯನ್ನು, ಗಳಿಸಿಕೊಂಡು, ಸಾಂಸ್ಥಿಕ ವ್ಯವಸ್ಥೆಯ ಮೂಲಕ ರಾಜ್ಯದ ಅಧಿಕಾರದ ರಚನೆಯಲ್ಲಿ ಅರ್ಥಪೂರ್ಣವತ್ತವುಗಳಾಗಿ ಬೆಳೆದು ಬಂದವುಗಳಾಗಿವೆ. ಇದಕ್ಕೆ ಕೊಂಡಿಯಾಗಿ ಅಧಿಕಾರದ ಪರಭಾಷೆ, ಲೌಕಿಕ ಮತ್ತು ಅಲೌಕಿಕ ಜಗತ್ತುಗಳೆರಡನ್ನು ಬೆಸೆಯುವಂತಾಗಿದ್ದವು. ಈ ರೀತಿ ಬೆಸೆಯುವಾಗ ಇಂತಹ ಮತಗಳ ಒಳಗೊಳ್ಳುವಿಕೆ, ಹೊಂದಾಣಿಕೆಯ ಸಂದರ್ಭ ಮುಂತಾದ ವಿವಿಧ ಪ್ರಕಾರದ ನೀತಿಗಳನ್ನು ಇವು ಅನುಸರಿಸಿದ್ದು ಪ್ರಮುಖವೆನಿಸಿದೆ, ಈ ವಿಚಾರಗಳನ್ನು ವಡ್ಡಾರಾಧನೆಯ ವೃತ್ತಾಂತದಲ್ಲಿರಿಸಿ ನೋಡಿದರೂ ತಪ್ಪಿಲ್ಲದ್ದಾಗಿವೆ.

ವಡ್ಡಾರಾಧನೆಯ ಆಳವಾದ ಅಭ್ಯಾಸಕ್ಕಿಳಿದಾಗ ಇದರಲ್ಲಿ ವಿವಿಧ ಮಜಲುಗಳು ತೆರೆದುಕೊಳ್ಳುತ್ತವೆ. ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಇತರೆ ವಲಯಗಳಿಂದ ವಿವಿಧ ಸ್ತರಗಳಲ್ಲಿ ಬಗೆ ಬಗೆಯ ವಿನ್ಯಾಸಗಳು ಕಂಡುಬಂದರೂ ಇಲ್ಲಿ ಮೂಲ ಆಶಯವಾಗಿ ಪ್ರತಿಪಾದನೆಗೊಳ್ಳುವುದು ಜೈನಧರ್ಮದ ಆಶೋತ್ತರಗಳು. ಇದಕ್ಕೆ ಪ್ರತಿಫಲನದಂತೆ ಕೃತಿಯ ಪ್ರಸ್ತಾವನೆಯ ಭಾಗದಲ್ಲಿ ತಿಳಿಸಿರುವಂತಹ 'ನಾಲ್ಕು ರೀತಿಯ ಉಪಸರ್ಗಗಳು. ಕೃತಿಯ ಮುಂತಾದ ೨೨ ಪರೀಷಹಗಳನ್ನು ಸೈರಿಸ ಹನ್ನೆರಡು ರೀತಿಯ ತಪಸ್ಸುಗಳನ್ನು ಆಚರಿಸಿ ಪ್ರಯೋಗಚಮನದಿಂದ ಸನ್ಯಾಸವನ್ನು ಗೆಯ್ದು ಕರ್ಮಕ್ಷಯವನ್ನು ಮಾಡಿ ಮೋಕ್ಷಕ್ಕೆ ಹೋದ ಮತ್ತು ಸಾರ್ವಾರ್ಥ ಸಿದ್ಧಿಯಲ್ಲಿ ಹುಟ್ಟಿದ ಮಹಾಪುರುಷರ ಕಥೆಗಳನ್ನು ಹೇಳುವುದು, ಇವೆಲ್ಲ ಮೂಲದಲ್ಲಿ ಭಗವತೀ ಆರಾಧನೆಯ ಭಾಗಗಳಾದ ಗಾಹೆಗಳ ವಿಸ್ತೃತ ಕಥಾರೂಪಗಳಾಗಿವೆ. ಜೈನರ ಸಮಾಧಿ ಮರಣದ ವೈಭವೀಕರಣ ಇವುಗಳಲ್ಲಿ ಸ್ಪಷ್ಟವಾಗಿದೆ. ಹಾಗೂ ಕಥೆಗಳ ಉದ್ದಕ್ಕೂ ಜೈನತತ್ವಗಳ ಹಾಗೂ ಆಚಾರಗಳ ಬೋಧನೆ ಕಂಡುಬರುತ್ತದೆ. ಈಗೆ ಇವುಗಳು ಜೈನ ಶ್ರಾವಕನನ್ನು ಉದ್ದೇಶಿಸಿ ರಚಿತವಾದ ಕಥೆಗಳಾಗಿದ್ದು, ಇವುಗಳಲ್ಲಿನ ಪುರಾಣ ಪುರುಷರು ಹಾಗೂ ತೀರ್ಥಂಕರಗಳು ಜೈನ ಸಮುದಾಯದ ಶ್ರದ್ಧಾ ಜಗತ್ತಿನ ಭೂಗೋಳವನ್ನು ಪರಿಚಯಿಸುವಂತದ್ದಾಗಿ ಮೂಡಿಬಂದಿವೆ.'[೨೨] ಮುಂದವರೆದು ಇಲ್ಲಿ ಒಡಮೂಡಿರುವ ೧೯ ಕಥೆಗಳಲ್ಲಿ ಉಪಕಥೆಗಳು ಗೊಂಚಲಾಕಾರವಾಗಿ ಭವಾವಳಿಗಳ ಪರಿಕಲ್ಪನೆಯಲ್ಲಿ ಪ್ರತಿ ಜೀವವೂ ತನ್ನ ಹಿಂದಿನ ಅನೇಕ ಜನ್ಮಗಳ

ಕರ್ಮಫಲಗಳನ್ನು ಹೊತ್ತುಕೊಂಡೆ ಹುಟ್ಟುತ್ತದೆ ಎಂಬ ಜೈನಸಿದ್ಧಾಂತದ ಅಡಿಯಲ್ಲಿ ಯಾವ ಜನ್ಮವೂ ಅಂತಿಮವಲ್ಲವಾದ್ದರಿಂದ ಯಾವ ಕಥೆಯೂ ತನಗೆ ತಾನೇ ಸ್ವತಂತ್ರವಾದುದ್ದಲ್ಲದ ರೀತಿಯಲ್ಲಿ ಹಿಂದಿನ ಕಥೆಗಳಿಗೆ ಮುನ್ನುಡಿಯಾಗಿ, ಮುಂದಿನ ಕಥೆಗಳಿಗೆ ಹಿನ್ನುಡಿಯಾಗಿ ಹೀಗೆಯೇ ಅನೇಕ ಕಥೆಗಳು ಪೂರಕವಾಗಿ ಬೆಸೆದುಕೊಂಡು ಬಂದ ರಚನಾ ವಿಧಾನವನ್ನು ಕೃತಿ ಉದ್ದಕ್ಕೂ ಕಾಣಬಹುದಾಗಿದೆ.

ಈ ಗ್ರಂಥದ ಹೆಸರಿನ ಬಗ್ಗೆ ಇಲ್ಲಿಯವರೆಗೆ ಅಪಾರ ಚರ್ಚೆಗಳು ನಡೆದಿವೆ ಆದರೆ ವಡ್ಡಾರಾಧನೆಯ ಆದಿಯಲ್ಲಾಗಲಿ, ಅಂತ್ಯದಲ್ಲಾಗಲಿ ಕವಿಯು ತನ್ನ ಸ್ವಂತ ವಿಚಾರಗಳನ್ನು ಹೇಳಿಕೊಂಡಿಲ್ಲ. ಗ್ರಂಥದ ಅಂತ್ಯದಲ್ಲಿ ಕೃತಿ ಹಾಗೂ ಕರ್ತೃವಿನ ನಾಮನಿರ್ದೇಶನ ತೋರಿಬಂದರೂ ಈ ಬಗ್ಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲದ್ದಾಗಿದೆ. ಈ ವಿಚಾರವಾಗಿ ಅಪಾರ ಚರ್ಚೆಗಳು ನಡೆದರೂ ಈವರೆಗೂ ಡಿ.ಎಲ್.ಎನ್, ಆ.ನೆ.ಉಪಾಧ್ಯೆ ಹಾಗೂ ಹಂಪನಾ ಅವರು ಉಪಯುಕ್ತವಾದ ಸಲಹೆಗಳನ್ನು ನೀಡಿ ಅಮೂಲ್ಯವಾದ ಅಭಿಪ್ರಾಯಗಳನ್ನು ಅಭಿವ್ಯಕ್ತಿಸಿದ್ದಾರೆ. ಗ್ರಂಥಾಂತ್ಯದ ಗದ್ಯವಾಕ್ಯವನ್ನು ಅರ್ಥೈಸುವಲ್ಲಿ ಪ್ರಮುಖವಾಗಿ ಆ.ನೆ.ಉಪಾಧ್ಯೆ, ಡಿ.ಎಲ್.ಎನ್. ಅವರು ಮಧ್ಯೆ ಭಿನ್ನಾಭಿಪ್ರಾಯಗಳಿದ್ದು, ಗ್ರಂಥದ ಹೆಸರು ವಡ್ಡಾರಾಧನೆ ಎಂದೂ ಕರ್ತೃವಿನ ಹೆಸರು ಶಿವಕೋಟ್ಯಾಚಾರ್ಯ ಎಂದೂ ಡಿ.ಎಲ್.ಎನ್. ಹೇಳಿಕೆಯಾಗಿ ಇದನ್ನು ಇಂದಿಗೂ ಸಾಹಿತ್ಯ ಲೋಕ ಒಪ್ಪಿತವಾಗಿ ಮುಂದುವರೆಸಿದೆ. ಇದೇ ರೀತಿ ವಡ್ಡಾರಾಧನೆ ಎಂಬುದು ಈ ಕನ್ನಡದ ಗ್ರಂಥದ ಹೆಸರಲ್ಲ ಪ್ರಾಕೃತದ ಭಗವತೀ ಆರಾಧನೆಯ ಹೆಸರು ಶಿವಕೋಟಿ ಎಂಬುದು ಈ ಕನ್ನಡ ಗ್ರಂಥಕರ್ತೃವಲ್ಲ ಭಗವತೀ ಆರಾಧನೆಯ ಕರ್ತೃವಿನ ಹೆಸರು ಎಂದು ಉಪಾಧ್ಯೆ ಅವರು ವಾದಿಸಿದ್ದಾರೆ. ಈವರೆಗಿನ ಅಧ್ಯಯನಗಳ ಸಮೀಕ್ಷೆಗಳ ಪ್ರಕಾರ ಡಿ.ಎಲ್.ಎನ್. ಹೇಳಿಕೆಗೆ ಒಮ್ಮತ ಕಾಣಿಸಿದ್ದು ಪ್ರಾಶಸ್ತ್ಯವೆನಿಸಿದೆ. ಶಿವಕೋಟಿ ಅಥವಾ ಶಿವಾಚಾರ್ಯನ ಪ್ರಾಕೃತದ ಭಗವತೀ ಆರಾಧನೆಗೆ ವಡ್ಡಾರಾಧನೆ ಎಂಬ ಮತ್ತೊಂದು ಹೆಸರುಂಟು ಎಂದು ಪ್ರತಿಪಾದಿಸಿದ್ದಾರೆ. ಹಂ.ಪ.ನಾಗರಾಜಯ್ಯ ಅವರು ತಮ್ಮ ವಡ್ಡಾರಾಧನೆ ಸಮಗ್ರ ಅಧ್ಯಯನ ಎಂಬ ಕೃತಿಯಲ್ಲಿ ವಡ್ಡಾರಾಧನೆ ಕುರಿತು ವಿವಿಧ ವಿದ್ವಾಂಸರು ಚರ್ಚಿಸಿ ಪ್ರಕಟಿಸಿದ್ದ ಮೂಲ ವಡ್ಡಾರಾಧನೆಗೆ ಇರಿಸಿದ್ದ ಹೆಸರು (ಶೀರ್ಷಿಕೆ) 'ಓಡ್ಯಾರಾಧನೆ' ಎಂದಿದ್ದು ಕಾರಾಣಾಂತರಗಳಿಂದ ೧೯೩೧ಕ್ಕೂ ಹಿಂದೆ ೧೯೧೮–೧೯೧೯ರಲ್ಲಿ ನಡೆದ ಕಸಾಪದಲ್ಲಿನ ವಿವಿಧ ಸ್ವರೂಪ ಇತರೆ ವಿಚಾರಗಳು ಡಿ.ಎಲ್.ಎನ್. ಅವರ ಗಮನಕ್ಕೆ ಬಂದಂತಿಲ್ಲ[೨೩] ಎಂದು ಅಭಿವ್ಯಕ್ತಿಸುತ್ತಾ ವಡ್ಡಾರಾಧನೆಗೆ 'ಓಡ್ಯಾರಾಧನೆ' ಅಥವಾ 'ಆರಾಧಾನಾ ಟೀಕಾ' ಎಂದು ಪ್ರತಿಪಾದಿಸಿದ ಹಂಪನಾ ಅವರು ತಮ್ಮ ಮಹಾಪ್ರಬಂಧದ ಶೀರ್ಷಿಕೆಯಾಗಿ ವಡ್ಡಾರಾಧನೆ ಸಮಗ್ರ ಅಧ್ಯಯನ ಎಂದು ರೂಢಿಸಿಕೊಂಡು ವಡ್ಡಾರಾಧನೆ ವಿಚಾರವಾಗಿ ತಲಸ್ಪರ್ಶಿ ಅಧ್ಯಯನ ನಡೆಸಿರುವುದು ಸಾಹಿತ್ಯಲೋಕದ ಹೆಮ್ಮೆಯ ಕೊಡುಗೆ ಎನಿಸಿದೆ.

ಈ ಗ್ರಂಥಕ್ಕೆ ಕವಿ ಇಟ್ಟಿರುವ ಹೆಸರು 'ವಡ್ಡಾರಾಧನೆ' ಎಂಬುದನ್ನೂ ಈ ಕೃತಿಯ ಕರ್ತೃ ಶಿವಕೋಟಿ ಎಂದೂ ಕೃತಿ ರಚನೆಯ ಕಾಲ ೮೯೨ರಿಂದ ೯೪೧ ಎಂದು, ವಡ್ಡಾರಾಧನೆಯು ಶಿವಕೋಟಿಯ ಬಳ್ಳಾರಿ ಜಿಲ್ಲೆಯ ಕೋಗಳಿ ನಾಡಿಗೆ ಸೇರಿದ್ದವನೆಂದು ಡಿ.ಎಲ್.ಎನ್. ಸಾದಾರ ಪೂರ್ವಕವಾಗಿ ನಿರ್ಣಯಿಸಿದ್ದು, ಹರಿಷೇಣನಿಗೂ (ಬೃಹತ್ ಕಥಾಕೋಶದ ಕರ್ತೃ) ಹಾಗೂ ಶಿವಕೋಟ್ಯಾಚಾರ್ಯನಿಗೂ ಕೃತಿರಚನೆಗೆ ಸಮಾನ ಮೂಲವೊಂದು ಇದ್ದಿತೆಂದೂ ಅದು 'ಭಗವತೀ ಆರಾಧನ' ಗ್ರಂಥಕ್ಕೆ ಇದ್ದಿರಬಹುದಾದ ಯಾವುದೋ ಪ್ರಾಕೃತ ವ್ಯಾಖ್ಯಾನವೆಂದು ಆ.ನೇ.ಉಪಾಧ್ಯೆ ಅವರು 'ಒಪ್ಪಿಕೊಳ್ಳುತ್ತಾ ಇದು ಅತ್ಯಂತ ಸಂಭವನೀಯವೆಂದು ಪರಿಗ್ರಾಹ್ಯ ಯೋಗ್ಯವೆಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಈ ಮೂಲದಲ್ಲಿ ಒಂದೊಂದು ಗಾಹೆಯಲ್ಲೇ ಸೂಚಿತವಾಗಿದ್ದ ಕಥೆಗಳನ್ನೂ ವ್ಯಾಖ್ಯಾನದಲ್ಲಿ ವಿಸ್ತರಿಸಿ ನಿರೂಪಣೆ ಮಾಡಿದ್ದಿತ್ತೆಂದು ಹೇಳಬಹುದು. ಈ ವಿಸ್ತೃತ ಕಥೆಗಳನ್ನು ಕವಿಯ ದೃಷ್ಟಿಯಿಂದ ಹರಿಷೇಣನೂ ಶಿವಕೋಟಿಯೂ ನೋಡಿ ಅವುಗಳ ನಿರೂಪಣೆಯಲ್ಲಿ ತಮ್ಮ ಕೌಶಲ್ಯವನ್ನು ಪ್ರತಿಭೆಯನ್ನು ಪ್ರಕಾಶಪಡಿಸಿರುವರೆಂದು ತಿಳಿಯಬಹುದು.'[೨೪] ವಡ್ಡಾರಾಧನೆಗೆ ಮೂಲವಾಗಿರಬಹುದಾದ ಕೃತಿ ದೊರಕಿದ್ದರೆ ಎಲ್ಲಾ ಮೂಲಗಳಿಂದ ಮಾಡಿಕೊಂಡಿದ್ದ ಮಾರ್ಪಾಡುಗಳನ್ನು ವಿಶ್ಲೇಷಿಸಿ ಸಾಹಿತ್ಯದ ದೃಷ್ಟಿಯಿಂದ ಕೃತಿಯ ಮೌಲ್ಯವನ್ನು ಒರೆಯಿಟ್ಟು ನಿರ್ಣಯಿಸಬಹುದಾಗಿತ್ತು.

ಒಟ್ಟಾರೆಯಾಗಿ, ವಡ್ಡಾರಾಧನೆ ಗ್ರಂಥದ ಹೆಸರಿನ ವಿಚಾರವಾಗಿ (ವಡ್ಡಾರಾಧಣಂ) (ಬೃಹಧಾರಾಧನಾ) (ಭಗವತಿ ಆರಾಧನ) ಈ ಗ್ರಂಥಕ್ಕಿದ್ದ ಇತರೆ ಹೆಸರುಗಳ ಕುರಿತು ಯಾವುದೇ ಸ್ವತಂತ್ರ ಆಧಾರ (ದಾಖಲೆ)ಗಳನ್ನು ಯಾರೂ ತೋರಿಸಿಲ್ಲದ ಕಾರಣ ಇದರ ಜೊತೆಗೆ ಸಂಸ್ಕೃತ, ಪ್ರಾಕೃತ, ಭಾಷೆಯ ಬಳಕೆಯಲ್ಲಿ ಕಂಡುಬಂದಿದ್ದ ಯಾವುದೇ ನಿಖರ ಉಲ್ಲೇಖಾರ್ಹ ರೀತಿಯಲ್ಲಿ ಇದೇ ಪದ ಎಂದು ಒತ್ತುಕೊಟ್ಟು ಮೂಡಿಬಂದಿರದ ಕಾರಣಗಳಿಂದ ಪ್ರಸ್ತುತಕ್ಕೆ ಈ ಕನ್ನಡ ಗ್ರಂಥಾಂತ್ಯದಲ್ಲಿ ಉಲ್ಲೇಖಿತಗೊಂಡ ವಡ್ಡಾರಾಧನೆ ಎಂಬ ಹೆಸರನ್ನು ಮುಂದುವರೆಸುವುದು ಉತ್ತಮ ಅಭಿಪ್ರಾಯವೆನಿಸಿದೆ.

ಈ ಕೃತಿಯ ಕರ್ತೃತ್ವದ ಪೂರ್ಣ ಒಪ್ಪಿತ ವಿಷಯವಾಗಿ ಆ.ನೆ.ಉಪಾಧ್ಯೆ ಅವರು ಶಿವಾರ್ಯ, ಶಿವಕೋಟಿ, ರೇವಕೋಟ್ಯಾಚಾರ್ಯವೆಂದು ವಿವಿಧ ಮೂಲಗಳಲ್ಲಿ ಉಲ್ಲೇಖಿತಗೊಂಡ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದು ಇವ್ಯಾವ ವಿಚಾರಗಳು ಒಂದಕ್ಕೊಂದು ಪೂರಕವಿಲ್ಲದಂತೆ ಕಂಡುಬಂದಿವೆ. ಈ ಕುರಿತಂತೆ ಡಿ.ಎಲ್.ಎನ್. ತಮ್ಮ ಕೃತಿಯಲ್ಲಿ ಕರ್ತೃತ್ವ ವಿಚಾರವಾಗಿ ಪ್ರಸ್ತಾವನೆ ಭಾಗದಲ್ಲಿ ಸವಿವರವಾಗಿ ಚರ್ಚಿಸಿದ್ದಾರೆ. ಇದೇ ರೀತಿ ಹಂಪನಾ ಅವರು ತಮ್ಮ ಸಂಶೋಧನಾ ಕೃತಿಯಾದ ವಡ್ಡಾರಾಧನೆ ಸಮಗ್ರ ಅಧ್ಯಯನದಲ್ಲಿ 'ವಡ್ಡಾರಾಧನೆ ಕನ್ನಡ ಗ್ರಂಥವಲ್ಲ ಅದು ಮೂಲ ಪ್ರಾಕೃತಕ್ಕೆ ಸೇರಿದ್ದು ಅದರಂತೆ ಗ್ರಂಥಕರ್ತೃ

ಪ್ರಾಕೃತದ ಶಿವಕೋಟಿಯ ಮೂಲ ಪ್ರಾಕೃತದ ವಡ್ಡಾರಾಧನೆಯ ಲೇಖಕ'[೨೫] ಎಂದು ಅಭಿಪ್ರಾಯಿಸಿದ್ದಾರೆ. ಈ ವಿಚಾರವಾಗಿ ಪ್ರಾಕೃತ ಶಿವಕೋಟಿಯ ವಿಚಾರಕ್ಕೆ ಒಪ್ಪಿತವಾದರೇ, ಕನ್ನಡದ ಶಿವಕೋಟಿ ಅಥವಾ ಕತೃತ್ವವಿಚಾರದಲ್ಲಿ ಸವಿಸ್ತಾರವಾಗಿ ವಿವರಿಸುತ್ತಾ ಮೂರು ಜನ ಶಿವಕೋಟಿಯವರ ಕಾಲ, ಕೃತಿ, ವಿಚಾರಗಳನ್ನು ಉಲ್ಲೇಖಿಸಿ ಖಚಿತವಾದ ನೂತನಾಧಾರಗಳು ದೊರೆಯುವವರೆಗೆ ಬೇರೆ ಯಾವ ನಿರ್ಣಯಕ್ಕೂ ಅವಕಾಶವಿದೆ ಎಂದು ತೋರುವುದಿಲ್ಲವೆಂದು ಪ್ರತಿಪಾದಿಸಿದ್ದಾರೆ. ಆದರೆ ಕೃತಿಯ ಕೊನೆಯಲ್ಲಿ ಉದೃತವಿರುವ 'ಈ ಪೇಳ್ದ ಪತ್ತೊಂ(ಬ)ತ್ತು ಕಥೆಗಳ (೪೦) ಶಿವಕೋಟ್ಯಾಚಾರ್ಯರ ಪೇಳ್ದ(ರ್) ವಡ್ಡಾರಾಧನೆ ಸಂಪೂರ್ಣ'[೨೬] ಎಂಬ ಉಲ್ಲೇಖದಂತೆ ಓದುಗವಲಯ ಒಪ್ಪಿತ ನೆಲೆಯಲ್ಲಿ ಅಭ್ಯಾಸಿಸಿಕೊಂಡು ಸಾಗಿದ್ದರಿಂದ 'ವಡ್ಡಾರಾಧನೆ'ಯ ಕರ್ತೃ ನಮ್ಮ ಪಾಲಿಗೆ ಇಂದಿಗೂ ಅನಾಮಧೇಯನಾದರೂ ಅವನ ಬಹುಭಾಷಾ ಪಾಂಡಿತ್ಯ ಕೃತಿ ಉದ್ದಕ್ಕೂ ಹಬ್ಬಿಕೊಂಡದ್ದು ಮೆಚ್ಚುತಕ್ಕ ವಿಷಯವಾಗಿದೆ.

ಕಾಲನಿರ್ಣಯ ವಿಚಾರವಾಗಿ ಮಂ.ಗೋವಿಂದ ಪೈ ಯವರು ಕೆಲವಾರು ಆಂತರಿಕ ಪ್ರಮಾಣಗಳಾದ ಪದಗಳ ಉಲ್ಲೇಖಗಳನ್ನು ತೆಗೆದುಕೊಂಡು ಕ್ರಿ.ಶ. ಆರನೇ ಶತಮಾನದ ಕೃತಿ ಎಂದು ಪ್ರತಿಪಾದಿಸುವುದರ ಮೂಲಕ ಕಾಲನಿರ್ಣಯದ ಆದ್ಯರೆನಿಸಿದ್ದಾರೆ. ಇದೇ ರೀತಿ ಎಸ್.ಶ್ರೀಕಂಠಶಾಸ್ತ್ರಿಗಳು ಕ್ರಿ.ಶ. ೭ನೆಯ ಶತಮಾನಕ್ಕೆ ಸೇರಿದ ಕೃತಿಯೆಂದು ಪ್ರತಿಪಾದಿಸಿದ್ದು ಯಾವುದೇ ಆಧಾರಗಳನ್ನು ತೋರಿಸಿಲ್ಲ. ಆ.ನೆ.ಉಪಾಧ್ಯೆರವರು ಮಾಡಿರುವ ಸಂಶೋಧನೆಗಳನ್ವಯ ಬಾಹ್ಯ, ಆಂತರಿಕ ಪ್ರಮಾಣಗಳನ್ನು ಮಂಡಿಸಿ ಪ್ರಾಕೃತ ಸಂಸ್ಕೃತ ಪದ್ಯಗಳನ್ನು ಉದಾಹರಿಸುವ ಮೂಲಕ ಕ್ರಿ.ಶ. ೮೯೮ರಿಂದ ೧೪೦೩ರ ಅವಧಿಯಲ್ಲಿ ಈ ಕೃತಿ ರಚನೆಯಾಗಿರಬೇಕೆಂದು ಪರಾಮರ್ಶಿಸಿ ಪ್ರತಿಪಾದಿಸಿದ್ದಾರೆ. ಈ ಉಲ್ಲೇಖಗಳೆಲ್ಲವನ್ನು ಪರಾಮರ್ಶಿಸಿ ಸಂಪಾದಕರು ವಡ್ಡಾರಾಧನೆಯ ಕಾಲ ಕ್ರಿ.ಶ. ೮೯೨ ರಿಂದ ಕ್ರಿ.ಶ. ೯೪೧ ಎಂದು ಸೂಕ್ತ ವಿಚಾರಗಳ ಮೂಲಕ ಕೃತಿಯ ಪ್ರಸ್ತಾವನೆ ಭಾಗದಲ್ಲಿನ ಉಲ್ಲೇಖದಿಂದ ವಡ್ಡಾರಾಧನೆಯು ಪಂಪಭಾರತಕ್ಕಿಂತ (೯೪೧) ಹಿಂದಿನ ರಚನೆ ಎಂದು, ಕವಿರಾಜಮಾರ್ಗದ ಸಮಕಾಲೀನ (೮೫೦) ದೆಂದು ಉಲ್ಲೇಖಿಸಿದ್ದು ಸಂಗತ ವೆನಿಸುತ್ತದೆ.

ಕೃತಿಯ, ಕೃತಿಕಾರನ, ನಾಡಿನ (ದೇಶ)ವಿಚಾರವಾಗಿ ಮೊದಲು ಚರ್ಚಿಸಿದವರು ಮಂ.ಗೋವಿಂದ ಪೈ ಅವರು ಇವರು ಮೂಲ ಕೃತಿಕಾರನ ವಿಚಾರವಾಗಿ ಚರ್ಚಿಸುತ್ತಾ ವಡ್ಡಾರಾಧನೆಕಾರನು ಉತ್ತರ ಭಾರತ ಭಾಗದವನು ಎಂದು ಪ್ರತಿಪಾದಿಸಿದ್ದಾರೆ. ಆದರೆ ಇಲ್ಲಿ ಅವಶ್ಯವಿರುವುದು ಕನ್ನಡ ನಾಡಿನ ಕೃತಿಯಾದ ವಡ್ಡಾರಾಧಾನೆಯ ಕೃತಿಕಾರನ ವಿಚಾರವಾಗಿ ಚರ್ಚಿಸುತ್ತಾ ಸಂಪಾದಕರಾದ ಡಿ.ಎಲ್.ಎನ್, ಸಂಶೋಧನಾ ಕೃತಿ ರೂಪಿಸಿದ ಹಂಪನಾ ಹಾಗೂ ಓದುಗವರ್ಗ ಒಪ್ಪಿತವಾಗಿ ಮುನ್ನೆಡೆಸಿರುವ ಹೇಳಿಕೆಯಂತೆ 'ವಡ್ಡಾರಾಧನೆ'ಯ ಕೃತಿಕಾರನ ಊರು ಇಂದಿನ ಬಳ್ಳಾರಿ ಜಿಲ್ಲೆಯ ಸಂಡೂರಿನ ಹತ್ತಿರವಿರುವ 'ಕೋಗಳಿ' ಎಂಬ ಪುಟ್ಟಗ್ರಾಮ. ಇದರಲ್ಲಿನ ಉಲ್ಲೇಖದಂತೆ ಕಾರ್ತಿಕ ಋಷಿಯ ಕಥೆಯಲ್ಲಿ ಕೋಗಳಿ–

೫೦೦ ನಾಡಂಗಳ್ ಎಂದು ಹೆಸರಿಸಿದ್ದರ ಜಾಡುಹಿಡಿದು ಇತರೆ ಶಾಸನಾಧ್ಯಯಗಳಿಂದ ಪೂರಕ ಅಭ್ಯಾಸಗಳ ಬಿಟ್ಟರೆ ವರದಿಯಂತೆ ಈ ಕೃತಿಯ ಕರ್ತೃವಾದ ಶಿವಕೋಟಿ ಕೋಗಳಿ ನಾಡಿಗೆ ಅಂದರೆ, ಈಗಿನ ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗಕ್ಕೆ ಸೇರಿದ್ದವನೆಂದು ಹೇಳಬಹುದಾಗಿದೆ. ಇದಕ್ಕೆ ಪೂರಕವೆಂಬ ಇನ್ನೊಂದು ಗಮನಿಸಬೇಕಾದ ವಿಶೇಷ ಅಂಶವೆಂದರೆ, ಕೋಗಳಿಗೆ ಸಮೀಪವಿರುವ, ಕೊಪಣಾಚಲ (ಇಂದಿನ ಕೊಪ್ಪಳ) ಅಂದು ಜೈನರ ಮಹಾಕೇಂದ್ರವಾದದ್ದಾಗಿತ್ತು. ಆದ್ದರಿಂದ ಕೋಗಳಿಯ ಉಲ್ಲೇಖಕ್ಕೆ ವಿಶೇಷ ಒತ್ತು ಕಟ್ಟು ನೋಡಿದ್ದು ಪ್ರಸ್ತುತವೆನಿಸಿದೆ.

**ಕಥಾ ಹಂದರ**

'ವಡ್ಡಾರಾಧನೆ'ಯು ಹತ್ತೊಂಭತ್ತು ಕಥೆಗಳ ಗುಚ್ಛವಾಗಿದ್ದು ಇದರಲ್ಲಿನ ಕಥೆಗಳೆಲ್ಲವು ಧರ್ಮಕಥೆಗಳಾಗಿವೆ. ಇದರಲ್ಲಿನ ನಾಯಕರೆಲ್ಲ ಧರ್ಮವೀರರಾಗಿ ಮೂಡಿಬಂದಿದ್ದಾರೆ. ಇದರಲ್ಲಿ ಮೋಕ್ಷಾರ್ಥ, ಸರ್ವಾರ್ಥ ಸಿದ್ಧಿಗಳ ಸಂಪಾದನೆ ಬಗ್ಗೆ ಪ್ರತಿಪಾದಿಸಲಾಗಿದೆ. ಪಾಪಪುಣ್ಯ ಸ್ವರ್ಗ ನರಕಗಳ ಪರಿಕಲ್ಪನೆಯು ಎಲ್ಲಾ ಹತ್ತೊಂಭತ್ತು ಕಥೆಗಳಲ್ಲಿ ಎದ್ದುಕಂಡಿವೆ. ಕರ್ಮಕ್ಷಯವು ತಪಸ್ಸಿನಿಂದ ಮಾತ್ರ ಸಾಧ್ಯವಾಗಿದ್ದು, ತಪಸ್ಸಿಗೆ ಮೂಲವಾಗಿ ವಿರಕ್ತಿ, ಇಂದ್ರಿಯ ನಿಗ್ರಹ, ಕಾಮಕ್ಲೇಶ, ಸಹನೆ ಮುಂತಾದವುಗಳು ಅವಶ್ಯಕ. ಈ ರೀತಿಯ ದೀಕ್ಷೆ ತೊಟ್ಟು ತಪಸ್ಸಿಗಿಳಿದ ಯತಿಗೆ ದೇವತೆ, ಮನುಷ್ಯ, ಇತರೆ ಪ್ರಾಣಿ, ಜಡವಸ್ತುಗಳಿಂದ ವಿವಿಧ ಬಗೆಯ ತೊಂದರೆಗಳಾಗುತ್ತವೆ. ಇವುಗಳನ್ನೇ ಉಪಸರ್ಗಗಳೆಂದು ಹೆಸರಿಸಬಹುದಾಗಿದೆ. ಇದನ್ನು ಜಯಿಸುವುದು ಯತಿಯಾದವನಿಗೆ ತಪಸ್ಸಿನ ಮೂಲ ಹಾದಿ ಅಲ್ಲದೆ ಹಸಿವು, ನೀರಡಿಕೆ, ಶೀತ, ವಾತ, ಪಿತ್ತ ಮುಂತಾದ ಬಾಧೆಗಳನ್ನು ಯತಿಯು ಸಹಿಸಿಕೊಳ್ಳಬೇಕಾದದ್ದು ಅವಶ್ಯಕ, ಇವುಗಳಿಗೆ ಪರೀಕ್ಷಹವೆಂದು (೨೨ ಪರೀಕ್ಷಹಗಳಿವೆ) ಹೆಸರಿಸಿದೆ. ಇಂತಹ ಪರಿಕ್ಷ ಹೋಪಸರ್ಗವನ್ನು ಜಯಿಸುವುದೇ 'ಉಪಾಸನೆ' ಅಥವಾ ಆರಾಧನೆ, ಇದರ ಸ್ವರೂಪವನ್ನು ವಿವರಿಸುವ ಗ್ರಂಥಗಳಿಗೆ 'ಆರಾಧನಾಶಾಸ್ತ್ರ'ವೆಂದು ಹೆಸರಿಸಿದೆ. ಅಲ್ಲದೆ ಇನ್ನೊಂದು ಯಾರೋ ಇಟ್ಟಿರುವ ಹೆಸರು 'ಉಪಸರ್ಗ ಕೇವಲಿಗಳ ಕಥೆ' ಎಂಬ ಹೆಸರನ್ನು ಇಲ್ಲಿ ಗಮನಿಸುವುದು ಅವಶ್ಯವೆನಿಸಿದೆ. ಉಪಸರ್ಗಗಳನ್ನು ಜಯಿಸಿ ಕೇವಲ ಜ್ಞಾನವನ್ನು ಪಡೆದುಕೊಂಡ ಜೈನ ಯತಿಗಳ ಕಥೆಗಳೇ ಇಲ್ಲಿ ರೂಪಗೊಂಡಿವೆ. ಇವುಗಳಿಗೆ ಹಿನ್ನೆಲೆಯಾಗಿ ಪಾಕೃತ ಸಂಸ್ಕೃತ, ಜೈನ ಸಾಹಿತ್ಯದಲ್ಲಿ 'ಆರಾಧನಾ ಗ್ರಂಥಗಳೂ', 'ಆರಾಧನಾ ಕಥಾಕೋಶಗಳೂ' ಎಂದು ಹೆಸರಿಸಿದೆ.

'ಮೋಕ್ಷಾಕಾಂಕ್ಷಿಗಳಾದ ಜೈನಮುನಿಗಳು ಕೈಗೊಳ್ಳುವ ಉಪಾಸನೆ ಅಥವಾ ಮಾಡುವ ಉದ್ಯಮ (ಕ್ರಿಯೆ) ಆರಾಧನೆಯಾಗುತ್ತದೆ. ಇದು ತಪಸ್ಸು, ದರ್ಶನ, ಜ್ಞಾನ, ಚರಣ ಎಂದು ನಾಲ್ಕು ವಿಧವಾದ ಭಾಗಗಳಾಗಿ ವಿಭಜಿಸಿದೆ. ತಪಸ್ಸಿನಲ್ಲಿ ಬಾಹ್ಯ-ಅಭ್ಯಂತರ ಎಂದು

ಎರಡು ಭಾಗಗಳಿವೆ. ಅನಶನ, ಅವಮೋಧರ್ಮ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಶಯನಾಸನ, ಕಾಯಕ್ಲೇಶ, ಈ ಆರೂ ಬಾಹ್ಯತಪಗಳಾಗಿವೆ. ಪ್ರಾಯಶ್ಚಿತ್ತ, ವಿನಯ, ವ್ಯಯಾಕೃತ್ಯ, ಸ್ವಾಧ್ಯಾಯ, ಉತ್ಸರ್ಗ, ಧ್ಯಾನ ಈ ಆರೂ ಅಭ್ಯಂತರ ತಪಗಳು. ಈ ೧೨ ಬಗೆಯಾಗಿರುವ ಒಟ್ಟಾರೆ ತಪಗಳನ್ನು ಸ್ವ-ಶಕ್ತಿಯಿಂದ ಆಚರಣೆ ಮಾಡುವುದು ತಪದ ಆರಾಧನೆಯಾಗುತ್ತದೆ. ನವಪದಾರ್ಥಗಳಲ್ಲೂ ಇರುವ ಅಚಲವಾದ ನಂಬಿಕೆ, ಶ್ರದ್ಧೆ, ವಿಶ್ವಾಸ, ಅಭಿರುಚಿ, ಇವನ್ನು ವೃದ್ಧಿಗೊಳಿಸಿಕೊಳ್ಳುವುದು ಅವಶ್ಯ ಸಮ್ಯುಕ್ ಇದಕ್ಕೆ 'ದರ್ಶನರಾಧನೆ' ಎಂಬ ಹೆಸರಿದೆ. ಜ್ಞಾನ-ಜ್ಞಾನವೆಂದರೆ, ಪರಮಾರ್ಗ ಮೋಕ್ಷವಾದ ಸೂತ್ರಾರ್ಥಗಳನ್ನು ಭಾವಿಸಿ ತಿಳಿಯುವುದು ಮತ್ತು ಜೀವಾದಿ ನವ ಪದಾರ್ಥಗಳ ತತ್ವವನ್ನು ಅರಿಯುವುದಾಗಿದೆ. ಇದೇ 'ಸಮ್ಯುಕ್' ಜ್ಞಾನವಾಗಿದ್ದು ಇದನ್ನು ಪಡೆಯಲು ಮಾಡುವ ಕ್ರಿಯೆ ಜ್ಞಾನಾರಾಧನೆಯಾಗುತ್ತದೆ. ಚರಣವೆಂದರೆ ಚಾರಿತ್ರ್ಯ, ಪಂಚಮಹಾವ್ರತಗಳು, ಪಂಚಸಮಿತಿಗಳು, ತ್ರಿಗುಪ್ತಿಗಳು, ಎಂಬ ಮೂರು ವಿಧಗಳು ಇದರಲ್ಲಿದ್ದು ಭಾವಶುದ್ಧಿಯಿಂದ ಇವುಗಳನ್ನು ಪರಿಪಾಲಿಸುವುದು ಚಾರಿತ್ರಾರಾಧನೆಯಾಗಿದೆ. ಇವುಗಳ ಆಚರಣೆಯಿಂದ ಜೈನಮುನಿಗಳಿಗೆ ಮರಣಾ ಸಮಯದಲ್ಲಿ ಕ್ಷಮೆ, ಸಮತ್ವ, ಶಾಂತಿ, ವೈರಾಗ್ಯ, ಸಂಯಮ, ಧೈರ್ಯ, ಸ್ಥೈರ್ಯಗಳು ಮೂಡುತ್ತವೆ. ಈ ಎಲ್ಲಾ ಅಂಶಗಳು ಪರಿಗಣಿತವಾಗಿ ಈ ಮೇಲಿನ ಎಲ್ಲವುಗಳ ಸಿದ್ಧಿಗಾಗಿ ಪ್ರಯತ್ನಿಸುವ ಒಟ್ಟಾರೆ ಕಥಾಸೂಚಿಯೂ ವಡ್ಡಾರಾಧನೆಯ ೧೯ ಕಥೆಗಳಿಂದ ಆವೃತವಾದದ್ದಾಗಿದ್ದು ಭಗವತಿ ಆರಾಧನಾ ಗ್ರಂಥದಲ್ಲಿ ಇರುವುದೇ ಕೃತಿಯ ಆರಂಭದಲ್ಲಿರುವ ೧೯ ಗಾಹೆಗಳಾಗಿವೆ. ಒಂದೇ ಕ್ರಮದಲ್ಲಿ ಕಥೆಗಳ ಜಾಡು ಮೂಡಿಬಂದಿದೆ ಎಂದು ಆ.ನೆ. ಉಪಾಧ್ಯೆಯವರು ಪ್ರತಿಪಾದಿಸಿದ್ದಾರೆ.'[೨೭]

ಹರಿಷೇಣನ 'ಬೃಹತ್‌ಕಥಾಕೋಶವು' ಶಿವಕೋಟಿಯ ೧೯ ಕಥೆಗಳ ವಿವರಣೆಯೂ ಒಂದೇ ಕ್ರಮದಲ್ಲಿ ಹಾದು ಹೋಗಿದ್ದು ಇವೆರಡಕ್ಕೂ ಮೂಲ ಭಗವತೀ ಆರಾಧನಾ ಗ್ರಂಥಕ್ಕೆ ಇದ್ದಿರಬಹುದಾದ ಯಾವುದೋ ಪ್ರಾಕೃತ ವ್ಯಾಖ್ಯಾನ ಹೊಂದಿದೆ ಎಂದು ಆ.ನೆ.ಉಪಾಧ್ಯೆ ಯವರು ಕೆಲ ಆಧಾರಗಳಿಂದ ವಾದಿಸಿದ್ದನ್ನು ಸಂಪಾದಕರು ಸ್ಮರಿಸಿದ್ದಾರೆ. ಅಲ್ಲದೆ ಹರಿಷೇಣನ ಕಥೆಗಳನ್ನು ವಡ್ಡಾರಾಧನೆಯ ಕಥೆಗಳನ್ನು ತುಲನಾತ್ಮಕವಾಗಿ ವಿಮರ್ಶಿಸಿ ನೋಡುವುದು ಅತ್ಯಾವಶ್ಯಕವೆಂದು ವಡ್ಡಾರಾಧನೆಯ ನಿರೂಪಣೆ, ಸನ್ನಿವೇಶ ನಿರ್ಮಾಣ, ಪಾತ್ರರಚನೆ, ರಸಾ ವಿಸ್ಕರಣ, ಗದ್ಯದ ರಮಣೀಯತೆ, ವಾಕ್ಯಗಳ ವೈವಿಧ್ಯತೆ, ಧ್ವನಿ, ಇವೆಲ್ಲ ಹರಿಷೇಣನ ಕೃತಿಗಿಂತ ಅತ್ಯಧಿಕ ಪ್ರಮಾಣವಾಗಿ, ವಡ್ಡಾರಾಧನೆಯಲ್ಲಿ ಮೂಡಿಬಂದವಾಗಿವೆ. ಈ ತುಲನಾತ್ಮಕ ವಿಚಾರದ ನೆಲೆಯಲ್ಲಿ ಈ ಕೃತಿಯ ಮೌಲ್ಯ ಹೆಚ್ಚಿದ್ದಾಗಿದೆ.

ಒಟ್ಟಾರೆ, ಈ ಕೃತಿಯ ವಿಚಾರವಾಗಿ ಈವರೆಗೆ ಹತ್ತಾರು ಕೃತಿಗಳು ಮೂಡಿ ಬಂದಿದ್ದಲ್ಲದೆ ಡಾ.ಹಂಪನಾ ಅವರು ರಂ.ಶ್ರೀ.ಮುಗಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ

'ವಡ್ಡಾರಾಧನೆ ಸಮಗ್ರ ಅಧ್ಯಯನ' ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಬೆಂಗಳೂರು ವಿ.ವಿ.ಗೆ ಸಲ್ಲಿಸಿದ್ದುಲ್ಲದೆ, ವಿವಿಧ ವಿದ್ವಾಂಸರಿಂದ ಉಲ್ಲೇಖಗೊಂಡ ೪೦ಕ್ಕೂ ಅಧಿಕ ಲೇಖನಗಳು ವಡ್ಡಾರಾಧನೆ ವಿಧಾನವನ್ನೇ ತಲಸ್ಪರ್ಶಿಯಾಗಿ ಅಭ್ಯಾಸಿಸಿದ್ದು ಕಂಡುಬಂದಿದೆ. ಅಲ್ಲದೆ ಇತ್ತೀಚೆಗೆ ಈ ಕುರಿತು ಅನೇಕ ಅಧ್ಯಯನಗಳು ನಡೆಯುತ್ತಾ ಸಾಗಿವೆ ಎಂಬುದರ ಸಾಕ್ಷೀಭೂತವಾಗಿ ಎಸ್.ಎಸ್.ಅಂಗಡಿಯವರು ಇತ್ತೀಚೆಗೆ (೨೦೧೬) ಸಂಪಾದಿಸಿದ ಸರಳ ವಡ್ಡಾರಾಧನೆಯು ಸಾಮಾನ್ಯ ಓದುಗರು ಸುಲಭವಾಗಿ, ಸರಳೀಕರಿಸಿಕೊಂಡು ಓದುವ ಅರ್ಥಸಿಕೊಳ್ಳುವ ನಿಟ್ಟಿನಲ್ಲಿ ಮೂಡಿಬಂದದ್ದಾಗಿದೆ. ಈ ಕೃತಿಯಲ್ಲಿನ ವಿಶೇಷವಾಗಿ 'ಱ' ಕಾರವನ್ನು 'ರ'ಕಾರವನ್ನಾಗಿ 'ೞ' ಕಾರವನ್ನು 'ಳ'ಕಾರವನ್ನಾಗಿ ಬಳಿಸಿದ್ದು ಪ್ರಮುಖವಾಗಿದೆ. ಇಷ್ಟೇ ಅಲ್ಲದೆ, ಅರ್ಥಾನುಗತ ವಿಂಗಡನೆಯ ಪೂರ್ಣಪಾಠ ನೀಡಿದ್ದು ಓದುಗರ ಮನಸೆಳೆಯುವಂತಿದೆ. ಗಾಹೆ, ವೃತ್ತಗಳ ಜೊತೆಗೆ ಸರಳ ಪಠ್ಯ ಓದುಗರಿಗೆ ಅನುಕೂಲವಾಗುವಂತೆ ವಿಭಜಿಸಲ್ಪಟ್ಟು ಇದು ಒಂದು ದೃಷ್ಟಿಯಿಂದ ಮೂಲ ಡಿ.ಎಲ್.ಎನ್. ಸಂಪಾದನೆಗೆ ಋಣಿಯಾದ ಕೃತಿ ಎಂದು ಹೇಳುವುದು ಔಚಿತ್ಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಡಿ.ಎಲ್.ಎನ್. ಅವರ 'ವಡ್ಡಾರಾಧನೆ'ಯ ಓದಿನಲ್ಲಿನ ಕ್ಲಿಷ್ಟತೆಯನ್ನು ಸುಧಾರಿಸಲು ಪಾಠಾಂತರಗಳನ್ನು ಅರ್ಥೈಸಿ ನಿರ್ಣಯಿಸುವಲ್ಲಿ ಈ ಕೃತಿ ಇಂದಿನ ಪ್ರಸ್ತುತ ಓದಿನ ಮಟ್ಟಿಗೆ ತುಂಬಾ ಸಹಕಾರಿಯಾಗಿದೆ.

ಒಟ್ಟಾರೆಯಾಗಿ ಡಿ.ಎಲ್.ಎನ್. ಅವರ ವಿದ್ವತ್ತು, ಪರಿಶ್ರಮ, ತಾಳ್ಮೆ, ಕೃತಿ ಸಂಪಾದನೆಯ ಹಿನ್ನೆಲೆಯಲ್ಲಿ ಧಾರಾಳವಾಗಿ ಗುರುತಿಸಬಹುದಾಗಿದ್ದು ಬೃಹತ್ ಕಥಾಕೋಶ ಮತ್ತು ವಡ್ಡಾರಾಧನೆಗೆ ಸಂಬಂಧಿಸಿದಂತೆ ಆ.ನೆ.ಉಪಾಧ್ಯೆ ಅವರು ತಮ್ಮ ಟಿಪ್ಪಣಿಗಳಲ್ಲಿ ಉಲ್ಲೇಖಿಸಿದಂತೆ ಪ್ರಸ್ತುತ ಲೇಖಕರಿಗೆ ಸಕಾಲದಲ್ಲಿ ದೊರೆತಿಲ್ಲ, ದೊರೆತಿದ್ದರೆ ಅವುಗಳ ಬೆಳಕಿನಲ್ಲಿ ಡಿ.ಎಲ್.ಎನ್. ಅವರ ಅಭಿಪ್ರಾಯ ಮತ್ತು ಸಾಧನೆಯನ್ನು ಇನ್ನಷ್ಟು ವಿಮರ್ಶಾತ್ಮಕವಾಗಿ ತೂಗಿ ನೋಡಬಹುದಾಗಿತ್ತೆಂಬ ಮಾತು ಇಂದಿಗೂ ಪ್ರಸ್ತುತವೆನಿಸಿದೆ. ಕನ್ನಡನಾಡಿನ ಸಾಂಸ್ಕೃತಿಕ ಮಹತ್ವವನ್ನು ಸಾರುವ, ಕನ್ನಡದ ಒಂದು ಪ್ರಾಚೀನ ಕೃತಿಯನ್ನು ಉಳಿಸಿಕೊಟ್ಟು ಮಹತ್ತಿಗಾಗಿ ಕನ್ನಡಿಗರು ಡಿ.ಎಲ್.ಎನ್. ಅವರಿಗೆ ಚಿರು ಋಣಿಯಾಗಿದ್ದಾರೆ ಎಂಬ ಮಾತು ಸೂಕ್ತವೆನಿಸಿದೆ.

**೩.೫. ಕರ್ನಾಟಕ ಮಹಾಭಾರತ ಭೀಷ್ಮಪರ್ವ ಸಂಗ್ರಹ**

ಕುಮಾರವ್ಯಾಸ ಮಹಾಕವಿ ವಿರಚಿತ 'ಕರ್ಣಾಟಕ ಮಹಾಭಾರತ ಭೀಷ್ಮಪರ್ವ'ವನ್ನು ಏಳನೆಯ ಸಂಪುಟವಾಗಿ ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯದ ಮೂಲಕ ಸಂಪಾದಿಸಿ ಪ್ರಕಟಿಸಿದ ಕೀರ್ತಿ ಡಿ.ಎಲ್.ನರಸಿಂಹಾಚಾರ್ ಅವರಿಗೆ ಸಂದಿದೆ.

ಹಳಗನ್ನಡ ಸಾಹಿತ್ಯವನ್ನು ಕೃತಿರೂಪದಲ್ಲಿ ಓದುಗ ವಲಯಕ್ಕೆ ತಲುಪಿಸುವಲ್ಲಿ ನಡೆದ ಪ್ರಯತ್ನಗಳಲ್ಲಿ ಕೃತಿ ಸಂಗ್ರಹ ರೂಪವನ್ನು ಪ್ರಕಟಿಸಿ ಬಿತ್ತಿರಿಸುವುದು ಒಂದು ಪ್ರಮುಖ

ಉದ್ದೇಶವಾಗಿ ಸಾಗಿಬಂದಿದೆ. ಇಂತಹ ಸಂಗ್ರಹಗಳನ್ನು ಪ್ರಕಟಿಸುವ ಪ್ರಯತ್ನ ಮೊದಲಾದದ್ದು ಮೈಸೂರು ವಿಶ್ವವಿದ್ಯಾಲಯದಿಂದ. ಈ ಪ್ರಕಟಣೆಯ ಕುರಿತು ಈ ಸಮಿತಿಯ ಅಧ್ಯಕ್ಷರಾಗಿದ್ದ ಬಿ.ಎಂ ಶ್ರೀಕಂಠಯ್ಯರವರ ಹೇಳಿಕೆಯಂತೆ, 'ಒಂದು ಕಾವ್ಯದ ಸೊಗಸನ್ನು ಒಬ್ಬ ಕವಿಯ ಕವಿತಾಶಕ್ತಿಯನ್ನು ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ತಿಳಿಯಬೇಕು; ಇಲ್ಲವೆ ಉತ್ತಮ ಭಾಗಗಳನ್ನಾದರೂ ನೋಡಬೇಕು, ಈ ಸಮಷ್ಟಿ ದೃಷ್ಟಿಯಿಂದ ಸಾಧ್ಯವಾಗುವಂತೆ, ಪಾಠಕ್ಕೆ ಪ್ರಮಾಣ ಅತಿ ಮೀರದಂತೆ, ಕಾವ್ಯಗಳನ್ನು ಅದರದರ ಸ್ವಭಾವಕ್ಕೆ ಉಚಿತವಾಗಿ ಸಂಗ್ರಹಿಸಿದರೆ ವಿದ್ಯಾರ್ಥಿಗಳಿಗೂ, ಸಾಮಾನ್ಯ ಓದುಗವರ್ಗಕ್ಕೂ ಹಿತಕರವೂ, ಪ್ರಯೋಜನಕರವೂ ಆಗಬಹುದೆಂಬ ನಂಬಿಕೆಯಿಂದ ಈ ಸಂಗ್ರಹಗಳನ್ನು ಮಾಡುತ್ತೇವೆ, ಇದರ ಮುಖ್ಯ ಗಮನ ಕಥಾಸರಣಿ ಕೆಡದೆ ಒಟ್ಟು ಕಥೆಯ ಸ್ವಾರಸ್ಯಕ್ಕೆ ಪಾತ್ರ ನಿರೂಪಣೆಗೆ ಧಕ್ಕೆಬಾರದೆ ವರ್ಣನೆ ಮತ್ತು ವಿವರಣೆಯ ಅವಶ್ಯಸಾರ ಬಿಟ್ಟು ಹೋಗದಂತೆ ತನ್ನದೇ ವಿಶೇಷ ರೂಪ ಪಡೆದುಕೊಳ್ಳುವುದು ಈ ಎಲ್ಲದಕ್ಕಿಂತ ಪ್ರಧಾನವಾದದ್ದು ಕವಿಯ ವ್ಯಕ್ತಿತ್ವಕ್ಕೆ, ಆತನ ವಿಶೇಷ ಪ್ರತಿಭೆಗೆ ಲೋಪ ಬಾರದ ಹಾಗೆ ಇಷ್ಟನ್ನು ಸಾಧಿಸುವುದು ಸಂಗ್ರಹಕಾರನ ಕರ್ತವ್ಯ'[೨೮] ಎಂದು ಹೇಳಿಕೆ ನೀಡಿದ್ದಾರೆ. ಈ ಹೇಳಿಕೆಗೆ ಬದ್ಧವೆಂಬಂತೆ ಡಿ.ಎಲ್.ಎನ್. ಅವರ ಈ ಸಂಗ್ರಹ ಕೃತಿ ಮೂಡಿ ಬಂದಿದೆ.

ಈ ಸಂಗ್ರಹದಲ್ಲಿ ಮುಖ್ಯವಾಗಿ ಕಥೆಯ ಸ್ವಾರಸ್ಯ, ಪಾತ್ರ ನಿರೂಪಣೆ, ವರ್ಣನೆ, ವಿವರಣೆಗಳ ಸಾರ ಇವೆಲ್ಲವೂ ಉಳಿದಿದ್ದರ ಜೊತೆ ಜೊತೆಗೆ ಕವಿಯ ವಿಶಿಷ್ಟತೆ ಎದ್ದು ಕಂಡದ್ದು ಕಥಾಸಾರ, ಕೃತಿಯಲ್ಲಿನ ವಸ್ತುನಿಷ್ಠ ಅಂಶಗಳು ಮೂಲ ಕೃತಿಯಿಂದ ಸಂಗ್ರಹ ರೂಪಕ್ಕೆ ಬದಲಾಗುತ್ತ ಕವಿಯ ವಿಶಿಷ್ಠ ಪ್ರತಿಭೆ ಎಂಬುದು ಕೃತಿಯ ಅಂತಸ್ಥ ಸಂಗತಿಯಾಗಿದ್ದು ಅದನ್ನು ಸಾದರಪಡಿಸಲು ಸುಲಭವಾದ ವಸ್ತುನಿಷ್ಟ ಮಾದರಿಗಳೊಂದಿಗೆ ಸಂಗ್ರಹದಲ್ಲಿನ ಕೃತಿಕಾರನ ಮೂಲ ಪ್ರತಿಭೆಗೆ ನ್ಯಾಯ ಒದಗಿಸುವುದು ಉಚಿತವೆನಿಸುತ್ತದೆ ಅಥವಾ ಸಂಗ್ರಹಕಾರರ ಪ್ರಯತ್ನದಿಂದ ಲಭಿಸಿದ ಸಂಗ್ರಹಿತ ಪಠ್ಯವು ಸಾದರಪಡಿಸುವ ಕವಿಯ ಪ್ರತಿಭಾ ಸ್ವರೂಪವೇ ಪರೋಕ್ಷವಾಗಿ ಮೂಲ ಕೃತಿಗೂ ಸೇರಿದುದು ಎಂಬ ನಿರ್ಣಯಕ್ಕೆ ಬರಬೇಕಾಗುತ್ತದೆ. ಈ ಅಂಶ ಡಿ.ಎಲ್.ಎನ್. ಸಂಪಾದಿತ ಈ ಸಂಗ್ರಹಕ್ಕೆ ಹೊರತಾಗಿಲ್ಲದ್ದಾಗಿದೆ.

ಮಹಾಭಾರತದ ಕಥೆಯು ಬಹು ದೊಡ್ಡದಾಗಿದೆ. ಇದನ್ನು ೧೮ ಪರ್ವಗಳಾಗಿ ವಿಭಾಗ ಮಾಡಿದ್ದು ಅಭ್ಯಾಸಕ್ಕೆ ಅತ್ಯಾನುಕೂಲವಾಗಿದೆ. 'ರಾಮಾಯಣದಲ್ಲಿನ ಭಾಗಗಳನ್ನು ಕಾಂಡ ಎಂದು ಉಲ್ಲೇಖಿಸಿದ್ದರೆ, ಜೈಮಿನಿ ಭಾರತ ಮುಂತಾದ ಕಾವ್ಯಗಳಲ್ಲಿ ಸಂಧಿ ಎನ್ನುವುದು ಒಂದು ಅಧ್ಯಯನ ಕ್ರಮಕ್ಕೆ ರೂಪುಗೊಳಿಸಿಕೊಂಡುದ್ದಾಗಿದೆ. ಇಂತಹ ಹಲವು ಅಧ್ಯಾಯಗಳು ಸೇರಿ ಆಗುವ ಒಂದು ಭಾಗಕ್ಕೆ ಪರ್ವವೆಂದು ಹೆಸರಿಸಬಹುದಾಗಿದೆ. ಪರ್ವ

ವೆಂದರೆ ಒಂದುಭಾಗ ಈಗ ವಿಸ್ತೃತಗೊಂಡ ೧೮ ಪರ್ವ (ಭಾಗ)ಗಳೇ ಈ ಮಹಾಭಾರತದ ಒಟ್ಟಾರೆ ಸಂಗ್ರಹ ರೂಪವಾಗಿದೆ. ಈ ೧೮ 'ಪರ್ವ'ಗಳನ್ನು ಸಂಕ್ಷಿಪ್ತವಾಗಿ ನೋಡುವುದಾದರೆ,

ಮೊದಲನೆಯದು :'ಆದಿಪರ್ವ' ಇದು ಭಾರತದ ಕಥೆಯ ಪೀಠಿಕಾ ಭಾಗವನ್ನು ಹೇಳುವುದಾಗಿದೆ.

ಎರಡನೆಯದು : 'ಸಭಾಪರ್ವ' ಇದು ಧರ್ಮರಾಯನು ರಾಜಸೂಯಾಗ ಮಾಡುವುದನ್ನು ಹೇಳುತ್ತದೆ.

ಮೂರನೆಯದು : 'ವನಪರ್ವ' ಇದು ಪಾಂಡವರ ೧೨ ವರ್ಷದ ವನವಾಸವನ್ನು ಬಿತ್ತರಿಸುತ್ತದೆ.

ನಾಲ್ಕನೆಯದು : ವಿರಾಟಪರ್ವ ಇದು ಪಾಂಡವರು ಮಾರುವೇಷಧಾರಿಗಳಾಗಿ ಒಂದು ವರ್ಷ ಕಳೆಯುವ ಪ್ರಸಂಗದ ಸನ್ನಿವೇಶ ತಿಳಿಸುತ್ತದೆ.

ಐದನೆಯದು : 'ಉದ್ಯೋಗಪರ್ವ' ಇದು ಯುದ್ಧಕ್ಕೆ ಸಿದ್ಧತೆಯ ಸನ್ನಿವೇಶ(ಯತ್ನ)ದ ಬಗ್ಗೆ ಬೆಳೆಸುತ್ತದೆ.

ಆರನೆಯದು : 'ಭೀಷ್ಮಪರ್ವ' (ಪ್ರಸ್ತುತ ಅಧ್ಯಯನದ ಭಾಗ) ಇದರಲ್ಲಿ ಯುದ್ಧದ ಸನ್ನಿವೇಶ, ಭೀಷ್ಮನು ಯುದ್ಧದ ರಣರಂಗದಲ್ಲಿ ಶರಶಯನವಾಗುವುದು, ಶ್ರೀಕೃಷ್ಣನ ಭಗವದ್ಗೀತೆಯ ಬೋಧನೆಯ ಬಗ್ಗೆ ತಿಳಿಯುವುದಾಗಿದೆ.

ಏಳನೆಯದು : 'ದ್ರೋಣಪರ್ವ' ಇಲ್ಲಿ ದ್ರೋಣನು ಸೇನಾಧಿಪತಿಯಾಗಿ ಯುದ್ಧ ನಡೆಸಿ, ತನ್ನ ಮಗನನ್ನು ಕಳೆದುಕೊಳ್ಳುವ ಅಭಿಮನ್ಯುವಿನ ಮರಣ ಸೈಂದವನವದೆ ಬಗ್ಗೆ ತಿಳಿಯುವುದಾಗಿದೆ.

ಎಂಟನೆಯದು: 'ಕರ್ಣಪರ್ವ' ಕರ್ಣನು ಸೇನಾಪತಿಯಾಗಿ ಯುದ್ಧರಂಗ ಪ್ರವೇಶಿಸಿ ಹೋರಾಡಿ ಹತನಾಗುವ ಸನ್ನಿವೇಶವನ್ನು ತಿಳಿಸುವುದಾಗಿದೆ.

ಒಂಭತ್ತನೆಯದು : 'ಶಲ್ಯಪರ್ವ' ಶಲ್ಯನ ಮರಣದ ನಂತರ ದುರ್ಯೋಧನನು ವೈಶಂಪಾಯುವಿನ ಸರೋವರದಲ್ಲಿ ಅಡಗುವುದರ ಜೊತೆಗೆ ಭೀಮನ ಮೊದಲಿಕೆಯಿಂದ ಅವನು ಹೊರಕ್ಕೆ ಬಂದು ಭೀಮನ ಜೊತೆ ಹೋರಾಡಿ ತೊಡೆ ಮುರಿದುಕೊಳ್ಳುವಿಕೆಯ ಪ್ರಸಂಗ ಕಂಡುಬರುತ್ತದೆ.

ಹತ್ತನೆಯದು : 'ಸೌಪ್ತಿಕಪರ್ವ, ಯುದ್ಧ ನಿಂತಿತೆಂದು ಪಾಂಡವರ ಕಡೆಯವರೆಲ್ಲ ನಿದ್ರಿಸುತ್ತಿರುವಾಗ ಅಶ್ವತ್ಥಾಮನು ಸೈನ್ಯ ಸಮೇತ ದಾಳಿಮಾಡಿ ಎಲ್ಲರನ್ನು ಕೊಲ್ಲುವ ಪ್ರಸಂಗವಿದೆ. (ಇಲ್ಲಿಗೆ ೧೮ ದಿನದ ಯುದ್ಧ ಕೊನೆಗೊಳ್ಳುತ್ತದೆ.)

ಹನ್ನೊಂದನೆಯದು : 'ಸ್ತ್ರೀಪರ್ವ' ಇಲ್ಲಿ ಯುದ್ಧರಂಗದಲ್ಲಿ ಮಡಿದ ಗಂಡ, ಮಕ್ಕಳನ್ನು ಕಳೆದುಕೊಂಡ ಹೆಂಗಸರೂ ಮಕ್ಕಳನ್ನು ಕಳೆದುಕೊಂಡ ಗಾಂಧಾರಿ, ದೃತರಾಷ್ಟ್ರರು ಶೋಕಿಸುವ ಪ್ರಸಂಗದ ಪ್ರಸ್ತಾಪವಿದೆ.

ಹನ್ನೆರಡನೆಯದು: 'ಶಾಂತಪರ್ವ' ಧರ್ಮರಾಯನಿಗೆ ಪಟ್ಟಾಭಿಷೇಕದ ಪ್ರಸಂಗದ ಪ್ರಸ್ತಾಪವಿದೆ.

ಹದಿಮೂರನೆಯದು : 'ಭೀಷ್ಮನು' ಧರ್ಮರಾಯನಿಗೆ ತನ್ನ ಧರ್ಮೋಪದೇಶವನ್ನು ಮುಂದುವರೆಸಿ ದೇಹತ್ಯಾಗ ಮಾಡುವ ಪ್ರಸಂಗವಿದೆ.

ಹದಿನಾಲ್ಕನೆಯದು : 'ಅಶ್ವಮೇಧಪರ್ವ' ಇಲ್ಲಿ ಧರ್ಮರಾಯನು ಅಶ್ವಮೇಧಯಾಗ ಕೈಗೊಳ್ಳುವ ಪ್ರಸಂಗ ಮೂಡಿಬಂದಿದೆ.

ಹದಿನೈದನೆಯದು : 'ಆಶ್ರಮವಾಸಪರ್ವ' ಇಲ್ಲಿ ದೃತರಾಷ್ಟ್ರ, ಗಾಂಧಾರಿ, ಕುಂತಿ, ವಿದುರ, ಸಂಜಯ, ಇವರುಗಳು ತಪಸ್ಸಿಗೆಂದು ಕಾಡಿಗೆ ಹೋಗಿ ಕಾಡ್ಗಿಚ್ಚಿಗೆ ಸಿಲುಕಿ ಸಾಯುವ ಪ್ರಸಂಗ ಅನಾವರಣಗೊಂಡಿದೆ.

ಹದಿನಾರನೆಯದು : 'ಮೌಸಲ ಪರ್ವ' ಒನಕೆಯೇ ಕಾರಣವಾಗಿಯಾದವರು ಹೊಡೆದಾಡಿ ಸಾಯುವ ಪ್ರಸಂಗದ ಜೊತೆ ಕೃಷ್ಣ ಬಲರಾಮರು, ದೇಹತ್ಯಾಗ ಮಾಡುವ ಪ್ರಸಂಗ ಮೂಡಿಬಂದಿದೆ.

ಹದಿನೇಳನೆಯದು : 'ಮಹಾಪ್ರಸ್ಥಾನ ಪರ್ವ' ಮಹಾಯಾತ್ರೆ ಕೈಗೊಳ್ಳುವಿಕೆ, ಇಲ್ಲಿ ಪಾಂಡವರು ತಮ್ಮ ರಾಜ್ಯವನ್ನು ಪರಿಷತ್ತಿಗೆ ಕೊಟ್ಟು ಸ್ವರ್ಗಕ್ಕೆ ಪ್ರಯಾಣ ಮಾಡುತ್ತಾ ಮಧ್ಯದಲ್ಲಿ ಒಬ್ಬೊಬ್ಬರಾಗಿ ಬಿದ್ದು, ಧರ್ಮರಾಯನೊಬ್ಬನೇ ತನ್ನ ದೇಹದೊಂದಿಗೆ ಸ್ವರ್ಗಕ್ಕೆ ಹೋಗುವ ಪ್ರಸಂಗವಿದೆ.

ಹದಿನೆಂಟನೆಯದು : 'ಸ್ವರ್ಗಾರೋಹಣ' ಪರ್ವ ಧರ್ಮರಾಜನಿಗೆ ಮೊದಲು ನರಕ ದರ್ಶನವಾಗಿ, ಸ್ವರ್ಗ ಲಭಿಸುವ ಪ್ರಸಂಗದ ಜೊತೆಗೆ ಕರ್ಣ, ದುರ್ಯೋಧನರೂ ಕೂಡ ಕಾದಾಡಿ ಕ್ಷತ್ರಿಯ ಧರ್ಮದಂತೆ ನಡೆದು ಕೊಂಡಿದ್ದರಿಂದ ವೀರಸ್ವರ್ಗ ಸಿಗುವ ಪ್ರಸಂಗ ಕಂಡುಬರುತ್ತದೆ.

ಹೀಗೆ ಬಿತ್ತರಗೊಂಡ ೧೮ ಪರ್ವಗಳಲ್ಲಿ ಡಿ.ಎಲ್.ಎನ್. ಸಂಪಾದಿಸಿದ 'ಭೀಷ್ಮಪರ್ವ ಸಂಗ್ರಹದ' ಭಾಗವಾಗಿ ಒಟ್ಟು ೧೪೭೮ ಪದ್ಯಗಳಿರುವ ಕಾವ್ಯಭಾಗದಲ್ಲಿ ಆಯ್ದುಭಾಗಗಳನ್ನಾರಿಸಿ ಒಟ್ಟು ೫೭೯ ಪದ್ಯಗಳನ್ನು, ೧೦ ಸಂಧಿಗಳನ್ನು ಸಂಕಲಿಸಿದ್ದು ಇಲ್ಲಿ ಪ್ರಮುಖವಾಗಿ ಕಂಡುಬಂದಿದೆ.

ಕುಮಾರವ್ಯಾಸ ಮಹಾಕವಿಯ ಕರ್ಣಾಟಕ ಮಹಾಭಾರತವನ್ನು ೧೯೫೦ರ ಹೊತ್ತಿಗೆ ಹೊರತಂದಿದ್ದು ಈ ಮಾಲಿಕೆಯ ೭ನೆಯ ಸಂಪುಟವಾಗಿ ಭೀಷ್ಮಪರ್ವ ಸಂಗ್ರಹವು ಮೂಡಿ ಬಂದಿದೆ. ಕರ್ಣಾಟಕ ಮಹಾಭಾರತದ ಸಂಪಾದಕ ಮಂಡಳಿಯು ಶ್ರೀಯುತರುಗಳಾದ ಬಿ.ಎಂ.ಶ್ರೀಕಂಠಯ್ಯ, ಟಿ.ಎಸ್.ವೆಂಕಣ್ಣಯ್ಯ, ಡಿ.ಶ್ರೀನಿವಾಸಾಚಾರ್ಯ, ಟಿ.ಎಸ್.ಶ್ರೀಕಂಠಯ್ಯ ಇವರನ್ನು ಸದಸ್ಯರನ್ನಾಗಿ ಹೊಂದಿದ್ದು ಡಿ.ಎಲ್.ಎನ್. ಈ ಸಂಗ್ರಹವನ್ನು ಸಂಪಾದಿಸಿ ಕೊಟ್ಟಿದ್ದಾರೆ. 'ಈ ಸಂಪಾದನೆಗೆ ಒಟ್ಟಾರೆ ಎಂಟು ಕೈ ಬರಹದ ಪ್ರತಿಗಳನ್ನು ಆಧರಿಸಲಾಗಿದ್ದು ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯ ೨೦೫ನೆಯ ನಂಬರಿನ ಪ್ರತಿಯು ಕ್ರಿ.ಶ. ೧೫೫೪ರಲ್ಲಿ ಪ್ರತಿ ಮಾಡಲ್ಪಟ್ಟಿದ್ದು ಸಂಪಾದಕರಿಗೆ ದೊರೆತ ಅತ್ಯಂತ ಪ್ರಾಚೀನ ಕೈ ಬರಹದ ಪ್ರತಿಯಾಗಿದೆ.'[೨೯] ಹಾಗೂ ಇದನ್ನೇ ಶುದ್ಧಪಾಠವೆಂದು ಅಂಗೀಕರಿಸಿ ಮೂಲ ಪಾಠವನ್ನಾಗಿ ಬಳಸಿಕೊಳ್ಳಲಾಗಿದೆ. ಇದಕ್ಕೆ 'ಕ' ಪ್ರತಿ ಎಂದು ಹೆಸರಿಸಿದೆ.

'ಗ' ಪ್ರತಿ ಇದು ಕೆ ೩೭೫ನೇ ನಂಬರಿನ ಪ್ರಾಚೀನ ಪ್ರತಿಯಾಗಿದ್ದು ಇದರಲ್ಲಿ 'ಱ' ಕಾರವು ಕ್ರಮವಾಗಿ ಉಪಯೋಗಿಸಿದ್ದು ಕಂಡುಬಂದಿದ್ದು ಇದು ಕೋಶಾಗಾರದ ಪ್ರತಿಯಾಗಿದೆ. 'ಟ' ಪ್ರತಿ ಇದು ಕೆ ೨೫೧ನೇ ನಂಬರಿನ ಪ್ರತಿಯಾಗಿದ್ದು ಇದು ಕೂಡ ಕೋಶಾಗಾರದ ಪ್ರತಿ ಎನ್ನಲಾಗಿದೆ.

'ದ' ಪ್ರತಿ ಇದು ಕೆ ೧೬೩ನೇ ನಂಬರಿನ ಪ್ರತಿಯಾಗಿದ್ದು ಶುದ್ಧ ಪಾಠವೆನಿಸಿದೆ. ಇದು ಕೂಡ ಕೋಶಾಗಾರದ ಪ್ರತಿಯಾಗಿದೆ.

'ಚ' ಪ್ರತಿ ಇದು ಅಳಿಲುಘಟ್ಟದ ಶಾನುಭೋಗರು ಸಂಪಾದಕರಿಗೆ ಕೊಟ್ಟ ಪ್ರತಿಯಾಗಿದೆ.

'ತ' ಪ್ರತಿ ಯು ಆರ್.ರಾಮರಾಯರ ಮೂಲಕ ಗೌಜುಗ್ರಾಮದ ಬ್ರಹ್ಮಶ್ರೀ ಗಣೇಶ ಭಟ್ಟರಿಂದ ಸಂಪಾದಕರಿಗೆ ದೊರೆತ ಪ್ರತಿಯಾಗಿದೆ.

'ಫ' ಪ್ರತಿ ಇದು ಮದ್ರಾಸ್‌ನ ಪ್ರಾಚ್ಯವಿದ್ಯಾ ಕೋಶಾಲಯದಲ್ಲಿ ೧೬-೧೮-೧೦ನೇ ನಂಬರಿನ ಪ್ರತಿಯಾಗಿ ಸಂಪಾದಕರಿಗೆ ದೊರೆತದ್ದಾಗಿದೆ.'[೩೦]

ಈ ಎರಡು ಕೈಬರಹದ ಪ್ರತಿಗಳಿಂದ ಈ ಪರ್ವವನ್ನು ಸಂಪಾದಕರು ತಿದ್ದಿ ರಚಿಸಿದ್ದು ಇದರ ಶೋಧನೆ ಮಾಡುವಲ್ಲಿ ಎಲ್ಲಾ ಪ್ರತಿಗಳಲ್ಲಿಯೂ ದೊರೆತ ಪಾಠಗಳನ್ನೇ ಮೂಲ ಪಾಠವನ್ನಾಗಿಟ್ಟುಕೊಂಡು ಕೆಲ ಪ್ರತಿಗಳಲ್ಲಿ ಮಾತ್ರ ದೊರೆಯುವ ಪಾಠಗಳಲ್ಲಿ ಸೂಕ್ತವಾಗಿ ಕಂಡುಬಂದವುಗಳನ್ನು ಅಲ್ಲಲ್ಲಿ ಪುಟಗಳಲ್ಲಿ ಹಾಗೂ ಪರಿಶಿಷ್ಟದಲ್ಲಿ ಸೂಚಿಸಿದ್ದು ಎದ್ದುಕಂಡಿದೆ.

ಕೃತಿಯ ವಿಷಯಾನುಕ್ರಮಣಿಕೆಯಂತೆ, ಈ ಕೃತಿಯಲ್ಲಿ ೧೦ ಸಂಧಿಗಳನ್ನು ಸಂಕಲಿಸಿದ್ದು ಪಠ್ಯದ ಪರಿಶಿಷ್ಠ ಭಾಗದ ಜೊತೆಯಾಗಿ ಒಟ್ಟು ೧೫೨ ಪುಟಗಳಲ್ಲಿ ಈ ಕೃತಿಯನ್ನು ಸಂಕಲಿಸಿದ್ದಾಗಿದೆ.

ಮೊದಲನೆಯ ಸಂಧಿಯಲ್ಲಿ, ಭೀಷ್ಮನು ಕೌರವರ ಸೈನ್ಯಾಧಿಪತ್ಯವನ್ನು ವಹಿಸಿ ಯುದ್ಧರಂಗಕ್ಕೆ ತೆರಳುವ ಸನ್ನಿವೇಶವಿದ್ದು ಇದು ೬೪ ಪದ್ಯ, ೧೬ ಪುಟಗಳಲ್ಲಿ ಬಿತ್ತರಗೊಂಡಿದೆ.

ಎರಡನೆಯ ಸಂಧಿಯಲ್ಲಿ, ಧರ್ಮರಾಯನು ಶತ್ರು ಪಕ್ಷದ ವೀರರನ್ನು ಸಾಮೋಪಾಯದಿಂದ ತನಗೆ ಅನುಕೂಲಕರರನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಸಿದ್ಧನಾಗುವ ಸನ್ನಿವೇಶ ಮೂಡಿಬಂದಿದ್ದು ಇದು ೩೯ ಪದ್ಯಗಳಲ್ಲಿ ೧೦ ಪುಟಗಳಲ್ಲಿ ಬಿತ್ತರಗೊಂಡುದ್ದಾಗಿದೆ.

ಮೂರನೆಯ ಸಂಧಿಯಲ್ಲಿ, ಬಂಧುಗಳ ಕೊಲೆಗೆ ಇಷ್ಟ ಪಡದ ಅರ್ಜುನನಿಗೆ ಶ್ರೀಕೃಷ್ಣನು ವಿಶ್ವರೂಪವನ್ನು ತೋರಿ, ಗೀತೋಪದೇಶ ಮಾಡಿ ಅವನನ್ನು ಯುದ್ಧಕ್ಕೆ ಒಡಂಬಡಿಸುವಿಕೆ (ಸಿದ್ಧಗೊಳಿಸುವಿಕೆ)ಯ ಸನ್ನಿವೇಶವಿದ್ದು ಇದು ೨೬ ಪುಟಗಳಲ್ಲಿ ೯೩ ಪದ್ಯಗಳಲ್ಲಿ ಬಿತ್ತರಗೊಂಡದ್ದಾಗಿದೆ.

ನಾಲ್ಕು, ಐದನೆಯ ಸಂಧಿಯಲ್ಲಿ ಎರಡೂ ಬಣಗಳ ನಾಯಕರ ಯುದ್ಧ ಸನ್ನಿವೇಶ ಮೂಡಿಬಂದಿದ್ದು ಇದು ಕ್ರಮವಾಗಿ ನಾಲ್ಕನೇ ಸಂಧಿ ೬೮ ಪುಟಗಳಲ್ಲಿ ಸಂಕಲಿತಗೊಂಡದ್ದಾಗಿದೆ.

ಆರನೆಯ ಸಂಧಿ, ಭಾಗವಾಗಿ ಕೋಪಾವೇಶಗೊಂಡ ಕೃಷ್ಣನು ಭೀಷ್ಮರ ಮೇಲೆ ಸುದರ್ಶನ ಚಕ್ರ ಹೂಡುವ ಸನ್ನಿವೇಶವಿದ್ದು ಇಲ್ಲಿ ಭೀಷ್ಮನು ತನ್ನ ಭಕ್ತಿ ಪರಾಮರ್ಶೆಯಿಂದ ಪಾರಾಗುವ ವಿಷಯ ವಸ್ತುವನ್ನು ರಸವತ್ತಾಗಿ ೪೮ ಪದ್ಯ ೧೨ ಪುಟಗಳಲ್ಲಿ ಮೂಡಿಬಂದುದಾಗಿದೆ.

ಏಳನೆಯ ಸಂಧಿ ಭಾಗವಾಗಿ, ಧರ್ಮರಾಯನು ಕೌರವರ ಶಿಬಿರದಲ್ಲಿದ್ದ ಭೀಷ್ಮರನ್ನು ಕಂಡು ಅವನನ್ನು ಸಾಯುವುದಕ್ಕೆ ಒಡಂಬಡಿಸುವ ಸನ್ನಿವೇಶವು ೩೪ ಪದ್ಯಗಳಲ್ಲಿ ೮ ಪುಟಗಳಲ್ಲಿ ವಿಸ್ತೃತಗೊಳಿಸಿದ್ದಾರೆ.

ಎಂಟನೆಯ ಸಂಧಿ ಭಾಗದಲ್ಲಿ, ಅರ್ಜುನನ ಅದ್ವಿತೀಯವಾದ ಪೌರುಷದಿಂದ ಕೌರವ ಸೈನ್ಯವೆಲ್ಲಾ ನಾಶವಾಗುವ ಸನ್ನಿವೇಶ ೬೭ ಪದ್ಯಗಳಲ್ಲಿ ೧೬ ಪುಟಗಳಲ್ಲಿ ಮೂಡಿಬಂದುದಾಗಿದೆ.

ಒಂಭತ್ತನೆಯ ಸಂಧಿ ಭಾಗವಾಗಿ, ಭೀಷ್ಮಾರ್ಜುನರ ಕಾಳಗದ ಸನ್ನಿವೇಶವು ೫೧ ಪದ್ಯಗಳಲ್ಲಿ ೧೩ ಪುಟಗಳಲ್ಲಿ ಮೂಡಿಬಂದಿದೆ.

ಹತ್ತನೆಯ ಸಂಧಿ ಭಾಗವಾಗಿ, ಶಿಖಂಡಿಯ ಇದರಲ್ಲಿ ಭೀಷ್ಮನ ಅಸ್ತ್ರತ್ಯಾಗದ ಸನ್ನಿವೇಶದ ಜೊತೆಗೆ ಅರ್ಜುನನ ಬಾಣಗಳಿಗೆ ಬಲಿಯಾಗಿ ಯುದ್ಧರಂಗದಲ್ಲಿ ಭೀಷ್ಮನು ಶರಶಯನವಾಗುವ ರೂಪವನ್ನು ಕಣ್ಣಿಗೆ ಕಟ್ಟುವಂತೆ ೪೩ ಪದ್ಯಗಳಲ್ಲಿ ೧೨ ಪುಟಗಳಲ್ಲಿ ಭೀತ್ತರಿಸಲಾಗಿದೆ.

ಕೃತಿಯ ಕೊನೆಗೆ ೨ ಪುಟಗಳಲ್ಲಿ ಬಿತ್ತರಗೊಂಡ ಪರಿಶಿಷ್ಟ ಭಾಗವು ಡಿ.ಎಲ್.ಎನ್. ಅವರ ಅಧ್ಯಯನ ಶಿಸ್ತನ್ನು ಎದ್ದುಕಾಣುವಂತೆ ಮಾಡಿದ್ದಲ್ಲದೆ, ಓದುಗರು ಕಠಿಣಪದಗಳ ಅರ್ಥೈಸಿಕೊಳ್ಳುವಿಕೆಗೆ ಸಹಾಯಾರ್ಥವಾಗಿದೆ.

**ಕಥಾ ಹಂದರ**

'ಭೀಷ್ಮಪರ್ವದ' ಈ ಸಂಗ್ರಹವನ್ನು ಡಿ.ಎಲ್.ಎನ್. ಅವರು ನವೀನ ದೃಷ್ಟಿಯಿಂದ ಸಂಪಾದಿಸಿ ಸಂಕಲಿಸಿದ್ದು ಇದು ಕುಮಾರವ್ಯಾಸ ಭಾರತದ ಯುದ್ಧ ಪಂಚಕಗಳಲ್ಲಿ ಮೊದಲನೆಯ ಭಾಗವಾಗಿ ಮೂಡಿಬಂದಿದೆ. ಈ ಸಂಪಾದನೆಯ ಒಟ್ಟಾರೆ ಕಥಾವಸ್ತುವನ್ನು ಗಮನಿಸುವುದಾದರೆ, ಕುರುಕ್ಷೇತ್ರ ಯುದ್ಧದಲ್ಲಿ ಪಾಂಡವ ಕೌರವ ಸೈನ್ಯಗಳು ಎದುರಾಳಿಗಳಾಗಿ ಯುದ್ಧಕ್ಕೆ ಸನ್ನದ್ಧರಾಗಲು ಅರ್ಜುನನು ಕೃಷ್ಣನಿಗೆ ಕೌರವರ ಸೇನೆಯಲ್ಲಿರುವವರನ್ನು ತೋರಿಸು ಎಂದು ಕೇಳುತ್ತಾನೆ? ಆಗ ಕೃಷ್ಣನು ಭೀಷ್ಮ, ದ್ರೋಣ, ಅಶ್ವತ್ಥಾಮ, ದುರ್ಯೋಧನ, ಕರ್ಣ ಮೊದಲಾದವರನ್ನು ತೋರಿಸುತ್ತಾನೆ. ಆಗ ಅರ್ಜುನನು ಅವರೆಲ್ಲರೂ ಮಾಡಿದ ಉಪಕಾರವನ್ನು, ತೋರಿದ ಪ್ರೀತಿಯನ್ನು ವೃತ್ತಾಂತವನ್ನಾಗಿ ಜ್ಞಾಪಿಸಿಕೊಂಡು ಯುದ್ಧ ಮಾಡುವುದಿಲ್ಲವೆಂದು ಶಸ್ತ್ರಾಸ್ತ್ರಗಳನ್ನು ಬೀಸಾಡಿ ನಿಲ್ಲುತ್ತಾನೆ. ಆಗ ಕೃಷ್ಣನು ಭಗವದ್ಗೀತೆಯನ್ನು ಬೋಧಿಸಿ ಅವನಲ್ಲಿರುವ ಅಜ್ಞಾನವನ್ನು ಹೋಗಲಾಡಿಸುತ್ತಾನೆ. ಆಗ ಗೀತೋಪದೇಶ ಆಲಿಸಿದ ಅರ್ಜುನನು ಯುದ್ಧಕ್ಕೆ ಮರುಸಿದ್ಧನಾಗುತ್ತಾನೆ. ಮುಂದೆ ಯುದ್ಧವರ್ಣನೆ, ಶ್ರೀಕೃಷ್ಣನು ಭೀಷ್ಮರನ್ನು ಕೊಲ್ಲುವುದಕ್ಕೆ ಮುಂದಾದಾಗ ಭೀಷ್ಮರು, ಕೃಷ್ಣನಿಗೆ ಈ ಹಿಂದೆ ನೀಡಿದ ಪ್ರತಿಜ್ಞೆಯನ್ನು ಜ್ಞಾಪಿಸಿ ಚಕ್ರವನ್ನು ಪ್ರಯೋಗಿಸದಂತೆ ಮಾಡುತ್ತಾನೆ. ಭೀಷ್ಮಾರ್ಜುನರ ಕಾಳಗ, ಭೀಷ್ಮರು ಶಿಖಂಡಿಯೊಡನೆ ನಾ ಹೋರಾಡೆನು ಎಂದು ಶಸ್ತ್ರಾಸ್ತ್ರಗಳನ್ನು ಬೀಸಾಡಿ ನಿಂದಾಗ ಅರ್ಜುನನು ಬಿರುಸು ಬಾಣಗಳನ್ನು ಪ್ರಯೋಗಿಸಿ ಭೀಷ್ಮರನ್ನು ಶರಶಯನರಾಗುವಂತೆ ಮಾಡುವ ಪ್ರಸಂಗಗಳು ಬಹು ಹೃದಯಂಗಮವಾಗಿ ಮೂಡಿಬಂದಿವೆ. ಕೊನೆಗೆ ಅಸ್ತಂಗತನಾಗುವ ಸೂರ್ಯನಂತೆ ಭೀಷ್ಮರು ಶರಪಂಜರದ ಮೇಲೆ ಮಲಗಿದ್ದನ್ನು ಕಂಡು ಕೌರವ ಪಾಂಡವರ ಶೋಕ ತಪ್ತತೆಯ ವರ್ಣನೆ ಅಗಣಿತವಾಗಿ ಮೂಡಿಬಂದಿದೆ. ಹೀಗೆ ಭೀಷ್ಮ ಪರ್ವವು, ಭಕ್ತಿ ಜ್ಞಾನ, ವೈರಾಗ್ಯ, ವೀರ, ರೌದ್ರ, ಕರುಣೆ, ಭೀಭತ್ಸ, ಶಾಂತತೆಯ ರಸಭರಿತ ಸನ್ನಿವೇಶಗಳನ್ನೊಳಗೊಂಡಂತೆ ಓದುಗರನ್ನು ರೋಮಾಂಚನಗೊಳಿಸುವ ಮಟ್ಟದಲ್ಲಿ ಮೂಡಿಬಂದುದ್ದಾಗಿದೆ.

ಒಟ್ಟಾರೆಯಾಗಿ, ಡಿ.ಎಲ್.ಎನ್. ಅವರು ಈ ಕೃತಿ ಸಂಪಾದನೆ ವಿಧಾನದಲ್ಲಿ ಪ್ರಾಚ್ಯಾ ವಿದ್ಯಾ ಸಂಶೋಧನಾಲಯದಲ್ಲಿ ಇತರೆ ಪರ್ವಗಳ ಸಂಗ್ರಹ ರೂಪಕ್ಕೆ ಅಳವಡಿಸಿಕೊಂಡ ಮಾದರಿಯನ್ನು ಅನುಸರಿಸಿ ಅವುಗಳ ಪ್ರತಿರೂಪದಂತೆಯೇ ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಸಂಪಾದಿತ ಕೃತಿಯಿಂದ ತಿಳಿದು ಬಂದ ಪ್ರಮುಖ ಅಂಶವೆಂದರೆ, ಡಿ.ಎಲ್.ಎನ್. ಅವರಿಗಿದ್ದ ಪ್ರಾಚೀನ ಸಾಹಿತ್ಯದ ಬಗೆಗಿನ ಕಾಳಜಿ, ಮೂಲಕ್ಕೆ ಧಕ್ಕೆ ಬರದ ಹಾಗೆ ಶುದ್ಧ ಪಾಠವನ್ನು ಕೊಡುವಲ್ಲಿನ ವಿಶೇಷ ಶ್ರಮ ವಿಶಿಷ್ಟವೆನಿಸಿದೆ. ಇಲ್ಲಿನ ಸಣ್ಣ ಕೊರತೆ ಎಂದರೆ, ಇವರು ತಮ್ಮ ಇತರೆ ಎಲ್ಲಾ ಕೃತಿಗಳಿಗೆ ನೀಡಿದ್ದ ವಿಸ್ತೃತ ಪ್ರಸ್ತಾವನೆ ಕವಿಕಾವ್ಯ ಕಾಲ ವಿಚಾರಗಳ ಚರ್ಚೆ ವಿಶಿಷ್ಟ ಪದಕೋಶಗಳನ್ನನುಸರಿಸಿದ್ದರೆ ಈ ಸಂಗ್ರಹದ ಪರಿಧಿ ಇನ್ನಷ್ಟು ಪ್ರಬುದ್ಧ ಮಾನವಾಗುತ್ತಿತ್ತೆನಿಸಿದೆ.

## ೩.೬. ತುರುಗಾಹಿ ರಾಮಣ್ಣನ ವಚನಗಳು

ಡಿ.ಎಲ್.ನರಸಿಂಹಾಚಾರ್ಯರು ಕನ್ನಡ ಸಾಹಿತ್ಯಿಕವಾಗಿ ನಡೆಸಿದ ವ್ಯವಸಾಯ ಬಹುಮುಖವಾದದ್ದಾಗಿದ್ದು ಇವರ ಬಹುಕಾಲದ ವ್ಯಾಸಂಗದ ಪ್ರೀಯತೆ ಹಾಗೂ ಚಿಂತನೆಗಳು ಎಂದಿಗೂ ಕನ್ನಡದ ಓದುಗ ಮನಸ್ಸಿನಲ್ಲಿ ಹೊಳವುಗಳಾಗಿ ನಿತ್ಯ ಅಧ್ಯಯನಗಳಿಂದ ನಮ್ಮೊಂದಿಗಿರಿಸಿಕೊಂಡು ಹೋಗುವುದು ಎಲ್ಲರ ಕರ್ತವ್ಯವೆನಿಸಿದೆ. ಇವರ ಅಭ್ಯಾಸ ಕ್ಷೇತ್ರಗಳಾದ ಗ್ರಂಥಸಂಪಾದನೆ, ವಿಮರ್ಶೆ, ಭಾಷಾವಿಜ್ಞಾನ, ಸಂಶೋಧನೆ, ಕವಿ–ಕಾವ್ಯ–ಕಾಲ ವಿಚಾರಗಳಾದಿಯಾಗಿ ಇತರೆ ಸಾಹಿತ್ಯ ಕ್ಷೇತ್ರಗಳು ಇವರ ವಿದ್ವತ್ತನ್ನು ಸಾಕ್ಷೀಕರಿಸಿದ್ದಾಗಿವೆ. ಇಂತಹ ವಿದ್ವತ್ ಪ್ರತಿಭೆಯು ರಚಿತ ಸಾಹಿತ್ಯಲೋಕದ ಉಪಯುಕ್ತ ಗ್ರಂಥಗಳಲ್ಲೊಂದಾದ ಪೀಠಿಕೆಗಳು ಲೇಖನಗಳು ಈ ಸಂಕಲನದಲ್ಲಿ ಅಚ್ಚಾಗದೆ ಉಳಿದ ವಿಷಯಗಳನ್ನು ಈ ಕೃತಿಯು ಸಹಪ್ರತಿಯಾಗಿ ೫೫ ಲೇಖನಗಳಿಂದ ಆವೃತವಾದ 'ಪ್ರೊಫೆಸರ್. ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು' ಎಂಬ ಶೀರ್ಷಿಕೆಯಡಿಯಲ್ಲಿ ಅವರ ಅಪ್ರಕಟಿತ ಲೇಖನಗಳನ್ನು ಸಂಪಾದಿಸಿ ಪ್ರಕಟಿಸಿದ ಕೀರ್ತಿ ಡಿ.ಎಲ್.ಎನ್ ಶಿಷ್ಯರಲ್ಲೊಬ್ಬರಾದ 'ಟಿ.ವಿ.ವೆಂಕಟಾಚಲಶಾಸ್ತ್ರಿ' ಅವರಿಗೆ ಸಲ್ಲುತ್ತದೆ.

ಪ್ರಸ್ತುತ ಕೃತಿಯಲ್ಲಿನ ಉಪಶೀರ್ಷಿಕೆಯಾಗಿ ಮೂಡಿ ಬಂದ ಗ್ರಂಥಸಂಪಾದನೆ ಭಾಗದ 'ತುರುಗಾಹಿ ರಾಮಣ್ಣನ ವಚನಗಳು' ಈ ಲೇಖನವನ್ನು ವಸ್ತುವಿಷಯವಾಗಿ ಬಳಸಿದ್ದು ಪ್ರಮುಖವೆನಿಸಿದೆ. ಅಭ್ಯಾಸದ ವಿಸ್ತೃತತೆಯಿಂದ ಈ ವಿಷಯವು ಐದು ಅಂಶಗಳಿಂದ ನಿರೂಪಿತವಾಗಿದೆ.

* ವಚನಸಾಹಿತ್ಯ ಕಾಲಘಟ್ಟ ವಿಚಾರ
* ತುರುಗಾಹಿ ರಾಮಣ್ಣನ ಹಿನ್ನೆಲೆ ಕಾಲದ ವಿಚಾರಗಳು
* ತುರು, ತುರುಗಾಹಿ ಶಬ್ದ ವಿಚಾರ
* ತುರುಗಾಹಿ ರಾಮಣ್ಣನ ಆಯ್ದ ವಚನಗಳ ವಿಶ್ಲೇಷಣೆ
* ವಚನ ಸಾಹಿತ್ಯದ ಕಾಲಘಟ್ಟ ವಿಚಾರ

ಕನ್ನಡ ನಾಡಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಭಾಷೆಯ ವಿಚಾರವಾಗಿ ಸಾಮಾನ್ಯರಿಗೂ ಮನಮುಟ್ಟುವಂತಹ ಪರ್ವಕಾಲವಾಗಿತ್ತು ೧೨ನೇ ಶತಮಾನ. ಸಾಮಾಜಿಕವಾಗಿ ವಿವಿಧ ಸ್ತರ ವಿನ್ಯಾಸಗಳಾದ ಸಾಹಿತ್ಯ, ಧರ್ಮ, ಭಾಷೆ, ಬದುಕುಗಳನ್ನೊಳಗೊಂಡ ಕಾಲ ಇದಾಗಿದೆ. ಈ ಒಳಗೊಳ್ಳುವಿಕೆಯ ಹಿಂದೆ ಬಹುಪಾಲು ಸಮಾಜದ ಕೆಳಸ್ತರದ ವ್ಯಕ್ತಿಗಳಿದ್ದದ್ದೆ ವಿಶೇಷ. ಅಲ್ಲಿ ಸಾಮಾನ್ಯವಾಗಿ ಶ್ರಮಜೀವಿಗಳಾದ ಮಾದರು, ಸೂಜಿಕಾಯಕದವರು, ಜೆಸ್ತರು, ವೈದ್ಯರು, ಅಂಬಿಗರು, ಸುಂಕದವರು, ಕುರಿಗಾಯಿಗಳು, ದನಗಾಯಿಗಳು ಹೀಗೆ

ಸಮಾಜದ ಎಲ್ಲವರ್ಗ, ವರ್ಣದ ಸ್ತ್ರೀ ಪುರುಷಾಧಿಗಳಾಗಿ ಒಳಗೊಂಡಿದ್ದಲ್ಲದೆ ಅಲ್ಲಮ, ಬಸವಾದಿಗಳ ನೇತೃತ್ವದಲ್ಲಿ ನಡೆದ ಶರಣ ಚಳುವಳಿಯಲ್ಲಿ ಭಾಗವಹಿಸಿ ಆಧ್ಯಾತ್ಮಿಕತೆ, ನೆಮ್ಮದಿಯನ್ನು ಕಂಡುಕೊಳ್ಳುವ ಮೂಲಕ ನಿತ್ಯ ಶುದ್ಧಕಾಯಕ, ದಾಸೋಹಾದಿಗಳನ್ನು ಬದುಕಿನ ಮಂತ್ರಗಳನ್ನಾಗಿಸಿಕೊಂಡು ಬಾಳಿದವರಾಗಿದ್ದಾರೆ ವಚನಕಾರರು.

ಈ ಸಂವೇದನೆಗಳಿಂದ ಹೊಸಬಗೆಯ ಅಭಿವ್ಯಕ್ತಿ ಜನಸಾಮಾನ್ಯರಲ್ಲಿ ಮೂಡಲು ಸಾಧ್ಯವಾಯಿತು. ಈ ಹಿಂದಿನ ರೂಢಿಗತವಾಗಿದ್ದ ಸಂಸ್ಕೃತ, ಹಳಗನ್ನಡ, ಚಂಪೂ ಕಾವ್ಯಗಳ ಸ್ಥಾನವನ್ನು ಕನ್ನಡದ ಆಡುಭಾಷೆ ತನ್ನದಾಗಿಸಿಕೊಂಡದ್ದು ವಿಶೇಷವಾಗಿದೆ. ಇಷ್ಟಲಿಂಗ ಪೂಜೆಯಂತಹ ಬಾಹ್ಯ ಆಚರಣೆಯ ಜೊತೆಗೆ ಅಂತರಂಗದ ಶುದ್ಧತೆಗೂ ಆದ್ಯತೆ ನೀಡಿದ್ದವರು ಶಿವಶರಣರು. ಅನುಭಾವಿಗಳಾಗಿ ತಮ್ಮ ಧಾರ್ಮಿಕ, ಸಾಮಾಜಿಕ ಅನುಭವಗಳನ್ನು ವಚನಗಳ ಮೂಲಕ ಅಭಿವ್ಯಕ್ತಿಪಡಿಸಿದವರಾಗಿದ್ದಾರೆ. ಇಂತಹ ಜ್ಞಾನ ಹೊಂದಿದ್ದ ಕಾಯಕ ಜೀವಿಗಳಲ್ಲೊಬ್ಬನು "ತುರುಗಾಹಿ ರಾಮಣ್ಣ"

**ತುರುಗಾಹಿ ರಾಮಣ್ಣನ ಹಿನ್ನೆಲೆ, ಕಾಲದ ವಿಚಾರಗಳು**

ತುರುಗಾಹಿ ರಾಮಣ್ಣ, ಇವನೊಬ್ಬ ಉಪೇಕ್ಷಿತ ವಚನಕಾರನಾಗಿ ಒಡಮೂಡಿದ್ದು ಇವನ ಕಾಲ ದೇಶ–ತಾಯಿ–ತಂದೆಯರ ವಿಚಾರಗಳ ಕುರಿತು ಇವನ ವಚನಗಳಲ್ಲಾಗಲಿ, ಯಾವುದೇ ಪ್ರಾಚೀನ ಕಾವ್ಯಗಳಲ್ಲಾಗಲಿ ಯಾವೊಂದು ಉಲ್ಲೇಖ ಕಂಡುಬಂದಿಲ್ಲ. ಕೆಲವಾರು ಅಧ್ಯಯನಗಳ ಮೂಲಕ ಈವರೆಗೆ ದೊರೆತ 'ಇವನ ವಚನಗಳ ಸಂಖ್ಯೆ ಒಟ್ಟು ೪೬ ಇದ್ದು ಈ ವಚನಗಳಲ್ಲಿ ಇವನ ಅಂಕಿತನಾಮವಾಗಿ 'ಗೋಪತಿನಾಥ ವಿಶ್ವೇಶ್ವರಲಿಂಗ' ಎಂದು ಉಲ್ಲೇಖಿತಗೊಂಡಿದೆ.'[೩೧] ಕಲ್ಯಾಣದಲ್ಲಿ ಶರಣನಾಗಿ ನೆಲೆಸಿ ಶಿವಭಕ್ತರ ಮನೆಯ ಗೋವುಗಳನ್ನು ಕಾಯುತ್ತೇನೆ ಎಂದು ಕಾಯಕದ ಪರಿಭಾಷೆಯಲ್ಲಿಯೇ ಆಧ್ಯಾತ್ಮವನ್ನು ತಿಳಿಸಿದವನಾಗಿದ್ದಾನೆ. ಈತನ ವಚನಗಳು ಉನ್ನತ ವಿಚಾರಗಳಿಂದ ಕೂಡಿದ್ದು, ತಾತ್ವಿಕ ವಿವೇಚನೆಯನ್ನು ಒಳಗೊಂಡವಾಗಿವೆ.

ಇವನು ಬಸವಣ್ಣನ ಸಮಕಾಲೀನವನು ಎನ್ನುವುದಕ್ಕೆ ಪೂರಕವಾಗಿ ಇವನ ಒಂದು ವಚನವನ್ನು ಅವಲೋಕಿಸುವುದಾದರೇ,

"ಬಂದಿತ್ತು ದಿನ ಬಸವಣ್ಣಕಲ್ಲಿಗೆ

ಚನ್ನಬಸವಣ್ಣ ಉಳುಮೆಯಲ್ಲಿಗೆ

ಪ್ರಭು, ಅಕ್ಕ, ಕದಳಿದ್ವಾರಕ್ಕೆ

ಮಿಕ್ಕಾದ ಪ್ರಥಮರೆಲ್ಲರೂ ತಮ್ಮಲಕ್ಷ್ಯಕ್ಕೆ

ನಾ ತುರುವಿನ ಬೆಂಬಳಿಯಲ್ಲಿ ಹೋದ ಮರೆಯಲ್ಲಿ

ಅಡಗಿಹರೆಲ್ಲರು ಅಡಗಿದುದು ಕೇಳಿ ನಾ

ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿಯೇ ಉಡುಗುವೆನು'[೨]

ಎಂದು ಉಲ್ಲೇಖಿತಗೊಂಡ ಈ ವಚನದಲ್ಲಿ ರಾಮಣ್ಣನು ತಿಳಿಸಿದಂತೆ ಬಸವಣ್ಣ, ಚೆನ್ನಬಸವಣ್ಣ, ಅಲ್ಲಮ, ಅಕ್ಕನ ಆದಿಯಾಗಿ ವಚನಕಾರರೆಲ್ಲರೂ ಕಲ್ಯಾಣ ಕ್ರಾಂತಿಯ ನಂತರ ದಿಕ್ಕು ದಿಕ್ಕಿಗೆ ಚದುರಿದ್ದನ್ನು ಕಣ್ಣಿಗೆ ಕಟ್ಟುವಂತೆ ತೋರಿಸಿದ್ದಾನೆ. ಇವೆಲ್ಲವನ್ನು ಕಂಡೂ ಸಹ ಕ್ರಾಂತಿಯ ನಂತರವೂ ತನ್ನ ನೆಲೆಬಿಡದೆ ಅಲ್ಲಿಯೇ ತಾನೂ ಸಹ ಗೋಪತಿನಾಥ ವಿಶ್ವೇಶ್ವರ ಲಿಂಗದಲ್ಲಿ ಹುದುಗುವೆನು ಎಂದು ಹೇಳುವ ಮೂಲಕ ಅಂದಿನ ವಾಸ್ತವತೆಯನ್ನು ಬಿತ್ತರಿಸಿದ್ದು ತಿಳಿಯಬಹುದಾಗಿದೆ. ಈತನ ವಿಚಾರವಾಗಿ ಸಾಹಿತ್ಯಿಕ ದಾಖಲೆಯ ಉಲ್ಲೇಖಗಳನ್ನು ಸಂಗ್ರಹಿಸುತ್ತಿರುವಾಗ ಕೆಲವಾರು ಅಂಶಗಳು ನನಗೆ ದೊರೆತಿದ್ದು ಅವುಗಳನ್ನು ಈ ಕೆಳಗಿನಂತೆ ವಿವರಿಸಿದ್ದೇನೆ.

೧. ಮೊದಲನೆಯದಾಗಿ ಕವಿಚರಿತೆಕಾರರಾದ ರಾ.ನರಸಿಂಹಾಚಾರ್ಯರು ತಮ್ಮ ಕವಿಚರಿತೆ ಸಂಪುಟ-೧ರಲ್ಲಿ ಇವನ ಕಾಲ ೧೧೬೦ ಎಂದು, ಇವನ ವಚನಗಳ ಸಂಖ್ಯೆ ೪೫ ಇದ್ದು, "ಗೋಪತಿನಾಥ ವಿಶ್ವೇಶ್ವರ ಲಿಂಗ" ಎಂಬ ಅಂಕಿತ ಹೊಂದಿದವನೆಂದು ತಿಳಿಸಿದ್ದಾರೆ.

೨. ಬಿ.ಶಿವಮೂರ್ತಿಶಾಸ್ತ್ರೀ ಇವರು ೧೯೫೦ರಲ್ಲಿ "ತುರುಗಾಹಿ ರಾಮಣ್ಣನ ವಚನಗಳು" ಎಂಬ ಕೃತಿ ರಚಿಸಿದ್ದು ಈ ವಿಚಾರವಾಗಿ "ಸಮಗ್ರ ವಚನ ಸಂಪುಟ-೧"ರಲ್ಲಿ ಪ್ರಸ್ತಾಪಿಸಲಾಗಿದೆ.

೩. ೧೯೯೩ರಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಪ್ರಕಟಗೊಂಡ "ಸಂಕೀರ್ಣ ವಚನ ಸಂಪುಟ-೭ ರ ಸಹ ಸಂಪುಟ-೨ನ್ನು" ಎಸ್.ವಿದ್ಯಾಶಂಕರ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ "ತುರುಗಾಯಿ ರಾಮಣ್ಣನ ವಚನ" ಎಂಬ ಭಾಗದಲ್ಲಿ ರಾಮಣ್ಣನ ಕಾಯಕದ ವಿಚಾರಗಳನ್ನು, ವಚನಗಳಲ್ಲಿನ ಆಧ್ಯಾತ್ಮಿಕತೆ, ತಾತ್ವಿಕತೆ ಕುರಿತು ತಿಳಿಸಿದ್ದನ್ನು ಕಾಣಬಹುದಾಗಿದೆ.

೪. ವೀರಣ್ಣ ರಾಜೂರ ಅವರ ಸಂಪಾದಕತ್ವದಲ್ಲಿ ಮೂಡಿ ಬಂದ "ಎಲ್ಲಾ ಪುರಾತನರ ವಚನಗಳು ಸಂಪುಟ-೧" ೨೦೦೬ರಲ್ಲಿ ಪ್ರಕಟಗೊಂಡಿದ್ದು ಈ ಕೃತಿಯ ಭಾಗ ೨೦ರಲ್ಲಿ "ತುರುಗಾಯಿ ರಾಮಣ್ಣನ ವಚನ" ಎಂದು ೪೫ ವಚನಗಳು ಸಂಕಲಿಸಿದ್ದು ತಿಳಿದುಬಂದಿದೆ.

೫. ಟಿ.ವಿ.ವೆಂಕಟಾಚಲಶಾಸ್ತ್ರೀ ಅವರಿಂದ ಸಂಪಾದಿಸಲ್ಪಟ್ಟ "ಪ್ರೋಫೆಸರ್ ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು" ಕೃತಿಯಲ್ಲಿ

ಡಿ.ಎಲ್.ನರಸಿಂಹಾಚಾರ್ಯರು ತಮ್ಮ ಸಂಪಾದಕತ್ವದಿಂದ ಕೈ ಬಿಟ್ಟಿದ್ದ ವಿಚಾರಗಳನ್ನು ಟಿ.ವಿ.ವೆಂಕಟಾಚಲಶಾಸ್ತ್ರೀ ಅವರು ಸಂಕಲಿಸಿದ್ದ ಈ ಕೃತಿಯಲ್ಲಿ "ಗ್ರಂಥಸಂಪಾದನೆ" ಭಾಗವಾಗಿ 'ತುರುಗಾಹಿ ರಾಮಣ್ಣನ ವಚನಗಳೆಂದು' ರಾಮಣ್ಣನ ವಿಚಾರವಾಗಿ ಸಂಕ್ಷಿಪ್ತ ಪ್ರಸ್ತಾಪ ಹಾಗೂ ಅವನ ೪೫ ವಚನಗಳನ್ನು ಇಲ್ಲಿ ಪ್ರಸ್ತಾಪಿಸಿದ್ದು ತಿಳಿದುಬಂದಿದೆ.

೬. ಇನ್ನೂ ತುರುಗಾಹಿ ರಾಮಣ್ಣ ವಚನಗಳ ಕುರಿತು ಎಂ.ಎಂ.ಕಲಬುರ್ಗಿ ಅವರು ತಮ್ಮ "ಸಮಗ್ರ ವಚನ ಸಂಪುಟ-೬ರಲ್ಲಿ ದಾಖಲಿಸಿದ್ದು ಕಂಡುಬಂದಿದೆ.

**ತುರು, ತುರುಗಾಹಿ ಶಬ್ದ ವಿಚಾರ**

'"ತುರು" ಶಬ್ದಕ್ಕೆ ಗೋವುಗಳ ಸಮುದಾಯ ಅಥವಾ ಗೋವುಗಳ ಗುಂಪು ಎಂಬ ಅರ್ಥವಿದೆ. "ತುರುಕಾರ" ಪದ ದಕ್ಷಿಣ ದ್ರಾವಿಡ ಭಾಷೆಯಲ್ಲಿ ಬಳಕೆಯಿದೆ. ವೇದಕಾಲದ "ತುರ್ವ" ಕರ್ನಾಟಕದಲ್ಲಿ "ತುರುಕಾರ" ಅಥವಾ "ಹಟ್ಟಿಕಾರ" ಆಗಿರಬೇಕೆಂದು ಖ್ಯಾತ ಸಂಶೋಧಕರಾದ ಶಂಬಾ ಜೋಷಿ ಅವರು ಅಭಿಪ್ರಾಯಿಸಿದ್ದಾರೆ.'[೩೩] ಇದೇ ರೀತಿ 'ತುರು' ಶಬ್ದಕ್ಕೆ ಇನ್ನೊಂದು ಪರ್ಯಾಯ ಪದ 'ಗೌಳಿ-ಗವಳಿಗ' (ಗೋವಳಿಗ) ಎಂದರೆ, ಪಶುಪಾಲಕ ಎಂಬರ್ಥವನ್ನು ತಿಳಿಯಬಹುದಾಗಿದೆ. "ತುರುಕಾರ" ಶಬ್ದಕ್ಕೆ ಕಸ್ತೂರಿ-ಕೋಶದಲ್ಲಿ ಗೋವಳಿಗ, ದನಕಾಯುವವ ಎಂದು ಉಲ್ಲೇಖಿಸಲಾಗಿದೆ. ಇದರಂತೆ ಕನ್ನಡ ರತ್ನ ಕೋಶದಲ್ಲಿ "ತುರುಕಾರ" ಪದಕ್ಕೆ "ದನಕಾಯುವವನು" ಎಂದು ಉಲ್ಲೇಖಿಸಿದ್ದು ಕಂಡುಬಂದಿದೆ.

ತುರುಗಾಯಿಗಳು ವಿಶೇಷವಾಗಿ ಊರಿನಿಂದ ದೂರದ ಹುಲ್ಲುಗಾವಲು ಪ್ರದೇಶಕ್ಕೆ ದನಗಳನ್ನು ಕರೆದೊಯ್ದು ಅಲ್ಲಿಯೇ ಸಂಜೆಯವರೆಗೆ ಮೇಯಿಸಿ ಸಂಜೆ ವೇಳೆಗೆ ಊರಿಗೆ ದನಗಳನ್ನು ಕರೆ ತಂದು ಮನೆ ಮನೆಗೆ ಒಪ್ಪಿಸುವ ಕಾಯದವರಾಗಿದ್ದರು. ಇಂತಹ ವೃತ್ತಿಯಲ್ಲಿದ್ದವನು ರಾಮಣ್ಣನು.

ಇದಕ್ಕೆ ಅನ್ವಯವೆಂಬಂತೆ ರಾಮಣ್ಣನೇ ಸುಮಾರು ೧೫ಕ್ಕೂ ಹೆಚ್ಚು ವಚನಗಳಲ್ಲಿ ದನಗಳನ್ನು ಕಾಯುವ ವಿಧಾನ, ಅವುಗಳನ್ನು ಸಂಬಾಳಿಸುವ ರೀತಿ ಇತರೆ ವಿಚಾರಗಳ ಕುರಿತು ಅಭಿಪ್ರಾಯಿಸಿದ್ದು ಕಂಡುಬಂದಿದೆ. ಇದಕ್ಕೆ ಪೂರಕವೆಂಬಂತೆ ಅವನ ಒಂದು ವಚನ ತಿಳಿಯುವುದಾದರೆ,

'ಹಸುವಿಗೆ ಹಾಗ ಎತ್ತಿಗೆ ಹಣವಡ್ಡ
ಕರುವಿಗೆ ಮೂರುಹಣ, ಎಮ್ಮೆಕೋಣ ಕುಲವನಾ ಕಾಯಲಿಲ್ಲ
ಅವು ಎನ್ನ ತುರುವಿಗೆ ಹೊರಗೆ
ತೊಂಡು ಹೋಗದಂತೆ ಕಾದೊಪ್ಪಿಸುವೆ
ಗೋಪತಿನಾಥ ವಿಶ್ವೇಶ್ವರ ಲಿಂಗಕ್ಕೆ'

ಎನ್ನುವ ವಚನದ ಮೂಲಕ ತಾನು ಎಮ್ಮೆ, ಕೋಣಗಳನ್ನು ಕಾಯುವವನಲ್ಲ, ಹಸು, ಎತ್ತು, ಕರು ಇವುಗಳನ್ನು ಮಾತ್ರಕಾಯುವವನು ಎಂಬುದು ಇಲ್ಲಿ ಸ್ಪಷ್ಟವಾಗಿ ನಿರೂಪಿತವಾಗಿದೆ. ಇಲ್ಲಿ ಒಂದು ಸಂಶಯವೆಂದರೆ, ರಾಮಣ್ಣನು ಶರಣನಾಗಿದ್ದು ಯಾಕೆ? ಈ ಮೂಕಪ್ರಾಣಿಗಳಲ್ಲಿ ಅಸಮಾನತೆ ತೋರಿದ್ದನೂ ಎಂದು ತಿಳಿಯದಾಗಿದೆ? ಮುಂದೆ ತುರು(ದನ)ಗಳ ಬಗ್ಗೆ ಅವುಗಳನ್ನು ಕಾಯುವಿಕೆ ಬಗ್ಗೆ, ನಿಗದಿಪಡಿಸಿದ ಬೆಲೆ (ತನ್ನ ಕಾಯಕಕ್ಕೆ ಪ್ರತಿಯಾಗಿ ಪಡೆಯುತ್ತಿದ್ದ ಸಂಭಾವನೆ)ಗಳ ವಿವರಣೆಯನ್ನು ವಿಸ್ತೃತ ಅಧ್ಯಯನದ ಮೂಲಕ ತಿಳಿಯುವುದು ಅವಶ್ಯವೆನಿಸಿದೆ.

**ತುರುಗಾಹಿ ರಾಮಣ್ಣನ ಆಯ್ದ ವಚನಗಳ ವಿಶ್ಲೇಷಣೆ**

ತುರುಗಾಹಿ ರಾಮಣ್ಣನು ಗೋವಳಿಗನಾದರೂ, ಶ್ರೇಷ್ಠ ಅನುಭಾವಿ, ಈತನ ಅನೇಕ ವಚನಗಳು ಅನುಭವ ಸಂಮೃದ್ಧವಾಗಿವೆ. ಕಾಯಕದ ಬಗೆಗಿನ ಗೌರವ ಮತ್ತು ಅದರಿಂದೊದಗುವ ಆತ್ಮತೃಪ್ತಿಯನ್ನು ಅಭಿವ್ಯಕ್ತಿಸಿವೆ. ಅಲ್ಲದೇ ಆಧ್ಯಾತ್ಮಿಕ ಸಾಧನೆಗೆ ಯಾವುದೇ ಕಾಯಕವೂ ಕೀಳಲ್ಲ ಎಂಬ ಮಾತಿಗೆ ತುರುಗಾಹಿ ರಾಮಣ್ಣನ ವಚನಗಳು ಸಾಕ್ಷಿಯಾಗಿವೆ.

ರಾಮಣ್ಣನ ವಚನಗಳಲ್ಲಿನ ತಾತ್ವಿಕ ವಿಚಾರಗಳ ಬಗ್ಗೆ ತಿಳಿಯುವುದಾದರೆ,

'ತತ್ವಂಗಳಗೊತ್ತ ಗುಟ್ಟೆಂದು ಬಿಡಬಾರದು
ಇಷ್ಟಲಿಂಗದ ಪೂಜೆಯ ಆತ್ಮನ ಗೊತ್ತನರಿತೆನೆಂದು ಮರೆಯಲಾಗದು.
ಪಾಪಪುಣ್ಯವಿಲ್ಲಾ ಎಂದು ನೀಂಕರಿಸಿ ನಡೆಯಲಾಗದು,
ಈ ಗುಣ ಅಂಗವನಿನನಕ್ಕ ಒಂದೂ ಇಲ್ಲಾ ಎಂದು ಬಿಡಬಹುದೇ?
ನಾನೆಂಬುದು ಇದೇನೆಂದು ಅರಿವನ್ನಕ್ಕ
ಶ್ರುತಕ್ಕೆ ದೃಷ್ಟ, ದೃಷ್ಟಕ್ಕೆ ಅನುಮಾನ, ಅನುಮಾನಕ್ಕೆ ನಿಶ್ಚಯ
ನಿಶ್ಚಯಕ್ಕೆ ನಿಜವಾದಲ್ಲಿ, ಗೋಪತಿನಾಥ'[೩೪]

ವಿಶ್ವೇಶ್ವರಲಿಂಗನ ಕ್ರಿಯಾನಿವಾರ್ಹಹ" ಎನ್ನುವ ವಚನದ ಮೂಲಕ ರಾಮಣ್ಣನ ಶರಣರ ತತ್ವಗಳಲ್ಲಿರುವ ಮಾನವೀಯ ಮೌಲ್ಯಗಳು ಎಲ್ಲರ ಹಿತಕ್ಕಾಗಿ ರೂಪಗೊಂಡಿವೆ. ಅವುಗಳು ಪ್ರತಿನಿಧಿಸುವ ವಿಚಾರಗಳೆಲ್ಲವೂ ಎಲ್ಲರಿಗೂ ಮನಮುಟ್ಟವಂತಾಗಬೇಕೆಂದಿದ್ದಾಗಿದೆ. ಶರಣರು ಬಿತ್ತರಿಸುವ ತತ್ವಗಳಲ್ಲಿ ಯಾವುದೇ ಗುಟ್ಟುಗಳಿಲ್ಲ, ಅವುಗಳ ಆಚರಣೆಯಿಂದ ನೆಮ್ಮದಿ ಕಾಣಬಹುದು. 'ಇಷ್ಟಲಿಂಗ ಪೂಜೆ' ಆತ್ಮದ ಅರಿವಿಗೆ ಎಂದು ತಿಳಿದು ವೈಯಕ್ತಿಕ ಸಾಧನೆಯನ್ನು ನಿರಂತರವಾಗಿ ಮಾಡುತ್ತಲೇ ಇರಬೇಕು. ನಾನು ಮಾಡುವುದೆಲ್ಲವೂ ದೇವರ ಕೃಪೆಗಾಗಿ, ಕಾರಣ ನಾನು ಏನು ಬೇಕಾದರೂ ಮಾಡುವುದರಿಂದ ಪಾಪ–ಪುಣ್ಯಗಳು

ನನ್ನನ್ನು ತಟ್ಟಲಾರವು ಎಂದು ಆಲಕ್ಷಿಸಿ ನಡೆಯಬಾರದು, ಶರೀರದಲ್ಲಿನ ಗುಣ ಸ್ವಭಾವವನ್ನು ತಿಳಿದು ಅದಕ್ಕೆ ಚಂಚಲತೆಯನ್ನು ನೀಡಬಾರದು, ನಾನು ಯಾರು? ಎಲ್ಲಿಂದ ಬಂದಿದ್ದೇನೆ? ಬಂದ ಉದ್ದೇಶವೇನು? ಎಂಬ ಅರಿವನ್ನು ಹೊಂದಿರಬೇಕು, ನಾನೇ ಕೀರ್ತಿವಂತ, ನಾನೇ ಧೈರ್ಯಶಾಲಿ, ಎಂದು ದುರಾಭಿಮಾನದಿಂದ ಬೀಗಬಾರದು ಇವೆಲ್ಲವು (ಲಜ್ಜೆ) ನಾಚಿಕೆ ಗೇಡಿಯ ಸಂಗತಿಗಳೆಂದು, ಇವೆಲ್ಲಕ್ಕೂ ದೃಢವಾದ ನಿರ್ಧಾರ ಅವಶ್ಯವಿದ್ದು ಇವನ್ನು ಅಳವಡಿಸಿಕೊಂಡರೆ ಪರಶಿವನನ್ನು ಒಲಿಸಿಕೊಂಡಂತೆ ಎಂದು ಅಭಿಪ್ರಾಯಿಸಬಹುದಾಗಿದೆ.

ಇದಲ್ಲದೇ, ವೀರಶೈವ ದರ್ಶನಾಂಗಗಳಾದ ಕ್ರಿಯೆ–ಜ್ಞಾನ, ಅರಿವು–ಆಚಾರ, ಆತ್ಮ–ಪರಮಾತ್ಮ, ಗುರು–ಲಿಂಗ–ಜಂಗಮ, ಸ್ಥಾವರ–ಇಷ್ಟಲಿಂಗ, ಇವುಗಳ ಬಗೆಗಿನ ಚಿತ್ರಣವನ್ನು ರಾಮಣ್ಣನು ತನ್ನ ವಚನಗಳಲ್ಲಿ ಉಲ್ಲೇಖಿಸಿದ್ದು, ಉಂಟು. ಸ್ಥಾವರ ಲಿಂಗಗಳನ್ನೆ ಶರಣರು ತಮ್ಮ ವಚನಾಂಕಿತಗಳನ್ನಾಗಿ ಇಟ್ಟುಕೊಂಡಿದ್ದರೂ, ಅವರು ಅದಕ್ಕೆ ಅಷ್ಟು ಮಹತ್ವ ಕೊಟ್ಟಿರಲಿಲ್ಲ ರಾಮಣ್ಣನ "ಗೋಪತಿನಾಥ ವಿಶ್ವೇಶ್ವರ ಲಿಂಗ" ಎಂಬ ವಚನಾಂಕಿತ ಅರ್ಥಪೂರ್ಣವಾಗಿ ತೋರುತ್ತದೆ. ಗೋಪತಿನಾಥ ಎಂದರೆ ಶಿವನು, ಗೋವುಗಳಿಗೆಲ್ಲ ಒಡೆಯನಾಗಿ ಅವುಗಳ ಸಕಲ ಶ್ರೇಯಸ್ಸನ್ನು ಅನುಕ್ಷಣ ಕಾಯುವವನೇ ಗೋಪತಿನಾಥ ಎಂದು ಅರ್ಥೈಸಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೇ, ರಾಮಣ್ಣನು ಈವರೆಗೆ ಉಪೇಕ್ಷಿತ ವಚನಕಾರನಾಗಿ, ನೂರಾರು ಶರಣರಲ್ಲಿ ಮರೆಯಾಗಿದ್ದವನು ಇನ್ನು ಮುಂದಾದರೂ ಇವನ, ಇವನು ಬರೆದ ವಚನಗಳು ಸಮಾಜಮುಖಿಯಾಗಿ ಬೆಳೆಯಬೇಕಾದದ್ದು ಅತೀ ಅವಶ್ಯಕವಾಗಿದೆ. ಇವನ ಎಲ್ಲಾ ವಚನಗಳು ಸಾಮಾಜಿಕ ಕಳಕಳಿಯಿಂದ ಕೂಡಿದ್ದಾಗಿವೆ. ಇದಕ್ಕೆ ಪೂರಕವೆಂಬಂತೆ "ವಚನ ಸಾಹಿತ್ಯ"ವು ಯಾವುದೇ ಪುರಾಣದ ಕಟ್ಟುಕಥೆಯಲ್ಲಾ, 'ಪಂಡಿತರಿಂದ ಬೆಳೆದ ಸಾಹಿತ್ಯವಲ್ಲ, ರಾಜರನ್ನೂ ಹೊಗಳುವ ಶಬ್ದಭಂಡಾರವಲ್ಲ, ವಚನ ಸಾಹಿತ್ಯವೆಂಬುದು ಶಿವಶರಣರ, ಅನುಭಾವಿಗಳ, ದಾರ್ಶನಿಕರ ಅಂತರಂಗದ ಅನುಭಾವದ ಅಭಿವ್ಯಕ್ತಿ' ಶುದ್ಧಭಾವನೆಗಳ ಗಣಿ, ಪವಿತ್ರ ಜೀವಿಗಳ ಜಲಧಾರೆಯಾಗಿದ್ದು ಎಲ್ಲ ಕಾಲಕ್ಕೂ ಪ್ರಸ್ತುತವೆನಿಸಿದ್ದಾಗಿದೆ.

**೩.೭. ರಾಘವಾಂಕ ಕವಿಯ ಸಿದ್ಧರಾಮ ಚರಿತೆಯ ಸಂಗ್ರಹ**

ಡಿ.ಎಲ್.ಎನ್ ಸಂಪಾದಿತ ಸಂಗ್ರಹ ಕೃತಿಗಳಲ್ಲೊಂದಾದುದು 'ರಾಘವಾಂಕ ಕವಿಯ ಸಿದ್ಧರಾಮ ಚರಿತೆಯ ಸಂಗ್ರಹ' ಇದು ಐವತ್ತರ ದಶಕದಲ್ಲಿ, ಉತ್ತರ ಕರ್ನಾಟಕ ಭಾಗದಲ್ಲಿ ಸಿದ್ದರಾಮನು ಶೈವನೋ? ವೀರಶೈವನೋ? ಎಂಬ ಮಹತ್ತರ ಚರ್ಚೆಗೆ ಗ್ರಾಸವಾಗಿ ಕನ್ನಡ ಸಾಹಿತ್ಯಲೋಕದಲ್ಲಿ ಕೋಲಾಹಲವೂ ಎಬ್ಬಿಸಿದ ಕೃತಿಯು ಇದಾಗಿದ್ದು, ಕಾಲಾನಂತರದಲ್ಲಿ ನಿರಂತರ ಮಾಹಿತಿಯಿಂದ ಓದುಗರ ಮಡಿಲು ಸೇರಿದ ಕೃತಿ ಇದಾಗಿದೆ. ೧೯೫೮ರಲ್ಲಿ ಈ ಸಂಗ್ರಹ ಕೃತಿ ಪ್ರಕಟಗೊಂಡು ಹೊರಬಂದಿದ್ದು ಈ ಪೂರ್ವದಲ್ಲೇ ಅಂದರೆ, ಒಂದು

ದಶಕದ ಹಿಂದೆ, ೧೯೪೧ರಲ್ಲಿ ಟಿ.ಎಸ್. ವೆಂಕಣ್ಣಯ್ಯ ಅವರೊಂದಿಗೆ ಸೇರಿ ಡಿ.ಎಲ್.ಎನ್. ಅವರು 'ಸಿದ್ಧರಾಮ ಚಾರಿತ್ರ' ಎಂಬ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ ಉಲ್ಲೇಖವೂ ಉಂಟು.

ಪ್ರಸ್ತುತ ಕೃತಿಯಲ್ಲಿ ಡಿ.ಎಲ್.ಎನ್. ಅವರು ಬರೆದ ಪ್ರಸ್ತಾವನೆ ಭಾಗವು (೬೩ ಪುಟಗಳಲ್ಲಿ) ವಿಸ್ತೃತ ಚರ್ಚೆಗಳನ್ನೊಳಗೊಂಡು ವಿದ್ವತ್ ಪೂರಿತವಾದದ್ದಾಗಿದೆ. ೧೯೫೧ರ ಅವಧಿಗೆ ಮೊದಲನೇ ಮುದ್ರಣ ಕಂಡ ಈ ಕೃತಿಯು, ೧೯೮೪ರ ವೇಳೆಗೆ ನಾಲ್ಕನೇ ಮುದ್ರಣ (ಕಾವ್ಯಾಲಯ ಪ್ರಕಾಶನ, ಮೈಸೂರು) ಕಂಡು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ತರಗತಿಯ ಐಚ್ಛಿಕ ಪಠ್ಯಭಾಗವಾಗಿ ಅಭ್ಯಾಸಿಗರನ್ನು ತಲುಪಿದ್ದಾಗಿದೆ.

ಕನ್ನಡ ಸಾಹಿತ್ಯ ಲೋಕದ ಷಟ್ಪದಿ ಬ್ರಹ್ಮನೆಂದೇ ಖ್ಯಾತಿಪಡೆದ ರಾಘವಾಂಕನಿಂದ ರಚಿತವಾದ ಕೃತಿ 'ಸಿದ್ಧರಾಮ ಚಾರಿತ್ರ' ಇದು ಪ್ರಸಿದ್ಧ ವಚನಕಾರರಲ್ಲೊಬ್ಬನಾದ ಸಿದ್ಧರಾಮನ ಚರಿತೆಯನ್ನು ಹೇಳುವ ಕೃತಿಯಾಗಿದ್ದು, ಇದು ೯ ಸಂಧಿಗಳು, ೫೪೭ ವಾರ್ಧಕ ಷಟ್ಪದಿಗಳನ್ನೊಂದಿದೆ. ಈ ಕಾವ್ಯವು ಮೊದಲ ಬಾರಿಗೆ ೧೯೮೩ರ ವೇಳೆಗೆ ಮದ್ರಾಸ್‌ನಲ್ಲಿ ಪ್ರಕಟಗೊಂಡಿತ್ತು. ನಂತರದ ದಿನಗಳಲ್ಲಿ 'ಸಿದ್ಧರಾಮೇಶ್ವರ ಪುರಾಣ' ಎಂಬ ಹೆಸರಿನೊಂದಿಗೆ 'ಸಿದ್ಧಾಂತಿ ಶಿವಶಂಕರ' ಶಾಸ್ತ್ರಿಗಳಿಂದ ಸಂಪಾದಿತಗೊಂಡು ೧೮೮೯ರ ವೇಳೆಗೆ ಮರು ಮುದ್ರಣಗೊಂಡಿತ್ತು. ಈ ಮುದ್ರಿತ ಪ್ರಕಟಣೆಯನ್ನು ಅಣಿಗೊಳಿಸಿಕೊಂಡು ಇತರೆ ಮೂರು ಹಸ್ತಪ್ರತಿಗಳ ಸಹಾಯದಿಂದ ಟಿ.ಎಸ್.ವಿ., ಡಿ.ಎಲ್.ಎನ್. 'ಸಿದ್ಧರಾಮ ಚಾರಿತ್ರ್ಯ' ಎಂಬ ಶೀರ್ಷಿಕೆಯಡಿಯಲ್ಲಿ ೧೯೪೧ರ ವೇಳೆಗೆ (ಟಿ.ಎಸ್.ವಿ. ಮರಣಾ ನಂತರ) ಪ್ರಕಟಣೆಗೊಳಿಸಿದ್ದಾರೆ. ಈ ಪರಿಷ್ಕೃತ ಪ್ರತಿಯನ್ನು ಬಳಸಿಕೊಂಡು ಹಸ್ತಪ್ರತಿಗಳ ಸ್ವರೂಪ, ಪಾಠ ಬೋಧನೆಯ ವಿಚಾರವಾಗಿ ಇತರೆ ಅಭಿಪ್ರಾಯಗಳನ್ನು ದೀರ್ಘವಾಗಿ ನಿರೂಪಿಸಿ ಸಿದ್ಧರಾಮನ ದೀಕ್ಷಾ ವಿಚಾರವಾಗಿ ಕೃತಿಯು ಹೊರಬಂದ ಕಾಲದಲ್ಲಿಯೇ ವಾದ-ವಿವಾದಗಳನ್ನು ಉಂಟು ಮಾಡಿಕೊಂಡುದಾಗಿತ್ತು.

'ಡಿ.ಎಲ್.ಎನ್ ಅವರು 'ಅಪೂರ್ವಶಕ್ತಿಗಳ ಸಂಗಮ' ಇವರಲ್ಲಿ ಅದ್ಭುತವಾದ ಪಾಂಡಿತ್ಯ ಒಂದು ಕಡೆಯಾದರೆ, ಕವಿ ಪ್ರತಿಭಾ ನಿರ್ಮಿತವಾದ ರಸಸನ್ನಿವೇಶ ರಹಸ್ಯವನ್ನು ಕಾಣುವ ರಸದೃಷ್ಟಿ ಇನ್ನೊಂದು ಕಡೆ, ಇವೆರಡನ್ನು ಒಟ್ಟಿಗೆ ಸೇರಿಸಿ ಅವರನ್ನು ಈ ಕಾವ್ಯ ಸಂಗ್ರಹಗಳ ಅಭ್ಯಾಸದ ಮೂಲಕ ಕಾಣಬಹುದಾಗಿದ್ದರಿಂದ ಅವರ ವಿಮರ್ಶೆ ಕೇವಲ ಭಾವಾವೇಶದಿಂದ ಕೂಡಿರದೆ ಸಮತೋಲನಾತ್ಮಕವಾದ ಮತ್ತು ತುಲನಾತ್ಮಕವಾದ ಬುದ್ಧಿಯ ಅಳತೆ ಗೋಲಿನಿಂದ ಮೂಡಿಬಂದಿದೆ.'[೩೫]

ಇವರ ಪಾಂಡಿತ್ಯ ಆಳವಾದದ್ದು, ವಿಸ್ತಾರವಾದದ್ದು, ಬಹುವಿಷಯ ರೂಪವಾದದ್ದಾಗಿದೆ. ಇದಕ್ಕೆ ಪೂರಕ ವಿಚಾರವಾಗಿ ಈ ಕೃತಿಯ ಮುಖ್ಯ ಪ್ರಾಸಂಗಿಕ ಚರ್ಚೆಯಾಗಿದ್ದ ಸಿದ್ಧರಾಮನ

ಶೈವತ್ವದ ವಿಚಾರವಾಗಿ ಹಲವಾರು ಸಮಸ್ಯೆಗಳು ಪರ-ವಿರೋಧಗಳು ಮೂಡಿಬಂದಾಗ ಈ ವಿಷಯಕ್ಕೆ ಪೂರಕವಾಗಿ ಇವರ ಶಿಷ್ಯರಾದ ಸುಜನಾ (ನಾರಾಯಣಶೆಟ್ಟಿ) ಅವರು ನೀಡಿದ ಸಕಲೇಶಮಾದರಸನ ಪುರುಷ ಮೃಗ ಎಂಬ ವಚನವನ್ನು ಎತ್ತಿ ತೋರಲು ಅವನ ವೀರಶೈವತ್ವವನ್ನು ಒಪ್ಪಿ ತಿದ್ದಿಕೊಂಡ ಪ್ರಸಂಗವು ಇವರ ಸಹೃದಯತ್ವ, ತೆರೆದ ಮನಸ್ಸಿನಿಂದ ಹೊಸದನ್ನು ಬರಮಾಡಿಕೊಳ್ಳುವಂತಹ ನಿತ್ಯ ನೂತನ ಸೌಜನ್ಯಶೀಲ ವಿದ್ವತ್ತಿನ ಸ್ವರೂಪವು ಎದ್ದುಕಂಡಿದೆ.

ಟಿ.ಎಸ್.ವೆಂಕಟಣ್ಣಯ್ಯನವರ ಜೊತೆಗೂಡಿ ಆರಂಭಿಸಿದ ಕಾರ್ಯವನ್ನು ಅವರು ಕಾಲವಾದ ನಂತರವೂ ಮುಂದುವರೆಸಿ ಹಲವಾರು ಓಲೆಕಟ್ಟುಗಳನ್ನು ಸಂಪಾದಿಸುವುದರ ಮೂಲಕ ಕೃತಿಗೆ ಒಂದು ಚೌಕಟ್ಟನ್ನು ನೀಡಿದ್ದರು. ಕಾಲನಂತರದಲ್ಲಿ ತಾವೇ ಬರೆದ ಪೀಠಿಕಾ ಭಾಗವನ್ನು ಪರಿಷ್ಕರಿಸಿ ಅಲ್ಲಲ್ಲಿ ಪುನರ್ ವಿಮರ್ಶಿಸಿ ರಾಘವಾಂಕ ಕವಿಯ ಸಿದ್ಧರಾಮ ಚರಿತೆ ಸಂಗ್ರಹ ಎಂಬ ಕೃತಿಯನ್ನು ಸಂಸ್ಕರಿಸಿ ಪ್ರಕಟಿಸಿದ್ದು ಇವರ ಓದಿನ ವಿಸ್ತಾರತೆಯನ್ನು ತಿಳಿಸುತ್ತದೆ.

ಸಂಗ್ರಹವೆನ್ನುವುದು ಒಂದು ರೀತಿಯಲ್ಲಿ ಕಾವ್ಯದ ವಿಮರ್ಶೆಗಿಂತ ಹೆಚ್ಚಿನ ಹೊಣೆಗಾರಿಕೆಯ ಕೆಲಸ ಕವಿಯ ಉದ್ದೇಶಕ್ಕೆ ಕಾವ್ಯ ಕಲ್ಪನೆಗಿಂತ ಹೆಚ್ಚಿನ ಹೊಣೆಗಾರಿಕೆಯ ಕೆಲಸ. ಕವಿಯ ಉದ್ದೇಶಕ್ಕೆ, ಕಾವ್ಯಕಲ್ಪನೆಗೆ ಪಾತ್ರದರ್ಶನಕ್ಕೆ ಭಂಗ ಬರದಂತೆ ನೋಡಿಕೊಳ್ಳುವ ನೆಲೆಯಾಗಿದೆ.

ಈ ಗ್ರಂಥರಚನೆಯ ವಿಚಾರವಾಗಿ ಸಂಗ್ರಹಿಸಿದ ಹಸ್ತಪ್ರತಿಗಳ ವಿವರ ತಿಳಿಯುವುದಾದರೆ,

ಗ್ರಂಥಪಾಠದ ವಿಷಯವಾಗಿ ನಾಲ್ಕು ಪ್ರತಿಗಳ ಸಹಾಯದಿಂದ ಪರಿಷ್ಕೃತಗೊಂಡ ಈ ಕೃತಿಯು ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದ್ದಾಗಿದೆ. ಇಲ್ಲಿ ಬಳಕೆಗೊಂಡ ಪ್ರತಿಗಳನ್ನು ಅಭ್ಯಾಸದ ಅನುಕೂಲಕ್ಕಾಗಿ ಕ, ಖ, ಗ, ಘ, ಪ್ರತಿಗಳೆಂದು ಹೆಸರಿಸಿ ವಿವರಿಸಲಾಗಿದೆ.

೧. ಕ-ಪ್ರತಿ ಇದು ಸಂಪಾದಕರಿಗೆ ಧಾರವಾಡದ ಹಾಲಭಾವಿಯವರು ಕಳುಹಿಸಿದ್ದ ಕಾಗದದ ಪ್ರತಿಯಾಗಿದ್ದು ಇದನ್ನು ಪ್ರತಿಮಾಡಿದ ಕಾಲಮಾನ ಸು.ಕ್ರಿ.ಶ. ೧೭೮೯ ಎನ್ನಲಾಗಿದೆ.

೨. ಖ- ಪ್ರತಿ ಇದು ಮದ್ರಾಸ್‌ನ ಓರಿಯಂಟೆಲ್ ಲೈಬ್ರೆರಿಯಲ್ಲಿರುವ ೧೮-೮-೨೫ನೇ ನಂಬರಿನ ಓಳ್ಳೆಯ ಪ್ರತಿಯಾಗಿದ್ದು ಇದು ಅಂದು ಕನ್ನಡ ಪಂಡಿತರಾಗಿದ್ದ 'ಶೇಷ್ಯಾಯಂಗಾರ್' ಅವರು ಶ್ರಮವಹಿಸಿ ಈ ಪ್ರತಿಯ ಪಾಠವನ್ನು ಗುರುತುಮಾಡಿ ಕಳುಹಿಸಿದ್ದರಿಂದ ಮೂಲಕೃತಿಗೆ ಅತ್ಯಂತ ಸಹಾಯಕ ಪ್ರತಿ ಇದಾಗಿತ್ತೆಂದು ಸಂಪಾದಕರು ಅಭಿಪ್ರಾಯಿಸಿದ್ದಾರೆ.

೩. ಗ–ಪ್ರತಿ ಇದು ಮೈಸೂರಿನ ಓರಿಯೆಂಟಲ್ ಲೈಬ್ರೆರಿಗೆ ಸೇರಿದ್ದ ಪ್ರತಿಯಾಗಿದ್ದು ಇದು ಕಾಗದದ ಪ್ರತಿಯಾಗಿತ್ತೆನ್ನಲಾಗಿದೆ. ಇದರ ಕಾಲಮಾನ ಕ್ರಿ.ಶ. ೧೮೩೭ ಎಂದು ಗುರುತಿಸಿದ್ದಾರೆ.

೪. ಘ–ಪ್ರತಿ ಇದು ಬೆಂಗಳೂರಿನ ಬ್ರಹ್ಮ ಶ್ರೀ ಶ್ರೀ ಸಿದ್ಧಾಂತ ಶಿವಶಂಕರ ಶಾಸ್ತ್ರಿಗಳಿಂದ ರಚಿಸಲ್ಪಟ್ಟ ಕಥಾಸಂಗ್ರಹ ಎನ್ನಲಾಗಿದೆ.

ಒಟ್ಟಾರೆಯಾಗಿ, ಈ ಪ್ರತಿಗಳಲ್ಲಿ ಯಾವುದೇ ಪ್ರತಿ ಸರ್ವಶುದ್ಧವಾದದ್ದಿಲ್ಲ ಯಾವ ಒಂದನ್ನೂ ಮೂಲ ಪಾಠವನ್ನಾಗಿ ಒಪ್ಪಿಕೊಳ್ಳಲು ಸಾಧ್ಯವಿಲ್ಲದೇ, ಸಂದರ್ಭಕ್ಕನುಸಾರವಾಗಿ ಪಾಠ ಬಳಸಿಕೊಂಡಿದ್ದರಿಂದ ಮುದ್ರಿತವಾಗಿರುವ ಸಂಪಾದಿತ ಕೃತಿಯಲ್ಲಿನ ಎಲ್ಲಾ ಅಂಶಗಳೂ ಗುಣಾಂಶಗಳನ್ನೊಳಗೊಂಡ ಮಿಶ್ರಿತ ಪಾಠವೆನಿಸಿವೆ ಎಂದು ಸಂಪಾದಕರು ಪ್ರಸ್ತಾವನೆ ಭಾಗದಲ್ಲಿ ತಿಳಿಸಿದ್ದಾರೆ.

ಈ ಸಂಗ್ರಹಿತ ಕೃತಿಯು ೧೬೦ ಪುಟಗಳಿಂದ ಸಂಕಲಿತಗೊಂಡದ್ದಾಗಿದ್ದು ವಿಷಯಸೂಚಿ ಗ್ರಂಥಸೂಚಿಗಳನ್ನೊಳಗೊಂಡಂತೆ ೬೩ ಪುಟಗಳಲ್ಲಿ ಬಿತ್ತರಗೊಂಡಿದೆ. ಪ್ರಸ್ತಾವನೆ ಭಾಗದಲ್ಲಿ ಪೀಠಿಕೆಯಾಗಿ ಕವಿ–ಕಾಲ–ವಿಚಾರದ ಚರ್ಚೆ ಸಿದ್ಧರಾಮನ ವಿಚಾರ, ಕಥಾಸಾರ, ಕಥೆಯ ಮೂಲ ಬೆಳವಣಿಗೆ ಮೂರ್ತಿ ಸ್ವರೂಪ, ರಾಘವಾಂಕನ ಸಂದೇಶ, ಇನ್ನೊಂದು ಸಿದ್ಧರಾಮನ ಚರಿತೆ ಎಂದು ಒಟ್ಟು ೭ ವಿಧಗಳಲ್ಲಿ ಕೃತಿಯ ಪೂರ್ವಪರಗಳ ಒಟ್ಟಾರೆ ಚರ್ಚೆ ಮೂಡಿಬಂದಿದೆ.

ಈ ಸಂಗ್ರಹದ ವಿಚಾರವಾಗಿ ನೋಡುವುದಾದರೆ, ೮ ಅಧ್ಯಾಯಗಳಲ್ಲಿ ಬಿತ್ತರಗೊಂಡ ಈ ಕಾವ್ಯಸಾರ ಸಿದ್ಧರಾಮನ ಜನನ, ಬಾಲ್ಯದ ವಿಚಾರ ಮಲ್ಲಿಕಾರ್ಜುನನ ದರ್ಶನ, ಸೊನ್ನಲಿಗೆಯ ನಿರ್ಮಾಣದ ಸನ್ನಿವೇಶ ಸಿದ್ಧರಾಮನ ಮಹಿಮೆಗಳು, ಆದಿಲಿಂಗಾಭಿಷೇಕ, ಸಿದ್ಧರಾಮನ ಸಾಮರ್ಥ್ಯಗಳ ಉಲ್ಲೇಖ, ಬೊಮ್ಮಯ್ಯನನ್ನು ಉದ್ಧರಿಸಿದ್ದರ ಪ್ರಸಂಗ, ಸಿದ್ಧರಾಮನ ಸಮಾಧಿ ವಿಚಾರಗಳಾಗಿ ಮೂಡಿಬಂದು ಕೃತಿಯ ಕೊನೆಗೆ ೪ ಪುಟಗಳ ಟಿಪ್ಪಣೆ ಭಾಗವು ಅಧ್ಯಯನಗಳಲ್ಲಿನ ಸೂಕ್ತ ವಿಚಾರಗಳನ್ನು ಚರ್ಚಿಸಿದ್ದಾಗಿದೆ. ಜೊತೆಗೆ ಪಠ್ಯದ ಪ್ರತಿ ಪುಟದ ಕೆಳಗೆ ಅಡಿಟಿಪ್ಪಣಿಗಳು ಅಧ್ಯಯನಕಾರರಿಗೆ ಅನುಕೂಲಕರ ಮಟ್ಟದಲ್ಲಿ ರೂಪಿತವಾದದ್ದಾಗಿವೆ. ಇವರೇ, ಸಂಪಾದಿತ 'ಸಿದ್ಧರಾಮ ಚಾರಿತ್ರವು' ಮೂಲದಲ್ಲಿ ೫೪೪ ಪದ್ಯಗಳಿಂದ ಸಂಕಲಿತಗೊಂಡು ೯ ಸಂಧಿಗಳಲ್ಲಿ ಬಿತ್ತರಿಸಿದೆ. ಇದರ ಪ್ರತಿರೂಪವಾದ 'ಸಿದ್ಧರಾಮಚಾರಿತ್ರ ಸಂಗ್ರಹ' ಪಠ್ಯವು ೩೨೬ ಪದ್ಯಗಳಿಂದ ಸಂಕಲಿತಗೊಂಡು ೮ ಅಧ್ಯಾಯಗಳಲ್ಲಿ ನಿರೂಪಿತಗೊಂಡದ್ದಾಗಿದೆ.

'ಸಿದ್ಧರಾಮ ಚರಿತ್ರೆಯ ಸಂಗ್ರಹ'ವು ಸರಳ ಓದುಗ ವಿಧಾನಕ್ಕೆ ಅದ್ವಿತೀಯವಾದ ಕೃತಿಯಾಗಿದೆ. ಐತಿಹಾಸಿಕ ಪುರುಷನೊಬ್ಬನ ಜೀವನವನ್ನು ಕಾವ್ಯ ರೂಪದಲ್ಲಿ ಚಿತ್ರಿಸುವ

ಮಹತ್ತರ ಮಾರ್ಗವನ್ನು ರಾಘವಾಂಕ ಇಲ್ಲಿ ಸಾಧಿಸಿದ್ದಾನೆ. ಚನ್ನಬಸವ ಪುರಾಣದ ವಿರೂಪಾಕ್ಷ ಪಂಡಿತನಾಗಲೀ, ಬಸವಪುರಾಣದ ಭೀಮಕವಿಯಾಗಲೀ ಮತ್ತು ಇತರ ಪುರಾಣ ಕರ್ತೃಗಳಾಗಲಿ ಈ ಮಾರ್ಗವನ್ನು ಅವಲಂಬಿಸದೇ ಹೋದುದು ಕನ್ನಡ ಸಾಹಿತ್ಯಕ್ಕೆ ಆದ ನಷ್ಟವೇ ಹೊರತು ರಾಘವಾಂಕನಿಗಾದ ನಷ್ಟವಲ್ಲ. ರಾಘವಾಂಕನು ತನ್ನ ಕಾಲದಲ್ಲಿದ್ದ ರೂಢಿಗತವಾದ ಸಂಪ್ರದಾಯಗಳನ್ನು ಬದಿಗಿಟ್ಟು ಅಷ್ಟಾದಶವರ್ಣನೆಗಳಿಗಾಗಿ ಅತ್ತಿತ್ತ ಹರಿದಾಡದೆ ಉಪಕಥೆಗಳ ತೊಡಕಿನ ಬಲೆಯನ್ನು ನೆಯ್ಯದೆ, ನೇರವಾಗಿ ಸಂಗ್ರಹ ರೂಪದಲ್ಲಿ ಹೇಳಿಕೊಂಡಿದ್ದಾನೆ. ಇವನ ಕೃತಿ ಗಾತ್ರಗಳಲ್ಲಿ ಚಿಕ್ಕದಾದುದು ಸಿದ್ಧರಾಮನ ಚರಿತ್ರೆಯೇ ಇಂತಹ ಗ್ರಂಥಗಳನ್ನು ಸಂಗ್ರಹಿಸುವಾಗ ಮೈ ಎಲ್ಲಾ ಕಣ್ಣಾಗಿರಬೇಕಾಗುತ್ತದೆ. ಸಂಗ್ರಹ ಕಾಲದಲ್ಲಿ ಅಲ್ಲೊಂದು ಇಲ್ಲೊಂದು ಪದ್ಯ ಬಿಡುತ್ತಾ ಹೋದರೆ, ಅದು ಪೂರ್ಣ ಸಂಗ್ರಹವಾಗುವುದಿಲ್ಲ ಅಲ್ಲಿ ಮೂಲ ಕವಿಗೆ ಅನ್ಯಾಯವೆಸಗಿದಂತಾಗುತ್ತದೆ. ಕವಿಯ ಆಶಯಕ್ಕೆ ಬಂಗ ಬರದಂತೆ ಸಂಗ್ರಹಿಸುವುದು ಸಂಗ್ರಹಕಾರನ ಕರ್ತವ್ಯ, ಹೊಣೆಗಾರಿಕೆ ಆಗಿರುತ್ತದೆ. ಈ ಮಾತಿಗೆ ನೇರವೆಂಬಂತೆ ಡಿ.ಎಲ್.ಎನ್. ಅವರು ಈ ಸಂಗ್ರಹಕ್ಕೆ ನಿರ್ವಹಿಸಿದ ರೀತಿ ಸಮರ್ಥನೀಯವಾಗಿ ಮೂಡಿಬಂದುದ್ದಾಗಿದೆ.'[೩೬]

ಸಿದ್ಧರಾಮ ಚಾರಿತ್ರವು ಮೂಲ ಸಂಪಾದನೆ ಪಠ್ಯವಾಗಿ ಒಟ್ಟಾರೆ ೯ ಸಂಧಿಗಳಲ್ಲಿ ಒಟ್ಟು ೫೪೯ ಪದ್ಯಗಳಲ್ಲಿ ಸಂಕಲಿಸಿದ್ದಾಗಿದೆ. ಪ್ರಸ್ತುತ ಸಂಗ್ರಹಿತ ಪಠ್ಯದಲ್ಲಿ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಪಾಠಬೋಧನೆಯ ವಿಚಾರದ ಹಿನ್ನೆಲೆಯಲ್ಲಿ ಅವಶ್ಯಕ ೮ ಅಧ್ಯಾಯಗಳಲ್ಲಿ ೩೨೬ ಪದ್ಯಗಳನ್ನು ಸಂಕಲಿಸಿದ್ದು ಕಂಡುಬಂದಿದೆ.

ಪ್ರಸ್ತಾವನೆಯ ಮೊದಲನೇ ಭಾಗದಲ್ಲಿ ಮೊದಲ ಸಂಪಾದನೆಯಲ್ಲಿ ಸಂಕಲಿಸಿದ ಕವಿಕಾಲ ವಿಚಾರ, ಸಿದ್ಧರಾಮನ ಜನನ ಬಾಲ್ಯದ ವಿಚಾರ, ಕಥಾಸಾರ, ಕಥೆಯ ಮೂಲ ಮತ್ತು ಬೆಳವಣಿಗೆ, ಸಿದ್ಧರಾಮನ ಮೂರ್ತಿ ಸ್ವರೂಪ ವಿಚಾರ, ಸಿದ್ಧರಾಮ ಶೈವನೋ? ವೀರಶೈವನೋ? ಎಂಬ ವಿಚಾರವನ್ನು, ಒಂದು ಸಮಸ್ಯೆ ಎಂಬ ಶೀರ್ಷಿಕೆಯಲ್ಲಿ ಪ್ರತಿಪಾದಿಸಿ ಸಿದ್ಧರಾಮನ ಕಥನ ಕಾವ್ಯದ ಭಾಗ ಕೃತಿಯ ವಿಮರ್ಶೆ ವಿಚಾರದ ಭಾಗಗಳು ಯಥಾವತ್ತಾಗಿ ಮೂಡಿಬಂದಿವೆ. ಆದರೆ, ಹೆಚ್ಚಿನದಾಗಿ ಈ ಸಂಗ್ರಹ ಭಾಗದಲ್ಲಿ ರಾಘವಾಂಕನ ಸಂದೇಶ, ಇನ್ನೊಂದು ಸಿದ್ಧರಾಮ ಚರಿತ್ರೆ ಎಂಬ ಎರಡು ಹೊಸ ಅಂಶಗಳು ಮೂಡಿಬಂದಿದ್ದು ಇವುಗಳನ್ನು ಈ ಕೆಳಗಿನಂತೆ ಸವಿಸ್ತಾರವಾಗಿ ಕಾಣಬಹುದಾಗಿದೆ.

ಮೊದಲನೆಯದಾಗಿ 'ರಾಘವಾಂಕನ ಸಂದೇಶ' ಸಂಪಾದಕರು ರಾಘವಾಂಕನ ಸಿದ್ಧರಾಮನ ಚಾರಿತ್ರ ಕೃತಿಯಲ್ಲಿ ಸಂಕಲಿಸಿದ ಕೆಲ ಅಂಶಗಳನ್ನು ಹೊರತುಪಡಿಸಿ ಈ ಸಂಗ್ರಹ ಕೃತಿಯನ್ನು ನೀಡುವಾಗ ಇದಕ್ಕೆ ಇನ್ನಷ್ಟು ಪುಷ್ಟಿಕೃತ ವಿಚಾರವಾಗಿ ರಾಘವಾಂಕನ ಸಂದೇಶ ಎಂಬ ವಿಷಯವನ್ನು ಪ್ರಸ್ತಾಪಿಸುತ್ತಾ ಹಳೆಯ ಕಾವ್ಯವೊಂದನ್ನು ಅಭ್ಯಾಸಿಸುತ್ತಾ

ಅದರಿಂದೊದಗುವ ಪ್ರಸ್ತುತ ಸಮಾಜಕ್ಕೆ ಹೊಂದಿಕೆಯಾಗುವಂತಹ ವಿಚಾರವೊಂದನ್ನು ಹುಡುಕಿ ಅಳವಡಿಸಿಕೊಳ್ಳುವುದು ಒಂದು ವಿಚಾರವೆಂದು ಇದಕ್ಕೆ ಪೂರಕವೆಂಬಂತೆ ಅಂದಿನ ಕವಿಯ ಕಾಲಘಟ್ಟದಲ್ಲಿನ ಸಂದರ್ಭಕ್ಕೂ ಪ್ರಸ್ತುತ ಸಮಾಜದಲ್ಲಿನ ಸಂದರ್ಭಕ್ಕೂ ಹೋಲಿಕೆ ಮಾಡಿಕೊಳ್ಳುವುದರ ಜೊತೆಗೆ ಅದಕ್ಕೆ ಪರಿಹಾರವನ್ನು ಕಂಡುಕೊಳ್ಳಬಹುದೆಂದು ತಿಳಿಸಿದ್ದಾರೆ. ಕವಿಯು ಸಿದ್ಧರಾಮನ ಪಾತ್ರ ರಚನೆಯನ್ನು ಒಬ್ಬ ಆದರ್ಶ ವ್ಯಕ್ತಿಯನ್ನಾಗಿ ಸಮಾಜಕ್ಕೆ ಮಾದರಿ ರೂಪವಾಗಿ ಚಿತ್ರಿಸಿದ್ದಾನೆ. ಅಲ್ಲದೆ ಅವನ ಆದರ್ಶವನ್ನು ತನ್ನ ಕಾಲಘಟ್ಟದ ವಿಚಾರಗಳಿಗೆ ಅನ್ವಯಿಸಿ ನೋಡಿದ್ದಾನೆ. ಜನರ ಉದ್ಧಾರಕ್ಕಾಗಿ ಸಿದ್ಧರಾಮನು ಮಾಡಿದ ಸಮಾಜದ ಕೈಂಕರ್ಯಗಳನ್ನು 'ಜನ ಬದುಕು ಬೇಕು ಚೆನ್ನಾಗಿ ಬದುಕಬೇಕೆಂಬ' ರಾಘವಾಂಕನ ಅಭಿಲಾಷೆ ಸಿದ್ಧರಾಮನ ಪಾತ್ರರಚನೆಯ ಮೂಲಕ ಬಿತ್ತರಗೊಂಡಿದೆ. ಇವನ ಸಮಾಜ ಕಾರ್ಯವು ಒಂದು ರಾಜ್ಯವನ್ನು ಗೆಲ್ಲುವುದಕ್ಕೂ ಮಿಗಿಲಾದ ಶಕ್ತಿಯನ್ನು ಹೊಂದಿತ್ತಲ್ಲದೆ, ಪ್ರತಿಯೊಬ್ಬ ವ್ಯಕ್ತಿ ಸಿದ್ಧರಾಮನಂತೆ ತನ್ನ ಹಳ್ಳಿ ಸುತ್ತಮುತ್ತಲಿನ ವಾತಾವರಣವನ್ನು ಬೆಳಗಲು ಮುಂದಾದರೆ ನಾಡಿಗೆ ನಾಡೇ ಏಳಿಗೆಯ ಶಿಖರವೇರಲು ಸಾಧ್ಯವುಂಟು ಸಿದ್ಧರಾಮನಂತಹ ಜನನಾಯಕನ ಚಿತ್ರಣವನ್ನು ರಾಘವಾಂಕ ನಮಗೆ ತೋರಿಸಿ ತನ್ನಲ್ಲಿರುವ ಆಂತರ್ಯವನ್ನು (ಅಂತರಂಗದ ತುಡಿ) ಬಿತ್ತರಿಸಿದ್ದನ್ನು ನಾಡಿನ ಪ್ರತಿಯೊಬ್ಬರೂ ಅರಿತುಕೊಳ್ಳಬಹುದಾದ ಸಂದೇಶ ಈ ಕೃತಿಯಲ್ಲಿ ಅಡಕವಾಗಿದೆ.

ರಾಘವಾಂಕನು ದೇವಸ್ಥಾನಗಳ ಜೀರ್ಣೋದ್ಧಾರ, ಕೆರೆ ನಿರ್ಮಾಣ, ಲಿಂಗ ಪ್ರತಿಷ್ಠಾಪನೆ, ಅಭಿಷೇಕ, ಇತರೆ ವಿಚಾರಗಳನ್ನು ಕೃತಿಯುದ್ದಕ್ಕೂ ಬಿತ್ತರಿಸಿದ್ದರ ಮೂಲ ಅಂದಿನ ಸಮಾಜದ ಜೀವನಕ್ಕೆ ಅವು ಕೇಂದ್ರ ಅಂಶಗಳಾಗಿದ್ದರ ಜೊತೆಗೆ ಜನರಲ್ಲಿ ಸಂಸ್ಕೃತಿಯನ್ನು ಉಳಿಸಿ, ಬೆಳೆಸುವ ಶಕ್ತಿಕೇಂದ್ರಗಳು ಅವಾಗಿದ್ದವು. ಅಕ್ಷರ ವಿದ್ಯೆಯಿಂದ ಹಿಡಿದು ಧರ್ಮಾಧಿಕರಣದಿಂದ ನ್ಯಾಯಾಚರಣೆಗಳವರೆಗೆ ಅಲ್ಲಿ ಕಟ್ಟುಪಾಡುಗಳನ್ನು ರೂಢಿಸಿಕೊಂಡಿದ್ದವಲ್ಲದೆ, ದೇವಾಲಯದ ಸುತ್ತಲೂ ಊರು ಬೆಳೆದು ಊರನ್ನೇ ಮುನ್ನಡೆಸುವ ಸಲಗದಂತೆ ಇಲ್ಲಿನ ವ್ಯವಸ್ಥೆ ರೂಪುಗೊಂಡಿತ್ತು. ಆದ್ದರಿಂದ ಸಿದ್ಧರಾಮ ಮೊದಲು ಕಪಿಲಸಿದ್ದ ಮಲ್ಲಯ್ಯನಿಗೆ ಮಹಾಮನೆಯನ್ನು ನಿರ್ಮಿಸಿ ಆನಂತರ ಸೊನ್ನಲಿಗೆಯನ್ನು ವಿಸ್ತರಿಸಿದ್ದು ಸಹಜವೆನಿಸಿದೆ. ಆದರೆ, ಪ್ರಸ್ತುತ ಸಂದರ್ಭಕ್ಕೆ ಇದು ವ್ಯತ್ಯಾಸವೆನಿಸಿದ್ದು ದೇಶಭಕ್ತಿಯ ಜೊತೆ ದೈವಭಕ್ತಿಯ ಒಟ್ಟಾಗಿದ್ದು ಇವುಗಳ ಮೂಲಕ ವ್ಯಕ್ತಿಯ ಸೇವಾಭಾವ ನಡೆದು ಬರುತ್ತದೆ. ಇಲ್ಲಿ ನಮಗೆ ಬೇಕಾದ ಮುಖ್ಯ ಅಂಶ ಸಿದ್ಧರಾಮನಲ್ಲಿದ್ದ ದೈವಭಕ್ತಿಯಷ್ಟು ತೀವ್ರವಾದ ದೇಶಭಕ್ತಿ ಲೋಕ ಕಲ್ಯಾಣ ವಿಚಾರ.

ಸಿದ್ಧರಾಮನ, ವಿಚಾರ ಒಳ್ಳೆಯದಾಗಿದ್ದರಿಂದ ಅದನ್ನು ಕಾರ್ಯರೂಪಕ್ಕೆ ತರುವಾಗ ಅವನಿಗೆ ಹಲವು ಹಡೆಯಿಂದ ನೆರವು ಬಂದೊದಗುತ್ತದೆ. ಅವನು ಗುದ್ದಲಿ ಹಿಡಿದು ಕೆರೆ

ಅಗೆಯುತ್ತಿರುವಾಗ ಸಾವಿರಾರು ಜನ ನೆರವಾಗುತ್ತಾರೆ. ಇದರಿಂದ ಸಿದ್ಧರಾಮನಿಗೆ ಜನರ ಸಹಾಯ, ಸಹಕಾರಗಳು ವಿಫುಲವಾಗಿ ದೊರೆತಿದ್ದವೆಂಬ ಅಂಶ ವಿಶದವಾಗಿದೆ. ಮಲ್ಲಯ್ಯನಿಗೆ ಗುಡಿಕಟ್ಟಿಸಬೇಕೆಂದು ಭೂ ಶೋಧನೆಗಾಗಿ ಗುದ್ದಲಿ ಮೀಟಿದಾಗ ಕೊಪ್ಪರಿಕೆ ದೊರಕಿತ್ತೆಂದು ಉಲ್ಲೇಖಿಸಿದ್ದು ಕಾವ್ಯದಲ್ಲಿ ಮೂಡಿಬಂದಿದೆ, ಕೊಪ್ಪರಿಕೆ ದೊರಕಿದ್ದ ಸಂದರ್ಭವು, ಸತ್ಯವೂ ಸುಳ್ಳೊ, ತಿಳಿಯದು ಆದರೇ, ಈ ಕಾರ್ಯಕ್ಕೆ ಹತ್ತಾರು ಕಡೆಯಿಂದ ಚಿನ್ನದ ಪ್ರವಾಹ ಹರಿದು ಬಂದಿದ್ದನ್ನು ಪರಿಪರಿಯಾಗಿ ಕಾವ್ಯದಲ್ಲಿ ವಿಸ್ತರಿಸಿದ್ದಾನೆ. ಕಟ್ಟಿದ ಕೆರೆ ಜಲಸಮೃದ್ಧಿಯಾದ ವಿಚಾರಕ್ಕೆ ಶಿವನ ಪ್ರೇರಣೆ ಎಂದು ಕವಿ ಸಂಕೇತಿಸಿದ್ದಾನೆ. ಆದರೆ ಇದಕ್ಕೆ ಪೂರಕವಾಗಿದ್ದು ಸಿದ್ಧರಾಮನ ಸುತ್ತಲಿನ ಜನರ ಶ್ರಮ ಸಿದ್ಧರಾಮನು ಮಾಡಿದ ಉತ್ತಮ ಕಾರ್ಯಗಳಲ್ಲಿ ಒಂದಾದುದು. ಸಾವಿರ ಮದುವೆ ಮಾಡಿಸಿದ ವಿಚಾರ, ಈ ವಿಚಾರವಾಗಿ ಕಾವ್ಯದಲ್ಲಿ ಉಲ್ಲೇಖಿಸಿದಂತೆ ಈ ಕೈಂಕರ್ಯಕ್ಕೆ ಹತ್ತಾರು ಮೂಲಗಳಿಂದ ಬಂದ ಧನ, ಧಾನ್ಯ, ಸಂಗ್ರಹ ರೂಪ ಜನರಿಗೆ ಸಿದ್ಧರಾಮನಲ್ಲಿದ್ದ ವಿಶ್ವಾಸ ಭಕ್ತಿ ಗೌರವಗಳೆಷ್ಟಿವೆಂಬುದನ್ನು ತಿಳಿಸುತ್ತದೆ. ಇದಕ್ಕೆಲ್ಲಾ ಕಾರಣ ಅವನ ನಿಸ್ಪೃಹತೆ, ಸೇವಾನುರಾಗ ಅವನ ನಿಸ್ವಾರ್ಥಸೇವೆ ಇಂದಿನ ಪರಿಸ್ಥಿತಿಯಲ್ಲಿ ಯಾವುದೇ ಪ್ರದೇಶದಲ್ಲಿ ಏನೇ ಕೆಲಸವಾಗಬೇಕಾದರೆ ಸರಕಾರವನ್ನೇ ಹೊಣೆ ಮಾಡಿ ತನ್ನನ್ನು ತಾನು ಮರೆಮಾಚಿಕೊಳ್ಳುವ ಸಂದರ್ಭದ ಕಾಲಘಟ್ಟದಲ್ಲಿ ಸಿದ್ಧರಾಮನಂತಹ ಸ್ವಯಂ ಪ್ರೇರಕ ಆದರ್ಶ ವ್ಯಕ್ತಿಗಳು ಸಮಾಜಕ್ಕೆ ಪ್ರಸ್ತುತ ವ್ಯವಸ್ಥೆಗೆ ಅನುಗುಣವಾಗಿ ಅವಶ್ಯವೆಂದು ಮನಗಾಣಬಹುದಾಗಿದೆ. ಸಮಾಜ ಸೇವಕನಲ್ಲಿರಬೇಕಾದ ಮುಖ್ಯವಾದ ಗುಣ ಅಧಿಕಾರದಲ್ಲಿನ ನಿರಪೇಕ್ಷತೆ, ಇದು ಸಿದ್ಧರಾಮನಲ್ಲಿ ಚೆನ್ನಾಗಿ ಮೂಡಿಬಂದಿದೆ. ದೇಶದ ರಾಜಕೀಯದಲ್ಲಿ ಸಮಾಜ ಸೇವಕನು ಬರುವುದು ತುಂಬಾ ಅನುಚಿತವೆನಿಸುತ್ತದೆ. ಕಾರಣ ಅವನು ಸಂಕಲ್ಪಿಸಿದ ನಾನಾ ವಿಧವಾದ ಕೆಲಸ ಕಾರ್ಯಗಳು ವಿವಿಧ ಬಗೆಯ ಚಾಪಲ್ಯಗಳಿಗೆ ಸಿಕ್ಕಿ ಅವನನ್ನು ತನ್ನ ಮೂಲದಿಂದ ಬದಲಾಯಿಸಬಹುದು, ತನ್ನಲ್ಲಿದ್ದ ಕ್ರಿಯಾಶಕ್ತಿಯನ್ನು ಕುಂದಿಸಿಕೊಳ್ಳಬಹುದು. ಇದಕ್ಕೆ ಪ್ರತೀಕವೆಂಬಂತೆ ಬಿಜ್ಜಳನ ಕೊಲೆಯ ನಂತರ ಅವನ ತಮ್ಮ ಕರ್ಣದೇವ ಪಟ್ಟಕ್ಕೇರಲು ಸಿದ್ಧರಾಮನಿಂದ ಪಟ್ಟಾಭಿಷೇಕ ಮಾಡಿಸಿಕೊಳ್ಳಲು ಪಟ್ಟುಹಿಡಿದು ಆಳು ಮತ್ತು ಕುದುರೆಗಳ ಸಮೇತ ಮಂತ್ರಿಗಳ ಜೊತೆಗೂಡಿ ಕಪ್ಪಕಾಣಿಕೆ ಸಹಿತ ಸಿದ್ಧರಾಮನನ್ನು ಕರೆತರಲು ಬಂದಾಗ ಇವೆಲ್ಲವನ್ನೂ ತಿರಸ್ಕರಿಸಿ 'ಈ ಎಲ್ಲಾ ಸುಖಾಂಶಗಳೂ ನನಗೆ ಬೇಡ ಅವಶ್ಯವಿದ್ದದ್ದು ತಾಮ್ರದ ಒಂದು ದೊಡ್ಡ ಕೊಡ ಮಲ್ಲಯ್ಯನ ಅಡುಗೆ ಮನೆಗೆ ಒಂದು ತಂಬಿಗೆ, ಇಲ್ಲವೆ ಸೌಟೋ ಹಾರಿಯೋ ಗುದಲಿಯೋ, ಸಾಕು ತೆಗೆಯಿರಿ ನಿಮ್ಮ ಈ ಐಶ್ವರ್ಯದ ಕಪ್ಪವನ್ನು ನಾನು ಪಟ್ಟಕಟ್ಟುವ ಜೋಯಿಸನಲ್ಲ'[೩೭] ಎಂದು ಎಲ್ಲವನ್ನು ತಿರಸ್ಕರಿಸಿದನು. ಇದರಿಂದ ಅವನಲ್ಲಿರುವ ನಿರಹಂಕಾರ, ವಿನಮ್ರತೆ, ರಾಜಕೀಯದಲ್ಲಿ ಅವನಿಗಿದ್ದ ಉಪೇಕ್ಷೆಯು ಎದ್ದುಕಾಣುತ್ತದೆ. ಇಲ್ಲಿನ ಕರ್ಣದೇವನಿಗಿದ್ದ ಮುಖ್ಯ ಉದ್ದೇಶ ಬಿಜ್ಜಳನಿಂದ ಪಟ್ಟ ಕಟ್ಟಿಕೊಂಡರೆ ಜನ ಒಪ್ಪಬಹುದೆಂಬ ನಿರ್ಣಯ

ಅವನದಾಗಿದ್ದಿರಬಹುದು. 'ಹರಮುನ್ನ ಹರಿಸಿ ಕಟ್ಟಿದ ಲಿಖಿತ ಪಟ್ಟಮಂ ಪರಿಹರಿಸಿ ಮತ್ತೊಂದು ಮಾಡು ವೀ ಸಾಮರ್ಥ್ಯ ಯಾರಿಗೂ ಇಲ್ಲವೆಂದು'[೩೮] ಸಿದ್ಧರಾಮ ಈ ಸಂದರ್ಭದಲ್ಲಿ ಹೇಳಿರುವ ಮಾತಿನಿಂದ ಇಷ್ಟೆಲ್ಲ ಧ್ವನಿತವಾಗಿದ್ದು, ಸಮಾಜಕ್ಕೆ ಅನ್ಯಾಯ ಮಾಡುವ ಈ ರಾಜಕೀಯ ಗೊಂದಲ ತನಗೆ ಬೇಡವೆಂದು ಸಿದ್ಧರಾಮ ಕರ್ಣದೇವನ ಕರೆಯನ್ನು ನಿರಾಕರಿಸಿದ್ದು ಉಚಿತವೆನಿಸುತ್ತದೆ.

ಈ ಸಿದ್ಧರಾಮನ ಕಥೆಯಲ್ಲಿ ಬರುವ 'ಮೇಘಚೂಡನೆಂಬ' ಗಂಧರ್ವ ತನಗೆ ಸಿದ್ಧರಾಮನಿಂದ ಶಾಪವಿಮೋಚನೆಯಾಗಿದ್ದಕ್ಕಾಗಿ 'ವಡಬಮುಖವೆಂಬ' ದೊಡ್ಡ ಕತ್ತಿಯನ್ನು ನೀಡಿದ್ದನು. ಯಾವುದೋ ಒಂದು ಸಂದರ್ಭದಲ್ಲಿ ಬುವಿಗೆ ಎರಗಿದ ಸಿಡಿಲಿಗೆ ಕತ್ತಿಯಿಂದ ಸಿದ್ಧರಾಮ ಚುಚ್ಚಿದ್ದರಿಂದ ಅದು ಶಿವನಲ್ಲಿ ಮೊರೆ ಇಟ್ಟಿತ್ತು. ಆಗ ಶಿವ ಬಂದು ಸಿದ್ಧರಾಮನಿಗೆ ವಿವೇಕ ಹೇಳಿ ಶಸ್ತ್ರತ್ಯಾಗ ಮಾಡಿಸಿದ್ದನು. ಈ ಕತ್ತಿಯ ಕಥೆಯಿಂದ ಹಿಂಸೆಗೆ ಕಾರಣವಾದ ಯಾವ ದೈಹಿಕ, ಮಾನಸಿಕ, ಉಪಕರಣವೂ ಸಮಾಜ ಸೇವಕನಲ್ಲಿರಬಾರದು ಎಂಬ ಅಂಶವು ಇಲ್ಲಿ ಮೂಡಿಬಂದಿದೆ.

ಒಟ್ಟಾರೆಯಾಗಿ ರಾಘವಾಂಕನ ಸಂದೇಶದಂತೆ, ಸಿದ್ಧರಾಮನಂತಹ ನಿಷ್ಕರ್ಮಿಗಳೂ, ಪರಸೇವಾಧುರಂದರೂ ಹೆಚ್ಚಿದಷ್ಟು ಸಮಾಜಕ್ಕೆ ಒಳ್ಳೆಯದು ಕೆಲವಾರು ಮೂಲಗಳಿಂದ ಹೀನ ಸ್ಥಿತಿಗೆ ಇಳಿದಿರುವ ನಮ್ಮ ನಾಡಿನ ಜೀರ್ಣೋದ್ಧಾರಕ್ಕಾಗಿ ಜನ ವಿದ್ಯಾವಂತರಾಗಿ ಪ್ರಜಾರಾಜ್ಯದ ಸ್ವರೂಪವನ್ನು ಪೂರ್ಣ ಪ್ರಮಾಣದಲ್ಲಿ ತಿಳಿಯಬೇಕು. ಸಮಾಜದ ದೀನ ದಲಿತರ ಏಳ್ಗೆ ಸಾಮೂಹಿಕ, ನೀತಿಯ ಮಟ್ಟವನ್ನು ರೂಪುಗೊಳಿಸಿಕೊಳ್ಳುವುದರ ಮೂಲಕ ಕವಿಯ ಈ ಹಿರಿತನದ ಚಿತ್ರಣವನ್ನು ಓದುಗರರೆಲ್ಲರೂ ಆದರ್ಶವನ್ನಾಗಿಸಿಕೊಂಡು ಸಿದ್ಧರಾಮನಂತೆ ಅಭಿರಾಮನಾಗಲು, ಪ್ರಯತ್ನಿಸಬೇಕು, ಜೊತೆಗೆ ಸೇವೆಯಲ್ಲಿ ನಿರತರಾಗಿ "ನಾವು ಬದುಕಿ ನಮ್ಮೊಡಗಿನವರನ್ನು ಬದುಕಿಸಬೇಕೆಂಬ" ಸಂದೇಶ ಮುಖ್ಯವೆನಿಸಿದೆ.

ಎರಡನೆಯದಾಗಿ ಇನ್ನೊಂದು ಸಿದ್ಧರಾಮನ ಚರಿತ್ರೆ ಇದು ಹೆಗ್ಗಡದೇವನ ಕೋಟೆ ತಾಲೂಕು ಸರಗೂರು ಹೋಬಳಿಗೆ ಸೇರಿದ ಎತ್ತಿಗಡ ಮಠದಲ್ಲಿ ದೊರೆತ ಪ್ರತಿಯಾಗಿದೆ. ಇದು ಮೈಸೂರಿನ ಓರಿಯೆಂಟಲ್ ಇನ್‌ಸ್ಟೂಟ್‌ನಲ್ಲಿತ್ತು ಎಂದು ಸಂಪಾದಕರು ತಿಳಿಸಿದ್ದಾರೆ. ಈ ಪ್ರತಿಯು ಡಿ.ಎಲ್.ಎನ್ ಅವರ ಸಂಪಾದನೆ ಕಾಲಕ್ಕೆ ದೊರೆತಿದ್ದು ಇದರ ವಿಚಾರವಾಗಿ ತಿಳಿದು ಬಂದ ಅಂಶಗಳೆಂದರೆ, ಈ ಗ್ರಂಥದಲ್ಲಿ ನಾಲ್ಕು ಸಂಧಿಗಳು ಒಟ್ಟು ೬೩೫ ಸಾಂಗತ್ಯಗಳಿದ್ದು ನಡುವೆ ಕೆಲವು ವಚನಗಳು ಕಂಡುಬಂದಿವೆ ಮೊದಲ ಸಂಧಿಯ ಆದಿಯಲ್ಲಿ ಒಂದು ಕಂದವೂ, ಒಂದು ವೃತ್ತವೂ ಇವೆ, ಬರೆದ ಕವಿಯ ಹೆಸರು ಸ್ಪಷ್ಟವಾಗಿ ಮೂಡಿ ಬಂದಿಲ್ಲ ಆದರೆ.

'ಸಿದ್ಧಮಂಕ ಸರವರದೊಳು ತಪವಿದ್ದು
ಸಿದ್ಧಿಯ ಪಡೆದ ಕಥನವಾ
ಆದ್ಯರ ವಚನ ಶಾಸನವನೀಕ್ಷಿಶಿ
ಯಲ್ಪಿರ್ದುದ ಪೇಳ್ದ ಸಿದ್ದಿಯನೂ' ॥೧-೧೬

ಎಂಬ ಪದ್ಯದಿಂದ ಇದನ್ನು ಹೇಳಿದವನು ಸಿದ್ದಯ್ಯ ನಿರಬೇಕೆಂದು ಊಹಿಸಿದ್ದಾರೆ.[೯] ಇಲ್ಲಿ ಗ್ರಂಥದ ರಚನೆಯ ಕಾಲ ತಿಳಿದುಬಂದಿಲ್ಲವಾದ್ದರಿಂದ ಕವಿಚರಿತೆ (೧೧-೪೩೨) ಕಾರರು ಉಲ್ಲೇಖಿಸಿದಂತೆ ೧೭ ಅಥವಾ ೧೮ನೇ ಶತಮಾನದಲ್ಲಿ ಈ ಕೃತಿಯು ರಚನೆಯಾಗಿರಬಹುದು, ಇದರ ಶೀರ್ಷಿಕೆ 'ಸಿದ್ಧರಾಮನಕಥೆ' (ಸಾಂ) ಇದೆ ಆಗಿರಬಹುದೆಂದು ದಾಖಲಿಸಿದ್ದಾರೆ.

'ಈ ದೊರೆತ ಪುಸ್ತಕದಲ್ಲಿನ ವಿವರಣೆಯಂತೆ ಮೊದಲನೆಯ ಸಂಧಿಯಲ್ಲಿ ೧೩೪ ಪದ್ಯಗಳಿದ್ದು, ಪೀಠಿಕೆಯಲ್ಲಿರುವ ಮೊದಲ ೨೦ ಪದ್ಯಗಳು ಒಂದು ವಚನವೂ ಆದ ನಂತರ ಸಿದ್ಧರಾಮನ ಕಥೆ ಆರಂಭವಾಗಿದೆ. ಇಲ್ಲಿ ಸಿದ್ಧರಾಮನ ಜನನ, ಬಾಲ್ಯ ಮಲ್ಲಿಕಾರ್ಜುನನನ್ನು ಕಂಡದ್ದು, ಸೊನ್ನಲಿಗೆಗೆ ಹಿಂತಿರುಗಿ ಬಂದದ್ದು, ಶಿವಲಿಂಗ ಪ್ರತಿಷ್ಠೆಮಾಡಿದ್ದು, ಮುಂತಾದ ವಿಚಾರಗಳನ್ನು ೧೪೨ ಪದ್ಯಗಳವರೆಗೆ ಕವಿ ಹೇಳಿದ್ದಾನೆ. ರಾಘವಾಂಕನಲ್ಲಿರುವಷ್ಟು ವಿಸ್ತಾರವಾದ ಕಥಾ ನಿರೂಪಣೆ, ವರ್ಣನೆಯೂ ಇಲ್ಲಿ ಕಂಡುಬಂದಿಲ್ಲವಾದರೂ ರಾಘವಾಂಕನ ಪದ್ಯಗಳನ್ನೇ ಕವಿ ಇಲ್ಲಿ ಅನುಸರಿಸುತ್ತಾ ಹೋಗಿದ್ದಾನೆ.'[೧೦]

ರಾಘವಾಂಕನ ಮಾರ್ಗದಲ್ಲಿಯೇ ಈ ಸಾಂಗತ್ಯದ ಕವಿ ನಡೆದು ಸಿದ್ಧರಾಮನು ಪರ್ವತ ಮಲ್ಲಯ್ಯನನ್ನು ಸೊನ್ನಲಿಗೆಗೆ ತಂದು ನಿಲ್ಲಿಸುವರೆಗೆ ಕಥೆಯಲ್ಲಿ ಯಾವ ವ್ಯತ್ಯಾಸವೂ ಇಲ್ಲದೇ ಇಲ್ಲಿಂದ ಮುಂದಕ್ಕೆ ಕಥೆ ಬೇರೆ ದಿಕ್ಕಿಗೆ ತಿರುಗಿದ್ದಾಗಿದೆ.

ಕೊಲ್ಲಿ ಪಾಕೆಯ ಸೋಮೇಶ್ವರ ಲಿಂಗದಲ್ಲಿ ಹುಟ್ಟಿದ ರೇವಣಸಿದ್ದನು ಜಗತ್ತನ್ನೆಲ್ಲಾ ಸುತ್ತುತ್ತಾ ಒಂದು ದಿನ ಸೊನ್ನಲಾಪುರ ಸೀಮೆಗೆ ಬಂದು ಆ ಕ್ಷೇತ್ರದಲ್ಲಿ ನಿಂತು ತಲೆಬಾಗಿ ಶರಣು ಮಾಡಿದನು. ಇದನ್ನರಿತ 'ಮಂಕುಮರಳುನೆಂಬ' ಶಿಷ್ಯನು ಈ ಕುರಿತು ಕೇಳಲು ರೇವಣಸಿದ್ಧರು, ಇಲ್ಲಿ ಒಬ್ಬ ಮಹಾಪುರುಷ ಹುಟ್ಟಿ ಪರ್ವತಕ್ಕೆ ಹೋಗಿ ಒಂದು ಲಕ್ಷದ ತೊಂಭತ್ತಾರು ಸಾವಿರ ಲಿಂಗಗಳನ್ನು ತಂದು ಇಲ್ಲಿ ಪ್ರತಿಷ್ಠಾಪಿಸಿದ್ದರಿಂದ ಇದು ಮಿಕ್ಕೆಲ್ಲ ಪುಣ್ಯಕ್ಷೇತ್ರಗಳಿಗಿಂತ ಮಿಗಿಲಾಗಿದ್ದೆಂದು ಹೇಳುತ್ತಾರೆ. ಆಗ 'ರೋಮಕೋಟಿ' ಎಂಬ ಋಷಿಯೇ ಮಹೇಶ್ವರ ಶಾಪದಿಂ ಬಂದು ಮಂಕುಮರುಳನಾಗಿದ್ದು ಇವನು ಲಿಂಗ ಪ್ರತಿಷ್ಠಾಪನೆ ಯಂತಹ ಮಹತ್ವ ಕಾರ್ಯ ಮಾಡಿದ್ದಂತಹ ಮಹಾತ್ಮನನ್ನು ತನ್ನ ತಪೋಬಲದಿಂದ

ಒಲಿಸಿಕೊಳ್ಳಲು ರೇವಣಗುರುವಿಗೆ ಹೇಳಿ ಅವನ ಅಪ್ಪಣೆಯಂತೆಯೇ ಅಲ್ಲಿನ ಸರೋವರದ ಕೋಡುಗಲ್ಲಿನ ಮೇಲೆ ನಿಂತು ತಪಸ್ಸನ್ನಾಚರಿಸಿದನಂತೆ ಇವನ ತಪಸ್ಸು ವರ್ಧಿಸುತ್ತಾ ಬಂದಿತು. ಇದನ್ನು ನಾರದ ಕಂಡು ಶಿವನಿಗೆ ತಿಳಿಸುತ್ತಾನೆ. ಆಗ ಶಿವ-ಗಿರಿಜೆಯೊಂದಿಗೆ ಬಂದು ಅಲ್ಲಿಯೇ ಮೇಯುತ್ತಿರುವ ಕುರಿಹಿಂಡಿನೊಂದಿಗೆ ಸುತ್ತಾಡಿ ಸವೆಯದೆ ಸುಖದೊಳು ಹೆಚ್ಚಿರಿ ಎಂದು ಶಿವ ವರವಿತ್ತು ಆ ಕುರಿಗಳನ್ನೆಲ್ಲಾ ಒಂದು ಗುಹೆಯೊಳಕ್ಕೆ ಹಾಕಿ ಕೈಲಾಸದ ಕಡೆ ಹೋಗುತ್ತಾರೆ. ಮುಂದೆ ಗುಹೆಯ ಸುತ್ತ ಹುತ್ತ ಬೆಳೆದು ಅದರ ಮೇಲೆ ಮುತ್ತುಗದ ಮರಹುಟ್ಟಿ ಹಿರಿದಾಗಿ ಹಬ್ಬಿ ಪಕ್ಕದ ಹೊಲವನ್ನೆಲ್ಲ ಆಕ್ರಮಿಸಿಕೊಂಡಿತ್ತು. ಶಿವಭಕ್ತನಾದ ವಕ್ಕಲ ಮಗನೊಬ್ಬನು ಆ ಹುತ್ತವನ್ನು ಹಾಳು ಮಾಡಿ ಮರವನ್ನು ಕಡಿದು ಹಾಕಿದನು. ಹುತ್ತದ ಒಂದು ಕಡೆ ಬಾಗಿಲಿನಿಂದ ಸಾಲು ಸಾಲಾಗಿ ಮೃಗಗಳು ಹೊರಕ್ಕೆ ಬರುತ್ತಿರಲು ಕೋಪಗೊಂಡ ಒಕ್ಕಲಿಗನು ಸೊಪ್ಪು ಸೆದೆ ಹಾಕಿ ಹುತ್ತದ ಬಾಯಿಗೆ ಬೆಂಕಿ ಹಚ್ಚಿ ಸುಡಲು ಹಲವು ಬಣ್ಣವೇರಿದ ಮೃಗಗಳು ದೊಡ್ಡ ರೂಪತಾಳಿ ಹೊಲದ ಬೆಳೆಯನ್ನು ಮೇಯಲಾರಂಭಿಸಿದವು. ಅವುಗಳನ್ನು ಅಡ್ಡಗಟ್ಟಿ ಒಕ್ಕಲಿಗನು ನಿಂತಾಗ ಮಾರುವೇಷಧಾರಿಯಾಗಿ ಬಂದ ಶಿವನು ಈ ಕಿಲಾರಿ (ಕುರಿ ಹಿಂಡು)ಯಾರದಯ್ಯ ಎಂದು ಕೇಳಿ? ಈ ಕಿಲಾರದಲ್ಲಿ ಒಂದು ಕಪಿಲೆಯನ್ನು ನನಗೆ ಕೊಡು ಎಂದು ಕೇಳಿದನು. ಇದಕ್ಕೆ ಒಕ್ಕಲಿಗನು ಈ ಕಿಲಾರಿಯ ಒಡೆಯನು ನಾನಲ್ಲ ಅವನು ಬಂದ ಮೇಲೆ ತೋರಿ ಕೊಡುತ್ತೇನೆ. ನನಗೆ ಐವರು ದಾಯಾದಿಗಳುಂಟು ಅವರಲ್ಲಿ ನಾನೊಬ್ಬ ಕುರಿ ಕಾಯುತ್ತಿದ್ದೇನೆ ಎನ್ನಲು ಶಿವನು ಮೆಚ್ಚಿ ಕಿಲಾರ ನನ್ನದೇ ಎಂದು ತನ್ನ ನಿಜರೂಪ ತಾಳಿ ಕಿಲಾರವನ್ನು ಅವನಿಗೊಪ್ಪಿಸಿ ತುಪ್ಪಳದಿಂದ ಕಂಬಳಿ ಮಾಡುವ ವಿಧಾನವನ್ನು ತಿಳಿಸಿ ಮಾಯವಾದನು. ಆಗ ಒಕ್ಕಲಿಗನು ತುಪ್ಪಳದಿಂದ ತೊಡೆಯ ಮೇಲೆ ಚಿಕ್ಕ ಕಂಬಳಿ ನೇಯ್ದು ಮುಕ್ಕಣ್ಣನಿಗೆ ಅರ್ಪಿಸಿದನು. ಮುಂದೆ ಕಿಲಾರಿ ಕಾಯಲಿಕ್ಕೆ ರಕ್ಕಸಿ ಒಬ್ಬಳನ್ನು ನೇಮಿಸಿ ಶಿವ ಮಾಯವಾದನು. ರಕ್ಕಸಿ ರೂಪವತಿ ವೇಷ ತಾಳಿ ಒಕ್ಕಲಿಗನ ಜೊತೆ ಸಂಗ ಮಾಡಿ ಕೂಡಿಕೊಳ್ಳುತ್ತಾಳೆ. ಮುಂದೆ ಒಕ್ಕಲಿಗ ಇದನ್ನೆಲ್ಲಾ ತನ್ನ ಮಡದಿ, ಊರ ಜನರಿಗೆ ತಿಳಿಸಿದನು. ನಂತರ ಹೆಂಡತಿಗೆ ಒಪ್ಪಿಸಿ ತನ್ನ ಮಂದೆಯ ಬಳಿಯ ಕರೆತಂದನು. ಈ ಇರ್ವರನ್ನು ರಕ್ಕಸಿ ಬರಮಾಡಿಕೊಂಡು ಶರಣರೆಂದು ಸತ್ಕರಿಸಿ ಜೊತೆಗೂಡಿ ಭೋಜನ ಸವಿದು ವೀಳ್ಯೆಯ ಹಾಕಿಕೊಳ್ಳುತ್ತಾ ಒಕ್ಕಲಿಗನ ಹೆಂಡತಿ ಈಮಂಡಲಕ್ಕೆ ಒಡೆಯ ಸಿದ್ಧರಾಮಯ್ಯ ಅವನನ್ನು ಕಂಡರೆ ಬದುಕುತ್ತೇನೆ ಎಂದು ಹೇಳಿದಳು. ಈ ಬೆನ್ನಲ್ಲಿ ಸೊನ್ನಲಾಪುರಕ್ಕೆ ತನ್ನ ಹೆಂಡತಿಯನ್ನು ಕಳುಹಿಸಲು ಎತ್ತರದ ಹೋತವನ್ನು ತಂದು ಅದರ ಬೆನ್ನಿಗೆ ಕಂಬಳಿ ಬಿಗಿದು ರಕ್ಕಸಿಯನ್ನು, ತನ್ನ ಹೆಂಡತಿಯನ್ನು ಕುಳ್ಳಿರಿಸಿಕೊಂಡು ಎರಡು ನಾಯಿಗಳೊಂದಿಗೆ ಕಿಲಾರ ಸಹಿತವಾಗಿ ಸೊನ್ನಲಿಗೆ ಅಂಚಿನ ಸರೋವರಕ್ಕೆ ಬಂದು ಸೇರಿದರು. ಅಲ್ಲಿ ಸಿದ್ಧರಾಮನು ತಪವಿರಲು ಒಕ್ಕಲಿಗನ ಮಡದಿ

ಸಿದ್ಧರಾಮನ ದರ್ಶನ ಪಡೆದು ಸಿದ್ಧಮಂಕನಿಗೆ ಬಾಧೆ ತಟ್ಟದಿರಲೆಂದು ಆಜ್ಞೆಯಿಸಿದ್ದನ್ನು ಒಕ್ಕಲಮಗನು ತಪ್ಪಸ್ಸು ಮಾಡುತ್ತಾ ರಕ್ಷಣೆ ಕಲ್ಪಿಸಿ ಕಾಯ್ದುಕೊಂಡಿದ್ದನು. ಇಲ್ಲಿಗೆ ಎರಡನೇ ಸಂಧಿ ಭಾಗ ಮುಗಿಯುತ್ತದೆ.

ಮೂರನೆಯ ಸಂಧಿವಿಚಾರವಾಗಿ ಅಲ್ಲಮ, ಅಜಗಣ್ಣ, ಅಕ್ಕ ಅವರು ಕದಳಿಯನ್ನು ಹೊಕ್ಕು ವಿಷಯವೂ ಶಂಕರ ದಾಸಿಮಯ್ಯ ಕಣ್ಣಪ್ಪ, ಹರಳಯ್ಯ, ಕೆಂಬಾವಿ ಭೋಗಣ್ಣನ ಉಲ್ಲೇಖ ಮೂಡಿಬಂದಿದೆ.

ನಂತರ ನಾಲ್ಕನೆಯ ಸಂಧಿ ವಿಚಾರವಾಗಿ ಸಿದ್ಧರಾಮನು ಅಲ್ಲಮ, ರೇವಣಸಿದ್ಧರಾದಿಗಳೊಡನೆ ಮಂಕಯ್ಯನನ್ನು ಕರೆದುಕೊಂಡು ಬಸವಣ್ಣನ ದರ್ಶನಕ್ಕೆ ಬಿಜ್ಜಳನ ರಾಜಧಾನಿಗೆ (ಕಲ್ಯಾಣ) ಬಂದು ಬಸವಣ್ಣನ ಮನೆ ಎದುರು ರೇವಣಸಿದ್ಧ, ಸಿದ್ಧರಾಮ ನಿಂತಾಗ ಹಡಪದ ಅಪ್ಪಣ್ಣ ಬಸವಣ್ಣನಿಗೆ ಈ ಇರ್ವರು ಬಂದ ವಿಚಾರವನ್ನು ನಿವೇದಿಸುವುದು ನಂತರ ಬಂದ ಅತಿಥಿಗಳಿಗೆ ಆಹ್ವಾನಿಸಿ ಸತ್ಕರಿಸುವುದು ಲಿಂಗ ಜಂಗಮರು ಪೂಜೆ ಮಾಡುವ ಭಕ್ತರನ್ನು ಕಲ್ಯಾಣದಿಂದ ಹೊರಹಾಕಿದ್ದಕ್ಕೆ ಸಿದ್ಧರಾಮ ಕಾರಣ ಕೇಳಿದಾಗ ಬಸವಣ್ಣ ಪಡಿಹಾರಿ ಮುತ್ತಣ್ಣನಿಂದ ಡಂಗೂರ ಹಾಕಿಸಿ ಸಭೆ ಕರೆದಾಗ ಬಿಜ್ಜಳನು ಸಭೆಯಲ್ಲಿ ಭಾಗವಹಿಸಿ ಸಿದ್ಧರಾಮನು ಬಿಜ್ಜಳನಿಗೆ ಜೀವ, ಧರೆಯ ಧರ್ಮವನ್ನು ವಿಸ್ತರಿಸುವ ಉಪದೇಶವನ್ನು ಮಾಡಿದನು. ಇದೆಲ್ಲಾ ಸುದ್ಧಿ ನಾಡೆಲ್ಲ ಹಬ್ಬಿ ಕೊನೆಗೆ ಕುರುಬ(ಹಾಲುಮತದ) ಗುರು ಪಟ್ಟವನ್ನು ಸಿದ್ಧರಾಮನು ಮಂಕಯ್ಯನನ್ನು ಹೆಗ್ಗಡ ಗೌಡನನ್ನು ಉದ್ಧರಿಸಿ ಅವರಿಗೆ ಹಾಲುಮತ ಪಟ್ಟವನ್ನು ಕಟ್ಟಿದನು. ಗುರುವಾಜ್ಞೆಯನ್ನು ಮೀರದಂತೆ ಇರಲು ಬಿಲ್ಲೇಶ ಬೊಮ್ಮಯ್ಯನ ಕಥೆಯನ್ನು ಹೇಳಿದನು. ಈ ಕಥೆ ಕೇಳಿದ ಹಾಲುಮತದ ಗೌಡರುಗಳು ಮಂಕಗುರುವಿಗೂ ಹೆಗ್ಗ ಗೌಡನಿಗೂ ಭಕ್ತಿಯಿಂದ ಶರಣಾದರು. ಅವರಿಬ್ಬರನ್ನು ಸಿದ್ಧರಾಮ ಸೊನ್ನಲಿಗೆ ಕರೆತಂದನು. ಪಟ್ಟಣದ ಹಕ್ಕನ್ನು ಹೆಗ್ಗ ಗೌಡನಿಗೆ ಕೊಟ್ಟು ಅದರ ಅರಸುತನವನ್ನು ಮಂಕಯ್ಯನಿಗೆ ಕೊಟ್ಟು ವರ್ಷಕ್ಕೊಂದು ಸಲ ಹಾಲುಮತದವರ ಕುಲ ತೆರಿಗೆಯಿಂದ ಹಬ್ಬ ಮಾಡಬೇಕೆಂದು ಹೇಳಿ ಸಿದ್ಧರಾಮನು ಸರೋವರದ ದೊಡ್ಡ ಗುಂಡಿಯಲ್ಲಿ ಅಡಗಿಬಿಟ್ಟನು. ಇಲ್ಲಿಗೆ ನಾಲ್ಕನೇ ಸಂಧಿ ಮುಗಿಯುತ್ತದೆ.

ಒಟ್ಟಾರೆಯಾಗಿ ಈ ಕಥೆಗೂ ರಾಘವಾಂಕನು ಹೇಳಿರುವ ಸಿದ್ಧರಾಮನ ಕಥೆಗೂ ಸಾದೃಶ್ಯ ಕಡಿಮೆಯೇ ಇದೆ. ಇಲ್ಲಿ ಸಾಂಗತ್ಯದ ಕವಿ ಸಿದ್ಧರಾಮನ ಚರಿತ್ರೆಯನ್ನು ಮೂಲವಾಗಿ ಹಾಲುಮತದ ಉತ್ಪತ್ತಿ ನಿರೂಪಣಾರ್ಥವಾಗಿ ತನಗೆ ತೋರಿದಂತೆ ಅಳವಡಿಸಿಕೊಂಡಿದ್ದು ಕಂಡುಬಂದಿದೆ. ಹಾಲುಮತದ ಹುಟ್ಟಿಗೆ ಮರುಳಮಂಕ ಸಿದ್ಧರಾಮನ ಶಿಷ್ಯ ಕಾರಣಪುರುಷ ಎಂದು ಕವಿ ವಿಸ್ತಾರವಾಗಿ ಹೇಳಿದ್ದಾನೆ. ಆದ್ದರಿಂದ ಇದನ್ನು 'ಮಂಕಯ್ಯನ ಚರಿತ್ರೆ'

ಎಂದರೂ ತಪ್ಪಾಗದ್ದಾಗಿದೆ. ಒಟ್ಟಾರೆಯಾಗಿ ರಾಘವಾಂಕನ ಕಾವ್ಯಕ್ಕೆ ಈ ಕವಿ ಋಣಿಯಾಗಿದ್ದು ಪ್ರಸ್ತುತವೆನಿಸಿದೆ.

ಸಿದ್ಧರಾಮನಂತಹ ಕರುಣಾಮಯಿಯಾದ ಯೋಗಿಯ ಶಿಷ್ಯನೂ ಸ್ವಯಂ ತಪಸ್ವಿಯೂ ಆಗಿದ್ದ ಮರುಳಮಂಕಯ್ಯ ಹಾಲುಮತದ ಗೌಡ ಕುಲಕ್ಕೆ ಮೊದಲಿಗನೆಂದು ತಿಳಿಯುವುದು ಆ ಮತದವರೆಗೆ ಹೆಮ್ಮೆಯ ಸಂಗತಿಯೆನಿಸಿದೆ. ಈ ದೃಷ್ಟಿಯಿಂದ ಈ ಸಾಂಗತ್ಯ ಕೃತಿ ರಚನೆಯಾಗಿರಬಹುದೆಂಬ ಮಾತನ್ನು ಹೇಳಬಹುದಾಗಿದೆ.

ಒಟ್ಟಾರೆಯಾಗಿ 'ಸಿದ್ಧರಾಮ ಚಾರಿತ್ರ' ಗ್ರಂಥದ ಸಂಕ್ಷಿಪ್ತರೂಪ ಈ 'ಸಿದ್ಧರಾಮ ಚಾರಿತ್ರ ಸಂಗ್ರಹ'ದ ಈ ಪಠ್ಯ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ರೂಪಿಸಿದ್ದು ಮುಖ್ಯ ಕಥೆಗೂ ಕಥಾನಾಯಕನ ವ್ಯಕ್ತಿತ್ವಕ್ಕೂ ಯಾವ ಬಗೆಯಲ್ಲಿಯೂ ಧಕ್ಕೆ ಬಾರದ ಹಾಗೆ ನೋಡಿಕೊಂಡಿದ್ದು ಈ ಸಂಪಾದಿತ ಕೃತಿಯ ಪ್ರಮುಖ ಅಂಶವಾಗಿದೆ. ಇನ್ನು ರಾಘವಾಂಕನು ಸಿದ್ಧನ ಮೂಲಕ ಜಗತ್ತಿಗೆ ಸಾರಿದೆ ಸಂದೇಶ ಇಂದಿಗೂ ಹೇಗೆ ಸಮಾಜಕ್ಕೆ ಮಾರ್ಗದರ್ಶಕವಾಗಿ ನಿಲ್ಲಬಲ್ಲದೆಂಬುದನ್ನು ಡಿ.ಎಲ್.ಎನ್.ರವರು ಅರ್ಥವತ್ತಾಗಿ ಸಾರಿರುವುದನ್ನು ಹಾಗೂ ಅವರು ಕಾವ್ಯವನ್ನು ಕುರಿತು ಮಾಡಿರುವ ವಿವೇಚನ ಪೂರಿತ ಅಂಶಗಳನ್ನು ಈ ಕಾವ್ಯ ಅಧ್ಯಯನದಿಂದ ಮನಗಂಡಿದ್ದಾಗಿದೆ.

**೩.೮. ಸುಕುಮಾರ ಚರಿತಂ**

ಡಿ.ಎಲ್.ನರಸಿಂಹಾಚಾರ್ ಅವರು ತ.ಸು.ಶಾಮರಾವ್ ಅವರ ಜೊತೆಗೂಡಿ 'ಸುಕುಮಾರ ಚರಿತಂ' ಕೃತಿಯನ್ನು ಎರಡು ಓಲೆಪ್ರತಿಗಳ ಸಹಾಯದಿಂದ ಸಂಪಾದಿಸಿ ೧೯೫೪ರಲ್ಲಿ ಮೊದಲ ಬಾರಿಗೆ ಶಿವಮೊಗ್ಗದ ಕರ್ನಾಟಕ ಸಂಘದಿಂದ ಪ್ರಕಟಣೆಗೆ ಅಣಿಮಾಡಿದರು. ಈ ಪ್ರತಿಗಳ ವಿಷಯವಾಗಿ ತಿಳಿಯುವುದಾದರೆ, ಮೊದಲನೆಯದು 'ಕ' ಪ್ರತಿಯು ಎರಡನೆಯದು 'ಗ' ಪ್ರತಿಯು ಎಂದು ಸಂಪಾದಕರು ಅಧ್ಯಯನ ಪೂರಕ ವಿಭಜಿಸಿಕೊಂಡು ಅಭ್ಯಾಸಿಸಿದ್ದು 'ಕ' ಪ್ರತಿಯ ಬಗ್ಗೆ ತಿಳಿಸುತ್ತಾ 'ಈ ಪ್ರತಿಯಲ್ಲಿ ಗ್ರಂಥಪಾಠವಿದೆ ಅಲ್ಲದೆ ನಡುವೆ ಅಲ್ಲಲ್ಲಿ ಸಣ್ಣ ಸಣ್ಣ ಭಾಗಗಳಷ್ಟು ನಷ್ಟವಾಗಿವೆ. ಆದರೂ ಈ ಪಠ್ಯವನ್ನೇ ಕೃತಿಗೆ ಬಳಸಿಕೊಂಡಿದ್ದು ಇದು ಮೂಡಬಿದರೆಯ ಪಂಡಿತ ಶ್ರೀ ಕೆ.ಬುಜಭಲಿ ಶಾಸ್ತ್ರಿಗಳಿಂದ ದೊರೆತಂತಹದ್ದಾಗಿದೆ. ಎರಡನೆಯ ಪ್ರತಿಯು ಕಾಗದದ್ದಾಗಿದ್ದು 'ಗ' ಪ್ರತಿ ಎಂದು ಇದಕ್ಕೆ ಹೆಸರಿಸಿದೆ. ಇದು ಮೈಸೂರಿನ ಓರಿಯಂಟಲ್ ರಿಸರ್ಚ್ ಇನ್ಸ್ಟ್ಯೂಟ್‌ಗೆ ಸೇರಿದ್ದ ಪ್ರತಿಯಾಗಿದ್ದು ಲಿಪಿ ಓದಲು ಕಷ್ಟ, ಕಾಗುಣಿತದ ಸ್ಖಾಲಿತ್ಯ, ಗ್ರಂಥಪಾಠಗಳು ಹಲವಿದ್ದು ಅಲ್ಲಲ್ಲಿ ಪ್ರತಿಯ ನಷ್ಟ ತುಂಬಲು ಸಹಾಯಕವಾಗಿದೆ. ಆದರೂ ಇವೆರಡೂ ಪ್ರತಿಗಳಿಂದಲೂ ೧೨ ನೆಯ ಆಶ್ವಾಸವನ್ನೂ ಪೂರ್ಣವಾಗಿ ಪಡೆಯಲು ಸಾಧ್ಯವಾಗಿಲ್ಲದೆ ಅಸಮಗ್ರ ಕೃತಿಯಾಗಿದೆ. ಅಲ್ಲದೆ, ಬೀರಾರಿನ ಅಂಕೋಲ ಜಿಲ್ಲೆಯ ಕಾರಂಜ ಎಂಬ ಊರಲ್ಲಿ ಬಲಾತ್ಕಾರ ಗಣದ ಜೈನಬಸದಿಯಲ್ಲಿ

"ಸುಕುಮಾಲಚರಿತ್ರೆ" ಎಂಬೊಂದು ಓಲೆಯ ಗ್ರಂಥವಿದ್ದು ಇದು ಅಭ್ಯಾಸಕ್ಕೆ ಪೂರಕವಾಗಿರದೆ ದುರ್ಬಲವಾಗಿದೆ'[೪೧] ಎಂದು ಡಿ.ಎಲ್.ಎನ್. ಅವರೇ ಕೃತಿಯ ಸಂಪಾದನೆ ಕುರಿತಾಗಿ ಹೇಳಿದ್ದು ತಿಳಿದುಬಂದಿದೆ.

ಯಾವುದೇ ಕವಿಯ ಮೂಲಪಾಠದ ಅನ್ವೇಷಣೆಯಲ್ಲಿ ಗ್ರಂಥಸಂಪಾದಕನಿಗೆ ಆ ಪಾಠದ ವಿಷಯ ಕುರಿತು ಮನವರಿಕೆ ಇರಬೇಕಲ್ಲದೆ, ಲೋಪವಾದ ಪಠ್ಯದ ಸ್ಖಾಲಿತ್ಯಗಳಲ್ಲಿ ಮೂಲ ಮಾತೃಕೆಯನ್ನು ಗುರುತಿಸುವ ಪ್ರತಿಭೆ ಇರಬೇಕಾಗಿದ್ದು ಅವಶ್ಯವಾಗಿದೆ. ಇದರಿಂದ ಮಾತ್ರ ಲಿಪಿಕಾರನ ದೋಷ ತುಂಬಿ, ವ್ಯಾಕರಣ, ಛಂದಸ್ಸು ಇತರೆ ತಪ್ಪು ನಿರ್ಣಯಗಳನ್ನು ಗುರುತಿಸಿ ಊಹಾತ್ಮಕ ಪಾಠ ಕೊಡುವ ಮೂಲಕ ಪಾಠ ಪರಿಷ್ಕರಣೆಯಂತಹ ಕಾರ್ಯ ಮಾಡಬಹುದು. ಈ ಅಂಶವು ಗ್ರಂಥಸಂಪಾದನೆ ಅಧ್ಯಯನದಲ್ಲಿ ಪಳಗಿ ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆಗಳನ್ನು ಮೇಳವಿಸಿದ್ಧ ಸಮರ್ಥವಾದ ಭಾಷಾಶಾಸ್ತ್ರ ವಿಚಾರಗಳ ಪರಿಚಯವಿದ್ದ ಡಿ.ಎಲ್.ಎನ್ ಅವರು ಇವೆಲ್ಲದಕ್ಕೂ ಹೊರತಾಗಿಲ್ಲದಂತೆ ಬೆಳೆದು ಬಂದು ತಾಳೆಓಲೆಗಳ ಜೊತೆ ಒಡನಾಟದೊಂದಿಗೆ ಟೀಕೆ, ಟಿಪ್ಪಣೆ ರಚಿಸುತ್ತಾ ಗ್ರಂಥಸಂಪಾದನೆ ಅವಧಿಯಲ್ಲಿ ಕವಿ ಕೃತಿಯ ಕಾಲ ವಿಚಾರಗಳ ಕುರಿತು ಉತ್ಪನ್ನ ಮತಿಗಳೂ ಕಾವ್ಯರಚನಾ ಸಮರ್ಥರೂ ಮೂಲವನ್ನು ಉತ್ತಮಪಡಿಸಿ ಅರ್ಥಸಂಕೋಚಕ್ಕೆ ಎಡೆಕೊಡದೆ ಪಾಠಾಂತರಗಳನ್ನು ಕಲ್ಪಿಸಿ ಅಲ್ಲಲ್ಲಿ ಮೂಲಕ್ಕೆ ಧಕ್ಕೆ ಬಾರದಂತೆ ತಮ್ಮ ಸ್ವಂತ ವಿಚಾರಗಳನ್ನು ವಿದ್ವಾಂಸರ ವಿಚಾರಗಳಿಗೆ ಹೊರೆಹಚ್ಚಿ ನೋಡಿದ್ದಾರೆ.

**ಭಾರತೀಯ ಭಾಷೆಗಳಲ್ಲಿ ಸುಕುಮಾರ ಕಥೆ :** 'ಭಾರತೀಯ ಭಾಷೆಗಳಲ್ಲಿ ಸುಕುಮಾರ ಕಥೆ ಪ್ರಸಿದ್ಧವಾಗಿದೆ. ಪ್ರಾಕೃತ, ಸಂಸ್ಕೃತ, ಅಪಭ್ರಂಶ ಮತ್ತು ಕನ್ನಡ ಭಾಷೆಗಳಲ್ಲಿ ಈ ಕಥೆ ದೊರೆತಿದೆ. ಹರಿಷೇಣನ 'ಬೃಹತ್ಕಥಾಕೋಶ' ಮತ್ತು 'ಭಗವತಿ ಆರಾಧನಾ' ಗ್ರಂಥಗಳಲ್ಲಿ ಸುಕುಮಾರನ ಕಥೆ ಸಂಕ್ಷಿಪ್ತವಾಗಿ ಒಂದು ಕಥಾ ಚೌಕಟ್ಟಿನಲ್ಲಿ ಮೂಡಿಬಂದಿದೆ. ಹರಿಷೇಣನ ಕಥಾಕೋಶದ ೩೬೦ನೇ ಶ್ಲೋಕಗಳಲ್ಲಿ ಈ ಕಥೆಯನ್ನು ಕಾಣಬಹುದಾಗಿದ್ದು, 'ದಾನಪ್ರದೀಪ'ದಲ್ಲಿ ಉಪಾಶ್ರಯದಾನದ ಮಹತ್ವವನ್ನು ತೋರುವಾಗ ಸುಕುಮಾರನ ಕಥೆಯನ್ನು ಹೇಳಿದೆ 'ಸಂಠಾರಪಇಣ್ಣ', 'ಭರತೇಶ ಬಾಹುಬಲಿ' ಸ್ವಾಧ್ಯಾಯ, ಕಥಾಕೋಶ, ಆರಾಧನಾಸಾರ, ಎಂಬ ಗ್ರಂಥಗಳಲ್ಲಿ ಸುಕುಮಾರನ ಕಥೆ ಉಕ್ತವಾಗಿದೆ. ಶ್ರೀಧರ ಕವಿಯು ಭವಿಷ್ಯದತ್ತ ಚರಿತೆ ಎಂಬ ಕೃತಿಯನ್ನು ಸಂಸ್ಕೃತದಲ್ಲೂ ಸುಕುಮಾರ ಚರಿತಂ ಎಂಬ ಕಾವ್ಯವನ್ನು ಅಪಭ್ರಂಶ ಭಾಷೆಯಲ್ಲಿಯೂ ಬರೆದಿದ್ದಾನೆ. ಮುಂದುವರೆದು ಪೂರ್ಣಭದ್ರನ ಸುಕುಮಾರಕಥೆಯು ಕೂಡ ಅಪಭ್ರಂಶ ಭಾಷೆಯಲ್ಲಿದ್ದುದ್ದಾಗಿದೆ. ೧೫ನೆಯ ಶತಮಾನದ ಹೊತ್ತಿಗೆ ೧೦೬೦ ಶ್ಲೋಕಗಳಿಂದ ಕೂಡಿದ 'ಸುಕುಮಾರ ಸ್ವಾಮಿ ಚರಿತ್ರ' ಸಕಲಕೀರ್ತಿ ಭಟ್ಟಾರಕನ ಕೃತಿಯು ಸಂಸ್ಕೃತದಿಂದ ಬಹುಬೂಷ್ಟಿತಗೊಂಡಿತ್ತು. ೧೬೪೦-೧೬೬೦ರ ಅವಧಿಯಲ್ಲಿ ವಾದಿಚಂದ್ರ

"ಸುಕುಮಾಲಸ್ವಾಮಿಚರಿತ್ರೆ" ಎಂಬುದನ್ನು ಸಂಸ್ಕೃತದಲ್ಲಿ ರಚಿಸಿದ ಮತ್ತೊಂದು ಕಾವ್ಯವಾಗಿದ್ದು, ಅಚ್ಯುತ ಕವಿ ರಚಿಸಿದ 'ಸುಕುಮಾರ ಕಥೆ'ಯು ಸಂಸ್ಕೃತದಲ್ಲಿ ಮಗದೊಂದು ಕೃತಿ ಎಂದು ಮನಗಾಣಬಹುದು. ಮುಂದೆ ೧೯೯ ಗಾಹೆಗಳಿಂದ ಕೂಡಿದ ಪ್ರಾಕೃತ ಗ್ರಂಥ 'ಆವಂತಿಸುಕುಮಾಲ ಕಥಾ' ಗ್ರಂಥವನ್ನು 'ತಪಾಗಚ್ಛ' ಭಂಡಾರದ ಒಂದು ಕಥಾ ಸಂಗ್ರಹದಲ್ಲಿ ಕಾಣಬಹುದಾಗಿದೆ.'[೬೨]

ಸುಕುಮಾರ ಚರಿತೆಯು ಜೈನಧರ್ಮದ ಪ್ರಮುಖ ಅಂಗವಾದ ಪಂಚಾಣು ವ್ರತಗಳ ಹಿರಿಮೆಯನ್ನು ಸಾದರಪಡಿಸುವ ಕೃತಿಯಾಗಿದೆ. ಇಂತಹ ತತ್ವ ಪ್ರತಿಪಾದನೆಯು ಕನ್ನಡ ಸಾಹಿತ್ಯದಲ್ಲಿ ಪ್ರತಿಪಾದಿತಗೊಂಡಿದ್ದನ್ನು ಆಯಾ ಕಾಲಘಟ್ಟದಲ್ಲಿ ಮೂಡಿಬಂದ ಕೃತಿಗಳಿಂದ ಮಾತ್ರ ತಿಳಿಯಬಹುದಾಗಿದೆ.

ಕನ್ನಡದಲ್ಲಿ ಸುಕುಮಾರ ಕಥೆಯನ್ನು ಕುರಿತಂತೆ ಮೊದಲು ಉಲ್ಲೇಖ ಕಂಡುಬಂದಿದ್ದು ಕ್ರಿ.ಶ. ೧೦೬೮ರ ಕಾಲಮಾನದಲ್ಲಿದ್ದ ಶಾಂತಿನಾಥನಲ್ಲಿ "ಸುಕುಮಾರ ಚರಿತಂ" ಇದು ಇವನ ಮೊಟ್ಟಮೊದಲ ಸ್ವತಂತ್ರಕಾವ್ಯವಾಗಿ 'ಚಂಪೂ' ಶೈಲಿಯಲ್ಲಿ ಬಿತ್ತರಗೊಂಡದ್ದಾಗಿದೆ. ಈ ಕಾವ್ಯವು ೧೨ ಆಶ್ವಾಸಗಳಿಂದ ಆವೃತವಾಗಿದ್ದ ಸುಶ್ರಾವ್ಯ ಪದ್ಯ ಕೃತಿಯಾಗಿದೆ. ಆದರೆ ಇದೇ ಕಾಲಘಟ್ಟದಲ್ಲಿ ಚಂಪೂ ಕಾವ್ಯಗಳಿಗೆ ಅಗ್ರಸ್ಥಾನವಿದ್ದ ಸಂದರ್ಭದಲ್ಲಿ ಲಲಿತವೂ, ಸ್ವಾದಿಷ್ಟಪೂರಿತವೂ ಆದ ಕಥಾಗುಚ್ಛದಿಂದ ಕನ್ನಡ ಗದ್ಯ ಸಾಹಿತ್ಯದ ಹಿರಿಮೆಯನ್ನು ಎತ್ತಿಹಿಡಿದ ಗದ್ಯಕೃತಿ ವಡ್ಡಾರಾಧನೆ ಈ ಕೃತಿಯಲ್ಲಿ ಸುಕುಮಾರನ ಕಥೆ ಸಂಕ್ಷಿಪ್ತವಾಗಿದ್ದರೂ ಸಮಗ್ರವಾಗಿ ನಿರೂಪಿತಗೊಂಡಿದ್ದನ್ನು ಗ್ರಹಿಸಬಹುದಾಗಿದೆ. ನಂತರ ೧೨೦೦ರ ಅವಧಿಯಲ್ಲಿ ಕಂಡುಬಂದ ಬಂಧುವರ್ಮನ 'ಜೀವಸಂಬೋಧನೆ' ಕಾವ್ಯದ ಆರನೇ ಅಧಿಕಾರದಲ್ಲಿ ಈ ಕಥೆಯನ್ನು ನಿರೂಪಿಸಿದ್ದು, ಇಲ್ಲಿ ಸುಕುಮಾರನ ಪೂರ್ವೋತ್ತರಗಳು ಕಾಣದೆ ನೇರವಾಗಿ ಸೂರದತ್ತ ಯಶೋಭದ್ರೆಯರಿಂದ ಕಥೆ ಆರಂಭವಾಗಿದೆ. ನಂತರದಲ್ಲಿ ೧೩೩೧ರ ಅವಧಿಗೆ ನಾಗರಾಜ ಕವಿ ವಿರಚಿತ 'ಪುಣ್ಯಾಸ್ರವದ' ಆರನೆಯ ಆಶ್ವಾಸದಲ್ಲಿ ಸೂರ್ಯಮಿತ್ರ ಸುಕುಮಾರ ಸ್ವಾಮಿ ಕಥೆ ಆರಂಭವಾಗುವುದು ನಾಗಶ್ರೀ ಭವದಿಂದ ಇವೆಲ್ಲವುಗಳೊಂದಿಗೆ ಎರ್ತೂರು ಶಾಂತಿರಾಜಶಾಸ್ತ್ರಿಗಳು ಸಂಗ್ರಹಿಸಿದ 'ಸುಕುಮಾರ ಚರಿತ್ರಾದಿ ಸಂಗ್ರಹ' ಕನ್ನಡ ಸುಕುಮಾರ ಚರಿತ್ರೆಗಳಲ್ಲೊಂದಾಗಿದ್ದು ಇದು ಶಾಂತಿನಾಥನ 'ಸುಕುಮಾರ ಚರಿತೆ', 'ವಡ್ಡಾರಾಧನೆ' ಕೃತಿಯನ್ನು ವಸ್ತುವನ್ನಾಗಿಸಿಕೊಂಡು ರಚಿತಗೊಂಡ ಸಂಗ್ರಹವಾಗಿದ್ದಾಗಿದೆ. ಇದು ೧೯೩೨ರಲ್ಲಿ ಪ್ರಕಟಣೆ ಕಂಡು ಮುಂದೆ ಮತ್ತೊಮ್ಮೆ ಇಡೀ ಸುಕುಮಾರ ಕಥೆ ಕಾವ್ಯದ ವಸ್ತುವಾಗಿ ಹೊರಹೊಮ್ಮಿದ್ದು ೧೫೦೦ರ ಕಾಲಮಾನದಲ್ಲಿದ್ದ ಆದಿದೇವನ 'ಸುಕುಮಾರ ಚರಿತೆ'ಯಲ್ಲಿ ಇದು ದೇಸೀ ಛಂದಸ್ಸಿನ ಸಾಂಗತ್ಯದಲ್ಲಿ ಪ್ರಚುರಪಡಿಸಿದ ಕೃತಿಯಾಗಿದ್ದು ಇದರಲ್ಲಿ ಕನ್ನಡದ

ವಿಸ್ತೃತತೆಯನ್ನು ಎತ್ತಿತೋರಿಸಿದ್ದಾಗಿದೆ. ಮುಂದಿನ ದಿನಮಾನಗಳಲ್ಲಿ ವಿವಿಧ ಪೂರ್ವ ಸೂರಿಗಳಿಂದ ಆಧುನಿಕ ವಿದ್ವಾಂಸರಿಂದ ಬೆಳಕು ಕಂಡುಬಂದ ಸುಕುಮಾರ ಚರಿತೆ ಕನ್ನಡ ಸಾಹಿತ್ಯ ಲೋಕದಲ್ಲಿ ತನ್ನದೇ ಛಾಯೆ ಮೂಡಿಸಿಕೊಂಡು ಸಾಗಿದ್ದಾಗಿದೆ.

**ಡಿ.ಎಲ್.ಎನ್. ಅವರು ಸಂಪಾದಿತ 'ಸುಕುಮಾರ ಚರತಂ' ಕಾವ್ಯದ ಸ್ವರೂಪ**

ಹಸ್ತಪ್ರತಿಗಳನ್ನು ಆಶ್ರಯಿಸಿ ಪ್ರಾಚೀನ ಮತ್ತು ಮಧ್ಯಕಾಲೀನ ಕನ್ನಡ ಸಾಹಿತ್ಯ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸುವಾಗ ಸಹಾಯಕ್ಕೆ ಬರುವ ಶಾಸ್ತ್ರವೆಂದರೆ, ಗ್ರಂಥಸಂಪಾದನೆಯ ಶಾಸ್ತ್ರ ಈ 'ಶಾಸ್ತ್ರ' ಈಗ ಸುಮಾರು ನಾಲ್ಕೈದು ದಶಕಗಳಿಂದ ಒಂದು ಅಧ್ಯಯನ ವಿಷಯವಾಗಿ ಕನ್ನಡದಲ್ಲಿ ಪ್ರಾಶಸ್ತ್ಯ ಪಡೆದುಕೊಂಡಿದೆ. ಡಿ.ಎಲ್.ಎನ್. ಅವರು ತ.ಸು.ಶಾಮರಾವ್ ಅವರ ಜೊತೆಗೂಡಿ ಸಂಪಾದಿಸಿರುವಂತಹ ಕೃತಿ ಶಾಂತಿನಾಥನ 'ಸುಕುಮಾರ ಚರಿತಂ' ಈ ಕಾವ್ಯವು ೧೯೫೪ರಲ್ಲಿ ಶಿವಮೊಗ್ಗದ ಕರ್ನಾಟಕ ಸಂಘದಿಂದ ಪ್ರಕಟಗೊಂಡದ್ದಾಗಿದೆ. ಶಾಂತಿನಾಥನು ಈ ಕೃತಿಯನ್ನಲ್ಲದೆ ಶಿಕಾರಿಪುರದ ೧೩೬ನೆಯ ಶಾಸನವನ್ನು ರಚಿಸಿದ್ದಾನೆ. ಈ ಶಾಸನವು ೫೦ ಕಂದ ವೃತ್ತಗಳನ್ನೊಳಗೊಂಡಿದ್ದು, ಚಂಪೂ ಶೈಲಿಯಲ್ಲಿ ರಚನೆಗೊಂಡದ್ದಾಗಿದೆ.

ಈ ಕೃತಿಯ ಸಂಪಾದನೆ ಅವಧಿಯಲ್ಲಿ ಮೂಲಪಾಠಕ್ಕೆ ಧಕ್ಕೆ ಬಾರದ ಹಾಗೆ ಪಾಠಭೇದಗಳನ್ನು ಹಲವು ಸೂಚಕ (ಚಿಹ್ನೆ)ಗಳನ್ನು ಕೃತಿಯುದ್ದಕ್ಕೂ ಅಡಿಟಿಪ್ಪಣಿಯಾಗಿ ಅವಶ್ಯವಿದ್ದಲ್ಲಿ ತೋರಿಸಿದ್ದಾರೆ. ಈ ಅಡಿಟಿಪ್ಪಣಿಯ ವಿಚಾರಗಳು ಮುಂದಿನ ಅಧ್ಯಯನಕಾರರಿಗೆ ಪಾಠ ಸಂಪಾದಕರಿಗೆ, ಪಾಠ ಪರಿಷ್ಕರಿಕರಿಗೆ ಅವಶ್ಯ ಮಾರ್ಗಸೂಚಕಗಳಂತೆ ಬಿತ್ತರಿಸಿದ್ದನ್ನು ಅಧ್ಯಯನದ ಉದ್ದಕ್ಕೂ ಕಾಣಬಹುದಾಗಿದೆ. ಈ ಪಾಠ ನಿರ್ಣಯಯುಕ್ತ ವಿಷಯಗಳನ್ನು ನೀಡಲು ಡಿ.ಎಲ್.ಎನ್ ಅವರು ನಡೆಸಿದ ಅಧ್ಯಯನದ ವಿಸ್ತೃತತೆ ಎದ್ದು ಕಂಡಿದೆ.

ಈ ಕೃತಿಯ ಆರಂಭದಲ್ಲಿ ಸಂಪಾದಕರು ೮ ಪುಟದ ಕವಿ-ಕಾವ್ಯ-ಕಾಲ ವಿಚಾರ, ಇತಿವೃತ್ತಿ ವಿಚಾರ ತಿಳಿಸಿದ್ದು, ೨೫ ಪುಟಗಳಷ್ಟು ಕಥಾಸಾರ, ೧೮ ಪುಟದಷ್ಟು ಕಥೆಯ ಮೂಲ ಇತರೆ ಕೃತಿಯೊಂದಿಗಿನ ತೌಲನೀಕರಿಸಿ ನೋಡುವ ವಿಚಾರಗಳನ್ನು ಸ್ಪಷ್ಟಪಡಿಸಿದ್ದು ಕಂಡುಬಂದಿದೆ. ಹಾಗೆಯೇ, ೨೬ ಪುಟಗಳಷ್ಟು ಕೃತಿಯ ವಿಮರ್ಶೆ ವಿಚಾರಗಳು ೫ ಪುಟಗಳಷ್ಟು ಕನ್ನಡದ ಇತರ ಸುಕುಮಾರ ಚರಿತೆಗಳ ವಿಚಾರ ೬ ಪುಟಗಳಷ್ಟು ಈ ಕೃತಿಯಲ್ಲಿ ಬಳಕೆಗೊಂಡ ವ್ಯಾಕರಣ, ಛಂದಸ್ಸು, ರಗಳೆ, ಷಟ್ಪದಿ, ತ್ರಿಪದಿಗಳ ಕುರಿತು ಸರಿಯಾಗಿ ವಿವರಿಸಿದ್ದು ಕಾಣಬಹುದು. ಈ ಎಲ್ಲಾ ಮೂಲಗಳಿಂದ ಒಟ್ಟಾಗಿ ೮೯ ಪುಟಗಳ ಪ್ರಸ್ತಾವನೆಯು ಕೃತಿಯ ಗಟ್ಟಿತನವನ್ನು ನೆಲೆಗೊಳಿಸಿದ್ದು ಡಿ.ಎಲ್.ಎನ್. ರವರ ಕುಶಾಲಾಗ್ರತೆಗೆ ಹಿಡಿದ ಕೈಗನ್ನಡಿಯಂತಹದ್ದಾಗಿದೆ.

ಜೈನ ಸಾಹಿತ್ಯದಲ್ಲಿ ಪ್ರಸಿದ್ಧಿ ಪಡೆದ ಹಾಗೂ ಜನಪ್ರಿಯವೂ ಆದ ಸುಕುಮಾರ ಚರಿತೆಯನ್ನು ಶಾಂತಿನಾಥನು ೧೦೬೫ ಕ್ಕೂ ಮೊದಲೇ ಅಂದರೆ ತನ್ನ ಆಶ್ರಯದಾತನಾದ ಮಹಾಮಂಡಲೇಶ್ವರನ ಆಸ್ಥಾನಕ್ಕೆ ಬರುವ ಮೊದಲೇ ಈ ಕೃತಿಯನ್ನು ರೂಪುಗೊಳಸಿದ್ದರ ಬಗ್ಗೆ ಸಂಪಾದಕರು ಪೂರ್ವ ಪ್ರಸ್ತಾವನೆಯಲ್ಲಿ ವಿಸ್ತೃತವಾಗಿ ವಿವರಿಸಿದ್ದಾರೆ. ಜೈನಸಾಹಿತ್ಯವು ಪ್ರಸಿದ್ಧಿ ಹಾಗೂ ಜನಪ್ರಿಯತೆಯನ್ನು ಗಳಿಸಿದ್ಧರ ಬಗ್ಗೆ, ಅಲ್ಲದೆ ಮೂಲದ ಬಗ್ಗೆಯೂ ಚರ್ಚಿಸಿದ್ದಾರೆ. ಸುಕುಮಾರ ಸ್ವಾಮಿ ಕಥೆಯು ಸಂಸ್ಕೃತ, ಜೈನ ಸನ್ಯಾಸಿಗಳಿಗೆ ತಪೋವಿಘ್ನ ಕಾರಕವಾಗಿ ಒದಗುವ ಉಪಸರ್ಗಗಳಲ್ಲಿ ಒಂದಾದ 'ತೀಯರ್ಗುಪಸರ್ಗ'ವನ್ನು ವಿವರಿಸುವ ಸಂದರ್ಭಕ್ಕೆ ದೃಷ್ಟಾಂತವಾಗಿ ಈ ಕಥೆ ಮೂಡಿಬಂದಿದ್ದು ಸುಮಾರು ೧೫ ಪ್ರಾಕೃತ, ಜೈನ, ಕೃತಿಗಳಲ್ಲಿ ಕಾಣಿಸಿಕೊಂಡಿರುವುದನ್ನು ಸಂಪಾದಕರು ಗುರುತಿಸಿದ್ದಾರೆ. ಈ ಕೃತಿಯನ್ನು ರಚಿಸುವಾಗ ವಡ್ಡಾರಾಧನೆಯ ಗದ್ಯ ಕೃತಿಯಲ್ಲಿ 'ಸುಕುಮಾರ ಸ್ವಾಮಿಯು' ಈ ಕಥೆಯಿಂದ ಯಾರಮಟ್ಟಿಗೆ ಉಪಕೃತನಾಗಿದ್ದಾನೆಂಬುದನ್ನು ಡಿ.ಎಲ್.ಎನ್.ರವರು ತೋರಿಸಿಕೊಟ್ಟಿದ್ದಾರೆ. ವಡ್ಡಾರಾಧನೆ ಕಥೆಯಲ್ಲಿ ಬರುವ ಕೆಲವು ಶಬ್ದ ವಿನ್ಯಾಸಗಳೂ, ಅಭಿಪ್ರಾಯಗಳು ಶಾಂತಿನಾಥನ ಕೃತಿಯಲ್ಲಿ ಯಥಾವತ್ತಾಗಿ ಕಂಡುಬಂದಿರುವುದನ್ನು ಉದಾಹರಣೆ ಸಹಿತ ತೋರಿಸಿಕೊಟ್ಟದ್ದನ್ನು ಕಾಣಬಹುದಾಗಿದ್ದಲ್ಲದೆ, ವಡ್ಡಾರಾಧನೆಯಲ್ಲಿ ಸಂಕುಚಿತವಾಗಿ ಬಳಕೆಯಾದ ಅಂಶಗಳು ಶಾಂತಿನಾಥನ ಕೃತಿಯಲ್ಲಿ ವಿಸ್ತೃತ ರೂಪತಾಳಿರುವುದನ್ನು ಇಲ್ಲಿ ಮನಗಾಣಬಹುದಾಗಿದೆ. 'ತಾಯ್ ತಂದೆವಿರ ಕೇಳ್ವಿಯಂಗೆಯ್ಯದಾವೇದಂ ಮೊದಲಾಗೊಡೆಯ ಶಾಸ್ತ್ರಂಗಳ ನೋಡದೆ ತಂದೆ ಪಡೆದ ಕಡವರಮಂ ಇಯಂಗೆಯ್ಯತ್ತು ಸಪ್ತವ್ಯ ಸನಾಭಿಭೂತರಾಗಿ ಕೆಟ್ಟು ಹೋದರೆಂದು.'[೪೩] ಈ ರೀತಿ ವಡ್ಡಾರಾಧನೆಯಲ್ಲಿ ಸಂಕ್ಷಿಪ್ತ ಕಥಾಂಶ ಕಂಡರೆ, ಇದನ್ನೇ ಶಾಂತಿನಾಥನು ಒಂದು ವಚನ ಹಾಗೂ ಮೂರೂ ವೃತ್ತಗಳಲ್ಲಿ ಸವಿವರಾಗಿ ಸಹಜ ಅರ್ಥಗರ್ಭಿತ ಕಥಾಂಶವಾಗಿ ನಿರೂಪಿಸಿ ಕಥೆಗೆ ಹೆಚ್ಚಿನ ಮೆರುಗನ್ನು ಅಲ್ಲಲ್ಲಿ ತಂದು ಕೊಟ್ಟಿದ್ದನ್ನು ಗುರುತಿಸಿದ್ದಾರೆ. ವಡ್ಡಾರಾಧನೆಯ ಒಂದು ಕಥೆಯ ಭಾಗದಂತೆ ಬಿಂಬಿತವಾದ ಈ ವಿಸ್ತೃತ ಕಥೆಯ ಮೂಲ ಅದರಲ್ಲಿನ ವಿಷಯಗಳನ್ವಯ ಯಾವುದನ್ನು ಬಿಟ್ಟಿದ್ದಾನೆ, ಯಾವುದನ್ನು ಸೇರಿಸಿದ್ದಾನೆ ಯಾವುದನ್ನು ಮಾರ್ಪಡಿಸಿದ್ದಾನೆಂಬುದನ್ನಲ್ಲದೆ ಅವುಗಳಿಂದ ತನ್ನ ಕಾವ್ಯದ ಮೇಲಾಗಿರುವ ಪರಿಣಾಮವನ್ನು ವಿವರಣಾತ್ಮಕವಾಗಿ ನೀಡಿದ್ದಾರೆ. ಈ ಕೃತಿಯು ವಡ್ಡಾರಾಧನೆಯಲ್ಲಿ ಕಾಣಸಿಗುವ ಸೂಚನೆಗಳನ್ನು ಸ್ವೀಕರಿಸಿ ಅವರನ್ನು ತನ್ನ ವಾಸ್ತವತೆಗೆ ತಕ್ಕಂತೆ ರೂಪಿಸಿ ಪರಿಷ್ಕರಿಸಿ ವಿವರಿಸುತ್ತಾ ಮುಂದುವರೆದಂತೆ ಕಾಣುತ್ತದೆ ಎಂಬ ಅಂಶವನ್ನು ಸೂಚಿಸುವುದು ಅತಿ ಅವಶ್ಯವೆನಿಸುತ್ತದೆ. ವಡ್ಡಾರಾಧನೆಯಲ್ಲಿ ಎಲ್ಲಿಯಾದರೂ 'ಜೀವನತತ್ವೋಪದೇಶ' ಬಂದಿದ್ದರೆ ಅಲ್ಲಿಯೂ ಶಾಂತಿನಾಥನು ವಿಸ್ತರಿಸಿ ಹೇಳಿದ್ದನ್ನು ಪೀಠಿಕಾ ಭಾಗದಲ್ಲಿ ಸಂಪಾದಕರು ವಿವರಿಸಿದ್ದು ಕಾಣಬಹುದಾಗಿದೆ. ಅಲ್ಲದೇ ವಡ್ಡಾರಾಧನೆಗೆ ಈ ಕೃತಿ ಮೂಲವಾಗಿದ್ದರೂ ಅಲ್ಲಲ್ಲಿ ಮೂಲದ ಕೆಲ ವಿಚಾರ (ಉಪವ್ಯಾಖ್ಯಾನ)ಗಳನ್ನು

ಕವಿಯು ಬಿಟ್ಟಿರುವುದನ್ನು ಅಥವಾ ಅವಶ್ಯವಿದ್ದೆಡೆ ಅಲ್ಲಲ್ಲಿ ಮಾರ್ಪಡಿಸಿರುವುದನ್ನು ಗುರುತಿಸಿರುವುದಲ್ಲದೇ ಕಥೆಯನ್ನು ಹೇಳುವಾಗ ಕೆಲವು ಹೊಸವಿಷಯಗಳನ್ನು ದಾಖಲೀಕರಿಸಿದ್ದಾನೆ. ಪಂಪನ ವಿಕ್ರಮಾರ್ಜುನ ವಿಜಯಕ್ಕೆ ಕನ್ನಡದ 'ಗದಾಯುದ್ಧ'ವು ಹೇಗೂ ಹಾಗೆ ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯ ಶಾಂತಿನಾಥನ 'ಸುಕುಮಾರ ಚರಿತಂ' ಕಥೆಗೆ ಬಹುಮಟ್ಟಿಗೆ ಕಾರಣವಾಗಿದೆ ಎಂಬುದನ್ನು ಸಂಪಾದಕರು ಅಭಿವ್ಯಕ್ತಿಪಡಿಸಿದ್ದನ್ನು ಮನಗಾಣಬಹುದು. ಮೂಲವನ್ನು ಬಳಸಿಕೊಳ್ಳುವುದರಲ್ಲಿಯ ಶಾಂತಿನಾಥ ಔಚಿತ್ಯ ಜ್ಞಾನಾದರ್ಶ ವಿಮರ್ಶಾಶಕ್ತಿ, ಅರಗಿಸಿಕೊಳ್ಳುವಿಕೆ, ಕಲ್ಪನಾ ಸಾಮರ್ಥ್ಯಗಳು ಬಾಹುಳ್ಯವಾಗಿ ಅವನೊಳಗೆ ರೂಪುಗೊಂಡಂತೆ ಅವನು ಹಳೆಯ ಕಥೆಯನ್ನು ಹೇಳಿದ್ದರೂ ಅದೊಂದು ನೂತನ ರಚನೆಯಂತೆ ತೋರಿಬಂದು ಅವನ ಭಾವನೆಗೆ ಇಂಗಿತವಾಗಿದ್ದೆಂದು ಕಂಡುಬಂದಿದೆ.

'ಶಾಂತಿನಾಥನ ದೃಷ್ಟಿಯಲ್ಲಿ ಸುಕುಮಾರ ಕಥೆ ಧರ್ಮದ ಕಥೆಯಾಗಿ ಮಿಂದೆದ್ದಿದೆ. ಅದರ ನಿರೂಪಣೆಯಲ್ಲಿ ಶಾಂತಿನಾಥನು ಧರ್ಮಾನುರಾಗದಲ್ಲಿ ತನಗಿದ್ದ ಪ್ರೌಢಿಮೆಯನ್ನು ಪ್ರಚುರಪಡಿಸಿದ್ದಾನೆ. ಮೂಲದಲ್ಲಿಯೂ ಈ ಲಕ್ಷಣವು ಹೆಚ್ಚಾಗಿಯೂ ಕಡಿಮೆಯಾಗಿಯೂ ಅಲ್ಲಲ್ಲಿ ಕಾಣಸಿಗುತ್ತದೆ. ಅಲ್ಲಿ ಅದು ಇರುವಡೆಯಲ್ಲೆಲ್ಲ ಶಾಂತಿನಾಥನು ಮತತ್ವದ ಪ್ರತಿಪಾದನೆಯನ್ನು ಮಾಡಿರುವನಲ್ಲದೆ ಇಲ್ಲದಿರುವೆಡೆಯಲ್ಲಿಯೂ ಅವಶ್ಯವಿದ್ದಲ್ಲಿ ಅವಕಾಶಗಳನ್ನು ಕಲ್ಪಿಸಿಕೊಂಡಿದ್ದಾನೆ. ಇದರಿಂದ ಸಂಪಾದಕರು ಅವನ ಗ್ರಂಥವು ಜಿನಮತಾಚಾರದ ಸಣ್ಣ ಕೈಪಿಡಿಯಾಗಿದೆ ಎಂಬ ನಿರ್ಣಯವನ್ನು ತಾಳಿದ್ದಾರೆ.'" ಸುಕುಮಾರನ ಕಥೆ ಒಂದು ಕಥೆಯಲ್ಲ ಒಂದು ಜೀವದ ಕಥೆ ಒಂದು ಜನ್ಮದ ಕಥೆಯಲ್ಲ ಜನ್ಮಜನ್ಮಾಂತರಗಳ ಕಥೆ, ಜನ್ಮಗಳಿಗೆ ಕಾರಣ ಪಾಪಪುಣ್ಯ ರೂಪವಾದ ಕರ್ಮ ಪರಂಪರೆ, ಪುಣ್ಯಾಧಿಕ್ಯದಿಂದ ಮರ್ತ್ಯನಾಕಗಳ ಭೋಗ–ಭಾಗ್ಯಗಳ ಲಾಭ, ಪಾಪಾಧಿಕ್ಯದಿಂದ ತಿಕ್ಯಕ್ ನರಕಗತಿಗಳ ದುಃಖಾನುಭವ ಎರಡರ ಪೂರ್ಣ ವಿನಾಶವಾಗಿ ಜನ್ಮ ಜನ್ಮಗಳ ಸಂಸಾರದಿಂದ ಜೀವನಿಗೆ ಬಿಡುಗಡೆ ಎಂಬುದು ಈ ಕಾವ್ಯದ ಜೀವಾಳ ಎಂಬ ನಿಲುವನ್ನು ತಾಳಬಹುದು. ಪೀಠಿಕೆಯಲ್ಲಿಯ ಕಾವ್ಯದ ಕುರಿತಾದ ವಿಮರ್ಶಾ ಭಾಗದಲ್ಲಿ ಕಾವ್ಯದಲ್ಲಿ ಕೆಲವೆಡೆ ಕಾವ್ಯಧರ್ಮವೂ ಹೇಗೆ ನೆಲೆಸಿವೆ? ಎಂಬುದನ್ನು ಜಿನಧರ್ಮದಲ್ಲಿರುವ ಸಮಸ್ತ ಮಾನವ ಸಾಧಾರಣಾಂಶಗಳು ಹೇಗೆ ಕಾವ್ಯಕ್ಕೆ ಪ್ರೇರಕವಾಗಿವೆ? ಎಂಬುದನ್ನು ಗುರುತಿಸಿದ್ದಾರೆ. ಕವಿಯ ಅಂತರಂಗವನ್ನು ಗ್ರಹಿಸುವಲ್ಲಿ ಸಾರ್ಥಕ ಹೊಂದಿರುವುದನ್ನು ಹಾಗೂ ಕಥಾ ನಿರೂಪಣೆಯಲ್ಲಿ ಎಷ್ಟರಮಟ್ಟಿಗೆ ಕವಿಯ ಸಹಜಶಕ್ತಿ ಪ್ರಕಟವಾಗಿದೆ ಎಂಬುದರ ಜೊತೆಗೆ ಉತ್ಕೃಷ್ಟ ಕಾವ್ಯಧರ್ಮ ಅಲ್ಲಿ ಹೇಗೆ ಒಡಮೂಡಿದೆ ಎನ್ನುವಂತಹ ವಿಷಯವನ್ನು ಸವಿವರವಾಗಿ ದಾಖಲಿಸಿಕೊಟ್ಟಿದ್ದಾರೆ. ಮೂಲವನ್ನು ಬಳಸಿಕೊಳ್ಳುವುದರಲ್ಲಿನ ಪಾತ್ರದ ಸ್ವಭಾವ ಚಿತ್ರಣ, ಮಿತವೈವಿಧ್ಯದಲ್ಲೂ ಸನ್ನಿವೇಶ ನಿರ್ಮಾಣದಲ್ಲೂ ಪ್ರಕಟವಾಗಿರುವ ಕವಿಶಕ್ತಿಯಲ್ಲಿನ ಔಚಿತ್ಯ, ಸ್ವಾತಂತ್ರ್ಯ ಸಹಜತೆ ರಸಿಕತೆಗಳು ಯಾವ ರೀತಿ ಮೈದೂರಿವೆ ಎಂಬುದನ್ನು ವಿವರಿಸಿದ್ದಾರೆ.

'ಸುಕರ ರಸಭಾವದಿಂ ವರ್ಣಕದಿಂ ತತ್ವಾರ್ಥ ನಿಚಯದಿಂ ಸೂಕ್ತಮೆನಲ್ ಸುಕುಮಾರ ಚರಿತಮಂ ಪೇಳ್ದ ಕವೀಂದ್ರನು ಶಾಂತಿನಾಥನು, ಎಂಬ ಮಾತು ಆತನಿಗೆ ಯಾವ ರೀತಿ ಒಪ್ಪುತ್ತದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಜೊತೆಗೆ ಪೀಠಿಕೆಯಲ್ಲಿ ಶಾಂತಿನಾಥನ ನಂತರ ಸುಕುಮಾರ ಚರಿತೆ ಕಥೆಯನ್ನು ಹೇಳಿರುವ ಕನ್ನಡ ಕವಿಗಳ ವಿವರವನ್ನು ಸಂಕ್ಷಿಪ್ತವಾಗಿ ನೀಡಿದ್ದಾರೆ. ಕೊನೆಯಲ್ಲಿ ಕಾವ್ಯಭಾಷೆ, ಛಂದಸ್ಸನ್ನು ಕುರಿತು ವಿವೇಚಿಸಿದ್ದು ಪಂಪಾದಿಗಳ ಹಾಗೆ ಸುಮಾರ್ಗ ಭಾಷೆ ಬಳಸಿರುವುದನ್ನು ತೋರಿಸಿಕೊಟ್ಟಿದ್ದಾರೆ. ಛಂದಸ್ಸಿನ ಬಗೆಗೆ ಪ್ರಸ್ತಾಪಿಸುವಾಗ ಕಾವ್ಯದಲ್ಲಿ ಕಂಡುಬರುವ ಅಮೂಲ್ಯವಾದ ಎರಡು ಸಂಗತಿಗಳನ್ನು ಪ್ರಸ್ತಾಪಿಸಿದ್ದು, ರಗಳೆಯ ಬಗೆಗೆ ತಿಳಿಸುತ್ತಾ ಪದ್ದಳಿಯಂತಹ ಅಮೂಲ್ಯ ಸಂಗತಿಯ ಬಗೆಗೆ ಪ್ರಸ್ತಾಪಿಸಿದ್ದಾರೆ.'[೬೫]

'ಪದ್ದಳಿಯು ಸಂಸ್ಕೃತದ ಪದ್ಧತಿಯಿಂದ ಬಂದಿದೆ ಪ್ರಾಕೃತದಲ್ಲಿ 'ಪದ್ಧಡಿ' ಎಂಬ ರೂಪವಾಗಿ ಅದರ ವಿಕಾರವೇ 'ಪದ್ದಳಿ' ಎಂಬುದಾಗಿದೆ. ಪ್ರಾಕೃತದಲ್ಲಿರುವ ಮಾತ್ರಾವೃತ್ತಿ 'ಪಜ್ಝಟಿಕಾ' ಎಂಬುದಕ್ಕೂ 'ಪದ್ಧತಿಕಾ' ಎಂಬುದೇ ಮೂಲವೆಂದು ಡಿ.ಎಲ್.ಎನ್. ಅವರು ಈ ಕುರಿತು ಅಮೂಲ್ಯ ಸಂಗತಿಯನ್ನು ವಿವರವಾಗಿ ಪ್ರಸ್ತಾಪಿಸಿದ್ದಾರೆ. ರಗಳೆಯ ಪದ್ಯವೊಂದನ್ನು ಗುರುತಿಸಿ ಸಂಸ್ಕೃತದ ಪದ್ಧತಿಯ ಲಕ್ಷಣದ ಬಗೆಗೆ ಛಂದೋ ಲಾಕ್ಷಣಿಕ ಕೃತಿಗಳಲ್ಲಿ ಇರುವ ಮಾಹಿತಿಯನ್ನು ಪೂರಕವಾಗಿ ಪೀಠಿಕೆಯ ಕೊನೆಯ ಭಾಗದಲ್ಲಿ ನೀಡಿದ್ದು ತಿಳಿದುಬಂದಿದೆ.'[೬೬]

'ಪದ್ಧಳಿಯೇ ಮುಂದೆ ಮಟ್ಟರಗಳೆ, ತ್ವರಿತರಗಳೆ ಎಂದು ಬೇರೆ ಬೇರೆ ಹೆಸರುಗಳಿಂದ ಬಗೆಗೊಂಡು ಇಂದು' ಮಂದಾನಿಲರಗಳೆಯಾಗಿ ಗುರಿತಿಸಿಕೊಂಡಿರುವುದು ವಿಶೇಷವಾಗಿದೆ. ಇದರಿಂದ ಈ ವಿಶೇಷ ಪ್ರಭೇದಕ್ಕೆ ನಿಷ್ಕೃಷ್ಟವಾದ ಹೆಸರು ಇಲ್ಲದೆ ಈಗೆ ಪರಿಯಾಗಿ ನಿರೂಪಿತಗೊಂಡಿದ್ದನ್ನು ಕಾಣಬಹುದಾಗಿದೆ.'[೬೭]

ಶಾಂತಿನಾಥನು ತನ್ನ ಕಾವ್ಯದಲ್ಲಿ 'ಪದ್ಧಳಿ' ಹೆಸರನ್ನು ಪ್ರಸ್ತಾಪಿಸಿರುವುದು ಮಹತ್ತರ ಸಂಗತಿಯಾಗಿದ್ದು ಈ ಕೃತಿಯ ಛಂದಸ್ಸಿನಲ್ಲಿ ಪ್ರಸ್ತಾಪಿಸಿರುವ ಮತ್ತೊಂದು ಮಹತ್ತರ ಸಂಗತಿ ಎಂದರೆ, ಅಂಶಷಟ್ಪದಿ ಕುರಿತಾದದ್ದು, ನಾಗವರ್ಮ, ಜಯಕೀರ್ತಿಗಳು ನಿರೂಪಿಸಿರುವ ಅಂಶಷಟ್ಪದಿ ಲಕ್ಷಣವನ್ನು ಸಂಪೂರ್ಣವಾಗಿ ಪ್ರತಿಬಿಂಬಿಸುವ ಪದ್ಯವು ಸುಕುಮಾರ ಚರಿತೆಯಲ್ಲಿರುವುದನ್ನು ಪ್ರಥಮವಾಗಿ ಸಂಪಾದಕರು ಗುರುತಿಸಿದ್ದಾರೆ. ಕನ್ನಡ ಷಟ್ಪದಿ ಚರಿತ್ರೆಯಲ್ಲಿ ಸುಕುಮಾರ ಚರಿತದಲ್ಲಿ ಕಂಡುಬಂದಿರುವ ಅಂಶಷಟ್ಪದಿಯ ಪದ್ಯಕ್ಕೆ ಮಹತ್ತರ ಸ್ಥಾನವಿರುವುದನ್ನು ಎಲ್ಲರೂ ಗಮನಿಸತಕ್ಕ ಸಂಗತಿಯಾಗಿದೆ. ಕಾವ್ಯದ ಕೊನೆಯ ಭಾಗದಲ್ಲಿ ಈಗಾಗಲೇ ಈ ಹಿಂದೆ ಸೂಚಿಸಿದಂತೆ ಶಾಂತಿನಾಥನು ಬರೆದಿರುವ ಶಿಕಾರಿಪುರದ ೧೩೬ನೇ ಸಂಖ್ಯೆಯ ಶಾಸನವನ್ನು ಪರಿಶಿಷ್ಟ ಭಾಗದಲ್ಲಿ ಕೊಟ್ಟಿದ್ದಾರೆ. ಜೊತೆಗೆ 'ಶಾಸನದಲ್ಲಿ ಕಂಡುಬರುವ ೭ ಪದ್ಯಗಳು ಸುಕುಮಾರ ಚರಿತದಲ್ಲಿ ಕಂಡುಬಂದಿರುವುದನ್ನು ಗುರುತಿಸಬಹುದಾಗಿ,

ಶಬ್ಧಕೋಶ ಹಾಗೂ ತಿದ್ದುಪಡಿಗಳನ್ನು ಕೊಟ್ಟಿದ್ದು ಹಾಗೆಯೇ ಗ್ರಂಥದ ಕೊನೆಯಲ್ಲಿ ಮೂಡಿಬಂದಿರುವ ಒಟ್ಟಾರೆ, ಈ ಪರಿಶಿಷ್ಟಗಳು ಗ್ರಂಥಸಂಪಾದನೆಯ ದೃಷ್ಟಿಯಿಂದ ಬಹು ಉಪಯುಕ್ತವಾಗಿವೆ.'[೪೮]

೨ ಹಸ್ತಪ್ರತಿಗಳ ಸಹಾಯದಿಂದ ಅಪಾರ ಶ್ರಮವಹಿಸಿ ಭಿನ್ನ ಪಾಠಗಳನ್ನು ಗುರುತಿಸಿ ಒಪ್ಪಿತ ಪಾಠಗಳನ್ನು ಜೋಡಿಸಿ ಅಧ್ಯಯನಕ್ಕೆ ಸೂಕ್ತ ಪ್ರಸ್ತಾವನೆಯನ್ನು ಸಂಪಾದಕರು ರೂಪಿಸಿದ್ದಾರೆ. ಇನ್ನುಳಿದ ಇವರ ಗ್ರಂಥ ಸಂಪಾದನೆಯ ಕೌಶಲ್ಯತೆಯನ್ನೆ ಬಳಸಿ ಸೂಕ್ತ ಉದಾಹರಣೆಗಳೊಂದಿಗೆ ನಿಖರ ಅಭಿಪ್ರಾಯಗಳನ್ನು ಸಾಬೀತು ಪಡಿಸಿದ್ದು ಇಡಿ ಕಾವ್ಯದ ಭೂಮಿಕೆಯಲ್ಲಿ ಯಥಾಕ್ರಮವನ್ನು ಕಾಣಿಸಿದ್ದಾರೆ. ಈ ಕಾವ್ಯ ಹುಟ್ಟುವಿಕೆಗೂ ಮೊದಲು ಮೂಡಿಬಂದ ಪ್ರಾಕೃತದ ಕೆಲವು ಕೃತಿಗಳನ್ನು ಅಧ್ಯಯನದ ವಿಷಯದಿಂದ ಸಮೀಕ್ಷಿಸಿದ್ದು ಕಾಣಬಹುದಾಗಿದೆ. ವಡ್ಡಾರಾಧನೆ ಕಥೆಯೊಂದಿಗೆ ತುಲನೆ ಮಾಡಿ ನೋಡುವಾಗ ಅದಕ್ಕೆ ಕವಿ ಉಪಕೃತನಾಗಿದ್ದಾನೆಂಬುದನ್ನು ಗ್ರಹಿಸಬಹುದಾಗಿದ್ದು ಜೊತೆಗೆ ಸಂಪಾದಕರು ಸುಕುಮಾರ ಕಥೆಯ ಮೂಲವನ್ನು ಶೋಧಿಸುವಲ್ಲಿ ಪ್ರಾಕೃತ, ಸಂಸ್ಕೃತ, ಹಾಗೂ ಕನ್ನಡ ಸಾಹಿತ್ಯಾವ ಲೋಕನದಲ್ಲಿ ಮಾಡಿರುವ ಅಧ್ಯಾಪನ ಇವರ ವಿದ್ವತ್ತಿನ ಪ್ರತೀಕವಾಗಿದೆ. ಸುಕುಮಾರನ ಕಥೆಗೆ ಬಲ (ಪ್ರಾಧಾನ್ಯತೆ) ಬರಲೆಂದು ಕವಿಯು 'ಸಂಠಾರಪಇಣ್ಣ' ಭರತೇಶ ಬಾಹುಬಲಿ 'ಸ್ವಾಧ್ಯಾಯ ಕಥಾಕೋಶ', ದೇವಸೇನನ 'ಆರಾಧನಾಸಾರ' ಸಕಲಕೀರ್ತಿ ಹಾಗೂ ವಾದಿಚಂದ್ರರ ಸುಕುಮಾಲ ಸ್ವಾಮಿಚರಿತ್ರೆ ಪೂರ್ಣಭದ್ರನ 'ಸುಕುಮಾಲ ಸಂಧಿ' ಹರಿಷೇಣನ 'ಬೃಹತ್ಕಥಾಕೋಶ' ಕೃತಿಗಳನ್ನು ಉಲ್ಲೇಖಿಸಿ ಮೂಲ ಜೈನಕವಿಗಳಲ್ಲಿನ ಪ್ರಾಧಾನ್ಯತೆಯನ್ನು ಎತ್ತಿತೋರಿಸಿದ್ದಾರೆ. ಅಲ್ಲದೆ ಭಾರತೀಯ ಭಾಷೆಗಳಲ್ಲಿ ಈ ಕಥೆಯು ಅನೇಕ ಶಾಖೆಗಳಾಗಿ ವಿಂಗಡಣೆಗೊಂಡು ಮೂಡಿಬಂದಿದ್ದನ್ನು ಈ ಹಿಂದೆ ತಿಳಿದಿದ್ದೇವೆ, ಆದರೆ ಅದರ ಒಂದು 'ಉಪಶಾಖೆ' ಕನ್ನಡದ್ದಾಗಿದೆ ಎಂಬ ಡಿ.ಎಲ್.ಎನ್. ಅಭಿಪ್ರಾಯ ಒಪ್ಪತಕ್ಕದ್ದಾಗಿದೆ.

'ಇವರು ತಮ್ಮ ಎಲ್ಲಾ ಗ್ರಂಥಗಳಲ್ಲಿ ಒಂದೊಂದು ಪದಕ್ಕೂ ವಿಶಾಲವಾದ ಮನೋಭೂಮಿಕೆಯನ್ನು ಇಟ್ಟುಕೊಂಡು ಬೇರೆ ಬೇರೆ ಉದಾಹರಣೆಗಳನ್ನು ಹುಡುಕಿ ಸೂಕ್ತ ನಿರ್ಣಯಗಳನ್ನು ತೆಗೆದುಕೊಳ್ಳುವ ರೀತಿಯು 'ಸುಕುಮಾರಚರಿತಂ'ನಲ್ಲಿಯೂ ಅದನ್ನು ಕಾಣಬಹುದಾಗಿದೆ. ಈ ಕಥೆಯ ಮೂಲವನ್ನು ಶೋಧಿಸುವಲ್ಲಿ ಪ್ರಾಕೃತ, ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯಾವಲೋಕನವನ್ನು ಮಾಡಿರುವುದು ಇವರ ವಿದ್ವತ್ತಿಗೆ ಪ್ರತಿಸಾಕ್ಷೀಕರಿಸಿದ್ದಾಗಿದೆ.'[೪೯]

ಈ ಕೃತಿಯು ಬೆಳಕು ಕಾಣಲು ಡಿ.ಎಲ್.ಎನ್. ಹಾಗೂ ತ.ಸು.ಶಾಮರಾಯರು ತುಂಬಾ ಶ್ರಮವಹಿಸಿದ್ದಾರೆ. ಹಸ್ತಪ್ರತಿಗಳ ಸಂಕಲನ, ಪಾಠಪರಿಷ್ಕರಣೆ ಇತರೆ ಕೃತಿ ಪ್ರತಿಗಳೊಂದಿಗೆ ಸಂಯೋಜಿಸಿ ನೋಡುವಿಕೆ, ಪ್ರಾಕೃತ ಭಾಷೆಗಳ ಉಲ್ಲೇಖಗಳು ಇತ್ಯಾದಿಯಾಗಿ ಕುರಿತು ಅತ್ಯಂತ ಕುಶಲಾಗ್ರತೆಯಿಂದ ಕಾರ್ಯನಿರ್ವಹಿಸಿದ್ದು ಕಂಡುಬಂದಿದೆ. ಒಟ್ಟಾರೆಯಾಗಿ

ಡಿ.ಎಲ್.ಎನ್. ಸಂಪಾದಿತ ಕೃತಿ ಸಾಹಿತ್ಯದಲ್ಲಿ ಇದೂ ಒಂದು ಮಹತ್ವದ ಕೃತಿ ಎನ್ನಬಹುದಾಗಿದೆ.

**೩.೯. ಗೋವಿನ ಹಾಡು**

ಕನ್ನಡ ಸಾಹಿತ್ಯದಲ್ಲಿ ಪಠ್ಯಪುಸ್ತಕಗಳ ಮೂಲಕವಾಗಿ ಹೆಚ್ಚು ಜನಪ್ರಿಯತೆಯನ್ನು ಗಳಿಸಿರುವ ಜಾನಪದ ಕಥನ ಕಾವ್ಯವೆಂದರೆ, 'ಗೋವಿನಹಾಡು' ಈ ದೀರ್ಘಕಾವ್ಯದ ಕಾಲ ನಿಖರವಾಗಿ ನಮಗೆ ಗೊತ್ತಿಲ್ಲ ಅದರೆ ಇಲ್ಲಿರುವ ಸನ್ನಿವೇಶ ಸಂದರ್ಭಗಳಿಗನುಸಾರವಾಗಿ ಮಲೆನಾಡ ಪ್ರದೇಶದ ಕಥಾವಸ್ತುವನ್ನು ಈ ಕಾವ್ಯ ಹೊಂದಿದ್ದಾಗಿದೆ. ಜಾನಪದ ಸಾಹಿತ್ಯವೇ ಒಂದು ದೃಷ್ಟಿಯಿಂದ ಕಾಲಾತೀತವಾಗಿ ಬೆಳೆದು ಬಂದದ್ದಾಗಿದ್ದು ಇದರಲ್ಲಿ ಈ ಕಾವ್ಯವು ಪಠ್ಯಪುಸ್ತಕಗಳಲ್ಲಿ ಸೇರಿ ಹೋದ ಮೇಲೆ ಅದರ ಅರ್ಥ ಒಂದು ನೀತಿ ವಾಕ್ಯಕ್ಕೆ ಸೀಮಿತವಾಗಿ, ಲೋಕದೃಷ್ಟಿಯಲ್ಲಿ ಉಳಿದುಕೊಂಡಿದೆ.

ವಾಕ್‌ಪರಂಪರೆಗೆ ಒಳಗಾದ ಪ್ರಾದೇಶಿಕ ಪಾಠಗಳನ್ನೊಳಗೊಂಡ ಜನಪದ ಕಾವ್ಯವನ್ನು ಸಂಪಾದಿಸುವುದು ಕಷ್ಟದ ಕೆಲಸವಾಗಿದೆ. ಇಂತಹ ಕಷ್ಟದ ಕೆಲಸಕ್ಕೆ ಕೈ ಹಾಕಿದ ಜನಪದ ಲಘು ಕಾವ್ಯವಾದ 'ಗೋವಿನಹಾಡು'ಅನ್ನು ಸಂಪಾದಿಸುವುದರ ಮೂಲಕ ಡಿ.ಎಲ್.ಎನ್. ಅವರು ಮುಂದಿನವರಿಗೆ ಮಾದರಿ ಎನಿಸಿದ್ದಾರೆ.

ಒಟ್ಟು ೧೭೭ ಪದ್ಯಗಳಿಂದ ಸಂಕಲಿತಗೊಂಡ ಈ ಕೃತಿಯು ಶುದ್ಧಪಾಠವಾಗಿ ೧೧೪ ಪದ್ಯಗಳಿಂದ ನಿರೂಪಿತಗೊಂಡಿದ್ದು ಉಳಿದ ೬೩ ಪದ್ಯಗಳನ್ನು ಕೃತಿಯ ಕೊನೆಗೆ ಬಿಟ್ಟಿರುವ ಪದ್ಯಗಳೆಂದು ಸಂಕಲಿಸಿದ್ದಾಗಿದೆ.

ಈ ಕೃತಿಯ ಸಂಪಾದನೆ ಹಿನ್ನೆಲೆಯಲ್ಲಿ ಹಸ್ತಪ್ರತಿಗಳ ಬಗ್ಗೆ ಯಾವುದೇ ಮಾಹಿತಿ ತಿಳಿದು ಬಂದಿಲ್ಲ. ಆದರೆ ಅಲ್ಲಲ್ಲಿ ಸಂಪಾದಕರಿಗೆ ದೊರೆತ ಪೂರಕ ದಾಖಲೆಗಳನ್ವಯ ಈ ಕೃತಿಯನ್ನು ಕ, ಖ, ಗ, ಘ, ಪ್ರತಿಗಳನ್ನಾಗಿ ವಿಂಗಡಿಸಿ ಸಂಕಲಿಸಿದ್ದಾರೆ. ಇದರ ವಿವರಣೆಯನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

೧. 'ಕ' ಪ್ರತಿ ಇದು ಮೈಸೂರಿನ ಸರಸ್ವತಿ ಭಂಡಾರದ ಓಲೆಯ ಪ್ರತಿಯಾಗಿದ್ದು, ಮೈಸೂರಿನ ಓರಿಯಂಟಲ್ ಲೈಬ್ರರಿಯ ಕಾಗದದ ಪ್ರತಿಯಾದ ಕೆ.ಎ. ೯೯೦ನ್ನು ೯೪೪೯ರಲ್ಲಿ ಇದು ಮದ್ರಾಸಿನಲ್ಲಿ ಅಚ್ಚಾದ ಪ್ರತಿಯಾಗಿ ಮೈಸೂರಿನಲ್ಲಿ ಮುದ್ರಿತವಾದ ಸಚಿತ್ರ ಪ್ರತಿಯನ್ನು ಉಪಯೋಗಿಸಿಕೊಂಡದ್ದು ಕಂಡುಬಂದಿದೆ. ಈ ಪ್ರತಿಯು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಅಚ್ಚಾದ ಕಲ್ಲಚ್ಚು ಪ್ರತಿ ಇರಬಹುದೆಂದು ಸಂಪಾದಕರು ಅಭಿಪ್ರಾಯಿಸಿದ್ದಾರೆ.

೨. ಖ– ಪ್ರತಿ ಇದು ಕೆ ೧೭೮೮/೩ (೪೮–೬೮)ನೇ ನಂಬರಿನ ಪ್ರತಿಯಾಗಿದ್ದು, ಆದಿಯಲ್ಲಿ ಶ್ರೀಗಣಾಧೀ ಪತಿಯೇ ನಮಃ ಶ್ರೀಶಾರದಾಂಬಾಯೇ ನಮಃ ಗೋವಿನಕಥೆ

ಬರೆಯುದಕ್ಕೆ ಶುಭಮಸ್ತು ಎಂದಿದ್ದು ಹಸ್ತಪ್ರತಿಯ ಕೊನೆಗೆ ಎಷ್ಟು ಪದ್ಯಗಳಿವೆ ಎಂದು ದಾಖಲಿಸಿದ್ದು ಕಂಡುಬಂದಿಲ್ಲ.

೩. ಗ-ಪ್ರತಿ ಇದು ಕೆ-೧೧೭೫/೧ (೧-೧೬)ನೇ ನಂಬರಿನ ಪ್ರತಿಯಾಗಿದ್ದು, ಆದಿಯಲ್ಲಿ ಶ್ರೀಗುರುವೇ ಗತಿ-ಗೋವಿನ ಪದ ಬರಹುದಕ್ಕೆ ಶುಭಮಸ್ತು ಎಂದಿದ್ದು ಅಂತ್ಯದಲ್ಲಿ ಗೋವಿನ ಪದಸಂಪೂರ್ಣ ಮಂಗಳ ಮಹಾಶ್ರೀ ಎಂದಿದೆ ಇದು ಅಸಮಗ್ರ ಹಸ್ತಪ್ರತಿ ಎನಿಸಿದೆ.

೪. ಘ- ಪ್ರತಿ ಇದು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ 'ಗೋವಿನ ಹಾಡು' ಎಂಬ ಹೆಸರಿನಿಂದ ಕೆ.ಎ. ೧೯೦/೬ (೧೧-೧೩)ನೇ ನಂಬರಿನ ಪ್ರತಿ (ಪತ್ರ)ಯಾಗಿದ್ದು ಹಸ್ತಪ್ರತಿಯ ಆದಿಯಲ್ಲಿ ಗೋವಿನಹಾಡು ಬರೆಯುದಕ್ಕೆ ಮುನ್ನ ಶುಭಮಸ್ತು ಎಂದಿದೆ. ಇಲ್ಲಿ ೧೩೭ ಪದ್ಯಗಳನ್ನು ಸಂಕಲಿಸಲಾಗಿದೆ.

ಈ ಎಲ್ಲಾ ಪ್ರತಿಗಳು ಶುದ್ಧ ಪ್ರತಿಗಳಾಗಿರದೆ ಒಂದಕ್ಕೊಂದು ಭಿನ್ನ ಪಾಠಗಳಾಗಿ ಮೂಡಿಬಂದವಾಗಿವೆ.

ಸ್ವಾತಂತ್ರ್ಯ ಪೂರ್ವದಲ್ಲಿ ಅಂದಿನ ಮೈಸೂರು ಅರಸರ ಆಳ್ವಿಕೆಯಲ್ಲಿ ಪ್ರಾರಂಭವಾದ ವಯಸ್ಕರ ಶಿಕ್ಷಣದ ಪುಸ್ತಕಮಾಲೆಯಲ್ಲಿ ೪೬ನೇ ಪ್ರಕಟಣೆಯಾಗಿ ೧೯೪೫ರಲ್ಲಿ ೩೩ ಪುಟಗಳಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಕೃತಿಯಾಗಿದ್ದು, ಮುಂದೆ ಕನ್ನಡ ಕವಿ ಕಾವ್ಯಮಾಲೆ ಅಡಿಯಲ್ಲಿ ಶಾರದಾ ಮಂದಿರ ಮೈಸೂರು ಇವರ ಪ್ರಕಾಶನದಲ್ಲಿ ೧೯೬೦ರ ವೇಳೆಗೆ ಮೊದಲ ಬಾರಿಗೆ ಮುದ್ರಣ ಕಂಡ ಈ ಕೃತಿಯು ಕಾಲಾನಂತರದಲ್ಲಿ ಕ್ರಮವಾಗಿ ೧೯೬೭, ೧೯೭೭ರಲ್ಲಿ ಮರು ಮುದ್ರಣ ಕಂಡುದಾಗಿದೆ. ಒಟ್ಟು ೩೨ ಪುಟಗಳಲ್ಲಿ ಸಂಕಲಿತಗೊಂಡ ಈ ಕೃತಿಯು ೨೩ ಪುಟಗಳಲ್ಲಿ ೧೧೪ ಪದ್ಯಗಳು ಮೂಲ ಪಠ್ಯವಾಗಿ ಬಿತ್ತರಗೊಂಡಿದ್ದು, ಕೃತಿಯ ಕೊನೆಗೆ ೯ ಪುಟಗಳಲ್ಲಿ ಬಿಟ್ಟಿರುವ ಪದ್ಯಗಳ ಭಾಗದಲ್ಲಿ I-ಕ- ಪ್ರತಿಯಲ್ಲಿ ದೊರೆಯುವ ಪದ್ಯಗಳು (೨೦), II-ಖ, ಗ, ಘ- ಪ್ರತಿಗಳಲ್ಲಿ ದೊರೆಯುವ ಪದ್ಯಗಳು (೨೦), III-ನಾಲ್ಕು ಪ್ರತಿಗಳಲ್ಲಿಯೂ ದೊರೆಯುವ ಪದ್ಯಗಳು (೪), IV-ಕ, ಖ, ಗ, ಗಳಲ್ಲಿ ಇರುವ ಪದ್ಯ (೧) ಎಂದು ವಿಂಗಡಿಸಿ ಪಠ್ಯದ ಪೂರ್ಣ ಚಿತ್ರಣವನ್ನು ಸಂಪಾದಕರು ನಿರೂಪಿಸಿದ್ದಾರೆ.

ಈ ಕಥನ ಗೀತೆಯಲ್ಲಿ ಒಟ್ಟಾರೆಯಾಗಿ ೧೩೭ ಪದ್ಯಗಳಿದ್ದು ಇತರರು ಸೇರಿಸಿದ್ದವನ್ನು ಬಿಟ್ಟು ೧೧೪ ಪದ್ಯಗಳನ್ನು ಡಿ.ಎಲ್.ಎನ್. ಅವರು ಸಂಪಾದಿಸಿ ಶುದ್ಧ ಪಾಠವೆಂದು ಪ್ರಕಟಿಸಿದ್ದು ತಿಳಿದು ಬಂದಿದೆ. ನಂತರದಲ್ಲಿ ಡಿ.ಎಲ್.ಎನ್. ಅವರಿಗೆ ಟಿ.ಕೇಶವಭಟ್ಟ ಅವರು ೨೭೩ ಪದ್ಯಗಳನ್ನು ಹೊಂದಿದ್ದ ಹಸ್ತಪ್ರತಿಯನ್ನು ಕೊಟ್ಟಾಗ ಅಚ್ಚರಿಯಿಂದ

ಶಾಸ್ತ್ರಮಯವಾಗಿ ಪರಿಷ್ಕರಿಸಿ ಪ್ರಕಟಿಸಲು ಸೂಚಿಸಿದ್ದರಂತೆ, ಈ ಪ್ರಕಾರವಾಗಿ ಈ ಕೃತಿಯನ್ನು ಕನ್ನಡ ಸಾಹಿತ್ಯ ಪರಿಷತ್ತಿನಿಂದ ೧೯೬೮ರಲ್ಲಿ ೨೩೧ ಪುಟಗಳ ಗೋವಿನ ಸಾಹಿತ್ಯವನ್ನು ಸಂಪೂರ್ಣವಾಗಿ ಅಚ್ಚು ಮಾಡಲಾಗಿದೆ. ಇದರಲ್ಲಿ 'ಗೋವಿನ ಕಥೆಗೆ ಸಂಬಂಧಿಸಿದ ೧) ಗೋವಿನಹಾಡು, ೨) ಗೋವಿಜಯ, ೩) ಯಕ್ಷಗಾನ ಗೋವಿನ ಕಥೆ, ೪) ಆಕಳ ಹಾಡು, ೫) ಕಮಲಿ ಹಾಡು, ೬) ಶಾಲೆಹಾಡು, ೭) ಕಾಮಧೇನು ಗೋವಿನಕಥೆ, ೮) ಗೋವಿನಹಾಡು ೯) ಬಹುಲೋಪಖ್ಯಾನ (ಸಂಸ್ಕೃತದ್ದು) ೧೦) ನಂದೋಪಖ್ಯಾನ ೧೧)ಗೋ ಸಾವಿತ್ರಿಸ್ತೋತ್ರಂ ಎಂದಿವೆ.'[೫೦]

ಈ ಹಾಡನ್ನು ಕಟ್ಟಿದ ಕವಿ ಗೌಣವಾಗಿದ್ದಾನೆ, ಆತನ ಕಾಲ, ಇತಿವೃತ್ತಿ, ಇತರೆ ವಿಚಾರಗಳಾವು ನಮಗೆ ಇಂದಿಗೂ ದೊರೆಯದ್ದಾಗಿವೆ. ಆದರೆ ಈ ಕಥೆ ಕೇಳುವುದೆಂದರೆ, ನಮ್ಮ ನಾಡಿನಲ್ಲಿ ಮಕ್ಕಳಿಂದ ಮುದುಕರವರೆಗೂ ಏನೋ ಒಂದು ಉತ್ಸುಕ, ಮಕ್ಕಳಿಗೆ ರಸದೌತಣದ ನೀತಿ ಕಾವ್ಯವಾದರೆ, ಹಿರಿಯರಿಗೆ ಅವರ ಮನಸ್ಸು ಕರಗಿ ಹೊಸ ಚಿಂತನೆಗೆ ಹಚ್ಚುವ ರೂಪಕವಾಗಿದೆ. ಈ ಕೃತಿಯ ರಚನೆಕಾರ ಯಾರೆಂದು ತಿಳಿಯದಾದರೂ ಕೃತಿಯ ಕೊನೆಯ ಪದ್ಯದಲ್ಲಿ ಉಲ್ಲೇಖಗೊಂಡ 'ಪರಂಧಾಮನೇ ಪದ್ಮನಾಭನೇ ಮದ್ದೂರ ಶ್ರೀನಾರಸಿಂಹನೇ ಮದ್ದುವರಗಳ ಕೊಡುವ ನಿಮಗೆಯು ನಮೋ ನಮೋ ಮಂಗಳಂ, ಗೋವಿನಹಾಡು ಸಂಪೂರ್ಣಂ ಜಯಮಂಗಳಂ ಮಹಾಶ್ರೀ ಎಂಬ ಪದ್ಯದಲ್ಲಿ 'ಮದ್ದೂರಿನ ನರಸಿಂಹನ ಹೆಸರು ಇರುವುದರಿಂದ ಅದನ್ನು ಬರೆದಾತ ಆ ಊರಿಗೆ ಸೇರಿದವನೋ ಇಲ್ಲವೇ ಆ ದೇವರ ಒಕ್ಕಲನೋ ಆಗಿರಬೇಕೆಂದು ಸಂಪಾದಕರು ಸಂಕಲಿಸಿದ್ದಾರೆ.'[೫೧] ಲಿಖಿತ ಕೃತಿಗಳ ಕವಿಯಾರೆಂದು ತಿಳಿಯದೆ ವಾಕ್ ಪರಂಪರೆಗೆ ಒಳಗಾದ ಪ್ರಾದೇಶಿಕ ಪಾಠಗಳನ್ನೊಳಗೊಂಡ ಜನಪದ ಕಾವ್ಯವನ್ನು ಹೀಗೆ ಸಂಪಾದಿಸುವುದು ಬಹಳ ಕಷ್ಟದ ಕೆಲಸ ಗೋವಿನಹಾಡು ಹಸ್ತಪ್ರತಿಗಳಲ್ಲಿ ದೊರಕುವ ಜಾನಪದ ಸ್ವರೂಪದ ಒಂದು ಕಥನಗೀತೆಯಾಗಿದ್ದು ಅದರ ಮೂಲ ಪಾಠವನ್ನು ಸಂಪಾದಕರು ಇಲ್ಲಿ ಒದಗಿಸಿದ್ದಾರೆ. ಈ ಜನಪದ ಲಘುಕಾವ್ಯವನ್ನು ಸಂಪಾದಿಸುವ ಮೂಲಕ ಡಿ.ಎಲ್.ಎನ್. ಅವರು ಮುಂದಿನವರಿಗೆ ಮಾದರಿಯಾಗಿದ್ದಾರೆ. ಯಾವುದೇ ಒಂದು ಪಾಠವು ಓದುಗರಿಗೆ ಪ್ರಿಯವೇ, ಅಪ್ರಿಯವೇ ಎಂಬುದು ಗ್ರಂಥ ಸಂಪಾದನೆ ವಿಚಾರದಲ್ಲಿ ತೀರಾ ಗೌಣವಾದ ಅಂಶ ಕವಿ ಬರೆದಿರಬಹುದಾದ ಮೂಲ ಪಾಠ ಯಾವುದಿರಬಹುದೆಂದು ಗ್ರಹಿಸುವ ಮೂಲಕ ಸಂಪಾದಕರು ಈ ಕೃತಿಯನ್ನು ರೂಪುಗೊಳಿಸಿದ್ದಾರೆ.

'ಇಲ್ಲಿ ಹೇಳಿರುವ ಕಥೆ ಬಹಳ ಹಳೆಯದು ಇತಿಹಾಸ ಸಮುಚ್ಚಯ ಎಂಬ ಪುರಾಣ ಕಥೆಗಳ ಪುಸ್ತಕದಲ್ಲಿ ಈ ಕಥೆ ಬರುತ್ತದೆ.'[೫೨] ಎಂದು ಶ್ರೀನಿವಾಸಚಾರ್ಯರು ಡಿ.ಎಲ್.ಎನ್ ಅವರಿಗೆ ತಿಳಿಸಿದ್ದು ಅಭ್ಯಾಸದಿಂದ ತಿಳಿದು ಬಂದಿದೆ. ಈ ಗ್ರಂಥ ಮೂಲದಲ್ಲಿ

ಸಂಸ್ಕೃತ ಭಾಷೆಯಲ್ಲಿದ್ದು ಇದರ ೨೦ನೇ ಅಧ್ಯಾಯಕ್ಕೆ 'ಬಹುಲೋಪಾಖ್ಯಾನ' ಎಂದು ಹೆಸರಿಸಿದೆ. ಬಹುಲಾ ಎಂಬುದು ಹಸುವಿನ ಹೆಸರು, 'ಕಾಮರೂಪಿ' ಎಂಬುದು ಹುಲಿಯ ಹೆಸರು ಕಥೆ ಎಲ್ಲಾ ಬಹುಮಟ್ಟಿಗೆ ಗೋವಿನ ಹಾಡಿನಲ್ಲಿ ಇರುವಂತೆಯೇ ಇದ್ದು ಈ ಕಥೆಯನ್ನು ಮೊದಲು ಭೀಷ್ಮಾಚಾರ್ಯರು ಧರ್ಮರಾಯನಿಗೆ ಬೋಧಿಸಿದರೆಂದು ತಿಳಿದು ಬಂದಿದೆ.

"ಈ ಸಂಗ್ರಹದಲ್ಲಿ ಸೇರ್ಪಡೆಗೊಂಡ ಪದ್ಯಗಳ ಕುರಿತು ಡಿ.ಎಲ್.ಎನ್. ಅವರು ಅಭಿಪ್ರಾಯಿಸುತ್ತಾ 'ಪೇಟೆಯಲ್ಲಿ ಮಾರುವ ಗೋವಿನ ಹಾಡು ಎಂಬ ಪುಸ್ತಕವನ್ನು ಅನೇಕರು ನೋಡಿರಬಹುದು ಅದರಲ್ಲಿರುವ ತಪ್ಪುಗಳನ್ನು ಬೇರೆ ಎರಡು ಕೈಬರಹದ ಪ್ರತಿಗಳ ಸಹಾಯದಿಂದ ತಿದ್ದಿ ಇಲ್ಲಿ ಮುದ್ರಿಸಿ ಮೊದಲು ಇದನ್ನು ಹೇಳಿದ ಕವಿ, ಇದರಲ್ಲಿ ಎಷ್ಟು ಪದ್ಯಗಳನ್ನು ಬಳಸಿದ್ದನೂ? ತಿಳಿಯದು, ಈಚಿನವರು ಅದೇ ಧಾಟಿಯಲ್ಲಿ ಪದ್ಯಗಳನ್ನು ಕಟ್ಟಿ ನಡು ನುಡುವೆ ಸೇರಿಸಿದ್ದಾರೆ. ಹೀಗೆ ಸೇರಿರುವ ಪದ್ಯಗಳು ಯಾವುವು ಎಂದು ಬೆರಳಿಟ್ಟು ತೋರಿಸುವುದಕ್ಕಾಗುವುದಿಲ್ಲ ಆದರೆ ಅವು ಇಂಥವೇ ಇರಬಹುದೆಂದು ಊಹಿಸಬಹುದು.'[೫೩] ಎಂದಿದ್ದಾರೆ. ಈ ವಿಷಯಕ್ಕೆ ಪೂರಕವಾಗಿ ಕೃತಿಯ ಕೊನೆಗೆ ನೀಡಿದ ಸೇರ್ಪಡೆ ಪದ್ಯಗಳನ್ನು ಪರಿಗಣಿಸಬಹುದಾಗಿದೆ.

**ಕಥಾ ಹಂದರ**

ಈ ದೀರ್ಘಕಾವ್ಯದ ಕಾಲ ನಿಖರವಾಗಿ ನಮಗೆ ಗೊತ್ತಿಲ್ಲದ್ದರಿಂದ ಜಾನಪದ ಸಾಹಿತ್ಯವೆ ಒಂದು ದೃಷ್ಟಿಯಿಂದ ಕಾಲಾತೀತವಾದ ಸಂದರ್ಭದಲ್ಲಿ ಬರುವಂತಹದ್ದಾಗಿದೆ. ಆದರೆ ಈ ಕಾವ್ಯ ಪಠ್ಯಪುಸ್ತಕವಾದ ಮೇಲೆ ಇದರ ಅರ್ಥ ಒಂದು ನೀತಿ ವಾಕ್ಯಕ್ಕೆ ಸೀಮಿತವಾಗಿದೆ. 'ಸತ್ಯವೇ ಪರಮಾತ್ಮನೆಂದಾ ಪುಣ್ಯಕೋಟಿಯ ಕಥೆ ಇದು ಎಂದು ಎಲ್ಲಾ ಕಾಲಕ್ಕೂ ಅಚ್ಚಳಿಯದೇ ಉಳಿಯುವ ಸಾರ ಈ ಕಥೆಯಾಗಿದೆ.

ಈ ಕಾವ್ಯದಲ್ಲಿ ಪ್ರಕೃತಿ ವರ್ಣನೆ, ಪ್ರಕೃತಿಯಿಂದ ಪ್ರತ್ಯೇಕವಾಗದ ಕೃಷಿ ಪ್ರಧಾನವಾದ ಮಾನವ ಸಂಸ್ಕೃತಿಯ ಚಿತ್ರಣವೂ ಇದೆ. ಗೊಲ್ಲ, ಗೊಲ್ಲನು ಹೆಸರಿಸಿದ ಹಸುಗಳು, ಅವನ ವೃತ್ತಿ ಬದುಕು ಒಂದು ಹೊಸ ಪ್ರಪಂಚವೇ ಇಲ್ಲಿ ಕಾವ್ಯದುದ್ದಕ್ಕೂ ತೆರೆದುಕೊಂಡಿದೆ. ಇಲ್ಲಿ ಮುಖ್ಯಪಾತ್ರಗಳಾಗಿ ಪುಣ್ಯಕೋಟಿ ಎಂಬ ಗೋವು ಮತ್ತು ಅರ್ಬ್ಯುತನೆಂಬ ಹೆಸರಿನಲ್ಲಿ ಹುಲಿ ಚಿತ್ರಿತಗೊಂಡಿದೆ ಇಲ್ಲಿ ಹಸುವನ್ನು ಪುಣ್ಯಕೋಟಿಯಾಗಿ ಚಿತ್ರಿಸಿದರೆ, ಅದರಿಗೆದರಿನ ಹುಲಿಯನ್ನು (ವ್ಯಾಘ್ರ) ದುಷ್ಟಶಕ್ತಿಯನ್ನಾಗಿ ಚಿತ್ರಿಸಿಕೊಂಡಿದ್ದೇವೆ. ಭಕ್ಷಿಸಲು ಮುಂದಾಗಿದ್ದು ಹಸಿವನ್ನು ನೀಗಿಸಿಕೊಳ್ಳಲು ಹಸು ಬೆಟ್ಟದ ಮೇಲೆ ಎಳೆಯ ಹುಲ್ಲು ಮೇಯಲು ಹೋಗಿದ್ದು

ಹಸಿವನ್ನು ನೀಗಿಸಿಕೊಳ್ಳಲು ಇಲ್ಲಿ ಹಸಿವಿನ ಚಿತ್ರಣ ಬಿತ್ತರಿಸುವುದಕ್ಕೆ ಕಾವ್ಯ ನಿರೂಪಣೆಗೊಳ್ಳುವುದರ ಮೂಲಕ ಮಾನವನಲ್ಲಿರುವ ಸೌಮ್ಯ ವ್ಯಾಘ್ರತೆಯ ರೂಪವನ್ನು ಕಟ್ಟಿಕೊಳ್ಳಬಹುದಾಗಿದೆ.

'ಖಂಡವಿದೆಕೋ ರಕ್ತವಿದೆ ಕೋ
ಗುಂಡಿಗೆಯ ಕೊಲ್ಬೂಗಳಿದೆ ಕೋ
ಉಂಡು ಸಂತಸಗೊಂಡು ನೀ ಭೂ
ಮಂಡಲದೊಳು ಬಾಳಯ್ಯನೆ'[೫೪]

ಎಂಬ ಪುಣ್ಯಕೋಟಿಯ ಮಾತಿನಲ್ಲಿ ಖಂಡ, ಮಾಂಸ, ರಕ್ತಗಳು ಬಂದರೂ ಆಕ್ರೋಶವಿಲ್ಲ, ಉಂಡು ಸಂತಸದಿಂದಿರು ಎಂದು ಹೇಳುವಷ್ಟು ಪ್ರೀತಿ ಇದೆ. ಕೊನೆಗಳಿಗೆಯಲ್ಲಿ ಹುಲಿಯ ಎದುರು ಬಂದು ನಿಲ್ಲುವ ಮೊದಲು ತನ್ನ ಕುರುಹುವಿಗೆ ಹುಲಿಯ ಬಗ್ಗೆ ಎಚ್ಚರದ ಮಾತುಗಳನ್ನು ಹೇಳಲು ಮರೆಯುವುದಿಲ್ಲ ಹಸು.

'ಕಟ್ಟಕಡೆಯಲಿ ಮೇಯದೀರು
ಬೆಟ್ಟದೊತ್ತಿಗೆ ಹೋಗದೀರು
ದುಷ್ಟ ವ್ಯಾಘ್ರಗಳುಂಟು ಅಲ್ಲಿ
ನಟ್ಟನಡುವೆ ಬಾರಯ್ಯನೆ'[೫೫]

ಎಂಬ ಈ ಮಾತಿನಲ್ಲಿ ಅನಿಶ್ಚತತೆಯೇ ಅದರ ಶಕ್ತಿಯಾಗಿದೆ ಸಾವು ಸುತ್ತಗಟ್ಟಿ ನಿಂತಿರುವಾಗಿ ಬದುಕಿ ಉಳಿಯವುದೇ ಮೌಲ್ಯವೆಂದರೆ ಬದುಕನ್ನು ಪ್ರೀತಿಸುವುದು ರೂಪಕವಾಗಿ ಕಂಡು ಬಂದಿದೆ.

ಕಾವ್ಯದ ಕೊನೆಗೆ ಪುಣ್ಯಕೋಟಿಯನ್ನು ಕೊಲ್ಲಲಾರದ ವ್ಯಾಘ್ರನ ಪಾತ್ರ ತಾನೇ ಹಾರಿನೆಗೆದು ಪ್ರಾಣಬಿಡುತ್ತದೆ. ಇಲ್ಲಿನ ಚಿತ್ರಣ ಅತಿಮುಖ್ಯವಾಗಿದ್ದು, ಇಡೀ ಕಾವ್ಯಕ್ಕೆ ಮುಖ್ಯಭೂಮಿಕೆ ಹುಲಿಯ ಸಾವು ಎಲ್ಲರ ಮನಸ್ಸನ್ನು ವಿಚಲಿತಗೊಳಿಸುವ ಸನ್ನಿವೇಶದ್ದಾಗಿದೆ. 'ಇಲ್ಲಿ 'ಜೀವೋ ಜೀವಸ್ಯ ಜೀವನಂ' ಎಂಬ ಸೂತ್ರದಂತೆ ಜೀವನ ನಡೆದರೆ ಅದು ಪ್ರಕೃತಿ ಮಾನವ ಮೌಲ್ಯದಲ್ಲಿ ಆಕಳು ತಿನ್ನುವದು ಹುಲ್ಲನ್ನು ಹುಲ್ಲು ತಿಂದ ಆಕಳನ್ನು ಹುಲಿ ತಿಂದರೆ ಪ್ರಕೃತಿಯ ದೃಷ್ಟಿಯಿಂದ ಅದು ತಪ್ಪಲ್ಲ, ಆದರೆ ಪುಣ್ಯಕೋಟಿ ತಾಯಿಯಾಗಿರುವುದರಿಂದ ಬೇರೆಯವರ ಹಸಿವನ್ನು ತಿಳಿಯುವ ಶಕ್ತಿ ಅದಕ್ಕಿದೆ. ಈ ಪ್ರಜ್ಞೆ ಒಮ್ಮೆ ಉದಯವಾದರೆ ಹುಲಿ ಹುಲಿಯಾಗಿ ಉಳಿಯುವುದಿಲ್ಲ ಅಹಿಂಸೆಯೇ ಅತ್ಯಂತಿಕ ಅರ್ಥವನ್ನು ಹುಲಿಯ ಸಾವು ಸಾಂಕೇತಿಕವಾಗಿ ಧ್ವನಿಸುತ್ತದೆ.'[೫೬]

ಒಟ್ಟಾರೆಯಾಗಿ ಮಾನವನಲ್ಲಿರುವ ಒಳ್ಳೆಯ, ಕೆಟ್ಟ ಗುಣಗಳನ್ನು ತದ್ರೂಪವಾಗಿ ಪಾರದರ್ಶಕ ರೂಪದಲ್ಲಿ ನೋಡಿಕೊಳ್ಳುವ ಚಿತ್ರಣ ಈ ಕಾವ್ಯದಿಂದ ತಿಳಿದುಬರುತ್ತದೆ.

'ಸತ್ಯವೇ ನಮ್ಮ ತಾಯಿ–ತಂದೆ' ಎಂಬ ಧ್ಯೇಯವನ್ನು ಪ್ರತಿಪಾದಿಸುವ ಈ ಕಥೆ ನಮ್ಮ ಜೀವನದ ಮೂಲ ಸೂತ್ರದ ವಿವರಣೆ ಎಂದೇ ಹೇಳಬಹುದು. ಕನ್ನಡ ಸಾಹಿತ್ಯದಲ್ಲೆ ಇಂತಹದ್ದೊಂದು ಅಪೂರ್ವ ರಚನೆ ಇರುವುದು ನಮ್ಮ ನಿಮ್ಮೆಲ್ಲರ ಹೆಮ್ಮೆಯ ಸಂಗತಿಯಾಗಿದೆ.

**೩.೧೦. ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ**

ಕನ್ನಡ ಗ್ರಂಥ ಸಂಪಾದನಾ ಕ್ಷೇತ್ರಕ್ಕೆ ಸುಮಾರು ೨೦೦ ವರ್ಷಗಳ ಚರಿತ್ರೆಯಿದೆ. 'ಟೆಕ್ಸ್ಟುವೆಲ್‌ಕ್ರಿಟಿಸಿಜಂ' ಎಂಬ ಆಂಗ್ಲ ಪದದ ಸಂವಾದಿ ರೂಪ ಗ್ರಂಥಸಂಪಾದನೆ ಎಂದಿದೆ. ಈ ಪ್ರಕ್ರಿಯೇ ಕನ್ನಡದಲ್ಲಿ ಆರಂಭವಾದದ್ದು ಪಾಶ್ಚಾತ್ಯ ವಿದ್ವಾಂಸರಿಂದ. ೧೯ನೇ ಶತಮಾನದಲ್ಲಿ ಕನ್ನಡ ಗ್ರಂಥ ಸಂಪಾದನೆಗೆ ಶ್ರಮಿಸಿದವರಲ್ಲಿ ಕರ್ನ್‌ಲ್‌ಮೆಂಕೆಂಜಿ, ಹರ್ಮನ್ ಮೊಗ್ಲಿಂಗ್, ವರ್ಥ, ಸ್ಯಾಂಡರ್ಸನ್, ಜೆಸ್ಟೀವನ್‌ಸನ್, ಎಫ್.ಕಿಟೆಲ್ ಮತ್ತು ಬಿ.ಎಲ್.ರೈಸ್ ಪ್ರಮುಖರಾಗಿದ್ದಾರೆ. ೧೮೪೮ರಲ್ಲಿ ಮೊಗ್ಲಿಂಗ್ ಅವರು, 'ಬಿಬ್ಲಿಯೋಥಿಕಾ ಕರ್ನಾಟಿಕಾ' ಎಂಬ ಮಾಲಿಕೆಯಲ್ಲಿ ಜೈಮಿನಿ ಭಾರತ ಕುಮಾರವ್ಯಾಸ ಭಾರತ, ದಂತಹ ಇತರೆ ಕೃತಿಗಳನ್ನೂ ಪರಿಷ್ಕರಿಸಿ ಪ್ರಕಟಿಸಿದಂತೆ ೧೮೬೯ರ ಹೊತ್ತಿಗೆ ವರ್ಥ್ 'ಪ್ರಾಕ್ಕಾವ್ಯ ಮಾಲಿಕೆ' ಎಂಬ ಗ್ರಂಥವನ್ನು ಹೊರತಂದರು ಈ ಹಾದಿಯಲ್ಲೇ ನಡೆದ ಜೆ.ಗ್ಯಾರೆಟ್ ಅವರು ಪ್ರಥಮ ಬಾರಿಗೆ ಶಬ್ದಮಣಿ ದರ್ಪಣವನ್ನು ಸಂಗ್ರಹಿಸಿ ಪ್ರಕಟಣೆಗೆ ಅಣಿಮಾಡಿದ್ದರು.

ಕನ್ನಡದಲ್ಲಿ ಶಾಸ್ತ್ರೀಯ ಗ್ರಂಥ ಸಂಪಾದನೆ ಆರಂಭವಾದದ್ದು ಕಿಟೆಲ್ ಅವರಿಂದ ೧೮೭೨ ರಲ್ಲಿ ಅವರು ಒಂಭತ್ತು ಹಸ್ತಪ್ರತಿಗಳ ಸಹಾಯದಿಂದ ಶಬ್ದಮಣಿದರ್ಪಣವನ್ನು ಪ್ರಕಟಿಸಿದರು. ಹಾಗೆಯೇ ಹದಿನಾಲ್ಕು ಹಸ್ತಪ್ರತಿಗಳ ಸಹಾಯದಿಂದ ನಾಗವರ್ಮನ ಛಂದೋಂಬುಧಿಯನ್ನು ಪ್ರಕಟಿಸಿದರು. ಇಂದಿಗೂ ಕನ್ನಡ ಗ್ರಂಥಸಂಪಾದನೆಯ ಹಾದಿ ಈ ಮಹನೀಯರು ಹಾಕಿಕೊಟ್ಟ ಹಾದಿಯಲ್ಲಿ ಸಾಗುತ್ತಿದೆ.

'ಶಬ್ದಮಣಿದರ್ಪಣ' ಈ ಮಹತ್ವಪೂರ್ಣ ಕೃತಿಯನ್ನು ಡಿ.ಎಲ್.ಎನ್. ಅವರು ತಮ್ಮ ಸಂಪಾದನಾ ಕಾಲಕ್ಕೆ ಆವರೆಗೂ ರೂಪುಗೊಂಡು ಬಂದ ಜೆ.ಗ್ಯಾರೆಟ್, ಕಿಟೆಲ್, ಪಂಜೆಮಂಗೇಶರಾಯರು, ಮದ್ರಾಸ್ ವಿಶ್ವವಿದ್ಯಾಲಯದ ಪ್ರಕಟಣೆ ಎ.ವೆಂಕಟರಾಮು, ಎಚ್.ಶೇಷಯ್ಯಂಗಾರ್ ಅವರುಗಳು ಪ್ರಕಟಿಸಿದ ಕೃತಿಗಳಲ್ಲಿ ಹಲವಾರು ದೋಷಗಳಿರುವುದನ್ನು ಗಮನಿಸಿ ಸ್ಖಾಲಿತ್ಯ ದೋಷಗಳಿಂದ ಆದಷ್ಟು ಮುಕ್ತವಾದ ಪಾಠವೊಂದನ್ನು ಕೊಡುವ ದೃಷ್ಟಿಯಿಂದ ಈ ಕೃತಿಯ ಸಂಪಾದನೆಯಲ್ಲಿ ತೊಡಗಿದ್ದರು. ೧೯೨೦ರಲ್ಲಿ ಪಂಜೆಯವರು ಕ.ಸಾ.ಪ.ದ ವತಿಯಿಂದ ಸಂಪಾದಿಸಿದ ಪ್ರಕಟಣೆಯಲ್ಲಿ ನಿಟ್ಟೂರು ನಂಜಯ್ಯನ ವೃತ್ತಿ

ಬದಲು ಲಿಂಗಣಾರಾಧ್ಯ ವಿರಚಿತ ಆವೃತ್ತಿ ಸೇರಿತ್ತು. ಇದೇ ರೀತಿ, ಎ.ವೆಂಕಟರಾವ್ ಮತ್ತು ಎಚ್.ಶೇಷ್ಯಾ ಅಯ್ಯಂಗಾರ್ ರವರು ಸೇರಿ ಸಂಪಾದಿಸಿ ಮದ್ರಾಸ್ ವಿ.ವಿ.ಯಿಂದ ಪ್ರಕಟಿಸಿದ (೧೯೩೦) ಕೃತಿ ಇವೆಲ್ಲವುಗಳನ್ನು ಗಮನಿಸಿದ ಡಿ.ಎಲ್.ಎನ್. ಅವರು ೧೯೫೮ರ ಹೊತ್ತಿಗೆ ಈ ಎಲ್ಲಾ ಕೃತಿಗಳನ್ನು ಇರಿಸಿಕೊಂಡು, ಎರಡು ಓಲೆ ಪ್ರತಿ, ಎರಡು ಮುದ್ರಿತ ಪ್ರತಿಗಳ ಸಹಾಯದಿಂದ ಈ ಕೃತಿಯನ್ನು ಮೊದಲಬಾರಿಗೆ ಪರಿಷ್ಕರಿಸಿ ಪ್ರಕಟಿಸಿದರು. ಅವುಗಳಲ್ಲಿ ಕ್ರಮವಾಗಿ ಕ, ಖ ಹಾಗೂ ಕಿಟೆಲ್ ಮತ್ತು ಪರಿಷತ್ ಪ್ರತಿ ಎಂದು ಗುರುತಿಸಿದ್ದರು. 'ಶ್ರವಣಬೆಳಗೊಳದ ಓಲೆಯ ಪ್ರತಿ ಹಾಗೂ ಡಿ.ಎಲ್.ಎನ್. ತಮ್ಮ ಹತ್ತಿರವಿದ್ದ ಪ್ರತಿ, ಕಿಟೆಲ್‌ರ ಮುದ್ರಿತ ಮೂರನೇ ಆವೃತ್ತಿ ಪ್ರತಿ, ಕ.ಸಾ.ಪ.ದ ಮುದ್ರಿತ ಪ್ರತಿ, ಇವುಗಳನ್ನೆಲ್ಲ ಇಟ್ಟುಕೊಂಡು ವೈಜ್ಞಾನಿಕವಾಗಿ ಪರಿಷ್ಕರಿಸಿ ಪ್ರಕಟಿಸಿದ್ದರು. ಪಾಠ ಸ್ವೀಕರಣದ ವಿಚಾರದಲ್ಲಿ ಮುಖ್ಯವಾಗಿ 'ಕ' ಪ್ರತಿಯನ್ನು ಅವಲಂಬಿಸಿದ್ದು, ಪಾಠ ಪರಿಷ್ಕರಣೆ, ಪಾಠಸಮಸ್ಯೀಕರಣವನ್ನು ಗುರುತಿಸುವಲ್ಲಿನ ಇವರ ಶ್ರಮ ಎದ್ದುಕಂಡದ್ದಾಗಿದೆ.'[೫೭]

ಒಟ್ಟು ಈವರೆಗೆ ೧೮ ಮುದ್ರಣ ಕಂಡ ಈ ಪ್ರತಿಯು ೩೨೬ ಪುಟಗಳಲ್ಲಿ ಸಂಕಲಿಸಿದ್ದಾಗಿದೆ. ವಿಷಯಾನುಕ್ರಮಣಿಕೆಯಾಗಿ ೩೩ ಪುಟಗಳಲ್ಲಿ ಬಿತ್ತರಗೊಂಡ ಪೀಠಿಕಾ ಭಾಗವು ಕೃತಿಯ ಕುರಿತ ಸಂಪಾದಕರ ಮಾತುಗಳು, ಮುದ್ರಣಕ್ಕೆ ಬಳಸಿಕೊಂಡ ಪ್ರತಿಗಳ ಸಂಕಲನ ವಿಚಾರವಾಗಿ 'ಮಾತೃಕೆಗಳು' ಎಂದು ಗುರುತಿಸಿ ವಿವರಿಸಿದ್ದಾರೆ. ಇವುಗಳನ್ನು ಕ. ಖ. ಕಿ. ಪದಗಳೆಂದು ಗುರುತಿಸಿ ವಿವರಿಸಿದ್ದು ಕಂಡುಬಂದಿದೆ. ಮುಂದೆ ಪಾಠ ಸಮಸ್ಯೆಯ ವಿಚಾರ, ಬೇರೊಂದು ಪರಿಷ್ಕರಣೆ ವಿಚಾರ, ಪ್ರಯೋಗಗಳ ಆಕರ, ಕೇಶಿರಾಜನ ವ್ಯಕ್ತಿತ್ವ ನಂತರದಾಗಿ ನಾಲ್ಕನೇ ಮುದ್ರಣದವರೆಗೆ(ಅವರ ಜೀವಿತಾವಧಿ) ಆವರೆಗೂ ಬಂದ ಪಾಠಸಮಸ್ಯೆಗಳ ಕುರಿತು ಓದುಗರ ಪ್ರತಿಕ್ರಿಯೆಗೆ ಸ್ಪಂದಿಸಿದ ವಿಚಾರಗಳ ಉಲ್ಲೇಖ ಮೂಡಿಬಂದದ್ದಾಗಿವೆ. ಮುಂದುವರೆದು ೩೩ ನೇ ಪುಟದಿಂದ ೩೨೫ನೇ ಪುಟದವರೆಗೆ ಪೀಠಿಕಾಭಾಗದ ೧೦ ಸೂತ್ರಗಳಿಂದ ಅವ್ಯಯ ಪ್ರಕರಣದ ಸಮಾಪ್ತಿ ವಾಕ್ಯಗಳವರೆಗೆ ಒಟ್ಟು ೨೯೩ ಪುಟಗಳಲ್ಲಿ ೩೩೭, ಸಮಾಪ್ತಿವಾಕ್ಯಗಳನ್ನು ಪರಿಗಣಿಸಿ ಒಟ್ಟು ೩೪೨ ಸೂತ್ರಗಳನ್ನು ೧೦ ಸಂಧಿ ಪ್ರಕರಣಗಳಲ್ಲಿ ರೂಪಿಸಿದ್ದು ಅಭ್ಯಾಸದ ಮೂಲಕ ತಿಳಿದುಬಂದಿದೆ.

'ಕನ್ನಡ ಗ್ರಂಥ ಸಂಪಾದನೆ ದೃಷ್ಟಿಯಿಂದ ಡಿ.ಎಲ್.ಎನ್. ಅವರಿಗೆ ಶಾಸ್ತ್ರೀಯ ಗ್ರಂಥ ಸಂಪಾದಕತ್ವದ ನೆಲೆ ಬೆಲೆಯನ್ನು ತಂದುಕೊಟ್ಟ ಕೃತಿ ಶಬ್ದಮಣಿದರ್ಪಣ. ಎರಡು ತಾಡೋಲೆ ಎರಡು ಮುದ್ರಿತ ಪ್ರತಿಗಳಿಂದ ಇದನ್ನು ಸಂಪಾದಿಸಿ ಪ್ರಕಟಿಸಿದ್ದು ಇವರ ವಿದ್ವತ್ತಿನ ಪ್ರತೀಕವಾಗಿದೆ. ಡಿ.ಎಲ್.ಎನ್. ಅವರ ಹಳಗನ್ನಡ ವಿದ್ವತ್ತು ಊರ್ಧ್ವಮುಖಿಯಾಗಿರುವುದು ಶಬ್ದಮಣಿದರ್ಪಣದಲ್ಲಿಯ ಪಾಠ ಸಮಸ್ಯೆಗಳನ್ನು ನಿರ್ಣಯಿಸುವ ಹಂತದಲ್ಲಿ. ಇಲ್ಲಿ ಕವಿ ಲಿಖಿತ ಪ್ರತಿಯ ಪಾಠವನ್ನು ದೊರಕುವ ಸಾಮಗ್ರಿಮುಖಿ ಸಹಾಯದಿಂದ,

ಸಾಧ್ಯವಾಗದಿದ್ದಾಗ ಮೂಲಪ್ರತಿಗೆ ಹತ್ತಿರವಾದ ಪಾಠಗಳ ನಿರ್ದೇಶನದ ಸಹಾಯದಿಂದ ಇಲ್ಲವೇ ಅರ್ಥದ ದೃಷ್ಟಿಯಿಂದ ಸ್ಪಷ್ಟತೆ ಮತ್ತು ಸ್ಖಾಲಿತ್ಯ ಮುಕ್ತತೆಯಿಂದ ಪಾಠ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಪ್ರಾಯಶಃ ಈ ಮೂರು ಮಗ್ಗಲುಗಳಿಂದ ಕೃತಿಯ ಪಾಠ ನಿರ್ಣಯ ಮಾಡುವುದೆಂದರೆ ಶಬ್ದಮಣಿದರ್ಪಣಕ್ಕೆ ಲಕ್ಷ್ಯ ಹಾಗೂ ಲಕ್ಷಣ ಸಾಮಗ್ರಿಗಳಾಗಿ ನಿಂತುಕೊಂಡ ಹತ್ತನೇ ಶತಮಾನದ ಹಳಗನ್ನಡ ಕೃತಿಗಳ ಸಮಗ್ರ ಅಧ್ಯಯನವೇ ಬೇಕಾಗುತ್ತದೆ. ಇದನ್ನು ಪ್ರಯೋಗಗಳ ಆಕರದ ಹಂತದಲ್ಲಿ ಡಿ.ಎಲ್.ಎನ್. ಸಮರ್ಥವಾಗಿ ಪೂರೈಸಿದ್ದು ಕಂಡುಬಂದಿದೆ.'[೫೮]

ಡಿ.ಎಲ್.ಎನ್. ಈ ಸಂಪಾದನಾ ಕೃತಿಯಲ್ಲಿ ಮೂಲಪಾಠದ ನಿರ್ಣಯ, ಪ್ರಯೋಗಗಳ ಆಕರ, ಕೇಶಿರಾಜನ ಕಾಲ, ವ್ಯಕ್ತಿತ್ವಗಳಿತ್ಯಾದಿಗಳನ್ನು ಬಹಳ ಅಚ್ಚುಕಟ್ಟಾಗಿ ವಿವೇಚಿಸಿದ್ದಾರೆ. ಆದುದರಿಂದಲೇ ಈ ಪರಿಷ್ಕರಣೆ ಹಲವು ಮುದ್ರಣಗಳನ್ನು ಕಂಡಿದೆ. ಇಲ್ಲಿ ಡಿ.ಎಲ್.ಎನ್. ಅವರು ಪಾಠದೋಷ ಗಮನಿಸಿ ಸ್ಖಾಲಿತ್ಯ ದೋಷಗಳಿಂದ ಮುಕ್ತವಾದ ಪಾಠವನ್ನೆ ಕೂಡುವ ದೃಷ್ಟಿಯಿಂದ ಸಂಪಾದನೆ ಮಾಡಿದ್ದಾರೆ. ಹೀಗೆ ಸಂಪಾದಿಸಲ್ಪಟ್ಟ ಇವರ ಎರಡನೇಯ ಮುದ್ರಣದಲ್ಲಿ ಕಾಣಿಸಿಕೊಂಡಿದ್ದ ಹಲವು ತಪ್ಪುಗಳನ್ನು ಗುರುತಿಸಿ ಎಂ.ಎಂ.ಕಲಬುರ್ಗಿ ಅವರು 'ದರ್ಪಣಾವಲೋಕನ' ಎಂಬ ಹೆಸರಿನಲ್ಲಿ ಎರಡು ಲೇಖನಗಳು ಬರೆದಿದ್ದಾರೆ ಅದನ್ನು ಕುರಿತು ಡಿ.ಎಲ್.ಎನ್. ಅವರು ಶಬ್ದಮಣಿದರರ್ಪಣದ ಮೊದಲೆರಡುಪ್ರಕರಣಗಳಲ್ಲಿರುವ ವಾಸ್ತವಿಕ ಸ್ಖಾಲಿತ್ಯಗಳನ್ನು ಹಾಗೂ ತಮಗೆ ಸ್ಖಾಲಿತ್ಯಗಳೆಂದು ತೋರಿ ಬಂದವುಗಳನ್ನು ಒಪ್ಪಿದ್ದಾರೆ. ಸೂತ್ರವೃತ್ತಿ ಟೀಕೆಗಳಲ್ಲಿ ಹಂಚಿಹೋಗಿರುವ ಸ್ಖಾಲಿತ್ಯಗಳನ್ನೆಲ್ಲಾ ಅವರು ತುಂಬಾ ಶ್ರಮವಹಿಸಿ ಕಂಡುಹಿಡಿದಿದ್ದಾರೆ. ಇಷ್ಟೇ ಅಲ್ಲದೇ ಮುಂದಿನ ಪ್ರಕರಣಗಳಲ್ಲಿ ಅಡಗಿರುವ ತಪ್ಪುಗಳನ್ನು ಅವರು ಎಚ್ಚರಿಕೆಯಿಂದ ಪರಿಶೀಲಿಸಿ ಅವುಗಳನ್ನೆಲ್ಲಾ ಪಟ್ಟಿಮಾಡಿ ಡಿ.ಎಲ್.ಎನ್. ಅವರಿಗೆ ಕಳುಹಿಸಿಕೊಡುವ ಕೆಲಸವನ್ನು ಮಾಡಿದ್ದರು. ಇದನ್ನು ಡಿ.ಎಲ್.ಎನ್. ಅವರು ಕೃತಿಯ ಮೂರನೇ ಮುದ್ರಣದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿದ್ದು ಕಂಡುಬಂದಿದೆ. ಕಲ್ಬುರ್ಗಿ ಅವರು ಬರೆದಿರುವ, ಲೇಖನಗಳಲ್ಲಿ ಕಳುಹಿಸಿದ ಪಟ್ಟಿಯಲ್ಲಿ ಅಚ್ಚಿನ ತಪ್ಪುಗಳೇ ಬಹುಸಂಖ್ಯಾತವಾಗಿವೆ. ಇವುಗಳನ್ನು ಡಿ.ಎಲ್.ಎನ್. ಅವರು ಕೃತಜ್ಞತೆಯಿಂದ ಸ್ವೀಕರಿಸಿ ಕಲ್ಬುರ್ಗಿಯವರನ್ನು ಪ್ರಶಂಶಿಸಿದ ವಿವರವೂ ಅಧ್ಯಯನದಿಂದ ತಿಳಿದುಬಂದಿದೆ. ಅಲ್ಲದೆಯೇ ಕಲಬುರ್ಗಿ ಅವರ ಲೇಖನಗಳ ಕಾರಣದಿಂದ ಶಬ್ದಮಣಿದರ್ಪಣದ ಮುದ್ರಣ ಅವರ ಹಿಂದಿನ ಮುದ್ರಣಕ್ಕಿಂತ ಹೆಚ್ಚು ಸಮಪರ್ಕವಾಗಿದೆ ಎಂದು ಭಾವಿಸಿರುವುದು ಅವರ ದೊಡ್ಡಗುಣವೆನಿಸಿದೆ. ಮುಂದೆ ಕಲ್ಬುರ್ಗಿಯವರು ಆಕ್ಷೇಪಗಳಿಗೆ ಹಂ.ಪ.ನಾ. ಅವರು ಪ್ರತಿಕ್ರಿಯಿಸಿದ್ದು ಇಲ್ಲಿ ಈ ಇರ್ವರ ಆಕ್ಷೇಪಣೆಗಳನ್ನು ಡಿ.ಎಲ್.ಎನ್ ಅವರು ಸ್ವೀಕರಿಸಿ ಈ ಈರ್ವರ ಸಮಸ್ಯೆಗಳಿಗೆ ಉತ್ತರಿಸುವ ಮೂಲಕ ಅವರ ಅನ್ವೇಷಣ ಬುದ್ಧಿಗೆ ಮೆಚ್ಚಿಕೊಂಡಾಡಿದ್ದು

ಉಂಟು. ತಮ್ಮ ದೋಷಗಳನ್ನು ಎತ್ತಿತೋರಿದವರನ್ನು ಕೊಂಡಾಡುವ ಸಾಮರ್ಥ್ಯ ಒಬ್ಬ ಪರಿಪೂರ್ಣ ಸಂಶೋಧಕನಿಗೆ ಮಾತ್ರ ಸಾಧ್ಯ ಈ ಮಾತು ಡಿ.ಎಲ್.ಎನ್. ಅವರಿಗೆ ಹೊರತಾಗಿಲ್ಲದಾಗಿದೆ.

'ನಂತರ ೧೯೪೯ರಲ್ಲಿ 'ಶಬ್ದಮಣಿದರ್ಪಣಂ' ಎಂಬ ಕನ್ನಡದ ಬೃಹತ್ ವ್ಯಾಕರಣ ಗ್ರಂಥವನ್ನು ಸಂಪಾದಿಸಿರುವ ಡಿ.ಎಲ್.ಎನ್ ಅವರು ಪೂರ್ವದ ಎಲ್ಲಾ ಗ್ರಂಥ ಪರಿಷ್ಕರಣೆಗಳಿಗಿಂತಲೂ ಗುಣಮಟ್ಟವಾಗಿ ಉತ್ತಮಿಕೆಯನ್ನು ಸಾಧಿಸಿದ್ದಾರೆ. ಇದು ವಿದ್ವತ್ ವಲಯದಲ್ಲಿ ಹೆಚ್ಚು ಚರ್ಚೆಗೆ ಗ್ರಾಸವಾದ, ಅಷ್ಟೇ ಜನ ಮನ್ನಣೆ ಪಡೆದ ಕೃತಿಯಾಗಿದೆ.'[೫೯]

'ಶಬ್ದಮಣಿದರ್ಪಣಂ ಕಾವ್ಯವೂ ಹೌದು, ಶಾಸ್ತ್ರವೂ ಹೌದು, ಕಾವ್ಯ ಲೇಪನವನ್ನು ಪಡೆದಿರುವ ಶಾಸ್ತ್ರವೆಂದರೂ ಸರಿಯೇ ಅದು ಒಳಗಿರುವ ಮೀನುಗಳ ಚೆಲ್ಲಾಟವನ್ನು ತೆರೆದು ತೋರಿಸುವ ಶರತ್ಕಾಲದ ಹೊಳೆ ಕೇಶಿರಾಜನ ಮನಃ ಕ್ರೀಡೆ ಅದರಲ್ಲಿ ರಮ್ಯವಾಗಿ ರೂಪುಗೊಂಡಿದೆ.'[೬೦] ಎಂದು ಕಲಬುರ್ಗಿ ಅವರು ಹೇಳಿರುವ ಮಾತುಗಳು ಕೇಶಿರಾಜನಲ್ಲಿರುವ ಕವಿ ಹೃದಯದ ಗುಣವನ್ನು ಅನಾವರಣಗೊಳಿಸಿದ್ದಾಗಿದೆ.

ಇದು ಪದವಿ, ಸ್ನಾತಕೋತ್ತರ ಪದವಿ ಹಂತದಲ್ಲಿ ಓದುಗ, ವಿದ್ಯಾರ್ಥಿವರ್ಗಕ್ಕೆ ಪ್ರಾಚೀನ ಕನ್ನಡ ವ್ಯಾಕರಣದ ಕಲಿಕೆಗೆ ಭದ್ರಬುನಾದಿ ಆಗಿ ಈ ಹಿಂದಿನಿಂದಲೂ ಪಾಠಬೋಧನೆ ವಿಷಯವಾಗಿ ಬೆಳೆದುಬಂದಿದ್ದು, ಈ ಸರಳೀಕೃತ ಬೋಧನೆಯ ಮನನದ ಹಿಂದೆ ಡಿ.ಎಲ್.ಎನ್. ಅವರ ಶ್ರಮ ಅಪಾರವಾದದ್ದು ಇದನ್ನು ಯಾವ ಕನ್ನಡಿಗ ಓದುಗನೂ ಮರೆಯುವಂತಿಲ್ಲ. ಈಗ ಪಾಠ ಬೋಧನೆಯಲ್ಲಿ ಅಭ್ಯಾಸಗೊಳ್ಳುತ್ತಿರುವ ಪರಿಷ್ಕರಣೆಗಳಲ್ಲಿ ವೃತ್ತಿ ಮತ್ತು ಪ್ರಯೋಗಗಳಿಗೆ ಸಂಬಂಧಿಸಿದ ಪಾಠಸಮಸ್ಯೆಗಳನ್ನು ಮೂಲ ಪಾಠ ನಿರ್ಣಯ, ಪ್ರಯೋಗಗಳ ಆಕರ, ಕೇಶಿರಾಜನ ವ್ಯಕ್ತಿತ್ವ ಇವುಗಳನ್ನೆಲ್ಲಾ ಡಿ.ಎಲ್.ಎನ್. ಅವರು ಕೂಲಂಕಷವಾಗಿ ವಿವರಿಸಿದ್ದು ತಿಳಿದುಬಂದಿದೆ. ಇದುವರೆಗೆ ಒಟ್ಟು ೧೩ ಮುದ್ರಣಗಳನ್ನು ಕಂಡ ಈ ಕೃತಿಯು ಕನ್ನಡ ಸಾಹಿತ್ಯದ ಭಾಷೆ, ವ್ಯಾಕರಣ ಹಾಗೂ ಹಳಗನ್ನಡದ ವಿದ್ವತ್ ಪೂರ್ಣತೆಯ ಪ್ರತೀಕವಾಗಿದೆ.

ಈವರೆಗೂ ಹತ್ತಾರು 'ದರ್ಪಣ' ಕೃತಿಗಳು ಸಾಹಿತ್ಯಿಕ ವಲಯದಲ್ಲಿ ಮೂಡಿಬಂದಿದ್ದು ಕಂಡುಬಂದಿದೆ. ಅದರಲ್ಲಿ ಪ್ರಮುಖವಾಗಿ 'ಸರಳ ಶಬ್ದಮಣಿದರ್ಪಣ' ಎಂಬ ಕೃತಿಯನ್ನು ಎಸ್.ಎಸ್.ಅಂಗಡಿ ಯವರು ಸಂಪಾದಿಸಿ ಪ್ರಕಟಿಸಿದ್ದು ಕಂಡುಬಂದಿದೆ. ಪ್ರಸ್ತುತ ಸಂಪಾದಿತ ಕೃತಿಯು ಸಾಂಪ್ರದಾಯಿಕ ಛಂದೋವಿನ್ಯಾಸವನ್ನು ಕೈ ಬಿಟ್ಟು ಅರ್ಥ ಪಂಕ್ತಿಬದ್ಧವಾಗಿದ್ದ ವಿನ್ಯಾಸದಲ್ಲಿ ಮೂಡಿಬಂದಿದ್ದು ಎಲ್ಲಾ ವರ್ಗದ ಓದುಗ ವಲಯಕ್ಕೂ ಸರಳವಾಗಿ ಅರ್ಥವಾಗುವ ಕೃತಿ ಇದೆನ್ನಲಾಗಿದೆ.

**ಕೊನೆಯ ಟಿಪ್ಪಣಿಗಳು**

೧. ಹಳಗನ್ನಡ ಸಾಹಿತ್ಯ ಅಧ್ಯಯನ ಸಮೀಕ್ಷೆ (ಲೇ) ಎಚ್.ಎಸ್. ಶ್ರೀಮತಿ ಅಜಂತ, ಪ್ರಕಾಶನ, ಹೊಸಪೇಟೆ, ೧೯೯೩, ಪು. ೫೦

೨. ಕನ್ನಡ ಸಾಹಿತ್ಯ ಚರಿತ್ರೆ (ಸಂ) ಎಸ್.ಎಂ.ವೃಷಭೇಂದ್ರಸ್ವಾಮಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧, ಪು. ೭೮

೩. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್ ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೦೫, ಪು. ೨೯೩

೪. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ. ರವೀಂದ್ರ, ಬೆಂಗಳೂರು, ೨೦೦೫, ಪು. ೧೨೦

೫. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೦೫, ಪು. ೩೧೨

೬. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ ಬೆಂಗಳೂರು ವಿಶ್ವವಿದ್ಯಾಲಯ ಪಿಎಚ್.ಡಿ. ಅಪ್ರಕಟಿತ ನಿಬಂಧ, ವರ್ಷ ೨೦೧೫, ಪು. ೧೨೮

೭. ಕನ್ನಡ ಕವಿಚರಿತೆ ಸಂಪುಟ–೧, (ಲೇ) ಆರ್.ನರಸಿಂಹಾಚಾರ್ ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಪು. ೩೨೫

೮. ಕನ್ನಡ ಕವಿಚರಿತೆ ಸಂಪುಟ–೨, (ಲೇ) ಆರ್.ನರಸಿಂಹಾಚಾರ್ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪು. ೨೮೩

೯. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ ಬೆಂಗಳೂರು ವಿಶ್ವವಿದ್ಯಾಲಯ ಪಿಎಚ್.ಡಿ. ಅಪ್ರಕಟಿತ ನಿಬಂಧ ವರ್ಷ, ೨೦೧೫, ಪು. ೧೩೨

೧೦. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ಎಲ್. ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೦೫, ಪು. ೪೯೪

೧೧. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ಎಲ್. ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು ೨೦೦೫, ಪು. ೫೦೦

೧೨. ಅದೇ, ಪು.ಸಂ. ೫೧೪

೧೩. ಅದೇ, ಪು.ಸಂ. ೫೦೭

೧೪. ಅದೇ, ಪು.ಸಂ ೫೨೮

೧೫. ಪ್ರೊ. ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು (ಸಂ) ಟಿ.ವಿ.ವೆಂಕಟಾಚಲಶಾಸ್ತ್ರಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ವರ್ಷ ೨೦೦೮, ಪು.೨೩

೧೬. ಅದೇ, ಪು.ಸಂ. ೧೪೯

೧೭. ಅದೇ, ಪು.ಸಂ. ೧೫೨

೧೮. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೦೫, ಪು. ೧೦೦೯

೧೯. ಅದೇ, ಪು.ಸಂ. ೫೩೭

೨೦. ಅದೇ, ಪು.ಸಂ. ೬೨೯

೨೧. ಸಿರಿಸಂಪದ (ಲೇ) ಡಾ.ಎಸ್.ವಿದ್ಯಾಶಂಕರ ಡಿ.ಎಲ್.ನರಸಿಂಹಾಚಾರ್, (ಸಂ) ಎಫ್.ಟಿ ಹಳ್ಳಿಕೇರಿ, ಡಾ.ಕೆ.ರವೀಂದ್ರನಾಥ ಪುಟ. ೨೫೨

೨೨. ವಡ್ಡಾರಾಧನೆ ಸಾಂಸ್ಕೃತಿಕ ಮುಖಾಮುಖಿ (ಸಂ) ಬಿ.ಎಂ.ಪುಟ್ಟಯ್ಯ ಪುಟ ೨೭, (ಲೇ) ವಡ್ಡಾರಾಧನೆ ಲೌಕಿಕ ಅಧಿಕಾರ ಮತ್ತು ಮಧ್ಯಕಾಲೀನ ಜೈನಮತ (ಲೇ) ರಾಜಾರಾಮಹೆಗಡೆ

೨೩. ಡಿ.ಎಲ್.ನರಸಿಂಹಾಚಾರ್ (ಲೇ) ಎಸ್.ವಿದ್ಯಾಶಂಕರ, (ಪ್ರ) ಕನ್ನಡ ಸಾಹಿತ್ಯ ಪರಿಷತ್ತು, ೧೯೯೨, ಪುಟ ೮೦

೨೪. ಶಿವಕೋಟ್ಯಾಚಾರ್ಯ ವಿರಚಿತ ವಡ್ಡಾರಾಧನೆ (ಸಂ), ಡಿ.ಎಲ್.ನರಸಿಂಹಾಚಾರ್ ೨೦೧೪ (ಪ್ರ) ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ಪುಟ ೩೮

೨೫. ಅದೇ, ಪುಟ ಸಂ ೩೯

೨೬. ಅದೇ, ಪುಟ ಸಂ ೨೩೮

೨೭. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ) ಎಫ್.ಟಿ. ಹಳ್ಳಿಕೇರಿ ಪು. ೩೦೩, (ಲೇ) ವಡ್ಡಾರಾಧನೆ, ಡಿ.ಎಲ್.ಎನ್ ಆವೃತ್ತಿ (ಲೇ), ಶಾಂತಿನಾಥದಿಬ್ಬದ

೨೮. ಸರಳ ವಡ್ಡಾರಾಧನೆ, (ಸಂ) ಎಸ್.ಎಸ್. ಅಂಗಡಿ, ೨೦೧೬, ಪ್ರಿಯದರ್ಶನಿ ಪ್ರಕಾಶನ, ಬೆಂಗಳೂರು. ಪು. ೭

೨೯. ಡಿ.ಎಲ್.ನರಸಿಂಹಾಚಾರ್ (ಲೇ) ಎಸ್.ವಿದ್ಯಾ ಶಂಕರ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೨, ಪು. ೯೩

೩೦. ಕರ್ನಾಟಕ ಮಹಾಭಾರತ ಭೀಷ್ಮಪರ್ವ ಸಂಗ್ರಹ (ಸಂ), ಡಿ.ಎಲ್.ನರಸಿಂಹಾಚಾರ್, ೧೯೫೦, ಪು. IV

೩೧. ಪ್ರೊ. ಡಿ.ಎಲ್.ನರಸಿಂಹಾಚಾರ ಅವರ ಹೆಚ್ಚಿನ ಬರಹಗಳು ಭಾಷಣಗಳು, (ಸಂ), ಟಿ.ವಿ.ವೆಂಕಟಾಚಲಶಾಸ್ತ್ರೀ, ೨೦೦೮, ಪು. ೧೯೫

೩೨. ತುರುಗಾಯಿ ರಾಮಣ್ಣ ಸಮಗ್ರ ವಿಶ್ಲೇಷಣೆ (ಲೇ) ಜಯದೇವಪ್ಪ ಜೈನಕೇರಿ, ೨೦೧೩, ಪು. ೫

೩೩. ಎಲ್ಲಾ ಪುರಾತನರ ವಚನಗಳು (ಸಂ) ವೀರಣ್ಣ ರಾಜೂರ, ೨೦೦೬, ಪು. ೬೯೪

೩೪. ಪ್ರೊ. ಡಿ.ಎಲ್.ನರಸಿಂಹಾಚಾರ ಅವರ ಹೆಚ್ಚಿನ ಬರಹಗಳು ಭಾಷಣಗಳು, (ಸಂ) ಟಿ.ವಿ.ವೆಂಕಟಾಚಲಶಾಸ್ತ್ರೀ, ೨೦೦೮, ಪು. ೧೯೬

೩೫. ಡಿ.ಎಲ್.ನರಸಿಂಹಾಚಾರ್ ಶತಮಾನಸ್ಮರಣೆ (ಸಂ) ಎಫ್.ಟಿ ಹಳ್ಳಿಕೇರಿ, ೨೦೦೫, ಪು. ೩೧೩

೩೬. ಅದೇ, ಪು.ಸಂ. ೩೧೫

೩೭. ಸಿದ್ಧರಾಮ ಚರಿತ್ರೆಯ ಸಂಗ್ರಹ (ಸಂ) ಡಿ.ಎಲ್.ನರಸಿಂಹಾಚಾರ್, ೧೯೮೪, ಪು. ೫೧

೩೮. ಅದೇ, ಪು.ಸಂ. ೫೨

೩೯. ಅದೇ, ಪು.ಸಂ. ೫೪

೪೦. ಅದೇ, ಪು.ಸಂ. ೫೪

೪೧. ಸುಕುಮಾರ ಚರಿತಂ (ಸಂ) ಡಿ.ಎಲ್.ನರಸಿಂಹಾಚಾರ್, ೧೯೫೪ ಪು. IXXXV

೪೨. ಆದಿದೇವ ವಿರಚಿತ ಸುಕುಮಾರ ಚರಿತೆ (ಸಂ) ವೈ.ಸಿ.ಭಾನುಮತಿ, ೧೯೮೪, ಪು. ೨೧

೪೩. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ) ಎಫ್.ಟಿ ಹಳ್ಳಿಕೇರಿ, ೨೦೦೫, ಪು. ೩೨೩

೪೪. ಅದೇ, ಪು.ಸಂ. ೩೨೩

೪೫. ಅದೇ, ಪು.ಸಂ. ೩೨೪

೪೬. ಸುಕುಮಾರ ಚರಿತಂ (ಸಂ) ಡಿ.ಎಲ್.ನರಸಿಂಹಾಚಾರ್, ೧೯೫೪ ಪು. IXXXVI

೪೭. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ) ಎಫ್.ಟಿ ಹಳ್ಳಿಕೇರಿ, ೨೦೦೫, ಪು. ೩೨೪

೪೮. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಅಪ್ರಕಟಿತ ಪಿಎಚ್.ಡಿ. ನಿಬಂಧ, ೨೦೧೫, ಪು. ೧೭೩

೪೯. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ) ಎಫ್.ಟಿ ಹಳ್ಳಿಕೇರಿ, ೨೦೦೫, ಪು. ೩೨೪

೫೦. ಅದೇ, ಪು.ಸಂ. ೩೧೧

೫೧. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಅಪ್ರಕಟಿತ ಪಿಎಚ್.ಡಿ. ನಿಬಂಧ, ೨೦೧೫, ಪು. ೧೭೭

೫೨. ಗೋವಿನ ಹಾಡು (ಸಂ) ಡಿ.ಎಲ್.ನರಸಿಂಹಾಚಾರ್, ೧೯೭೭, ಪು. ೧

೫೩. ಅದೇ, ಪು.ಸಂ. ೨

೫೪. ಅದೇ, ಪು.ಸಂ. ೧೯

೫೫. ಅದೇ, ಪು.ಸಂ. ೧೫

೫೬. ಕನ್ನಡ ಸಾಹಿತ್ಯ ಸಂಗಾತಿ (ಲೇ) ಕೀರ್ತಿನಾಥ ಕುರ್ತಕೋಟಿ, ೨೦೧೪, ಪು. ೩೨೬

೫೭. ಸಾಹಿತ್ಯ ಸಂವಹನ (ಲೇ) ವಿಜಯಶ್ರೀ ಸಬರದ, ಪು. ೫೮

೫೮. ಡಿ.ಎಲ್.ನರಸಿಂಹಾಚಾರ ಶತಮಾನ ಸ್ಮರಣೆ (ಸಂ) ಎಫ್.ಟಿ ಹಳ್ಳಿಕೇರಿ, ೨೦೦೫, ಪು. ೨೯೪

೫೯. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಅಪ್ರಕಟಿತ ಪಿಎಚ್.ಡಿ. ನಿಬಂಧ, ೨೦೧೫, ಪು. ೧೬೯

೬೦. ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ (ಸಂ) ಡಿ.ಎಲ್.ನರಸಿಂಹಾಚಾರ್, ೨೦೧೫, ಪು. ೨೬

## ಅಧ್ಯಾಯ - ನಾಲ್ಕು

# ಕನ್ನಡ ಗ್ರಂಥಸಂಪಾದನೆ ತಾತ್ವಿಕತೆ ಮತ್ತು ಅನ್ವಯಿಕತೆ

ಕನ್ನಡ ಗ್ರಂಥಸಂಪಾದನಾ ಇತಿಹಾಸಕ್ಕೆ ೨೦೦ ವರ್ಷಗಳ ಇತಿಹಾಸವಿದೆ. ಗ್ರಂಥಸಂಪಾದನೆ ಎಂಬುದು ಹಳೆಗನ್ನಡ ಸಾಹಿತ್ಯಾಧ್ಯಯನದ ಪ್ರಮುಖ ಆಸಕ್ತಿ ಕ್ಷೇತ್ರವಾಗಿದ್ದು, ಇದು ಮುಖ್ಯವಾಗಿ ಕವಿಯ ಮೂಲಕ ಪಾಠವನ್ನು, ನಿರ್ಧರಿಸುವ ಬಲವನ್ನು ಹೊಂದಿದ್ದಾಗಿದೆ. ಹೀಗೆ ನಿರ್ಧರಿಸಿದ ಪಾಠವೇ ಆಕೃತಿಯ ಮುಂದಿನ ಅಧ್ಯಯನಗಳಿಗೆ ಆಧಾರವಾಗುತ್ತದೆಯೆಂದು ತಿಳಿದಿದ್ದರಿಂದ ಈ ಪಾಠ ನಿರ್ಧಾರ ವಾಸ್ತವವಾಗಿ ಅಧ್ಯಯನಕ್ಕೆ ಬೇಕಾದ ಆಧಾರಗಳನ್ನು ರೂಢಿಸುವ ಪೂರ್ವ ತಯಾರಿ ಹಂತವೆಂತಲೂ ಕರೆಯಬಹುದಾಗಿದೆ. ಪ್ರಾಚೀನ ಗ್ರಂಥಗಳ ಮೂಲತನವನ್ನು ಹಾಗೆಯೇ ಮುಂದುವರೆಸಿಕೊಂಡು ಬರಬೇಕೆಂಬ ದೃಷ್ಟಿಕೋನ ಇಂದಿನದೇನೂ ಅಲ್ಲ ಇದು ಪರಂಪರಾಗತವಾಗಿ ಬೆಳೆದುಬಂದುದಾಗಿದೆ. ವೇದಗಳಲ್ಲಿ ಅನುಸರಿಸಿದ್ಧ ಕ್ರಮಪಾಠ, ಪದಪಾಠ, ಜಟಾಪಾಠ, ಘನಪಾಠಗಳೆಂಬ ಕ್ರಮಗಳಿಂದಾಗಿ ಬರವಣಿಗೆಯ ಅಭಾವದ ಕಾಲದಲ್ಲೂ ಮೂಲ ಪಾಠಕ್ಕೆ ಧಕ್ಕೆ ಉಂಟಾಗದಂತೆ ಗ್ರಂಥಸಂಪಾದನೆ ಬೆಳೆದುಬಂದಿದೆ. ಸಾಹಿತ್ಯವು ಗ್ರಂಥಸ್ಥವಾಗತೊಡಗಿದ ನಂತರದಲ್ಲಿ ಮೂಲ ಪಾಠಗಳು ವ್ಯತ್ಯಯಗೊಳ್ಳುವ ಸಂಭವಗಳೂ ಅಲ್ಲಲ್ಲಿ ಕಂಡುಬಂದಿವೆ. ಆದರೆ ಪಾಠಸಂರಕ್ಷಣೆಯ ಜವಾಬ್ದಾರಿ ಮಾತ್ರ ಲಿಪಿಕಾರರು ಪಾಲಿಗೆ ಬಂದಂತಾಗಿದೆ. ಪ್ರತಿಯಿಂದ ಪ್ರತಿಗೆ ಲಿಲಿಕಾರರು ಕಾರಣರಾಗಿ ವ್ಯತ್ಯಾಸಗಳುಂಟಾಗಿ ವಿವಿಧ ನೆಲೆಗಳಲ್ಲಿ ಅವುಗಳನ್ನು ತಿದ್ದಿ ಸರಿಪಡಿಸುವ ಗ್ರಂಥಪಾಠ ಭೇದಗಳನ್ನು ಗಮನಿಸುವಂತಹ ಸಂಗತಿಗಳ ಬಗ್ಗೆ ನಿದರ್ಶನಗಳ ಮೂಲಕ ಈ ಅಧ್ಯಯನಕ್ಕೆ ದಾರಿ ತೋರಿದವರು ಡಿ.ಎಲ್.ಎನ್ ಅವರು.

- **ಗ್ರಂಥಸಂಪಾದನೆಯ ಅರ್ಥ ಮತ್ತು ಸ್ವರೂಪ**

ಡಿ.ಎಲ್.ಎನ್. ಅವರು ತಮ್ಮ ಕನ್ನಡ ಗ್ರಂಥಸಂಪಾದನೆ ಕೃತಿಯಲ್ಲಿ ಗ್ರಂಥಸಂಪಾದನೆಗೆ ಸಂಬಂಧಿಸಿದ ತತ್ವಗಳನ್ನು ಇತರೆ ಅಂಶಗಳನ್ನು ಪಾಶ್ಚಾತ್ಯ, ದೇಶಿಶಾಸ್ತ್ರಜ್ಞರ ಅಭಿಪ್ರಾಯನುಸಾರವಾಗಿ ಹೇಳಲು ಯತ್ನಿಸಿದ್ದಾರೆ. ಇಲ್ಲಿ ಇರಬಹುದಾದ ಅಸಾಂಗತ್ಯ ಇತರೆ ಲೋಪಗಳಿಗೂ ಕಾರಣ ಪ್ರಾಕೃತ ಗ್ರಂಥಕರ್ತನೇ ಹೊರತು ಆಮೂಲಗ್ರ ಶಾಸ್ತ್ರಜ್ಞರಲ್ಲ

ಪಾಠ ನಿರ್ಧಾರದ ಈ ಚಟುವಟಿಕೆಗಳನ್ನು ಈಗ ಸಾಮಾನ್ಯವಾಗಿ ಗ್ರಂಥಸಂಪಾದನೆ ಎಂದು ಕರೆಯಲಾಗುತ್ತಿದೆ. ಗ್ರಂಥಸಂಪಾದನ ಅಧ್ಯಯನದ ವಿಸ್ತೃತ ರೂಪುಗೊಳ್ಳುವಿಕೆಯಿಂದ ಈ ಶತಕದ ನಡುಭಾಗದ ಹೊತ್ತಲ್ಲಿ ಅಂದರೆ, ಪಾಶ್ಚಾತ್ಯ ವಿದ್ವಾಂಸರ ಆಗಮನ, ಅಧ್ಯಯನದ ವಿಸ್ತೃತ ಬೆಳವಣಿಗೆ ಕಂಡಾಗಿನಿಂದ ಇದೊಂದು ಪ್ರತ್ಯೇಕ ಅಧ್ಯಯನ ಶಿಸ್ತಾಗಿ ಕಂಡುಬಂದಿದೆ. ಐರೋಪ್ಯರಲ್ಲಿ ಪ್ರಾಚೀನ ವಾಙ್ಮಯವನ್ನು ಅಧ್ಯಯನ ಮಾಡಲು ರೂಪಿಸಿದ 'ಟೆಕ್ಸ್‌ಟ್ಯೂವಲ್ ಕ್ರಿಟಿಸಿಜಂ' ಹಾಗೂ ಭಾರತೀಯ ನವೋದಯ ಸಂದರ್ಭದಲ್ಲಿ ಪ್ರಾಚೀನ ಭಾರತದ ಲಿಖಿತ ದಾಖಲೆಗಳ ಪಾಠ ನಿರ್ಧಾರದಲ್ಲಿ ನಡೆದ ಪ್ರಯತ್ನಗಳು ಕನ್ನಡಕ್ಕೂ ಪ್ರಭಾವ ಬೀರಿ ರೂಪುಗೊಂಡಿದ್ದೇ ಈ 'ಗ್ರಂಥಸಂಪಾದನೆ' ಕನ್ನಡದಲ್ಲಿ ಈ ಒಂದು ವಿಸ್ತೃತ ಅಧ್ಯಯನಕ್ಕೆ ರೂಪುರೇಷೆ ನೀಡಿ ಇದಕ್ಕೆ ತನ್ನದೇ ಆದ ಚೌಕಟ್ಟು ನಿರ್ಮಿಸಿಕೊಟ್ಟ ಕನ್ನಡ ಗ್ರಂಥಸಂಪಾದನೆಯ ಆಚಾರ್ಯ ಪುರುಷ ಎಂದು ಬಿರುದಾಂಕಿತಗೊಂಡವರು ಡಿ.ಎಲ್.ನರಸಿಂಹಾಚಾರ್ಯರು. ಇವರು ಮೂಲಕ್ರಿಟಿಸಿಜಂ ಬಗ್ಗೆ ತಮ್ಮ ಕನ್ನಡ ಗ್ರಂಥಸಂಪಾದನೆ ಬಗ್ಗೆ ಪಾಶ್ಚಾತ್ಯ ವಿದ್ವಾಂಸರು ಟೆಕ್ಸಿಟುವೆಲ್ ಕ್ರಿಟಿಸಿಜಂನಲ್ಲಿ ಬಳಸಿಕೊಂಡು ಬಂದಿದ್ದ ನಾಲ್ಕು ಅಂಶಗಳನ್ನು ಕನ್ನಡಕ್ಕೆ ಅನುಕರಿಸಿ ಮುಂದುವರೆಸಿದ್ದನ್ನು ಹೀಗೆ ಹೇಳಿದ್ದಾರೆ.

೧. "ಹ್ಯೂರಿಸ್ಟಿಕ್ಸ್' ಸಾಮಗ್ರಿ ಸಂಕಲನ ಇದು ಹಸ್ತಪ್ರತಿಗಳು ಬಾಹ್ಯ ಸಾಕ್ಷಿಗಳು ಮುಂತಾದ ಲಿಖಿತ ಸಾಮಗ್ರಿಗಳನ್ನು ಒಂದೆಡೆ ಸೇರಿಸಿ ಪರೀಕ್ಷಿಸಿ ವರ್ಗೀಕರಣ ಮಾಡಿ ಪರಸ್ಪರ ಸಂದರ್ಭ ಮತ್ತು ಪೀಳಿಗೆಯನ್ನು ರಚಿಸುವ ಸಾಮಗ್ರಿ ಸಂಕಲನ ಎನ್ನಬಹುದಾಗಿದೆ.

೨. 'ರೆಸಿನ್ಸಿಯೊ' ಪಾಠ ಸಂಪ್ರದಾಯ ನಿರ್ಣಯ ಇಲ್ಲಿ ಪಾಠಸಂಪ್ರದಾಯಗಳನ್ನು ನಿಶ್ಚಯಿಸಿ ಪ್ರಧಾನ ಮಾತೃಕೆಯ ಪಾಠವೇನಿರಬಹುದೆಂಬುದನ್ನು ಕಂಡು ಹಿಡಿಯುವುದಾಗಿದೆ.

೩. 'ಎಮೆಂಡೇಷನ್' – ಪಾಠಸಂಯೋಜನೆ.

೪. 'ಹೈಯರ್ ಕ್ರಿಟಿಸಿಜಂ' ಉದಾತ್ತ ಅಥವಾ ಉನ್ನತ ವಿಮರ್ಶೆ'[೧] ಎಂದು ವಿಂಗಡಿಸಿದ್ದು ಪ್ರಾಕೃತ ಗ್ರಂಥದಲ್ಲಿ ಈ ಮೇಲಿನ ಕ್ರಮವನ್ನು ಯಥಾವತ್ತಾಗಿ ಅನುಸರಿಸಿಲ್ಲದಿದ್ದರೂ ಅಲ್ಲಿ ಅಡಕವಾಗಿರುವ ವಿಷಯಗಳೆಲ್ಲ ಇಲ್ಲಿನ ಪ್ರತಿಪಾದನೆಯಲ್ಲಿ ಉಚಿತವಾದ ಎಡೆಗಳಲ್ಲಿ ಕಂಡುಬಂದಿವೆ. ಯಾವ ಅಂಶವೂ ಬಿಟ್ಟು ಹೋಗದಿರುವಂತೆ ತಕ್ಕಮಟ್ಟಿಗೆ ಎಚ್ಚರವನ್ನು ವಹಿಸಲಾಗಿದೆ. ಗ್ರಂಥಸಂಪಾದನೆಗೆ ಸಂಬಂಧಿಸಿದ ತತ್ವಗಳನ್ನು ಇತರ ಅಂಶಗಳನ್ನು ಆ ಶಾಸ್ತ್ರಜ್ಞರ ಅಭಿಪ್ರಾಯ ವಿದ್ವಾಂಸರಿಂದ ಅನುಸರಿಸಿ ನಮ್ಮದೇ ವಿಚಾರ ಚಿಂತನೆಗಳನ್ನು ಈ ತತ್ವಕ್ಕೆ ಮೈಗೂಡಿಸಿ ಹೊಸನೆಲೆಯಲ್ಲಿ ನೂತನ ವಿಚಾರವಾಗಿ ಗ್ರಂಥಸಂಪಾದನೆ ಅಧ್ಯಯನವನ್ನು ಇಂದಿಗೂ ಅಭ್ಯಾಸ ಯೋಗ್ಯವಾಗಿಸಿ ಸಾಹಿತ್ಯದ ಭಾಗದಲ್ಲೊಂದಾಗಿ ನೀಡಿದ್ದು ಕನ್ನಡ ಗ್ರಂಥಸಂಪಾದನೆ ಅಭ್ಯಾಸದ ವಿಸ್ತೃತತೆಗೆ ಒಂದು ಪಾಲುದಾರಿಕೆಯಾಗಿದೆ.

ಗ್ರಂಥಸಂಪಾದನೆ ಎಂಬುದನ್ನು ಹಲವು ಹಸ್ತಪ್ರತಿಗಳ ಮೂಲಕ ಕವಿಯ ಮೂಲ ಪಾಠಕ್ಕೆ ಹತ್ತಿರ ಪಾಠವನ್ನು ನಿರ್ಧರಿಸುವ ಒಂದು ಚಟುವಟಿಕೆ ಎಂದು ತಿಳಿದುಕೊಂಡು ಬಂದಿದ್ದೇವೆ. ಇದಕ್ಕೆ ಪೂರಕವೆಂಬಂತೆ, ೧೯ನೇ ಶತಮಾನದ ಆರಂಭದಲ್ಲಿ ಹಸ್ತಪ್ರತಿಗಳಲ್ಲಿದ್ದ ಕಾವ್ಯ, ಸಂಸ್ಕೃತಿಯನ್ನು ಆಧುನಿಕ ಓದಿಗೆ ಪೂರಕವಾಗುವಂತೆ ಕಲ್ಲಚ್ಚು ಮತ್ತು ಮುದ್ರಣ ರೂಪಕ್ಕೆ ಪರಿವರ್ತಿಸುವ ಮೂಲ ಗುರಿ ಇಲ್ಲಿಯದಾಗಿತ್ತು. ಈ ಹಂತದಲ್ಲಿ ನಮ್ಮ ಪ್ರಾಚೀನ ಕವಿಗಳು ಲಭ್ಯಕಾವ್ಯಗಳ ತಾಳೆಗರಿ ಮತ್ತು ಕಾಗದದ ಪ್ರತಿಗಳನ್ನು ಸಂಗ್ರಹಿಸಿ, ಓದಿ, ಅವುಗಳ ಪ್ರತಿ ತೆಗೆದು ಮುದ್ರಿತಗೊಳಿಸುವ ಕಾರ್ಯ ನಡೆಸಿದ್ದರು. ಈ ಪ್ರಯತ್ನದಿಂದ ಪಾಠಶುದ್ಧತೆಗಿಂತ ಓದಿನ ಅನುಕೂಲವಾಗುವ ತಕ್ಕ ರೂಪದತ್ತ ಗಮನ ಹರಿಸಿದ್ದಾಗಿತ್ತು. ಈ ಪರಿಣಾಮವಾಗಿ ಪಾಠಗಳನ್ನು ಒಡೆದು ಓದುವ ರೂಢಿಗತ ಪದ್ಧತಿ ಹೆಚ್ಚಾಗಿ ಗದ್ಯ ಪದ್ಯಗಳಾಗಿ ವಿಭಜನೆಗೊಳ್ಳುವಂತಾಯಿತು. ಮುದ್ರಿತಗೊಂಡ ಕೃತಿಗಳಲ್ಲಿನ ಕೊರತೆಗಳನ್ನು ಕಂಡ ವಿದ್ವಾಂಸರು ಮತ್ತೆ ಮತ್ತೆ ಮೂಲ ಕವಿಯ ಪಾಠವನ್ನು ಶೋಧನೆ ಮಾಡುತ್ತಲೇ ಬಂದಿದ್ದಾರೆ. ಇಂತಹ ಪ್ರಯತ್ನದಿಂದ ಕೆಲವೊಮ್ಮೆ ಕೃತಿಯ ಭಾಗಗಳಿಗೆ ಮಾತ್ರ ಸೀಮಿತವಾಗಿದ್ದರೆ, ಕೆಲವೊಮ್ಮೆ ಇಡಿ ಕೃತಿಯ ಮರುಸಂಪಾದನೆಗೂ ಕಾರಣವಾಗಿದೆ. ಉದಾ: ಪಂಪನ ಎರಡು ಕಾವ್ಯಗಳೂ ಬೇರೆ ಬೇರೆ ಕಾಲಾವಧಿಯಲ್ಲಿ ಮತ್ತೆ ಮತ್ತೆ ಮರುಸಂಪಾದನೆಗೊಂಡು ಪರಿಷ್ಕೃತವಾಗಿ ಹಲವು ರೂಪಗಳಲ್ಲಿ ಮೂಡಿಬಂದಿದ್ದನ್ನು ಕಾಣಬಹುದಾಗಿದೆ.

ಮೊದಮೊದಲು ಪಾಠಶುದ್ಧತೆ ಎಂಬುದು ಓದುಗ ಕೇಂದ್ರವಾಗಿತ್ತು. ಇಲ್ಲಿ ಕವಿಯ ಪಾಠ ನಿರ್ಧಾರದ ಉದ್ದೇಶವನ್ನು ಪ್ರಧಾನವಾಗಿಸಿಕೊಳ್ಳುವುದಕ್ಕೆ ಮೊದಲಿನ ಹಂತದಲ್ಲಿ ಓದಲು ತಕ್ಕ ಪಾಠವನ್ನು ಕಂಡುಕೊಳ್ಳಲು ಗ್ರಂಥಸಂಪಾದನೆಯ ಉದ್ದೇಶ ಸೀಮಿತ ಎನಿಸಿತ್ತು. ಇದಕ್ಕಾಗಿ ಕನಿಷ್ಠ ಅಸ್ಪಷ್ಟ ಹಾಗೂ ಅಪೂರ್ಣ ಎನಿಸಿದ ಕೃತಿಪಾಠಗಳನ್ನು ತಿದ್ದಿ, ಹೊಸ ಪಾಠಗಳನ್ನು ಆಗುಮಾಡುವ ಸಂದರ್ಭಗಳಲ್ಲಿ ಸಂಪಾದಕರು ಹಿಂಜರಿದಿಲ್ಲ ಆದರೆ, ಈ ಕ್ರಮವು ಗ್ರಂಥ ಸಂಪಾದನೆಯು ಒಂದು ವ್ಯವಸ್ಥಿತ ಅಧ್ಯಯನ ಶಿಸ್ತಾಗಿ ಬೆಳೆದ ಮೇಲೆ ಈ ಮೊದಲ ಹಂತದ ಪಾಠ ನಿರ್ಧಾರದ ಕ್ರಮ ತಿರಸ್ಕೃತ ಪ್ರವೃತ್ತಿ ಬೆಳೆದು ಮುಂದೆ ಕೃತಿಗಳ ಮರು ಸಂಪಾದನೆಯನ್ನು ಒಂದು ಅಧ್ಯಯನದ ಮುಂದುವರಿಕೆಯಾಗಿ ಕಾಲಕ್ಕನುಗುಣವಾಗಿ ಹತ್ತಾರು ಮಾರ್ಪಾಡುಗಳಿಂದ 'ಗ್ರಂಥಸಂಪಾದನೆ' ಎಂಬ ವಿಧಾನವೇ ಇಂದು ಬೃಹತ್ ಅಧ್ಯಯನ ಕ್ಷೇತ್ರವಾಗಿ ಬೆಳೆಯಲು ಕಾರಣವಾಗಿದೆ. ಇದಕ್ಕೆ ಪೂರಕವೆಂಬಂತೆ ಪಾಶ್ಚಾತ್ಯ ವಿದ್ವಾಂಸರುಗಳಾದ ಕಿಟೆಲ್, ರೈಸ್, ಮೆಕೆಂಜಿ, ಹರ್ಮನ್ ಮೊಗ್ಲಿಂಗ್ ವರ್ಥ್‌ಗಳಾದಿಯಾಗಿ ಟಿ.ಎಸ್.ವೆಂಕಣ್ಣಯ್ಯ, ಫ.ಗು.ಹಳಕಟ್ಟಿ, ಎಸ್.ಜಿ.ನರಸಿಂಹಾಚಾರ್, ಎ.ಆರ್.ಕೃಷ್ಣಶಾಸ್ತ್ರಿ, ಕ.ವೆಂ.ರಾಘವಾಚಾರ್, ಎಂ.ಆರ್.ಶ್ರೀನಿವಾಸಮೂರ್ತಿ, ಬಿ.ಎಸ್.ಸಣ್ಣಯ್ಯ, ಎಲ್.ಬಸವರಾಜು, ಎಂ.ಎಂ.ಕಲಬುರ್ಗಿ, ಎಂ.ಚಿದಾನದಂಮೂರ್ತಿಗಳಂತಹ ಮೊದಲಾದ

ಇಂದಿನ ಈ ಪಂಡಿತ ಪರಂಪರೆಯು ಮುಂದುವರಿಕೆಯಾಗಿ ಹತ್ತಾರು ವಿದ್ವಾಂಸರು, ವಿವಿಧ ವಿಶ್ವದ್ಯಾಲಯಗಳು ಇತರೆ ಖಾಸಗಿ ಸಂಘ–ಸಂಸ್ಥೆ ಮತಮಾನ್ಯಗಳ ಮೂಲಕ ಗ್ರಂಥಸಂಪಾದನೆ ಎಂಬ ಅಧ್ಯಯನ ವಿಷಯವು ಇಂದು ವಿಸ್ತೃತವಾಗಿ ಬೆಳೆಯುತ್ತಿರುವ ಒಂದು ಅಧ್ಯಯನ ಶಿಸ್ತು ಎನಿಸಿದೆ.

'ಗ್ರಂಥಸಂಪಾದನೆ' ಎಂಬ ಅಧ್ಯಯನವು ಈ ಹಿಂದೆ ಹಲವು ರೂಪದಲ್ಲಿ ಬೆಳೆದು ಬಂದಿದ್ದು ಇದಕ್ಕೆ ಅಖಿಲ ಭಾರತ ಮಟ್ಟದಲ್ಲಿ ಒಂದು ರೂಪು ಕೊಟ್ಟವರು ಡಾ.ಎಸ್.ಎಂ. ಕತ್ರೆ ಎಂಬ ವಿದ್ವಾಂಸರು ಇವರು ೧೯೪೧ರಲ್ಲಿ 'ಭಾರತೀಯ ಗ್ರಂಥ ಸಂಪಾದನಾ ಪ್ರವೇಶಿಕಾ' ಎಂಬ ಕೃತಿಯನ್ನು ಸಾಹಿತ್ಯ ವಲಯಕ್ಕೆ ಒದಗಿಸಿದ್ದರು. ಇದನ್ನು ಕನ್ನಡಕ್ಕೆ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು 'ಭಾರತೀಯ ಗ್ರಂಥಸಂಪಾದನ ಶಾಸ್ತ್ರ ಎಂದು ಪರಿಚಯಿಸಿದ್ದಾರೆ. ಈ ಪ್ರಕಾರ ಗ್ರಂಥಸಂಪಾದನೆ ಎಂದರೆ ಪರಂಪರಾಗತವಾಗಿ ಬಂದಿರುವ ಲಭ್ಯ ಹಸ್ತಪ್ರತಿಗಳ ಆಧಾರದಿಂದ ಮೂಲಗ್ರಂಥದ ಅಂದರೆ, 'ಕವಿಯ ಸ್ವಹಸ್ತಾಕ್ಷರ ಪ್ರತಿಯ ಸ್ವರೂಪವೇನಿರಬಹುದೆಂಬುದನ್ನು ನಿರ್ಣಯಿಸಿ ಪರಿಷ್ಕಾರ ಮಾಡುವ ವಿಧಾನವೇ ಗ್ರಂಥಸಂಪಾದನೆ' ಎಂಬರ್ಥವನ್ನು ಒದಗಿಸಿದೆ. ಈ ಶಾಸ್ತ್ರೋಕ್ತ ವಿಧಾನವನ್ನು ಕೃತಿಕಕಾರರು ಪಾಶ್ಚಾತ್ಯ ವಿದ್ವಾಂಸರು, ಗ್ರೀಕ್, ಲ್ಯಾಟಿನ್‌ಭಾಷೆಗಳ ಮತ್ತು ಇತರ ಪುರಾತನರ ಗ್ರಂಥಗಳ ಹಸ್ತಪ್ರತಿಗಳ ಸಹಾಯದಿಂದ ಈ ಮಾತನ್ನು ನಿರೂಪಿಸಿದ್ದಾರೆ. ವಿ.ಎಸ್.ಸುತ್ತಂಕರ್, ಎಂ.ಎಸ್.ಕತ್ರೆಯವರು ಸಂಪಾದಿಸಿದ ಭಾರತೀಯ ಗ್ರಂಥಸಂಪಾದನಾ ಶಾಸ್ತ್ರದ ನೆರಳಾಗಿ ಅದರಲ್ಲಿನ ಬಳಕೆಯಾದ ಗ್ರಂಥಸಂಪಾದನೆಯ ಮೂಲತತ್ವಗಳನ್ನು, ಕಾರ್ಯವಿಧಾನಗಳನ್ನು ಕನ್ನಡ ಗ್ರಂಥಸಂಪಾದನೆಗೆ ಬದ್ಧವಾಗಿಸಲು ಕನ್ನಡ ಗ್ರಂಥಗಳ ಸಂಸ್ಕರಣ ಅಥವಾ ಗ್ರಂಥಸಂಪಾದನೆ (೧೯೩೦) ಎಂಬ ಲೇಖನದ ಮೂಲಕ ಗ್ರಂಥಸಂಪಾದನೆಗೆ ಕನ್ನಡದಲ್ಲಿ ರೂಪುಕೊಟ್ಟ ಮೊದಲಿಗರಲ್ಲಿ ಎನ್.ಅನಂತರಂಗಾಚಾರ್ ಒಬ್ಬರಾಗಿದ್ದಾರೆ.

'ಇವರು "ಗ್ರಂಥಕರ್ತೃ ಆದವನು ಕವಿ ಅಥವಾ ಮೂಲಲೇಖಕನು ರಚಿಸಿದಂತಹ ಗ್ರಂಥಪಾಠವನ್ನು ನಿಷ್ಕರ್ಷಿಸಿ ದೊರಕಿಸುವುದು ಸಂಪಾದಕನ ಕೆಲಸ ಎಂದು ಹೇಳಿದ್ದಾರೆ.'[೨]

ಗ್ರಂಥಸಂಪಾದನಾ ವಿಚಾರ ಕುರಿತಂತೆ ಇವರು ಕೆಲವಿಚಾರಗಳನ್ನು ವಿಷದಪಡಿಸಿದ್ದನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

೧. 'ಹಸ್ತಪ್ರತಿಗಳಲ್ಲಿನ ವ್ಯಾಕರಣ ದೋಷಗಳನ್ನು ಕಾಲದಿಂದ ಕಾಲಕ್ಕಾದ ಅಕ್ಷರ ಬಳಕೆ ಬದಲಾವಣೆಗಳನ್ನು ಗ್ರಂಥಸಂಪಾದಕನಾದವನು ಗುರುತಿಸಿಕೊಳ್ಳುವುದು ಅವಶ್ಯ.

೨. ಗ್ರಂಥ ಪ್ರತಿಮಾಡುವಾಗ ಹೇಳುಗ, ಕೇಳುಗ, ಬೇರೆ ಬೇರೆಯಾಗಿ ಕಾರ್ಯನಿರ್ವಹಿಸಿದಾಗ ಅಕ್ಷರ ದೋಷಗಳುಂಟಾಗುವುದು ಖಚಿತ.

೩. ಮೂಲ ಪ್ರತಿಗಳು ಕಲುಷಿತವಾಗಲು ದೃಷ್ಟಿ ಶ್ರವಣದೋಷ ಕಾರಣವಾಗಲೂಬಹುದು.

೪. ಕೃತಿ ರಚಿಸುವಾಗ ಅಜಾಗರೂರತೆಯಿಂದ ಒಂದು ಪದ ಬಿಟ್ಟು ಹೋಗಲೂಬಹುದು, ಒಂದು ಪದ ಬಂದು ಸೇರಲೂಬಹುದಾಗಿದೆ.

೫. ಅನರ್ಥವಾಗಿ, ಸಂಪಾದನಾಕಾಲದಲ್ಲಿ ಅನೇಕ ಪದಗಳು ಬಂದು ಸೇರುವುದುಂಟು.

೬. ಪ್ರತಿಕಾರರಿಗೆ ಅಕ್ಷರ ಜ್ಞಾನವಿಲ್ಲದಿದ್ದಾಗ್ಯೂ ಕೆಲವು ಬಾರಿ ತಪ್ಪು ಸಂಭವಿಸಬಹುದಾಗಿದೆ.

೭. ಭಿನ್ನಪಾಠ ವ್ಯತ್ಯಾಸವಾಗುವುದರಿಂದ ಮೂಲಪಾಠ ವ್ಯತ್ಯಾಸವಾಗಲೂಬಹುದು.

೮. ಪದ ವಿಭಜನೆ ಮಾಡುವಾಗಲೂ ತಪ್ಪು ಸಂಭವಿಸಬಹುದಾಗಿದೆ.'[೩] ಎಂದು ಈ ರೀತಿಯಾಗಿ ಅನಂತರಂಗಾಚಾರ್ಯರು ಗ್ರಂಥಸಂಪಾದನೆ ಕುರಿತು ಹತ್ತಾರು ಉದಾಹರಣೆಗಳನ್ನು ನೀಡಿ ಈ ಮೇಲಿನ ವ್ಯಾಖ್ಯಾನಗಳನ್ನು ವಿಷದಪಡಿಸಿರುವುದುಂಟು.

ಇಷ್ಟೇ ಅಲ್ಲದೇ ಮೂಲ ಪಾಠದ ನಿಷ್ಕ್ರೀಯೆ ಪಾಠಾಂತರಗಳ ವಿಚಾರ, ಗ್ರಂಥ ವಿಮರ್ಶೆ, ಪರಿಷ್ಕರಣ ಈ ಎಲ್ಲವುಗಳನ್ನು ಒಂದು ಕಲೆಯನ್ನಾಗಿಸಿಕೊಂಡು ಗ್ರಂಥಸಂಪಾದನಾಕಾರ್ಯ ನಡೆಸಬೇಕೆಂದು ಅಭಿಪ್ರಾಯಿಸಿದ್ದಲ್ಲದೆ, ಇತರ ಪುರಾತನ ಗ್ರಂಥಗಳ ಹಸ್ತಪ್ರತಿಗಳ ಸಹಾಯದಿಂದ ಈ ಮಾತನ್ನು ನಿರೂಪಿಸಿದ್ದಾರೆ. ಇಲ್ಲಿ ನಿರೂಪಿತವಾದ ತತ್ವಗಳು ಎಲ್ಲಾ ಭಾರತೀಯ ಭಾಷೆಯ ಪುರಾತನ ಗ್ರಂಥಗಳ ಸಂಪಾದನ ಕಾರ್ಯಕ್ಕೂ ಅನ್ವಯಿಸಿದ್ದಾಗಿವೆ. ಆದ್ದರಿಂದ ಈ ಸಂಪಾದನಾಶಾಸ್ತ್ರ ಮಹತ್ವವುಳ್ಳದಾಗಿದೆ.

ಇದೇ ರೀತಿಯಾಗಿ ಕನ್ನಡಕ್ಕೂ ಒಂದು ಅಧ್ಯಯನ ಶಿಸ್ತನ್ನು ಒದಗಿಸಿ ಪ್ರೇರಣೆ, ಪೋಷಣೆ ರೂಪದಲ್ಲಿ ಮೂಡಿಬಂದ ಹಲವಾರು ವಿದ್ವಾಂಸರಲ್ಲಿ ಡಿ.ಎಲ್.ಎನ್. ರವರೂ ಒಬ್ಬರು. ಹಳಗನ್ನಡ ಸಾಹಿತ್ಯದಲ್ಲಿ ಅಧ್ಯಯನದ ಒಂದು ಬದ್ಧತೆಗೆ ಹಾದಿ ಹಾಕಿಕೊಟ್ಟ ಇವರು ಪ್ರಾಚೀನ ಕಾವ್ಯ, ಕೃತಿಗಳ ಅಧ್ಯಯನಕ್ಕೆ ತಲಸ್ಪರ್ಶಿ ರೂಪುಕೊಟ್ಟ ವಿದ್ವಾಂಸರು ಹೌದು. ಪ್ರಾಚೀನ ಸಾಹಿತ್ಯವನ್ನು ವ್ಯವಸ್ಥಿತವಾಗಿ ರೂಪುಗೊಳಿಸುವಿಕೆಗೆ ಒಂದು ಹಾದಿಯಾಗಿ 'ಕನ್ನಡ ಗ್ರಂಥಸಂಪಾದನೆ' ಎಂಬ ಕೃತಿಯನ್ನು ೧೨ ಅಧ್ಯಾಯಗಳಲ್ಲಿ ನಿರೂಪಿಸಿ ಕೃತಿಗೆ ತಕ್ಕ ಅನುಬಂಧವನ್ನು ಅಭ್ಯಾಸದ ಹೆಚ್ಚಿನ ಅನುಕೂಲಕ್ಕೆ ಒದಗಿಸಿದ್ದು ಉತ್ತಮವೆನಿಸಿದೆ. ೧೯೬೪ರಲ್ಲಿ ಮೂಡಿಬಂದ ಈ ಕೃತಿಯು ಕನ್ನಡ ಗ್ರಂಥಸಂಪಾದನಾ ವಿಷಯವಾಗಿ ತಿಳಿಸುವ ಮೊದಲ ಕೃತಿ ಎನಿಸಿದೆ. ಇದಕ್ಕೆ ಪೂರಕವೆಂಬಂತೆ ಪ್ರಾಚೀನ ಕೃತಿಗಳನ್ನು ಕುರಿತಂತೆ ಪಾಶ್ಚಾತ್ಯ ದೇಶಗಳಲ್ಲಿ ವಿಶೇಷ ಅಧ್ಯಯನಗಳು ಹತ್ತಾರು ನಡೆದಿವೆ. ಈ ಶಾಸ್ತ್ರವನ್ನು ತಿಳಿಹೇಳುವ ಗ್ರಂಥಗಳು ಇಂಗ್ಲಿಷ್‌ನಲ್ಲಿ ಸಾಕಷ್ಟಿವೆ ಆದರೇ ಈ ಪ್ರಮಾಣೀಭೂತ ಕಾರ್ಯವನ್ನು (ಪ್ರಯತ್ನವನ್ನು) ಕನ್ನಡದ ಪ್ರಾಚೀನ ಗ್ರಂಥಗಳಿಗೆ ಅನ್ವಯಿಸುವ ಕ್ರಮಕ್ಕೆ ಮೊದಲು ನಾಂದಿ ಹಾಡಿದವರು ಡಿ.ಎಲ್.ಎನ್.ರವರು.

'ಕನ್ನಡ ಗ್ರಂಥಸಂಪಾದನಾ ಶಾಸ್ತ್ರಕ್ಕೆ ಬಹುದೊಡ್ಡ ಇತಿಹಾಸವಿದ್ದು, ಈ ಪ್ರಕಾರ ಸಂಪಾದನಾಕಾರ್ಯ ನಡೆಸುವುದು ಮೊದಲು ಶಾಸ್ತ್ರವಿಧಾನ ಅಧ್ಯಯನ ನಡೆಸುವುದು ಎರಡನೆಯ ಕಾರ್ಯವೆನಿಸಿದೆ. ಮುಖ್ಯವಾಗಿ ಗ್ರಂಥಸಂಪಾದನಾ ಅಧ್ಯಯನವನ್ನು ಕನ್ನಡದ ಎರಡು ಹಾಗೂ ಮೂರನೇ ತಲೆಮಾರಿನ ವಿದ್ವಾಂಸರು ಸ್ವ ಪ್ರಜ್ಞೆಯಿಂದ ಸ್ವತಃ ಪ್ರಯತ್ನದಿಂದ ಈ ಶಾಸ್ತ್ರಕ್ಕೆ ಪ್ರಾರಂಭಿಕ ತಳಹದಿ ಹಾಕಿದ್ದು ಉಂಟು. ದಕ್ಷಿಣಕರ್ನಾಟಕ ಭಾಗದೆಡೆಗೆ ಪ್ರೊ.ಟಿ.ಎಸ್.ವೆಂಕಣ್ಣಯ್ಯ, ತೀ.ನಂ.ಶ್ರೀಕಂಠಯ್ಯ, ಡಿ.ಎಲ್.ಎನ್. ಮುಂತಾದವರು ಕಂಡುಬಂದರೆ, ಉತ್ತರ ಕರ್ನಾಟಕದೆಡೆಗೆ ಶಿ.ಶಿ.ಬಸವನಾಳ, ಶಿ.ಚಿ.ನಂದಿಮಠ ಮೊದಲಾದವರಿದ್ದು ದಕ್ಷಿಣದ ಪೂರ್ವವಲಯಕ್ಕೆ ಕುಕ್ಕಿಲ ಕೃಷ್ಣಭಟ್ಟರು, ಮುಳಿಯ ತಿಮ್ಮಪ್ಪಯ್ಯ' ಮುಂತಾದವರು ಸಾಧನೆ ಮೆರೆದವರಾಗಿದ್ದಾರೆ.

ಮುಂದುವರೆದು ಬಿ.ಎಸ್.ಸಣ್ಣಯ್ಯ, ಎಸ್.ಶಿವಣ್ಣರವರು ಕನ್ನಡ ಗ್ರಂಥಸಂಪಾದನೆ ವಿಷಯದಲ್ಲಿ ಮಾಡಿದ ಸಾಧನೆ ಅಪಾರವೆನಿಸಿದೆ. ಇದೇ ರೀತಿಯಾಗಿ ಕನ್ನಡ ಗ್ರಂಥಸಂಪಾದನಾ ಶಾಸ್ತ್ರ ಎಂಬ ಕೃತಿಯ ಮೂಲಕ ಆರು ವಿಶೇಷ ಕಾಂಡಗಳ ಪರಿಚಯದೊಂದಿಗೆ ಗ್ರಂಥಸಂಪಾದನೆಯ ಅಧ್ಯಯನವನ್ನು ಡಿ.ಎಲ್.ಎನ್. ರವರಿಗಿಂತಲೂ ಭಿನ್ನವಾಗಿ ನೋಡಬಹುದೆಂದು ತೋರಿಸಿದವರಲ್ಲಿ ಎಂ.ಎಂ.ಕಲಬುರ್ಗಿ ಅವರು ಪ್ರಮುಖರಾಗಿದ್ದಾರೆ. ನಂತರದ ದಿನಗಳಲ್ಲಿ ಇವರ ಸಮಕಾಲೀನರೇ ಆದ ಎಂ.ಚಿದಾನಂದಮೂರ್ತಿ, ಟಿ.ವಿ.ವೆಂಕಟಾಚಲಶಾಸ್ತ್ರಿ, ವೈ.ಸಿ.ಭಾನುಮತಿ, ಟಿ.ಎಸ್.ನಾಗರತ್ನ ಇಷ್ಟೇ ಅಲ್ಲದೇ, ಇತರೆ ವಿದ್ವಾಂಸರೊಂದಿಗೆ ನಾಡಿನ ವಿವಿಧ ವಿಶ್ವವಿದ್ಯಾಲಯಗಳು, ಮಠಮಾನ್ಯಗಳ ಮೂಲಕ ಗ್ರಂಥಸಂಪಾದನಾ ಅಧ್ಯಯನ ಹೊಸ ವಿಚಾರಗಳ ಮಾರ್ಪಾಡಿನೊಂದಿಗೆ ಬೆಳೆದು ಸಾಗುತ್ತಿರುವ ಒಂದು ಅಧ್ಯಯನ ರೂಪವಾಗಿದೆ.

ಇತ್ತೀಚಿಗೆ ಗ್ರಂಥಸಂಪಾದನೆ ಕುರಿತು ಸಮಗ್ರವಾಗಿ ಅಧ್ಯಯನಕ್ಕೆ ನಿಲುಕುವ ಮಟ್ಟದಲ್ಲಿ ರಚಿತವಾದ ಕೃತಿ ಎಸ್.ಎಸ್.ಅಂಗಡಿ ಅವರ 'ಕರ್ನಾಟಕ ಗ್ರಂಥಸಂಪಾದನೆ' ಇದೊಂದು ಕ್ಲಾಸಿಕ್‌ಕೃತಿಯೆಂದು ಉನ್ನತ ವಿದ್ವಾಂಸರಾದ ಎಂ.ಚಿದಾನಂದಮೂರ್ತಿಯವರು ಅಭಿಪ್ರಾಯಿಸಿದ್ದಾರೆ. ಈ ಕೃತಿಯು ಗ್ರಂಥಸಂಪಾದನೆ ಅಧ್ಯಯನಕ್ಕೆ ಅತ್ಯಂತ ಮೌಲಿಕ ಕೃತಿಯಾಗಿದ್ದು ಆಕ್ಷೇತ್ರದಲ್ಲಿ ತೊಡಗಬಯಸುವವರಿಗೆ ಶ್ರೇಷ್ಠ ಮಾರ್ಗದರ್ಶಿ ಎನಿಸಿದೆ. ಮಾರ್ಗ-ದೇಶಿ ಸಾಹಿತ್ಯದ ಚಿಂತನೆ ಇಲ್ಲಿ ಕಂಡುಬಂದಿದ್ದು ಇದರ ಸಂಪಾದನ ವಿಧಾನಗಳ ಅಧ್ಯಾಯಗಳಲ್ಲಿ ಮೂಡಿಬಂದಿದೆ. ಮೊದಲು ಅಧ್ಯಾಯದಲ್ಲಿ ಗ್ರಂಥಸಂಪಾದನೆ ತಾತ್ವಿಕತೆ, ಎರಡನೆ ಅಧ್ಯಾಯದಲ್ಲಿ ಗ್ರಂಥಸಂಪಾದನೆ ಪಾಠಪರಿಷ್ಕರಣೆ ಮೂರನೇ ಅಧ್ಯಾಯದಲ್ಲಿ ಗ್ರಂಥಸಂಪಾದನೆ, ವಿದ್ವಾಂಸರ ಸಾಧನೆ, ನಾಲ್ಕನೇ ಅಧ್ಯಾಯವಾಗಿ ಗ್ರಂಥಸಂಪಾದನೆ, ಜನಪರ ಸಾಹಿತ್ಯ ಎಂದು ವಿಭಜಿಸಿ ಇದರಾಳದಲ್ಲಿ ಒಟ್ಟು ೫೭ ಚರ್ಚೆಗಳು ಈ ಕುರಿತು

ಮೂಡಿಬಂದಿದ್ದು ಗ್ರಂಥಸಂಪಾದನೆ ಅಧ್ಯಯನ ಕುರಿತ ವಾಸ್ತವ ಕಾಲಘಟ್ಟದ ಉನ್ನತ ಕೃತಿ ಇದು ಎನಿಸಿದೆ.

ಪ್ರಸ್ತುತ ವಿಷಯಕ್ಕೆ ಮರುಕಳಿಸುವುದಾದರೆ, ಇಂದಿನ ಈ ವಾಸ್ತವ ಅಧ್ಯಯನದ ಬೆಳವಣಿಗೆಗೆ ಮುಖ್ಯ ತಾಯಿಬೇರಾಗಿದ್ದು ಡಿ.ಎಲ್.ಎನ್. ಅವರ ಅಧ್ಯಯನಗಳು. ವಿಸ್ತಾರವಾದ ಇವರ ಅಧ್ಯಯನ, ಅಧ್ಯಾಪನಗಳಿಂದ ಮೂಡಿಬಂದಿದ್ದು 'ಕನ್ನಡ ಗ್ರಂಥಸಂಪಾದನೆ'. ಈ ಕೃತಿಯಿಂದ ತಿಳಿಯಬಹುದಾದ ಮಹತ್ತರ ವಿಷಯಗಳೆಂದರೇ 'ಹಳಗನ್ನಡ ಕಾವ್ಯ, ಪುರಾಣ ಹಾಗೂ ವ್ಯಾಕರಣ ಕೃತಿಗಳನ್ನು ಶೋಧಿಸಿ, ಸಂಪಾದಿಸಿ ಪ್ರಕಟಿಸುವ ವಿಧಾನ ಹೇಗೆ? ಸಂಪಾದನೆಯಲ್ಲಿ ಸಂಶೋಧನಾಕಾರರು ಅನುಸರಿಸಬೇಕಾದ ಮಾರ್ಗೋಪಾಯಗಳು ಯಾವುವು? ಸಂಶೋಧಕನ ವ್ಯಾಸಾಂಗದ ವ್ಯಾಪ್ತಿ ಎಷ್ಟಿರಬೇಕು? ಎಂಬಿತ್ಯಾದಿ ಅಂಶಗಳು ದಾಖಲಾಗಿದ್ದನ್ನು ಈ ಕೃತಿಯಿಂದ ತಿಳಿಯಬಹುದಾಗಿದೆ. ಡಿ.ಎಲ್.ಎನ್ ಅವರು ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಕಾಲಘಟ್ಟದಲ್ಲಿ ಕನ್ನಡದ ವಿದ್ಯಾರ್ಥಿಗಳಿಗೆ ಗ್ರಂಥಸಂಪಾದನಾ ಶಾಸ್ತ್ರದ ಕುರಿತಾಗಿ ಪಾಠಮಾಡುವ ಸದಾವಕಾಶ ಲಭ್ಯವಾಗಿತ್ತು. ಈ ಶಾಸ್ತ್ರದ ಕುರಿತಾಗಿ ಕನ್ನಡದಲ್ಲಿ ಆವರೆಗೆ ಯಾವುದೇ ಗ್ರಂಥಗಳಾಗಲಿ, ಪ್ರತ್ಯೇಕ ಲೇಖನಗಳಾಗಲಿ ಇರಲಿಲ್ಲ. ಆಗ ಡಿ.ಎಲ್.ಎನ್. ಅವರು ತುಂಬಾ ಪ್ರಯಾಸ ಪಟ್ಟು ಆಂಗ್ಲಭಾಷೆಯಲ್ಲಿರುವ ಗ್ರಂಥಗಳನ್ನು ಓದಿ ಹಾಗೂ ತಮ್ಮ ಗ್ರಂಥಸಂಪಾದನಾಕಾರ್ಯದ ಅನುಭವಗಳ ಬೆಳಕಿನಲ್ಲಿ ಪಾಠಮಾಡಿದರು. ಮುಂದೆ ಅವರಿಗೆ ಈ ವಿಷಯ ಕುರಿತಾಗಿ ಒಂದು ಉದ್ಗ್ರಂಥವನ್ನು ಬರೆಯಬೇಕೆನ್ನಿಸಿ ವಿಶ್ವವಿದ್ಯಾಲಯದ ಧನಸಹಾಯ ಆಯೋಗದ ನೆರವು ಪಡೆದು ಸ್ವತಂತ್ರ ಅಧ್ಯಯನ ನಡೆಸಿ ಕನ್ನಡ ಗ್ರಂಥಸಂಪಾದನೆ ಎಂಬ ಕೃತಿಯನ್ನು ರಚಿಸಿದ್ದಾರೆ.'[೫]

ಡಿ.ಎಲ್.ಎನ್. ರವರು ಪ್ರಾಚೀನ, ಮಧ್ಯಕಾಲೀನ ಸಾಹಿತ್ಯಾಧ್ಯಯನದ ಆಳವಾದ ಓದಿನ ಅಧ್ಯಯನ ಶ್ರಮದಿಂದ ಈ ಕೃತಿ ಮೂಡಿಬಂದಿದ್ದು, ಕನ್ನಡ ಹಸ್ತಪ್ರತಿಗಳನ್ನು ಪರಿಶೀಲಿಸಿ ನಮ್ಮ ಕಣ್ಣ ಮುಂದೆ ಕನ್ನಡ ಗ್ರಂಥಸಂಪಾದನೆಯ ಸ್ವರೂಪವನ್ನು ಪ್ರದರ್ಶಿಸಿದ್ದು ಇದೆ. ಕೃತಿಯ ವ್ಯಾಪ್ತಿ, ವಿಧಾನ, ವಿಶ್ಲೇಷಣೆ, ಸ್ವೋಪಜ್ಞತೆ ಎಲ್ಲವೂ ಮೇಲ್ಮಟ್ಟದಾಗಿ ಮೂಡಿಬಂದಿವೆ. ಈ ಕೃತಿಯಲ್ಲಿ ಕೃತಿಯ ರಚನೆ ಹಾಗೂ ನಿರ್ವಹಣೆಗೆ ಡಿ.ಎಲ್.ಎನ್. ರವರು ತಮ್ಮದೇ ಆದ ಮಾರ್ಗವನ್ನು ಕಂಡುಕೊಂಡಿದ್ದಾರೆ. ಗ್ರಂಥಸಂಪಾದನೆಯ ತತ್ವಗಳನ್ನು ಕನ್ನಡ ಗ್ರಂಥಗಳಿಗೆ ಹೇಗೆ ಅನ್ವಯಿಸಬೇಕೆಂಬುದನ್ನು ಸೋದಾಹರಣವಾಗಿ ನಿರೂಪಿಸಿದ್ದು ಅಧ್ಯಯನದಿಂದ ತಿಳಿದುಬಂದಿದೆ. ಕಠಿಣವಾದದ್ದನ್ನು ಸರಳವಾಗಿ ಅರ್ಥೈಸುವ ಕ್ರಮ ಅವರಿಗೆ ಪ್ರಾಪ್ತವಾಗಿತ್ತೆಂದರೆ ತಪ್ಪಾಗದ್ದಾಗಿದೆ.

ಮುಖ್ಯವಾಗಿ ಕನ್ನಡ ಗ್ರಂಥಸಂಪಾದನೆಯ ತಾತ್ವಿಕತೆಯ ಬಗ್ಗೆ ಚರ್ಚಿಸುವುದಾದರೇ, ತಾತ್ವಿಕತೆ ಎಂದರೆ, ತತ್ವ ವಿಚಾರ, 'ಯಾವುದೋ ಒಂದು ವಿಚಾರವನ್ನು

ಮೂಲವನ್ನಾಗಿಸಿಕೊಂಡು ಹೊಸದೊಂದು ವಿಚಾರವನ್ನು ನಮ್ಮದೇ ಶೈಲಿಯಲ್ಲಿ ಹೇಳುವ ಕ್ರಮಕ್ಕೆ ತಾತ್ವಿಕತೆ' ಎನ್ನಬಹುದಾಗಿದೆ. ಈ ವಿಚಾರ ಕನ್ನಡ ಗ್ರಂಥಸಂಪಾದನೆಗೆ ಹೊರತಾಗಿಲ್ಲದ್ದಾಗಿದೆ. ಇಲ್ಲಿ ಪ್ರಮುಖವಾಗಿ ಪಾಶ್ಚಾತ್ಯ ಸಾಹಿತಿಗಳಿಂದ ಆಯಾ ನಾಡಿನಲ್ಲಿ ಕ್ರಿಟಿಸಿಜಂ ಎನ್ನುವ ವಿಧಾನ ತಮ್ಮ ತಮ್ಮ ಭಾಷೆ ಜನವರ್ಗದ ಸಾಹಿತ್ಯ ಆಯಾ ನೆಲೆಯಲ್ಲಿ ಸಂಪಾದನೆ, ಸಂಕಲನಗಳು ನಡೆದು ತಮ್ಮದೇ ಆದ ವ್ಯವಸ್ಥೆಯ ಒಳಗೆ ಅದನ್ನು ಪ್ರತಿಷ್ಠಾಪಿಸಿ ಆ ಪ್ರತಿಷ್ಠಾಪಿತ ವಿಚಾರಗಳನ್ನು ಇತರೆ ಜನವರ್ಗದ ನೆಲೆಗೆ ಹೊರೆಗೆ ಹಚ್ಚಿನೋಡುವುದಲ್ಲದೆ, ತಮ್ಮದೇ ಪ್ರಾಚೀನತೆಯನ್ನು ಭದ್ರಗೊಳಿಸುವ ಅವಧಾನಕಲೆ ಇಲ್ಲಿ ಪ್ರಮುಖವಾಗಿ ಕಂಡುಬರುವುದಾಗಿದೆ. ಈ ಕ್ರಮಕ್ಕೆ ಹೊರತಾಗಿಲ್ಲದ್ದಾಗಿದೆ ಕನ್ನಡ ಗ್ರಂಥಸಂಪಾದನಾ ಸಾಹಿತ್ಯ. ಈ ಒಂದು ಕ್ರಮ ಹುಟ್ಟಿಕೊಳ್ಳಲಿಕ್ಕೆ ಮೂಲ ನಮ್ಮ ನಾಡಿನ ಪ್ರಾಚೀನ ಸಾಹಿತ್ಯದ ವಿಸ್ತೃತ ರೂಪವೇ ಕಾರಣವಾಗಿದೆ.

ಇದೇ ರೀತಿ, ಗ್ರಂಥಸಂಪಾದನಾ ಅಧ್ಯಯನಕ್ಕೆ ಅನ್ವಯಿಕತೆ ಹೇಗೆ ಹೆಣೆದುಕೊಂಡಿದೆ. ಎಂದರೆ ಪಾಶ್ಚಾತ್ಯ ವಿದ್ವಾಂಸರಿಂದ ಒಂದು ರೂಪಪಡೆದು ಬಂದ 'ಕ್ರಿಟಿಸಿಜಂ' ಸಾಹಿತ್ಯ ನಮ್ಮ ದೇಶಿ ಚಿಂತನೆಗೆ ಒಳಪಟ್ಟು ಇಲ್ಲಿನ ಸಾಹಿತ್ಯಕ್ಕೆ ಅನ್ವಯವಾಗುವಂತೆ ಅಲ್ಲಿನ ವಿಚಾರಗಳು ಇಲ್ಲಿನ ಸಾಹಿತ್ಯಕ್ಕೆ ಅನ್ವಯವಾಗುವಂತೆ, ಅಲ್ಲಿನ ವಿಚಾರಗಳು ಇಲ್ಲಿನ ವಿಚಾರಗಳಿಗೆ ತಕ್ಕಂತೆ ಮಾರ್ಪಟ್ಟು ವಿ.ಎಸ್. ಸುತ್ತಣಕರ್ ಬಂಡಾಕರರ್‌ರವರು ಜರ್ಮನ್‌ನಲ್ಲಿ ನಡೆಸಿದ ಅಧ್ಯಯನದಿಂದ 'ದಿ ಇಂಡಿಯನ್ ಟೆಕ್ಸ್‌ಟುವೆಲ್ ಕ್ರಿಟಿಸಿಜಂ' ಎಂಬ ಅಧ್ಯಯನ ದೇಶಿಯ ಮಟ್ಟದಲ್ಲಿ ಮೂಡಿಬಂದಿತು. (ಭಾರತೀಯ ಗ್ರಂಥ ಸಂಪಾದನಾ ಶಾಸ್ತ್ರ ಸಂ: ಡಾ.ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ) ತದನಂತರ ೧೯೬೪ರ ವೇಳೆಗೆ ಡಿ.ಎಲ್.ಎನ್. ರವರು ಕನ್ನಡದ್ದೆ ಆದ 'ಕನ್ನಡ ಗ್ರಂಥಸಂಪಾದನೆ'ಯನ್ನು ನಮ್ಮ ಪ್ರಾಚೀನ ಸಾಹಿತ್ಯದ ಸಂಪಾದನೆ, ಸಂಕಲನ ಪರಿಷ್ಕರಣದ ವಿಧಾನದ ಹಿನ್ನೆಲೆಯಲ್ಲಿ ಅನ್ವಯೀಕರಿಸಿ ೧೨ ಅಧ್ಯಾಯಗಳಲ್ಲಿ ರಚಿಸಿದ್ದಾರೆ. ತದ ನಂತರ ಸೀತಾರಾಮ ಜಾಹಿರದಾರ ಅವರು ೧೯೭೭ರಲ್ಲಿ 'ಗ್ರಂಥ ಸಂಪಾದನಾ ಶಾಸ್ತ್ರ ಪರಿಚಯ' ಎಂಬ ಹೊತ್ತಿಗೆಯನ್ನು ರೂಪಿಸಿ ಈ ಶಾಸ್ತ್ರಕ್ಕೆ ನೀರೆರೆದದ್ದು ಈ ಕೃತಿಯು ೭ ಅಧ್ಯಾಯಗಳನ್ನೊಳಗೊಂಡಿದ್ದಾಗಿದೆ. ಪ್ರಸ್ತುತ ಕೃತಿಯು, ವಿಷಯ ಪ್ರವೇಶ, ಗ್ರಂಥಸಂಪಾದನಾ ಶಾಸ್ತ್ರದ ಬೆಳವಣಿಗೆ, ಪಾಠಸಂಯೋಜನೆ, ಪಾಠಪರಿಷ್ಕರಣೆ, ಉನ್ನತವಿಮರ್ಶೆ, ಉಪಸಂಹಾರ ಎಂಬ ಕ್ರಮದಲ್ಲಿನ ಅಧ್ಯಯನಕ್ಕೆ ವಿಸ್ತರಿಸಿಕೊಂಡದ್ದಾಗಿದೆ.

ಗ್ರಂಥಸಂಪಾದನಾ ಶಾಸ್ತ್ರದ ತಾತ್ವಿಕ ಬೆಳವಣಿಗೆಗೆ ಪೋಷಕವಾದ ಮತ್ತೊಂದು ಕೃತಿ ಬಿ.ಎಂ.ಶ್ರೀ. ಪ್ರತಿಷ್ಠಾನದಿಂದ ೧೯೮೨ರಲ್ಲಿ ಎಂ.ವಿ.ಸೀತಾರಾಮಯ್ಯ ಮತ್ತು ಆರ್.ಶೇಷಶಾಸ್ತ್ರಿಗಳವರಿಂದ ಸಂಪಾದಿತವಾದ ಕೃತಿ 'ಮಣಿಹ' ಇದೊಂದು ಹಸ್ತಪ್ರತಿ ಗ್ರಂಥಸಂಪಾದನಾಕಾರರಿಗೆ ಕೈಗನ್ನಡಿಯಂತಹ ಕೃತಿ ಎನಿಸಿದೆ. ನಂತರ ಬಿ.ಎಸ್.ಸಣ್ಣಯ್ಯರವರು ಪ್ರಾಚೀನ ಕನ್ನಡ

ಗ್ರಂಥ ಸಂಪಾದನೆ ಎಂಬ ಕೃತಿಯನ್ನು ೧೩ ಅಧ್ಯಾಯಗಳಲ್ಲಿ ಚಂಪೂ, ಗದ್ಯ, ವಚನ, ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಶತಕ, ಕೀರ್ತನೆ, ಆಧ್ಯಾತ್ಮಿಕ–ಧಾರ್ಮಿಕ, ಶಾಸ್ತ್ರಗ್ರಂಥಗಳನ್ನು ಅನುಲಕ್ಷಿಸಿದಂತೆ ಈ ಕೃತಿಯನ್ನು ರೂಪುಗೊಳಿಸಿದ್ದಾರೆ. ಇದೊಂದು ಅನ್ವಯಿಕ ರೂಪುವಾದರೇ ತೀ.ನಂ.ಶ್ರೀ. ಎಂ.ವಿ.ಸೀತಾರಾಮಯ್ಯ ದೇ.ಜ.ಗೌ. ಎಂ.ಚಿದಾನಂದಮೂರ್ತಿ, ಟಿ.ವಿ.ವೆಂಕಟಾಚಲಶಾಸ್ತ್ರಿ ಗಳಿತ್ಯಾದಿಯವರು ಗ್ರಂಥ ಸಂಪಾದನೆಯ ಕುರಿತು ತಮ್ಮದೇ ಆದ ಅಧ್ಯಯನ ಕ್ರಮವನ್ನು ಅಳವಡಿಸಿಕೊಂಡು ಅಧ್ಯಯನ ನಡೆಸಿದ್ದಾರೆ. ಕಾಲಾನಂತರದಲ್ಲಿ ೧೯೭೨ರ ಹೊತ್ತಿಗೆ ಎಂ.ಎಂ.ಕಲಬುರ್ಗಿ ಅವರು ಇತಿಹಾಸ, ಲೇಖನ, ಸಾಹಿತ್ಯ, ಹಸ್ತಪ್ರತಿ, ಸಂಪಾದನಾ, ಶೇಷ ಕಾಂಡಗಳೆಂದು ಆರು ಅಧ್ಯಾಯಗಳಲ್ಲಿ ೧೨ ವಿಚಾರಗಳನ್ನು ಗ್ರಂಥಸಂಪಾದನಾ ವಿಧಾನಕ್ಕೆ ಅನ್ವಯಿಕರಿಸಿಕೊಂಡು ಅಧ್ಯಯನ ಕ್ರಮಕ್ಕೆ ಒಳಪಡಿಸಿರುವುದು ಗ್ರಂಥಸಂಪಾದನಾ ಕಾರ್ಯದ ವಿಸ್ತೃತತೆಗೆ ಒಂದು ಹೊಸ ರೂಪವೆನಿಸಿದೆ.

ಇದೇ ರೀತಿಯಾಗಿ ವೈ.ಸಿ.ಭಾನುಮತಿ, ಟಿ.ಎನ್.ನಾಗರತ್ನ, ಎಫ್.ಟಿ.ಹಳ್ಳಿಕೇರಿ, ವೀರೇಶ ಬಡಿಗೇರ, ಎಸ್.ಎಸ್.ಅಂಗಡಿ, ಕೆ.ರವೀಂದ್ರನಾಥ, ಎಸ್.ಆರ್.ಚನ್ನವೀರಪ್ಪ ಇತ್ಯಾದಿ ವಿದ್ವಾಂಸರು ಗ್ರಂಥಸಂಪಾದನಾ ಕಾರ್ಯಕ್ಕೆ ಇತ್ತೀಚಿನ ದಿನಗಳಲ್ಲಿ ಗ್ರಂಥಸಂಪಾದನೆಯ ಹೆಚ್ಚಿನ ತಾತ್ವಿಕ ಬೆಳವಣಿಗೆಯತ್ತ ಹೊಸ ಚಿಂತನೆ ಹರಿಸಿರುವ ವಿದ್ವಾಂಸರೆನಿಸಿದ್ದಾರೆ. ಇತ್ತೀಚೆಗೆ ಎಸ್.ಎಸ್.ಅಂಗಡಿ ಅವರು 'ಕರ್ನಾಟಕ ಗ್ರಂಥಸಂಪಾದನೆ' ಎಂಬ ಕೃತಿಯನ್ನು ರಚಿಸಿದ್ದು ಇದು ಡಿ.ಎಲ್.ಎನ್. ಅವರ ಕೃತಿಯ ಮೂಲ ಮಾರ್ಗದರ್ಶನದಲ್ಲಿ ಅನ್ವಯಿಕರಿಸಿಕೊಂಡು ಹೊಸಬಗೆಯ ವಿವಿಧ ರೂಪಗಳ ಗ್ರಂಥಸಂಪಾದನೆಯ ಕುರಿತು ವಿಸ್ತಾರತೆ, ವಿಸ್ತೃತತೆಯನ್ನು ಮುನ್ನೆಡೆಸಿಕೊಂಡು ಬಂದ ಕೃತಿ ಎನಿಸಿದೆ.

ಈ ಮೊದಲು ಗ್ರಂಥಸಂಪಾದನೆ ಎಂಬ ವಿಷಯ ಕನ್ನಡ ಸಾಹಿತ್ಯದಲ್ಲಿ ಇದ್ದಿಲ್ಲವೆಂದಲ್ಲ ಇದಕ್ಕೊಂದು ಪೂರಕ ಆಯಾಮ ಇಲ್ಲದ್ದು ಇಲ್ಲಿನ ಮುಖ್ಯ ಸಂಗತಿ. ಈ ಪೂರಕ ಚೌಕಟ್ಟು ಒದಗಿ ಬಂದದ್ದು ಡಿ.ಎಲ್.ಎನ್. ಅವರಿಂದ, ಗ್ರಂಥಸಂಪಾದನೆಯನ್ನು ಶಾಸ್ತ್ರನಿಯಮ, ಪಾಠ ಪರಿಷ್ಕರಣದ ವಿಧಿ ವಿಧಾನವನ್ನಾಗಿಸಿ ಮೊದಲಿಗೆ ಕನ್ನಡದಲ್ಲಿ ಪರಿಚಯಿಸಿದ್ದು ಈ ಉದ್ಗ್ರಂಥವಾಗಿದೆ.

ಕನ್ನಡ ಗ್ರಂಥಸಂಪಾದನೆ ಗ್ರಂಥವು ಹನ್ನೆರಡು ಅಧ್ಯಾಯಗಳಲ್ಲಿ ರೂಪುಗೊಂಡುದ್ದಾಗಿದ್ದು, ಇದು ಒಟ್ಟು ೨೩೪ ಪುಟಗಳಲ್ಲಿ ಬಿತ್ತರಗೊಂಡಿದೆ. ಅನುಬಂಧದ ಭಾಗವಾಗಿ ೨೨ ಪುಟಗಳಲ್ಲಿ ಅಧ್ಯಯನ ಪೂರಕ ಅಂಶಗಳನ್ನು ಸಂಕಲಿಸಿದ್ದು ಕೃತಿಯ ಕೊನೆ ೨ ಪುಟಗಳಲ್ಲಿ ಮೊದಲ ಅಚ್ಚಿನಲ್ಲಾದ ತಪ್ಪುಗಳ ಸರಿ ಪರಿಷ್ಕರಣೆಯನ್ನು ನೀಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಗ್ರಂಥಸಂಪಾದನೆಯ ಚರಿತ್ರೆ ವಿಷಯವಾಗಿ ಪಾಶ್ಚಾತ್ಯ ದೇಶದಲ್ಲಿ ಬೆಳೆದುಬಂದ ಬಗೆಯನ್ನು, ಭಾರತೀಯರಲ್ಲಿ ಗ್ರಂಥಸಂಪಾದನಾ ಕುರಿತಿದ್ದ

ವಿಷಯಗಳನ್ನು ಸಮಗ್ರವಾಗಿ ನಿರೂಪಿಸಿದ್ದು ಕಂಡುಬಂದಿದೆ. ಪಾಶ್ಚಾತ್ಯ ದೇಶಗಳಲ್ಲಿನ ಮಹಾಕಾವ್ಯ ಹಾಗೂ ನಾಟಕ ಕೃತಿಗಳ ಸಂಪಾದನಾ ಕಾರ್ಯ ಕುರಿತು ನೀಡಿದ ವಿವರಣೆಗಳು ಮೌಲಿಕವಾಗಿ ಕಂಡುಬಂದಿವೆ.

ಎರಡನೆಯ ಅಧ್ಯಾಯದಲ್ಲಿ ಲೇಖನ ಸಾಮಗ್ರಿಗಳನ್ನು ಕುರಿತು ಪ್ರಸ್ತಾಪಿಸಿದ್ದು, ಕಬ್ಬಿಣ, ಹಿತ್ತಾಳೆ, ತಾಮ್ರ, ಕಂಚು, ಮಣ್ಣು, ಚರ್ಮ, ತಾಳೆಪತ್ರ, ಭೂರ್ಜ್ವಪತ್ರ ಕಡತ ಶಿಲೆ ಮಸಿ, ಮುಂತಾದ ಲೇಖನ ಸಾಮಗ್ರಿಗಳ ಕುರಿತಾಗಿ ನೀಡಿದ ವಿವರಣೆಗಳು ತುಂಬಾ ಉತ್ತಮ ಪರಿಚಯಾಂಶಗಳಾಗಿವೆ. ಪ್ರಾಚೀನ ಕಾಲದಲ್ಲಿ ದೊರೆಯುತ್ತಿದ್ದ ಈ ಬರವಣಿಗೆ ಸಾಮಗ್ರಿಗಳ ರೂಪುಗೊಳಿಸಿಕೊಳ್ಳುವಿಕೆ, ಬಳಸುವಿಕೆಯ ಕುರಿತು ವಿಸ್ತೃತವಾಗಿ ಚರ್ಚೆ ನೀಡಿದ್ದು ಕಂಡುಬಂದಿದೆ.

ಮೂರನೆಯ ಅಧ್ಯಾಯದಲ್ಲಿ ಲಿಪಿಕಾರರು ಮತ್ತು ಅವರ ಆದರ್ಶ ವಿಚಾರಗಳ ಕುರಿತು ಪ್ರಸ್ತಾಪಿಸುತ್ತಾ, ಹವ್ಯಾಸಿ ಮತ್ತು ವೃತ್ತಿಲಿಪಿಕಾರರ ಕರ್ತವ್ಯ ನಿರ್ವಹಣೆಯ ಕುರಿತಾಗಿ ವಿವರಿಸಿದ್ದು ಕಂಡುಬಂದಿದೆ. ಇದರಲ್ಲಿನ ಹೊಣೆಗೇಡಿ ಹಾಗೂ ಕಿಡಿಗೇಡಿ ಸ್ವಭಾವದ ಲಿಪಿಕಾರರ ಕುರಿತಾಗಿ ತಿಳಿಸಿದ್ದು ಕಂಡುಬಂದಿದೆ.

ನಾಲ್ಕನೆಯ ಅಧ್ಯಾಯದಲ್ಲಿ, ಹಸ್ತಪ್ರತಿಗಳ ಸ್ವರೂಪ ಮತ್ತು ವಿಂಗಡನೆ ಕುರಿತಾಗಿ ತಿಳಿಸಿದ್ದು, ಏಕೈಕ ಹಸ್ತಪ್ರತಿ, ಪರಂಪರಾಗತ ಹಸ್ತಪ್ರತಿ, ಕವಿಯ ಹಸ್ತಾಕ್ಷರ ಪ್ರತಿ, ಮಿಶ್ರ ಪ್ರತಿಗಳೆಂದು ವಿವರಿಸಿದ್ದು ಕಂಡುಬಂದು ಜೊತೆಗೆ ಭಿನ್ನ ಪಾಠಗಳು ಹೇಗೆ ಹುಟ್ಟಿಕೊಳ್ಳುತ್ತವೆ.? ಎನ್ನುವುದರ ಕಾರಣಗಳನ್ನು ಕಂಡುಕೊಳ್ಳಲಾಗಿದೆ.

ಐದನೆಯ ಅಧ್ಯಾಯವಾಗಿ, ಪಾಠಾಂತರ ಸಂಕಲನದ ಕುರಿತಾಗಿ ತಿಳಿಸಿದ್ದು ಕಂಡುಬಂದಿದೆ. ಇಲ್ಲಿ ಹಸ್ತಪ್ರತಿಗಳನ್ನು ಪ್ರಾಚೀನತೆ, ಪ್ರಾದೇಶಿಕತೆ ಹಾಗೂ ಪರಿಶುದ್ಧತೆ ಎಂಬ ಆಧಾರಗಳಿಂದ ಸಂಕಲನಕ್ಕೆ ಸ್ವೀಕರಿಸಬಹುದೆಂಬ ನಿಲುವು ತಾಳಲಾಗಿದ್ದು, ಬಹು ಸಂಖ್ಯೆಯ ಹಸ್ತಪ್ರತಿಗಳಿದ್ದಾಗ ಪಾಠಸಂಕಲವನ್ನು ಹೇಗೆ ನಡೆಸಬೇಕು ಎಂಬ ವಿಚಾರಕ್ಕೆ ಸುಕ್ತಂಕರ ಎಡ್ಗರ್‌ಟನ್ ರವರುಗಳ ವಿಚಾರಗಳನ್ನು ಪ್ರಸ್ತಾಪಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ, ಅಕ್ಷರ ಸ್ಖಾಲಿತ್ಯಗಳು, ಎಂಬ ವಿಷಯ ಕುರಿತು ಪ್ರಸ್ತಾಪಿಸಲಾಗಿದ್ದು ಇಲ್ಲಿ ಅಕ್ಷರ ಭ್ರಾಂತಿಗೆ ಕಾರಣವಾಗುವ ಸಂದರ್ಭಗಳನ್ನು ಹತ್ತಾರು ಉದಾಹರಣೆಗಳೊಂದಿಗೆ ವಿವರಣೆ ತೋರಿದ್ದಾರೆ.

ಏಳನೇಯ ಅಧ್ಯಾಯವಾಗಿ, ಇತರೆ ಸ್ಖಾಲಿತ್ಯಗಳು ಎಂಬ ವಿಷಯದ ಕುರಿತು ಚರ್ಚಿಸಲಾಗಿದ್ದು ಇಲ್ಲಿ ಜಾನ್ಸನ್, ಲಿಂಡ್ಸ್, ಅವರುಗಳ ವಿಚಾರಗಳನ್ನು ನಿರೂಪಿಸಿ ಸ್ಖಾಲಿತ್ಯ ವಿಧಾನಗಳಿಗಿಂತ ಭಿನ್ನವಾಗಿ ಲೋಪ, ಪ್ರಕ್ಷೇಪ ಮತ್ತು ವ್ಯತ್ಯಾಸ ಎಂಬ ಮೂರು ಸುಲಭ ಗ್ರಾಹ್ಯವಾದ ವಿಧಾನದಲ್ಲಿ ಇತರೆ ಸ್ಖಾಲಿತ್ಯದ ರೂಪವನ್ನು ಗುರುತಿಸಿದ್ದಾರೆ.

ಎಂಟನೆಯ ಅಧ್ಯಾಯದಲ್ಲಿ ಹಸ್ತಪ್ರತಿಗಳ ಪರಸ್ಪರ ಸಂಬಂಧದ ವಿಷಯವಾಗಿ ಚರ್ಚಿಸುತ್ತಾ ಹಸ್ತಪ್ರತಿಗಳಲ್ಲಿರುವ ಪರಸ್ಪರ ಸಂಬಂಧವನ್ನು ಹಸ್ತಪ್ರತಿ ಪೀಳಿಗೆಯ, ರಚನೆಯ ಸಾಧ್ಯತೆಗಳನ್ನು ಇಲ್ಲಿ ಚರ್ಚಿಸಿದೆ. ಹಾಗೆಯೇ ವಿಶಿಷ್ಟ ಸ್ಖಾಲಿತ್ಯ ಇತ್ಯಾದಿ ಸ್ಖಾಲಿತ್ಯಗಳ ಬಗೆಗೆ ಹೆಚ್ಚಿನ ವಿಷಯವಾಗಿ ಚರ್ಚಿಸಿದ್ದಾರೆ. ವಿಶೇಷವಾಗಿ ಪಾಲ್‌ಮಾಸ್, ಪೋಸ್ಟ್‌ಗೇಡ್, ಬೋಧಿಯರ್ ಮೊದಲಾದವರ ವಿಚಾರ ಕ್ರಮಗಳನ್ನು ಇಲ್ಲಿ ವಿವರಿಸಿ ಕನ್ನಡಕ್ಕೆ ಇವುಗಳನ್ನು ಹೇಗೆ ಅನ್ವಯಿಸಬೇಕೆಂಬುದನ್ನು ವಡ್ಡಾರಾಧನೆಯ ಸನ್ನಿವೇಶಗಳ ಉದಾಹರಣೆ ಮೂಲಕ ವಿಸ್ತೃತವಾದ ವಿಷಯವನ್ನು ಚರ್ಚಿಸಿದ್ದಾರೆ.

ಒಂಭತ್ತನೆಯ ಅಧ್ಯಾಯದಲ್ಲಿ, ಪಾಠಪರಿಷ್ಕರಣೆಯ ವಿಚಾರ ಕುರಿತು ಪ್ರಸ್ತಾಪಮೂಡಿ ಬಂದಿದ್ದು ಇಲ್ಲಿ ಪಾಠಪರಿಷ್ಕರಣದ ಸ್ವರೂಪವನ್ನು ಪರಿಷ್ಕರಣಕಾರನ ಅರ್ಹತೆಗಳನ್ನು ಹಲವು ಹಳೆಗನ್ನಡ ಪಠ್ಯಗಳಿಂದ ಉದಾಹರಣೆಗಳನ್ನಾಯ್ದು ವಿಷಯವನ್ನು ವಿಷದಿಪಡಿಸಿದ್ದು, ಪಂಪಭಾರತ, ಪಾರ್ಶ್ವನಾಥ ಪುರಾಣ, ಗೋವಿನಹಾಡು, ಶಬ್ದಮಣಿದರ್ಪಣ, ಸುಕುಮಾರ ಚರಿತಂ ಎಂಬ ಇತ್ಯಾದಿ ಪಾಠಗಳಿಂದಾಯ್ದ ವಿಷಯಗಳನ್ನು ಪ್ರಸ್ತಾಪಿಸುವ ಮೂಲಕ ಅವರ ವಿದ್ವತ್ತಿನ ಪ್ರಯೋಗರಂಗವಾಗಿಸಿಕೊಂಡ ಅಧ್ಯಯನ ಇದೆನಿಸಿದೆ.

ಹತ್ತನೆಯ ಅಧ್ಯಾಯವಾಗಿ, ಗ್ರಂಥಸಂಪಾದಕನಿಗೆ ಕೆಲವು ಸೂಚನೆಗಳು ಎಂಬ ವಿಷಯವನ್ನು ಪ್ರಸ್ತಾಪಿಸುತ್ತಾ ಯಾವುದೇ ಒಂದು ಪ್ರಾಚೀನ ಗ್ರಂಥವನ್ನು ಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಲು ಹೊರಡುವ ವ್ಯಕ್ತಿ ಯಾವ ಕ್ರಮದಲ್ಲಿ ಸಾಗಬೇಕು? ಅವನ ಪಾಠ ಸಾಮಗ್ರಿಗಳೇಗಿರಬೇಕು? ಗ್ರಂಥಸಂಪಾದನಾ ಅವಧಿಯಲ್ಲಿ ಉಪಯೋಗಿಸಬೇಕಾದ ಸಂಪಾದಕೀಯ ಚಿಹ್ನೆಗಳೇಗಿರಬೇಕು ಎಂಬ ವಿಚಾರವನ್ನು ಪ್ರಸ್ತಾಪಿಸುತ್ತಾ, ಪಾಲ್‌ಮಾಸ್, ತೀ.ನಂ.ಶ್ರೀ. ಅವರುಗಳು ಬಳಸಿದ ಚಿಹ್ನೆಗಳ ಬಗ್ಗೆ ಪ್ರಸ್ತಾಪಿಸಿದ್ದು ಕಂಡುಬಂದು ಗ್ರಂಥಸಂಪಾದನೆಯ ಒಂದು ಚೌಕಟ್ಟನ್ನು ರೂಪಿಸಬೇಕಾದ ಎಲ್ಲಾ ರೂಪುಗಳನ್ನು ಈ ಕೃತಿಯಲ್ಲಿ ಸಮೀಕರಿಸಿದ್ದಾಗಿ ಕಂಡುಬಂದಿದೆ.

ಹನ್ನೊಂದನೆಯ ಅಧ್ಯಾಯವಾಗಿ, ಮುದ್ರಿತ ಗ್ರಂಥಗಳ ಸಂಪಾದನೆ ವಿಷಯ ಕುರಿತು ಪ್ರಸ್ತಾಪಿಸುತ್ತಾ ಪಾಶ್ಚಾತ್ಯ ವಿದ್ವಾಂಸರು ಆವರೆಗಿನ ಗ್ರಂಥಸಂಪಾದನಾ ಅಧ್ಯಯನ ಮುದ್ರಣ ಕಲೆ ಬಗ್ಗೆ ಪ್ರಸ್ತಾಪಮಾಡುತ್ತಾ ೧೭೦೯ರಿಂದ ೧೭೬೮ರ ೬೯ ವರ್ಷಗಳಲ್ಲಿ ಸುಮಾರು ೨೫ ಸಂಪಾದಿತ ಮುದ್ರಣಗಳ ಕುರಿತು ಇಲ್ಲಿ ಪ್ರಸ್ತಾಪಿಸಿದ್ದು ಇದರಲ್ಲಿ ಕೆಲವು ಪ್ರಮುಖ ಅಂಶಗಳಾಗಿ ನಿಕೋಲಾಸ್‌ರೋವೆರಿಂದ ಸಂಪಾದಿತವಾದ ಮುದ್ರಣದಲ್ಲಿ ೧೬೧೬ರ ಹಿಂದಿನ ಷೇಕ್ಸ್‌ಪಿಯರ್‌ನ ಕಾಗುಣಿತವನ್ನು ತಿದ್ದುವ ಪ್ರಯತ್ನ ಇವನಿಂದಾಗಿದ್ದು ವಿವರಿಸಿದೆ. ನಂತರದಲ್ಲಿ (೧೭೨೫) ಅಲೆಕ್ಸಾಂಡರ್ ಪೋಪ್‌ನ ಮುದ್ರಣ ಲೋಯಿಥಿಯೋಬಾಲ್‌ನ ಮುದ್ರಣ, ಸ್ಯಾಮ್ಯುಲ್‌ಜಾನ್ಸ್‌ನ್ ಮುದ್ರಣ (ಇದು ಸರ್‌ಥಾಮಸ್ ಹ್ಯಾನ್ಮಾರ್ ಮತ್ತು

ವಿಲಿಯಂವಾರ್ ಬರ್ಟನನ್ನ ಮುದ್ರಣವಾಗಿದ್ದು ಥಿಯೋಬಾಲ್ಡನ ಮತ್ತು ಪೋಪ್‌ನ ಮುದ್ರಣಗಳ ಮಿಶ್ರಣ ಮಾಡಿದ್ದೆಂದು ತಿಳಿದುಬಂದಿದೆ) ಎಡ್ವರ್ಡ್‌ಕ್ಯಾಪಲ್ಲೆ ಮುದ್ರಣಗಳ ಬಗ್ಗೆ ವಿಸ್ತಾರವಾದ ವಿವರಣೆ ಕಾಣಿಸಿದ್ದು ಪಾಶ್ಚಾತ್ಯ ಗ್ರಂಥಸಂಪಾದನೆಯನ್ನು ಸರಳವಾಗಿ ಅರ್ಥೈಸುವ ಮಟ್ಟದಲ್ಲಿ ಜಾಡುಹಿಡಿದು ಓದುಗರಿಗೆ ತಲುಪಿಸಿದ್ದು ಡಿ.ಎಲ್.ಎನ್. ರವರ ವಿದ್ವತ್‌ನ್ನು ಸಾಕ್ಷೀಕರಿಸಿದೆ. ಇಂತಹ ವಿದ್ವತ್ ಪ್ರತೀಕಕ್ಕಾಗಿ ಎಂ.ಎಂ.ಕಲಬುರ್ಗಿಯವರು ಇವರನ್ನು ಒಂದೆಡೆ 'ಪಾಂಡಿತ್ಯದ ಪಟ್ಟಗಜ' ಎಂದು ಉಲ್ಲೇಖಿಸಿದ್ದು ಸತ್ಯವೆನಿಸಿದೆ.

ಕೊನೆಯ ಹನ್ನೆರಡನೆಯ ಅಧ್ಯಾಯದಲ್ಲಿ, ಇತರೆ ವಿಷಯಗಳು ಎಂಬ ವಿಷಯವನ್ನು ಪ್ರಸ್ತಾಪಿಸಿ 'ಗ್ರಂಥಸಂಪಾದನೆಯ ಪರಮೋದ್ದೇಶ ಕಾಲಕ್ರಮದಲ್ಲಿ ದೋಷ, ಭೋಯಿಷ್ಟವಾಗಿರುವ ಕವಿ, ಕೃತಿಯನ್ನು ಅದರ ಪರಿಶುದ್ಧ ರೂಪಕ್ಕೆ ಎಂದರೆ ಕವಿಯ ಪಾಠಸ್ವರೂಪಕ್ಕೆ ಲಭ್ಯ ಸಾಧನೆ ಸಾಮಗ್ರಿಗಳನ್ನು ಉಪಯೋಗಿಸಿಕೊಂಡು ಮರಳಿ ತರುವುದಾಗಿದೆ. ಹಾಗಾಗದಿದ್ದರೆ ಕವಿ ಏನನ್ನು ಬರೆದಿದ್ದಾನೆ ಎಂದು ಕಂಡುಕೊಂಡು ಅವನ ಮೂಲ ಪಾಠದ ಸಾಮೀಪ್ಯಕ್ಕೆ ಕರೆದ್ಯೊಯುವುದು, ಇದೂ ಆಗದಿದ್ದರೆ ಇದನ್ನು ಅಪಪಾಠವಾಗದಂತೆ ಪರಿಷ್ಕಾರಗೊಳಿಸುವುದರಿಂದ ಗ್ರಂಥಸಂಪಾದಕನು ಪುನರ್‌ರಚನೆಮಾಡಿ ನಮ್ಮ ಸಂಸ್ಕೃತಿಯ ರಕ್ಷಣೆಯ ದೃಷ್ಟಿಯಿಂದ ಭವಿಷ್ಯತ್ಕಾಲದಲ್ಲಿ ಇನ್ನೂ ಹೆಚ್ಚಾಗಿ ದೋಷಗೊಳ್ಳುವುದನ್ನು (ಖಿಲವಾಗುವುದನ್ನು) ತಡೆಯುವ ಉದ್ದೇಶ ಹೊಂದಿದ್ದಾಗಿದೆ.'[೬] ಸಾಹಿತ್ಯ ವಿಮರ್ಶಕರಿಗೂ, ಅಲಂಕಾರ ಶಾಸ್ತ್ರಜ್ಞರಿಗೂ, ವೈಯಾಕರಣಿಗಳಿಗೂ, ಛಂದೋವೇದಿಗಳಿಗೂ, ಭಾಷಾಚರಿತ್ರೆ ಲೇಖಕರಿಗೂ, ನಿಘಂಟು ನಿರ್ಮಾಪಕರಿಗೂ ಕವಿಕೃತಿಯ ಪರಿಶುದ್ಧ ಪಾಠ ದೊರೆಯುವಂತೆ ಮಾಡುವುದು ಗ್ರಂಥಸಂಪಾದಕನ ಕರ್ತವ್ಯವಾಗಿದೆ. ಹೀಗೆ ಸಾಹಿತ್ಯಕ್ಕೆ ಸಂಬಂಧಿಸಿದ ಇತರೆ ಎಲ್ಲಾ ವಿಷಯಗಳ ಅನ್ವೇಷಣೆಗೆ ಗ್ರಂಥಸಂಪಾದನೆ ತಳಪಾಯ ಎನಿಸಿದೆ. ಒಟ್ಟಾರೆಯಾಗಿ ಗ್ರಂಥಸಂಪಾದನೆ ಎನ್ನುವುದೇ ಕಲಾಸ್ಪರ್ಶವುಳ್ಳ ಒಂದು ಶಾಸ್ತ್ರ ಅಧ್ಯಯನ ಎಂದು ತಿಳಿದು ಬಂದಿದೆ.

ಕೃತಿಯ ಕೊನೆಗೆ ಅನುಬಂಧದ ವಿಷಯವಾಗಿ ಮೂಡಿಬಂದ ಮೂರು ಭಾಗಗಳಲ್ಲಿ ಅಕಾರಾದಿಸೂಚಿ, ಉದಾರಣೆಗಳಸೂಚಿ, ಸಹಾಯಕ ಗ್ರಂಥಸೂಚಿ, (ಇಂಗ್ಲಿಷ್, ಕನ್ನಡ)ಗಳೆಂದು ವಿಂಗಡಿಸಿದ್ದು ಕಂಡುಬಂದು ಹೆಚ್ಚಿನ ಅಭ್ಯಾಸಕ್ಕಾಗಿ ಓದಬಹುದಾದ ಪುಸ್ತಕಗಳ ಪಟ್ಟಿ, ಕನ್ನಡ ಹಸ್ತಪ್ರತಿ ಭಂಡಾರಗಳ ಪಟ್ಟಿ, ಕಣ್ತಪ್ಪಿನಿಂದಾದ ಮೊದಲ ಪ್ರಕಟಣೆಯ ಸರಿ ತಪ್ಪುಗಳ ಪಟ್ಟಿಯು ಅಧ್ಯಯನದ ವಿಸ್ತೃತ ಅಭ್ಯಾಸಕ್ಕೆ ಔಚಿತ್ಯಪೂರ್ಣವೆನಿಸಿದೆ.

ಹರಿಯುವ ನೀರು, ಬೀಸುವಾಗ ತಮ್ಮ ದಿಕ್ಕನ್ನು ತಾವೇ ಕಂಡುಕೊಳ್ಳುವಂತೆ ಡಿ.ಎಲ್.ಎನ್. ವರು ಕನ್ನಡ ಗ್ರಂಥಸಂಪಾದನೆ ಎಂಬ ಶಾಸ್ತ್ರಗ್ರಂಥವನ್ನು ತಮ್ಮದೇ ಆದ ರೀತಿಯಲ್ಲಿ ರೂಪಿಸಿದ್ದಾರೆ. ದಾರಿಯನ್ನು ಮೊದಲು ನಿರ್ಮಿಸಿದು ಮುಖ್ಯ ಆನಂತರ ಆ

ದಾರಿಯಲ್ಲಿ ಎಷ್ಟೋ ಜನ ಹಾಯ್ದು ಹೋಗಬಹುದು. ಆದರೆ ಮೊದಲು ದಾರಿಯನ್ನು ನಿರ್ಮಿಸಿದವನಿಗೆ ಮಹತ್ವವಿರುತ್ತದೆ. ಈ ರೀತಿ ಡಿ.ಎಲ್.ಎನ್. ಅವರು ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸಿದ್ದು ಉಂಟು.

• **ಡಿ.ಎಲ್.ಎನ್. ಅವರ ಗ್ರಂಥಸಂಪಾದನಾ ಅಧ್ಯಯನದ ಪ್ರಭಾವ ಮತ್ತು ಪ್ರೇರಣೆ**

ಡಿ.ಎಲ್.ಎನ್. ಅವರ ಕೃತಿ ಮಾರ್ಗದರ್ಶನದಲ್ಲಿ ವಿವಿಧ ವಿದ್ವಾಂಸರು, ಸಂಘ, ಸಂಸ್ಥೆ, ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಬೆಳೆಯತೊಡಗಿದ ಗ್ರಂಥಸಂಪಾದನಾ ಅಧ್ಯಯನದ ವಿಸ್ತೃತತೆಯು ವಿವಿಧ ಮಜಲುಗಳು ಮೂಲಕ ಇದರ ಕಾರ್ಯಚುರುಕಾಗಿ ನಡೆಯಲಾರಂಭಿಸಿತು. ಆರಂಭದಲ್ಲಿ ವಚನ ಸಾಹಿತ್ಯವೊಂದು ಮುನ್ನಡೆಯಾಗಿ ಹಿನ್ನೆಲೆ ಅನುಭವಿಸಿತ್ತಾದರೂ ನಂತರದ ದಿನಗಳಲ್ಲಿ ಮೈಸೂರು, ಬೆಂಗಳೂರು, ವಿಶ್ವವಿದ್ಯಾಲಯದ ಪ್ರಕಟಣೆಗಳಾದ 'ಅಲ್ಲಮನ ವಚನ ಚಂದ್ರಿಕೆ' "ಬಸವಣ್ಣನವರ ವಚನಗಳು" ಮೊದಲಾದ ಕೃತಿಗಳ ಬಹುಹಸ್ತಪ್ರತಿಗಳನ್ನಾಧರಿಸಿ ಪರಿಷ್ಕೃತಗೊಂಡು ಹೊರಬಂದವು. ಇಲ್ಲಿನ ಟಿಪ್ಪಣೆಗಳು ಮುಂದಿನ ಅಧ್ಯಯನಕಾರರಿಗೆ ಬಹುಮೌಲ್ಯಯುತವೆನಿಸಿವೆ. ದಕ್ಷಿಣ ಕರ್ನಾಟಕ ಭಾಗದಲ್ಲಿನ ಬೆಳವಣಿಗೆಯ ಅಂಶ ಇದಾದರೆ ಉತ್ತರ ಕರ್ನಾಟಕದಲ್ಲಿ ಹಳಕಟ್ಟಿಯವರ ಬಳಿಕ ವಚನ ಗ್ರಂಥಗಳನ್ನು ದೊಡ್ಡ ಪ್ರಮಾಣದಲ್ಲಿ 'ಕರ್ನಾಟಕ ವಿಶ್ವವಿದ್ಯಾಲಯ' ಕಟ್ಟಿಕೊಟ್ಟಿದೆ. ಬಸವಣ್ಣ ಇತರೆ ಶಿವಶರಣರ ವಚನಗಳು, ಇತರೆ ಸಕಲ ಪುರಾತನದ ವಚನಗಳು, ಬೆಡಗಿನ ವಚನಗಳು, ಮೊದಲಾದ ಕೃತಿಗಳು ಸಂಪಾದಿಸಲ್ಪಟ್ಟು ಪ್ರಚಲಿತತೆಗೆ ಒಡ್ಡಿಕೊಂಡವು. ಹಾಗೆಯೇ ಶೂನ್ಯಸಂಪಾದನೆಗಳು, ಭೈರವೇಶ್ವರ ಕಾವ್ಯದ 'ಕಥಾಮಣಿ ಸೂತ್ರರತ್ನಾಕರ,' ಚಾವುಂಡರಾಯಪುರಾಣ, ರಾಜಾವಳಿ ಕಥಾಸಾರಗಳು ಜೈನಗದ್ಯಕ್ಕೆ, ಕರ್ನಾಟಕ ಕೈಫಿಯತ್ತುಗಳು ಚಾರಿತ್ರಿಕ ಗದ್ಯಕ್ಕೆ ನಿದರ್ಶನವಾಗಿ ಮೂಡಿಬಂದಿವೆ.

ಡಿ.ಎಲ್.ಎನ್. ಪರಂಪರೆಯಲ್ಲಿ ಬಂದ ಮೈಸೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನೆ ವಿಭಾಗದಿಂದ ಸೂಪಶಾಸ್ತ್ರ, ನೇಮಿನಾಥ ಪುರಾಣ, ಹಾಲಸ್ಯ ಪುರಾಣ, ವರ್ಧಮಾನ ಪುರಾಣ, ಜೀವಂಧರ ಚರಿತೆ, ಆದಿಪರ್ವ, ಸೌಂದರಕಾವ್ಯ, ಇತ್ಯಾದಿ ೧೩೦ ವಿವಿಧ ಗ್ರಂಥಗಳು ಶಾಸ್ತ್ರೀಯ ರೀತಿಯಲ್ಲಿ ಬೆಳಕು ಕಂಡಿವೆ. ಇದೇ ಅವಧಿಯಲ್ಲಿ 'ದಾಸಸಾಹಿತ್ಯ ಸಂಪಾದನೆ' ಶಾಸ್ತ್ರೀಯತೆಯನ್ನು ಪಡೆದುಕೊಂಡಿತ್ತು. ಈ ಪೂರಕ ಆಕರಗಳನ್ನು ಬಳಸಿಕೊಂಡು, ಶ್ರೀಪಾದರಾಜರು, ಜಗನ್ನಾಥದಾಸರು, ವಾದಿರಾಜರು, ಗೋಪಾಲದಾಸರು, ವ್ಯಾಸರಾಯರು, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಹೀಗೆ ಮೊದಲಾದವರು ಕೀರ್ತನೆಗಳು ಪ್ರತ್ಯೇಕ ಸಂಪುಟಗಳಲ್ಲಿ ಸಂಪಾದಿತಗೊಂಡು ಮೂಡಿಬಂದಿವೆ. ಮುಂದುವರೆದು ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಮೂಲಕ ೧೯೯೩ರ ಅವಧಿಗೆ ಸಮಗ್ರ ವಚನ ಸಾಹಿತ್ಯದ ೧೫ ಸಂಪುಟಗಳು ಮೂಡಿ ಬಂದಿವೆ. ಬೆಳಗಾವಿಯ ಶ್ರೀರುದ್ರಾಕ್ಷಿಮಠ, ಗದುಗಿನ ತೋಂಟದಾರ್ಯ ಮಠ, ಸಂಡೂರಿನ ಸಂಸ್ಥಾನ ವಿರಕ್ತಮಠ,

ಇತರೆ ಮಠಮಾನ್ಯಗಳ ಮೂಲಕ ವೀರಶೈವ ಲಿಂಗಾಯತದ ನಿರ್ಲಕ್ಷಿತ ಪ್ರಕಾರಗಳನ್ನು ಪ್ರಕಾಶಪಡಿಸಿದ್ದುಂಟು.

ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದ ಮೂಲಕ ಹಸ್ತಪ್ರತಿ ಸಂಗ್ರಹಗಳನ್ನು ಕೈಗೊಂಡು 'ವರ್ಣನಾತ್ಮಕಸೂಚಿ' ಮೊದಲಾದ ಪ್ರಕಟಣೆಗಳು ಮೂಡಿಬಂದವು. ಕನ್ನಡ ಸಾಹಿತ್ಯ ಪರಿಷತ್ತು, ಹಳೆಗನ್ನಡ ಕಾವ್ಯಗಳನ್ನು ಮರುಮುದ್ರಣ, ಪುನರ್ ಪರಿಷ್ಕರಣೆ ಮಾಡುವುದರ ಮೂಲಕ ಗ್ರಂಥಸಂಪಾದನಾ ಅಧ್ಯಯನ ಮುಂದುವರೆದು, ಕನ್ನಡ ಪುಸ್ತಕ ಪ್ರಾಧಿಕಾರದ ಅಡಿಯಲ್ಲಿ ೪೦ ಸಂಪುಟಗಳ ಹರಿದಾಸ ಸಾಹಿತ್ಯ ಪ್ರಕಟವಾದ ಸಾಧನೆಯು ದಾಖಲಾಗಿದೆ. ಇವು ಜನಪ್ರಿಯ ಆವೃತ್ತಿಗಳಾದರೂ ಕವಿ, ಕೃತಿಗಳನ್ನೊಳಗೊಂಡು ಪ್ರಸ್ತಾವನೆಗಳಲ್ಲಿನ ಮಾಹಿತಿ ಅತ್ಯುಪಯುಕ್ತವೆನಿಸಿದೆ.

೧೯೯೨ರ ವೇಳೆಗೆ ಪ್ರಕಾಶಿತಗೊಂಡ ಹಂಪಿಯ ಕನ್ನಡ ವಿಶ್ವವಿದ್ಯಾಲಯದಡಿ ಹಸ್ತಪ್ರತಿಶಾಸ್ತ್ರ ವಿಭಾಗವೊಂದು ರಚಿತಗೊಂಡು (೧೯೬೬) ಇದರಡಿ ಪ್ರಾಚೀನ ಸಾಹಿತ್ಯಾಧ್ಯಯನದ ಕ್ರಮಗಳಾದ ಹಳಗನ್ನಡ, ನಡುಗನ್ನಡ, ವಚನ, ಕೀರ್ತನೆ, ತತ್ವಪದ, ವ್ಯಾಕರಣ ಇತ್ಯಾದಿ ಸಾಹಿತ್ಯ ರೂಪಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡು ಬಂದಿದೆ. ಮುಖ್ಯವಾಗಿ ೨೫೦೦ ಕ್ಕೂ ಹೆಚ್ಚು ಹಸ್ತಪ್ರತಿಗಳನ್ನೊಂದಿದ್ದ ಕರ್ನಾಟಕದ ಪ್ರಮುಖ ಹಸ್ತಪ್ರತಿ ಭಂಡಾರಗಳಲ್ಲೊಂದೆನಿಸಿದೆ. ಸಂಪಾದನೆ, ಸಂಕಲನ, ಪರಿಷ್ಕರಣೆಗಳಂತಹ ಅಧ್ಯಯನ ಕ್ರಮಗಳು ನಿತ್ಯನೂತನ ತಂತ್ರಜ್ಞಾನವನ್ನಳವಡಿಸಿಕೊಂಡು ಪ್ರಸ್ತುತ ಮಟ್ಟದಲ್ಲಿ ಅಧ್ಯಯನ ಮುಂದುವರೆಸಿಕೊಂಡು ಸಾಗಿದ್ದಾಗಿದೆ.

ಇಷ್ಟಕ್ಕೆ ಮೀಸಲಿರದೆ, ಹಸ್ತಪ್ರತಿ, ಗ್ರಂಥಸಂಪಾದನೆಯ ಕುರಿತು, ಸೂಚಿ ರಚನೆಗಳಂತಹ ಇತರೆ ಪ್ರಬುದ್ಧ ಬರವಣಿಗೆಗಳಿಂದ ವಿವಿಧ ಕಾರ್ಯಕ್ರಮಗಳನ್ನು ಆಯೋಜಿಸುವ ಮೂಲಕ ತನ್ನ ಅಧ್ಯಯನ ಪರಿಧಿಯನ್ನು ವಿಸ್ತರಿಸಿಕೊಂಡುದ್ದಾಗಿದೆ.

ಈ ರೀತಿಯಾಗಿ ಡಿ.ಎಲ್.ಎನ್. ರವರ ತರುವಾಯ ಹಲವು ಮಗ್ಗಲುಗಳಲ್ಲಿ ಬೆಳೆದು ಬಂದ ಗ್ರಂಥಸಂಪಾದನೆಯ ಅಧ್ಯಯನ ಕ್ರಮ ಪ್ರಸ್ತುತ ತಂತ್ರಜ್ಞಾನಕ್ಕೂ ಅಳವಡಿಸಿಕೊಂಡು ವಿವಿಧ ಮಠ-ಮಾನ್ಯ ಸಂಘ-ಸಂಸ್ಥೆ, ಇತರೆ ವಿಶ್ವವಿದ್ಯಾಲಯಗಳ ಮೂಲಕ ತನ್ನ ಕೈಂಕರ್ಯವನ್ನು ವಿಸ್ತರಿಸುತ್ತಾ ಸಾಗಿರುವ ಒಂದು ಅಧ್ಯಯನ ಕ್ರಮವೆನಿಸಿದೆ. ಪ್ರಾಚೀನ ಸಾಹಿತ್ಯವನ್ನು ಹೇಗೆ ಸಂಪಾದಿಸಬೇಕು, ಅವುಗಳನ್ನು ಹೇಗೆ ಸಂರಕ್ಷಿಸಬೇಕು? ಎಂಬ ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ರೂಪದಲ್ಲಿ ಈ ಮಹತ್ವಾಕಾಂಕ್ಷಿ ಗ್ರಂಥವನ್ನು ರಚನೆ ಮಾಡಿದ್ದು ಸಾಹಿತ್ಯ ಲೋಕಕ್ಕೆ ಅದರಲ್ಲೂ ಗ್ರಂಥಸಂಪಾದನಾ ಅಧ್ಯಯನ ಕ್ರಮಕ್ಕೆ ಬಹು ಮೌಲ್ಯಯುತವೆನಿಸಿದೆ. ಡಿ.ಎಲ್.ಎನ್. ಸಮಕಾಲೀನದಲ್ಲಿ ಹಾಗೂ ದೇಶಿ ಭಾಷೆಯಲ್ಲಿ ಇಂಥ ಗ್ರಂಥವೊಂದಿದ್ದದ್ದು ಹೆಗ್ಗಳಿಕೆಯ ಮಾತಾಗಿದೆ.

'ಕನ್ನಡ ಗ್ರಂಥಸಂಪಾದನೆಯಂತಹ ಕೃತಿ ಕನ್ನಡಕ್ಕಂತೂ ಹೊಸದು ಉಳಿದ ಭಾರತೀಯ ಭಾಷೆಗಳಲ್ಲೂ ಅಂತಹ ಕೃತಿಯೊಂದು ನಿರ್ಮಾಣವಾಗಿರುವಂತೆ ಕಾಣುವುದಿಲ್ಲ ಬಹುಶಃ ಅದನ್ನು ಇಂಗ್ಲೀಷ್‌ಗೆ ಅನುವಾದಿಸಿದರೆ ಆ ಕ್ಷೇತ್ರಕ್ಕೆ ಅಂದೊಂದು ಮೌಲಿಕ ಕೊಡುಗೆಯೂ ಆಗಬಲ್ಲದು'[೭] ಎಂಬ ಎಂ.ಚಿದಾನಂದಮೂರ್ತಿ ಅವರ ಮಾತು ಅಕ್ಷರ ಸಹ ನಿಜವೆನಿಸಿದೆ. ಡಿ.ಎಲ್.ಎನ್. ಅವರ ಈ ಕೃತಿ ಬಂದ ಮೇಲೆ ನೂರಾರು ಗ್ರಂಥಗಳು ಸಂಪಾದನೆಗೊಂಡು ವಿಶಿಷ್ಟರೂಪ ತಾಳಿವೆ. ಈ ವಿಷಯಕ್ಕೆ ಪೂರಕವಾಗಿ ೧೦ಕ್ಕೂ ಹೆಚ್ಚು ಕೃತಿಗಳು ಮೂಡಿ ಬಂದಿರುವುದುಂಟು. ಈ ಮೊದಲೇ ಹೇಳಿದಂತೆ ಮೊದಲು ದಾರಿ ತೋರುವವರು ಬೇಕು ಆನಂತರ ಆ ದಾರಿಯಲ್ಲಿ ನಡೆದಾಡುವವರೆಷ್ಟೋ? ಎಂಬ ಮಾತಿಗೆ ಇಂದಿನ ಈ ಅಧ್ಯಯನ ವಲಯ ವಿಸ್ತೃತವಾಗಿ ಬೆಳೆದು, ವಿಶ್ವವಿದ್ಯಾಲಯಗಳಲ್ಲೆಲ್ಲ ಒಂದು ಐಚ್ಛಿಕ ಪಠ್ಯವಾಗಿ ಸಾಹಿತ್ಯದ ವಿದ್ಯಾರ್ಥಿಗಳು ಅಭ್ಯಾಸಿಸುತ್ತಿದ್ದದ್ದೆ ಪ್ರಮುಖ ರೂಪವಾಗಿದೆ. ಕಾಲ ಬದಲಾದಂತೆ ಗ್ರಂಥಸಂಪಾದನೆ ವಿಧಾನಗಳು ಬದಲಾಗಿ ಹತ್ತಾರು ಮಾರ್ಪಾಡುಗಳೊಂದಿಗೆ ಈ ಅಧ್ಯಯನ ಕ್ರಮ ತನ್ನ ವಿಸ್ತಾರತೆಯನ್ನು ಬೆಳೆಸಿಕೊಳ್ಳುತ್ತಾ ಸಾಗುತ್ತಿದೆ.

**• ಗ್ರಂಥಸಂಪಾದನಾ ಅಧ್ಯಯನ ವಿಧಾನವನ್ನು ಕುರಿತು ಡಿ.ಎಲ್.ಎನ್. ಅವರ ನಿಲುವುಗಳು**

ಗ್ರಂಥಸಂಪಾದನಾ ಅಧ್ಯಯನ ವಿಧಾನವನ್ನು ಕುರಿತು ಡಿ.ಎಲ್.ಎನ್. ಅವರ ನಿಲುವುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

* ಕನ್ನಡ ಸಾಹಿತ್ಯದ ಸಂಶೋಧನೆಗಳು ಬದಲಾವಣೆಗೆ ಹಂಬಲಿಸುತ್ತಿರುವ ಕಾಲಘಟ್ಟದಲ್ಲಿ ಚುರುಕಾಗಿ ಬೆಳೆದು ಬಂದ ಗ್ರಂಥಸಂಪಾದನಾ ಶಾಸ್ತ್ರ ಹೊಸ ಪೀಳಿಗೆಯೊಂದಿಗೆ ತನ್ನ ತನವನ್ನು ಬದಲಾಯಿಸಿಕೊಂಡು ಸಾಗುತ್ತಿರುವುದು ಒಳ್ಳೆಯ ಬೆಳವಣಿಗೆಯಾಗಿದ್ದು ಪಠ್ಯವೊಂದನ್ನು ಏಕದೃಷ್ಟಿಯಿಂದ ನೋಡುವ ಕ್ರಮವನ್ನು ಬಿಟ್ಟು ವಿವಿಧ ನೆಲೆಯಲ್ಲಿ ನೋಡುವುದು ಅವಶ್ಯ ಎಂದಿದ್ದಾರೆ.

* ಗ್ರಂಥಸಂಪಾದನಾ ಅಧ್ಯಯನ ವಿವಿಧ ನೆಲೆಗಳಲ್ಲಿ ಅಧ್ಯಯನಕ್ಕೊಳಪಡುವ ಮೂಲಕ ನಮ್ಮ ಪ್ರಾಚೀನ ಗ್ರಂಥಗಳು ಶುದ್ಧೀಕರಣಗೊಳ್ಳುವುದು ಅವಶ್ಯಕವೆಂದಿದ್ದಾರೆ.

* ನಮ್ಮ ದೇಶಿ ನೆಲೆಯಲ್ಲಿ ಈ ವಿಷಯ ಕುರಿತು ಅಷ್ಟಾಗಿ ಕಾರ್ಯನಡೆದಿಲ್ಲವಾದರೂ ಈ ಕುರಿತು ಫ್ರೆಂಚ್, ಜರ್ಮನ್, ಇಂಗ್ಲಿಷ್ ಭಾಷೆಗಳಲ್ಲಿ ಅನೇಕ ಅಧ್ಯಯನಗಳು ನಡೆದಿದ್ದು, ಅವುಗಳಲ್ಲಿನ ಅಮೂಲ್ಯ ಮಾಹಿತಿಯನ್ನು ಮುಂದಿನ ಪೀಳಿಗೆ ಅಭ್ಯಾಸಿಸಿ ಇನ್ನೂ ಅಧ್ಯಯನ ವಿಧಾನವನ್ನು ಮುಖ್ಯವೇದಿಕೆಗೆ ತರುವುದು ಅವಶ್ಯವೆಂದಿದ್ದಾರೆ.

* ಶಾಸ್ತ್ರ ಶುದ್ಧತೆಗೆ, ವೈಜ್ಞಾನಿಕ ನೆಲೆಗಟ್ಟಿನ ಅಧ್ಯಯನ ವಿಧಾನ ಮುಂದಿನ ಗ್ರಂಥಸಂಪಾದನಾ ಅಧ್ಯಯನಕಾರರಿಗೂ, ಸಂಶೋಧಕರಿಗೂ ಇತರೆ ವಿದ್ವಾಂಸರಿಗೂ ಅವಶ್ಯವೆಂದಿದ್ದಾರೆ.

* ಕಾಲಕ್ರಮದಂತೆ ಅಧ್ಯಯನ ಕ್ರಮದ ಬದಲಾವಣೆ ಅವಶ್ಯವಾಗಿದ್ದು ಇದನ್ನು ಪ್ರತಿ ಗ್ರಂಥಸಂಪಾದಕನೂ ಅಳವಡಿಸಿಕೊಳ್ಳಲೇಬೇಕಾದ ಸೂತ್ರಸಾರವೆಂದು ಪ್ರತಿಪಾದಿಸಿದ್ದಾರೆ.

ಗ್ರಂಥಸಂಪಾದಕನಾದವನು ತಾನು ಸಂಪಾದಿಸಬೇಕಾದ ಗ್ರಂಥಕ್ಕೆ ಸಂಬಂಧಪಟ್ಟ ಹಾಗೆ ಯಾವ ಯಾವ ವಿಷಯಗಳು ಈ ಮೊದಲು ರೂಪುಗೊಂಡಿವೆ ಎಂಬುದನ್ನು ಮೊದಲು ಗ್ರಹಿಸಿಕೊಳ್ಳುವುದು ಅವಶ್ಯವೆಂದಿದ್ದಾರೆ.

ಕಾಲದಿಂದ ಕಾಲಕ್ಕಾಗುವ ಮಾರ್ಪಾಡುಗಳ ಬಗ್ಗೆ ಗ್ರಂಥಸಂಪಾದಕನು ತಿಳಿದಿರಬೇಕು ಹಾಗೂ ಸಂದರ್ಭಕ್ಕನುಗುಣವಾಗಿ ಬದಲಾವಣೆಗಳಿದ್ದರೆ ಸರಿಪಡಿಸಿಕೊಳ್ಳುವುದು ಅವಶ್ಯ ಹಾಗೂ ಅದು ಅಧ್ಯಯನದ ವಿಸ್ತೃತತೆಯ ಹಾದಿ ಎಂದಿದ್ದಾರೆ.

ಸಂಪಾದಕನು ಒಂದು ಬಾರಿ ಸಂಪಾದನೆಮಾಡಿ ಪರಿಷ್ಕರಿಸಿದರೆ ಅವನ ಅಧ್ಯಯನ ಅಲ್ಲಿಗೆ ಮುಗಿಯುವುದಿಲ್ಲ ಅದು ಆರಂಭಮಾತ್ರ.

ಗ್ರಂಥಸಂಪಾದಕನಾದವನು ಒಂದೇ ಪ್ರತಿಯನ್ನಿಟ್ಟುಕೊಂಡು ಪರಿಷ್ಕರಿಸಿ ಪ್ರಕಟಿಸಿದರೆ ಸಾಲದು ಈ ಕುರಿತು ಕನಿಷ್ಠ ಮೂರು ಪ್ರತಿಗಳನ್ನಾದರೂ ಇರಿಸಿಕೊಂಡು ಅಭ್ಯಾಸಿಸಿ ಮೂಲಕ್ಕೆ ಹತ್ತಿರವಾಗುವ ಪ್ರಯತ್ನವನ್ನು ಮಾಡಬೇಕಾದುದು ಅವಶ್ಯ ಎಂದಿದ್ದಾರೆ.

ಗ್ರಂಥಸಂಪಾದಕನಾದವನು, ಹಸ್ತಪ್ರತಿಗಳನ್ನು ಸಂಪಾದಿಸಿದೊಡನೆ ಬಾಹ್ಯಸಾಕ್ಷಿಗಳನ್ನು ಮುಂತಾದ ಲಿಖಿತ ಸಾಮಗ್ರಿಗಳನ್ನು ಒಂದೆಡೆ ಸೇರಿಸಿ ಪರೀಕ್ಷಿಸಿ ವರ್ಗೀಕರಣ ಮಾಡಿ ಅವುಗಳಲ್ಲಿನ ಪರಸ್ಪರ ಸಂಬಂಧವನ್ನು ಮೊದಲು ಕಂಡುಕೊಳ್ಳಬೇಕು. ನಂತರ ಪಾಠ ಸಂಪ್ರದಾಯಗಳನ್ನು ನಿಶ್ಚಯಿಸಿ ಪ್ರಧಾನ ಮಾತೃಕೆಯ ಪಾಠವೇನಿರಬಹುದೆಂಬುದನ್ನು ಕಂಡುಕೊಳ್ಳಬೇಕು. ನಂತರ ಸಂಯೋಜನೆಗೊಳಿಸಿ ಕೃತಿಯ ಮೂಲಗಳು ಯಾವುವೆಂದು ವಿಶ್ಲೇಷಿಸಿ ಅದರ ಶೈಲಿಯನ್ನು ಇಲ್ಲವೆ ಅದರ ಇತರೆ ಮೌಲ್ಯಗಳನ್ನು ಗುರುತಿಸುವುದು ಅವಶ್ಯವೆನಿಸಿದೆ ಎಂದಿದ್ದಾರೆ.

ಒಂದೇ ಒಂದು ಹಸ್ತಪ್ರತಿ ದೊರೆತ ಕೃತಿಗಳ ಸಂಪಾದನೆ ತುಂಬಾ ಕ್ಲಿಷ್ಟಕರ ಅದರಲ್ಲಿನ ಸ್ಖಾಲಿತ್ಯಗಳನ್ನು ತಿದ್ದಬಹುದೆ ವಿನಃ ಅದರಲ್ಲಿನ ಕಠಿಣ ಸಮಸ್ಯೆಗಳನ್ನು ಬಿಡಿಸುವುದು ಉನ್ನತ ವಿಚಾರಕ್ಕೆ ಬಿಟ್ಟಂತಹ ಅಂಶವೆಂದಿದ್ದಾರೆ.

ಹಸ್ತಪ್ರತಿ ಮಾತೃಕೆಗಳ ಬಗ್ಗೆ ಹೇಳುತ್ತಾ ಡಿ.ಎಲ್.ಎನ್. ಮೂರು ಹಸ್ತಪ್ರತಿಗಳು ಹೊಂದಿರುವ, ಒಂದೇ ಗ್ರಂಥಕ್ಕೆ ಸಂಬಂಧಿಸಿ ಪ್ರತಿ ದೊರೆತಿದ್ದರೆ ಅವು ಬೇರೊಂದು ಪ್ರತಿಯ ನಕಲಾಗಿರಬಹುದು, ಹಾಗೂ ಪರಂಪರಾಗತ ಹಸ್ತಪ್ರತಿಗಳು ಈ ವರ್ಗಕ್ಕೆ ಸೇರುವವಾಗಿದ್ದು ಪಾಠವ್ಯತ್ಯಾಸಗಳನ್ನು ಗುರುತಿಸುವುದು ಅವಶ್ಯ ಎಂದಿದ್ದಾರೆ.

ಸಂಪಾದಕನಾದವನು ತನಗೆ ದೊರೆತ ಹಸ್ತಪ್ರತಿಗಳನ್ನು ಜಾಗ್ರತೆಯಿಂದ ಪರೀಕ್ಷಿಸಿ ಅವುಗಳು ಯಾವ ರೀತಿಯ ಪ್ರತಿಗಳೆಂದು ಪರಿಶೀಲಿಸಿ, ಅವುಗಳ ವಿಷಯ ಪ್ರದೇಶ, ಕಾಲವಾರು ವಿಚಾರಿಸಿ, ಅಭ್ಯಾಸಿಸಿ ನಂತರ ಸ್ಪಷ್ಟ ತೀರ್ಮಾನಕ್ಕೆ ಬರುವುದು ಅತ್ಯಾವಶ್ಯಕವಾಗಿದೆ. ಭಿನ್ನಪಾಠಗಳು, ಅಕ್ಷರ ಸ್ಖಾಲಿತ್ಯ, ಲೋಪದೋಷಗಳು, ಪಾಠಾಂತರ ಸಂಕಲನ, ಪ್ರತಿಯ ಪೀಳಿಗೆ, ಪಾಠಪರಿಷ್ಕರಣೆ, ಈ ಎಲ್ಲಾ ಅಂಶಗಳನ್ನು ಗ್ರಂಥ ಸಂಪಾದಕನಾದವನು ತನ್ನ ಕಾರ್ಯವಿಧಾನದಲ್ಲಿ ಗ್ರಹಿಸುವುದು ಅವಶ್ಯ ಎಂದಿದ್ದಾರೆ.

ಗ್ರಂಥಸಂಪಾದಕನಾದವನು ಸದಾ ಜಾಗರೂಕತೆಯಿಂದ ಕಾಲಕ್ಕನುಗುಣವಾಗಿ ಅಧ್ಯಯನ, ಅಧ್ಯಾಪನ, ವಿಷಯಗಳಲ್ಲಿ ತೊಡಗಿಸಿಕೊಂಡವನಾಗಿರಬೇಕಾದದ್ದು, ಅತ್ಯಾವಶ್ಯಕ. ಆಗಲೇ ಶುದ್ಧ ಸಾಹಿತ್ಯ ರಚಿಸಲು ಸಾಧ್ಯ ಎಂದಿದ್ದಾರೆ.

- **ಗ್ರಂಥಸಂಪಾದನಾ ಕಾರ್ಯ ಕುರಿತು ಪ್ರಸ್ತುತ ಚಿಂತನೆಗಳು**

ಗ್ರಂಥಸಂಪಾದನೆಯ ಇತ್ತೀಚಿನ ಬೆಳವಣಿಗೆಗಳ ಕುರಿತು ತಿಳಿಯುವುದಾದರೇ, ಗ್ರಂಥಸಂಪಾದನೆಯ ಇತ್ತೀಚಿನ ಬೆಳವಣಿಗೆಗಳ ಕುರಿತು ನಮ್ಮ ಪೂರ್ವಿಕರು ಪಾಶ್ಚಾತ್ಯ ವಿದ್ವಾಂಸರ ಅಧ್ಯಯನದ ಪ್ರತಿಫಲನದಿಂದಿಡಿದು ಪ್ರಸ್ತುತ ವಿಶ್ವವಿದ್ಯಾಲಯಗಳ ಮಟ್ಟದವರೆಗಿನ ಅಧ್ಯಯನ ಕ್ರಮ ತುಂಬಾ ವಿಸ್ತಾರವಾಗಿ ಬೆಳೆದುಬಂದಿರುವುದು ಕಂಡುಬಂದಿದೆ.

ಕವಿ ಪಠ್ಯಕ್ಕಿಂತ ಲಿಪಿಕಾರರ ಪಠ್ಯಕ್ಕೆ ಹೊತ್ತು ನೀಡುವ ಪ್ರವೃತ್ತಿ ಇತ್ತೀಚಿಗೆ ಬಳೆಯುತ್ತಿದೆ.

ಕಾಲ ಕಾಲಕ್ಕನುಗುಣವಾಗಿ ಬದಲಾಗುವ ಅಧ್ಯಯನ ಕ್ರಮ ರೂಪಗೊಳ್ಳುತ್ತಿದೆ.

ಈ ವಿಷಯ ಕುರಿತು ಪ್ರತ್ಯೇಕವಾಗಿ ಪಾಠಬೋಧನೆ, ಇತರೆ, ಎಂ.ಫಿಲ್. ಪಿಎಚ್.ಡಿ ಅಧ್ಯಯನ ಕ್ರಮಗಳು ತರಬೇತಿ ಶಿಬಿರಗಳು ನಡೆದು ಗ್ರಂಥಸಂಪಾದನೆಯ ವಿವಿಧ ಸ್ವರೂಪಗಳು ಪರಿಚಯಗೊಳ್ಳುತ್ತಿವೆ.

ಹಸ್ತಪ್ರತಿ ಅಧ್ಯಯನದಿಂದ ಕವಲೊಡೆದ ಈ ಅಧ್ಯಯನ ಕ್ರಮ ಪ್ರತ್ಯೇಕ ಶಿಸ್ತಾಗಿ ಬೆಳೆಯುತ್ತಿದೆ.

ಹಸ್ತಪ್ರತಿಗಳಲ್ಲಿರುವ ಲಘುಸಾಹಿತ್ಯವೂ ಶಾಸ್ತ್ರೀಯ ಗ್ರಂಥ ಸಂಪಾದನೆಗೆ ಅರ್ಹವಾದುದು ಎಂಬ ಪ್ರವೃತ್ತಿ ಈಚೆಗೆ ವ್ಯಕ್ತವಾಗುತ್ತಿದೆ, ಈ ಕುರಿತು ವೀರಶೈವ ತಾರಾವಳಿ, ಅಷ್ಟಕಗಳು, ಕಾಲಜ್ಞಾನ, ಜೈನಹಾಡುಗಳು ಇತ್ಯಾದಿ ಒಂದೊಂದು ಪ್ರತ್ಯೇಕ ಪ್ರಕಟಣೆಗಳಾಗಿ ಹೊರಬಂದು ಅಧ್ಯಯನಕ್ಕೊಳಪಡುತ್ತಿವೆ.

ಹಸ್ತಪ್ರತಿಗಳು ಕವಿಪಠ್ಯ ಎಂಬುದು ಹಿಂದಿನ ಪರಿಕಲ್ಪನೆಯಾಗಿದ್ದು ಅದು ಲಿಪಿಕಾರನ ಪಠ್ಯವೂ ಆಗಿದೆ ಎಂಬುದನ್ನರಿತು ಅಧ್ಯಯನ ಮಾಡುವುದು ಇತ್ತೀಚಿನ ಕ್ರಮವಾಗಿದೆ.

ಗ್ರಂಥಸಂಪಾದನೆಯು ಶಾಸ್ತ್ರವಾಗಿ ಬೆಳೆದಿರುವುದಲ್ಲದೆ ಈ ಬಗ್ಗೆ ಹಲವಾರು ರಚನೆಗಳೂ ಮೂಡಿಬಂದು ಭಾರತದ ಬೇರಾವುದೇ ಭಾಷೆಯಲ್ಲಿ ಕಾಣಸಿಗದಷ್ಟು ಕೃತಿಗಳು ಕನ್ನಡದಲ್ಲಿ ಬಂದಿದ್ದು ಗ್ರಂಥಸಂಪಾದನೆಯನ್ನು ಸೈದ್ಧಾಂತಿಕವಾಗಿ ದೃಢಗೊಳಿಸಬೇಕೆಂಬ ಆಶಯದ ಸಂಕೇತವಾಗಿದೆ.

ಪ್ರಸ್ತುತ ದಿನಮಾನಗಳಲ್ಲಿ ಗ್ರಂಥಸಂಪಾದನಾ ಅಧ್ಯಯನಕ್ಕೆ ಸಾಫ್ಟ್‌ವೇರ್ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವ ಮೂಲಕ ಈ ಅಧ್ಯಯನ ಕ್ರಮವನ್ನು ಹೊಸದೃಷ್ಟಿಯಿಂದ ನೋಡುವುದು ಸೂಕ್ತವೆನಿಸಿದೆ.

ಒಟ್ಟಿನಲ್ಲಿ ಗ್ರಂಥಸಂಪಾದನಾ ಅಧ್ಯಯನ ಕ್ರಮ ವರ್ತಮಾನದ ಅಭಿರುಚಿಗೆ ಅನುಗುಣವಾಗಿ ತನ್ನನ್ನು ತಾನು ಶ್ರುತಿಗೊಳಿಸಿಕೊಳ್ಳುವತ್ತ ಸಾಗಿರುವುದು ಅಭೇಧ್ಯವೆನಿಸಿದೆ.

**• ಡಿ.ಎಲ್.ಎನ್. ಅವರ ಕನ್ನಡ ಗ್ರಂಥಸಂಪಾದನಾ ಕೃತಿಯ ಕುರಿತು ವಿವಿಧ ವಿದ್ವಾಂಸರ ಅಭಿಪ್ರಾಯಗಳು**

'ಆ.ನೆ.ಉಪಾಧ್ಯೆ ಅವರು ಈ ಕೃತಿ ಕುರಿತು ಅಭಿಪ್ರಾಯಿಸಿದಂತೆ, ಭಾರತೀಯ ಯಾವ ಯಾವ ಭಾಷೆಯಲ್ಲಿಯೂ ಸುಲಭವಾಗಿ ದೊರೆಯದಂತಿರುವ ಅಮೂಲ್ಯವಾದ ಗ್ರಂಥ ಇದೊಂದು ಸಾಧನೆ. ಕಿಟೆಲ್, ರೈಸ್, ಮೊದಲಾದವರು ನಮಗೆ ನೀಡಿರುವ ಮೌಲಿಕ ಸಾಧನೆಗಳಷ್ಟೇ ಮಹತ್ವದ್ದು, ನರಸಿಂಹಾಚಾರ್ಯರು ಈ ಗ್ರಂಥಸಂಪಾದನ ಕಲೆಯಲ್ಲಿ ನಿಪುಣರು, ಅವರ ಹಳೆಗನ್ನಡ ಭಾಷೆಯ ಅಭ್ಯಾಸ ಆಳವಾದುದು. ಬೇರೆ ಬೇರೆ ಕಾವ್ಯಗಳನ್ನು ಓದಿ ಅವರು ಅನುಭವ ಪಡೆದವರು. ಗ್ರಂಥಸಂಪಾದನೆಯಲ್ಲಿ ಮೌಲಿಕ ತತ್ವಗಳನ್ನು ಅವರು ತಿಳಿದು ಕನ್ನಡ ಕಾವ್ಯಗಳಲ್ಲಿ ಅವನೆಲ್ಲಾ ಹೇಗೆ ಉಪಯೋಗಿಸಬೇಕು? ಎಂಬ ಮಾತನ್ನು ಸೋದಾಹರಣವಾಗಿ ತಮ್ಮ ಈ ಗ್ರಂಥದಲ್ಲಿ ತಿಳಿಸಿ ಹೇಳಿದ್ದಾರೆ. ನರಸಿಂಹಾಚಾರ್ಯರ ಈ ಗ್ರಂಥವನ್ನು ಅಭ್ಯಾಸಿಸಿ ಅವರು ತೋರಿದ ದಾರಿಯನ್ನು ತಿಳಿದುಕೊಂಡು ಪ್ರಾಚೀನ ಕನ್ನಡ ಕಾವ್ಯಗಳು ಸಂಪಾದನೆಯಾದರೆ ಅದೊಂದು ಕನ್ನಡ ಸಾಹಿತ್ಯಕ್ಕೆ ಗೌರವ ಭಾರತೀಯ ಸಾಹಿತ್ಯಕ್ಕೆ ಹೆಮ್ಮೆಯ ಮಾತು'[೮] ಎಂಬ ಅನಿಸಿಕೆ ವ್ಯಕ್ತಪಡಿಸಿದ್ದು ಕೃತಿಯ ಮೌಲ್ಯವನ್ನು ಹೆಚ್ಚಿಸಿದ್ದಾಗಿದೆ.

ಇದೇ ರೀತಿಯಾಗಿ ಎಂ.ಚಿದಾನಂದಮೂರ್ತಿ ಅವರು ಈ ಕೃತಿ ಕುರಿತು ಅಭಿಪ್ರಾಯಿಸಿದ್ದಂತೆ, ಕನ್ನಡ ಗ್ರಂಥಸಂಪಾದನ ಕ್ಷೇತ್ರದಲ್ಲಿ ಒಂದು ಹೊಸ ದಿಗಂತವನ್ನೇ ತೆರೆದು ತೋರಿದ ಮೌಲಿಕ ಕೃತಿ ಕನ್ನಡ ಗ್ರಂಥಸಂಪಾದನೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ ಇಂದು ಕನ್ನಡದಲ್ಲಿ ಗ್ರಂಥಸಂಪಾದನೆ ಶೈಕ್ಷಣಿಕ ಶಿಸ್ತಾಗಿ ಅಧ್ಯಯನ ವಿಷಯವಾಗಿದ್ದರೆ ಡಿ.ಎಲ್.ಎನ್.ರ ಈ ಕೃತಿ ರಚನೆಯೂ ಒಂದು ಕಾರಣವೆಂಬುದು ಸಂದೇಹವಿಲ್ಲ. ಕನ್ನಡ

ಗ್ರಂಥಸಂಪಾದನೆಯಂತಹ ಕೃತಿ ಕನ್ನಡಕ್ಕಂತೂ ಹೊಸತು. ಉಳಿದ ಭಾರತೀಯ ಭಾಷೆಗಳಲ್ಲೂ ಅಂತಹ ಕೃತಿಯೊಂದು ನಿರ್ಮಾಣವಾಗಿರುವಂತೆ ಕಾಣುವುದಿಲ್ಲ. ಬಹುಶಃ ಇದನ್ನು ಇಂಗ್ಲಿಷ್‌ಗೆ ಅನುವಾದಿಸಿದರೆ ಈ ಕ್ಷೇತ್ರಕ್ಕೆ ಅದೊಂದು ಮೌಲಿಕ ಕೊಡುಗೆಯಾಗುವುದು ಎಂದು ಅಭಿಪ್ರಾಯಿದ್ದಾರೆ.

ವಿ.ಜಿ.ಪೂಜಾರ ಅವರು ಅಭಿಪ್ರಾಯಿಸಿದಂತೆ ಕನ್ನಡ ಗ್ರಂಥಸಂಪಾದನೆ ಕೃತಿಯು ಕನ್ನಡದ ಅಮೂಲ್ಯ ಸಂಶೋಧನಾ ಗ್ರಂಥಗಳಲ್ಲಿ ಒಂದಾಗಿದೆ[೯] ಎಂದಿದ್ದಾರೆ.

'ಎಸ್.ಎಸ್.ಅಂಗಡಿ ಅವರು ಕನ್ನಡ ಗ್ರಂಥಸಂಪಾದನೆ ಕನ್ನಡಿಗರಿಗೆ ಒಂದು ಪಂಡಿತ ಆವೃತ್ತಿ'[೧೦] ಎಂದಿದ್ದಾರೆ.

ಒಟ್ಟಾರೆಯಾಗಿ, ಡಿ.ಎಲ್.ಎನ್. ಅವರ ಕನ್ನಡ ಗ್ರಂಥಸಂಪಾದನೆ ಕೃತಿಯು ಕನ್ನಡ ಸಾಹಿತ್ಯ ವಲಯದಲ್ಲಿ ಅಮೂಲ್ಯವಾದ ಸಂಶೋಧನಾ ಗ್ರಂಥಗಳಲ್ಲೊಂದಾಗಿದೆ. ಇಂತಹ ಶಾಸ್ತ್ರೀಯ ಗ್ರಂಥ ಕನ್ನಡದಲ್ಲಿ ಪ್ರಕಟಣೆಯಾಗಿದ್ದು ಮೊದಲೆನಿಸಿದೆ. ಇಂದಿನ ವಿಸ್ತೃತ ಈ ಅಧ್ಯಯನಕ್ಕೆ ಭದ್ರಬುನಾದಿ ಎನಿಸಿದೆ. ಪ್ರಾಚೀನ ಗ್ರಂಥಗಳನ್ನು ಶಾಸ್ತ್ರೋಕ್ತವಾಗಿ ಶುದ್ಧೀಕರಿಸಿ ಹೇಗೆ ಸಂಪಾದಿಸಬೇಕೆಂಬುದನ್ನು ಈ ಗ್ರಂಥ ತಿಳಿಸುವಲ್ಲಿ ಯಶಸ್ವಿಯಾಗಿದ್ದು ಇದಕ್ಕೆ ಪೂರಕವೆಂಬಂತೆ ಎಂ.ಎಂ.ಕಲಬುರ್ಗಿ, ವೈ.ಸಿ.ಭಾನುಮತಿ, ಎಸ್.ಎಸ್.ಅಂಗಡಿ ಇತರೆ ವಿದ್ವಾಂಸರ ಕೃತಿಗಳು ಇದರ ರೆಂಬೆ, ಕೊಂಬೆಗಳಂತೆ ಚಾಚಿದ ಕೃತಿಗಳೆನಿಸಿವೆ. ಏನಿದ್ದರೂ ಮೊದಲ ಬಾರಿಗೆ ಗ್ರಂಥ ಬರೆದವರಿಗೆ ಹೆಚ್ಚಿನ ಮೌಲ್ಯವಿದೆ ಎನ್ನುವುದನ್ನು ಅಲ್ಲಗಳೆಯಲಾಗದು ಈ ಗ್ರಂಥ ಕನ್ನಡಶಾಸ್ತ್ರ ಸಾಹಿತ್ಯಕ್ಕೆ ಅದರಲ್ಲೂ ಗ್ರಂಥ ಸಂಪಾದನಾ ಕ್ಷೇತ್ರಕ್ಕೆ ಒಂದು ಅಮೂಲ್ಯ ಕೊಡುಗೆ ಎನಿಸಿದೆ.

**ಕೊನೆಯ ಟಿಪ್ಪಣಿಗಳು**

೧. ಕನ್ನಡ ಗ್ರಂಥಸಂಪಾದನೆ (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು-೪, ೨೦೦೫, ಪು.ಸಂ. ೨.

೨. ಕವಳಿಗೆ (ಸಂ) ಎ.ವಿ.ನಾವಡ, ಕೆ.ರವೀಂದ್ರನಾಥ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬, ಪು.ಸಂ. ೭೨

೩. ಅದೇ, ಪು.ಸಂ. ೭೬

೪. ಪ್ರಾಚೀನ ಕನ್ನಡ ಗ್ರಂಥಸಂಪಾದನೆ (ಲೇ) ಬಿ.ಎಸ್.ಸಣ್ಣಯ್ಯ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨, ಪು. ೬-೭

೫. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ) ಎಫ್.ಟಿ.ಹಳ್ಳಿಕೇರಿ, ೨೦೦೫, ಪು. ೨೮೦.

೬. ಕನ್ನಡ ಗ್ರಂಥಸಂಪಾದನೆ (ಲೇ), ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು-೪, ೨೦೦೫, ಪು.ಸಂ. ೨೫೪

೭. ಕನ್ನಡ ವಿದ್ವತ್ ಪರಂಪರೆ ಮತ್ತು ಡಿ.ಎಲ್.ನರಸಿಂಹಾಚಾರ್ (ಲೇ) ಬಿ.ರವೀಂದ್ರ, ಬೆಂಗಳೂರು ವಿ.ವಿ. ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ೨೦೧೫, ಪು. ೧೯೭

೮. ಕರ್ನಾಟಕ ಗ್ರಂಥಸಂಪಾದನೆ (ಲೇ) ಎಸ್.ಎಸ್.ಅಂಗಡಿ, ತನುಮನ ಪ್ರಕಾಶನ, ಮೈಸೂರು, ೨೦೧೨, ಪು. ೨೬೦.

೯. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ) ಎಫ್.ಟಿ.ಹಳ್ಳಿಕೇರಿ, ೨೦೦೫, ಪು. ೨೮೬

೧೦. ಕನ್ನಡ ಗ್ರಂಥಸಂಪಾದನೆ (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು-೪, ೨೦೦೫, ಪು.ಸಂ. ೨.

## ಅಧ್ಯಾಯ – ಐದು

# ಡಿ.ಎಲ್.ನರಸಿಂಹಾಚಾರ್ ಅವರ ಸಂಶೋಧನ ಸಾಹಿತ್ಯ

# ಅಧ್ಯಾಯ – ಐದು

# ಡಿ.ಎಲ್.ನರಸಿಂಹಾಚಾರ್ ಅವರ ಸಂಶೋಧನ ಸಾಹಿತ್ಯ

### ೫.೧. ಕವಿ–ಕಾವ್ಯ, ಕಾಲ ವಿಚಾರ

ಹಸ್ತಪ್ರತಿಗಳಲ್ಲಿದ್ದ ಕೃತಿಗಳನ್ನು ಮುದ್ರಿತ ಆಕಾರಕ್ಕೆ ತರುತ್ತಿದ್ದಂತೆಯೇ ಆ ಕೃತಿ ಹಾಗೂ ಕೃತಿಕಾರರ ಬಗೆಗೆ ಮಾಹಿತಿಯನ್ನು ಕ್ರೋಢಿಕರಿಸುವ ಪ್ರಯತ್ನಗಳೂ ಪ್ರಾರಂಭವಾದವು. ಆ ದಿಕ್ಕಿನಲ್ಲಿ ಕವಿಯ ಜೀವನ ವಿಚಾರ, ಕಾಲನಿರ್ಣಯ, ದೇಶ, ಕೃತಿಯ ಸ್ವರೂಪ ಈ ರೀತಿಯಾದ ಸಂಗತಿಗಳನ್ನು ಕೃತಿಯಿಂದ ಮತ್ತು ಅನ್ಯಮೂಲಗಳಿಂದ ಕಂಡುಕೊಳ್ಳುವ ಚಟುವಟಿಕೆಗಳು ಮೊದಲ ಆರಂಭವೆನಿಸಿದ್ದು, ಇದಕ್ಕೆ ಮೂಲ ಆಕರವಾಗಿ ರಾ.ನರಸಿಂಹಾಚಾರ್ ಅವರ ಕವಿಚರಿತೆ ಸಂಪುಟಗಳು ಮುಖ್ಯಮಾದರಿ ಎನಿಸಿವೆ. ಅಲ್ಲದೆ ಕವಿ–ಕಾವ್ಯ–ಕಾಲ ವಿಚಾರ ನಿರ್ಣಯಿಸುವುದಕ್ಕೆ ಕವಿಗಳ ಕಾವ್ಯರಚನೆಯ ಕಾಲಕ್ಕನುಗುಣವಾದ ರಾಜಮನೆತನಗಳು ಕವಿಯ ಧಾರ್ಮಿಕ ಹಿನ್ನೆಲೆ, ಮತಧರ್ಮ ವಿಚಾರ, ಕೃತಿಯ ವಸ್ತುವಿನ ಆಯ್ಕೆಗಳ ಮೂಲಕ ನಿರ್ಣಯಿಸುವ ಪರಿ ಹಿಂದೆಯೂ ನಡೆದಿದ್ದು ಇಂದಿಗೂ ಈ ಪರಂಪರೆ ಸಾಗಿದ್ದಾಗಿದೆ. ಈ ವಿಚಾರವಾಗಿ ಡಿ.ಎಲ್.ಎನ್. ಸಂಕಲಿಸಿದ ೨೦ ಕವಿಕಾವ್ಯ ಕಾಲ ವಿಚಾರದ ಚರ್ಚೆಗಳನ್ನು ಪ್ರಸ್ತುತ ಇಲ್ಲಿ ಮಾಡಲಾಗಿದೆ.

**ಹಂಪೆಯ ಹರಿಹರ**

ಹಂಪೆಯ ಹರಿಹರ ಕೃತಿಯು ಮೊದಲ ಬಾರಿಗೆ ೧೯೩೯ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟಗೊಂಡಿತು. ಮುಂದೆ ಡಿ.ಎಲ್.ಎನ್. ಜನ್ಮಶತಾಬ್ಧಿಯ ನೆನಪಿಗಾಗಿ ಎಂಟನೇ ಮುದ್ರಣವನ್ನು ೨೦೦೫ರಲ್ಲಿ ನೇರವೇರಿಸಲಾಯಿತು. ಕನ್ನಡ ಸಾಹಿತ್ಯದಲ್ಲಿ ವಚನಕಾರರ ನಂತರ ಸಾಹಿತ್ಯದ ದಿಕ್ಕು ದೆಸೆ ಬದಲಿಸಿದ ಕ್ರಾಂತಿಕಾರಿ ಕವಿ ಹರಿಹರ. ಇವನ ಜೀವನ, ಕೃತಿಗಳನ್ನು ಜನಸಾಮಾನ್ಯರಿಗೆ ಸಾಮಾನ್ಯ ಮಟ್ಟದಲ್ಲಿ ಪರಿಚಯಿಸುವ ಪ್ರಯತ್ನ ಈ ಕೃತಿಯದ್ದಾಗಿದೆ. ಕನ್ನಡ ಶ್ರೇಷ್ಠ ಕವಿ ಹರಿಹರನ ಬಗ್ಗೆ ಅನನ್ಯವಾದ ರೀತಿಯಲ್ಲಿ ಗೌರವ ಭಾವನೆ ಹೊಂದಿರುವ ಡಿಎಲ್ಎನ್ ಅವರು ಬಹಳ ಸೊಗಸಾಗಿ ಕವಿಯ ವ್ಯಕ್ತಿತ್ವದ

ಪರಿಚಯ ಮಾಡಿಕೊಟ್ಟಿದ್ದಾರೆ. ಕೃತಿಯ ಆರಂಭದಲ್ಲಿ ಹಂಪೆಯನ್ನು ವರ್ಣಿಸಿರುವ ಡಿ.ಎಲ್.ಎನ್. ತುಂಗಭದ್ರಾ ನದಿ ತೀರದ ಹಸಿರ ಹೊದಿಕೆಯಲ್ಲಿ ಮಿಂದೆದ್ದ ಬೆಟ್ಟ, ಕೆರೆಗಳ, ನಡುವೆ ಮಲಗಿ ಚಿತ್ರಕಾರದಂತೆ ಕಾಣುವ ಹಂಪೆಯು ಒಂದು ಪುಣ್ಯಕ್ಷೇತ್ರವೆಂದು ಹೇಳಿದ್ದಾರೆ. ಧಾರ್ಮಿಕ ಮೆರುಗು, ಪ್ರಕೃತಿ ವಿಲಾಸದ ಸೊಗಸುಗಳಿಂದ ದೇವರಲ್ಲಿ ಭಕ್ತಿಯುಳ್ಳ ಇಲ್ಲಿನ ಜನರು ಶಾಂತಿಯುತವಾಗಿ ಜೀವನ ಸಾಗಿಸುತ್ತಿದ್ದಾರೆ.

ಕೃತಿಯ ಪೂರ್ವದಲ್ಲಿ 'ಕೆಂಪು ಅರಳುವ ಹೊತ್ತಿನಲ್ಲಿ ಶಿವನ ಭಕ್ತನೊಬ್ಬನು ಶಿವಸ್ತೋತ್ರ ಮಾಡುತ್ತಾ ಹೂ ಹರಿದು ಮಾಲೆ ಮಾಡಿ ದೇವಾಲಯಕ್ಕೆ ಬಂದು ದೇವರಿಗೆ ಬಗೆ ಬಗೆಯ ಹೂಗಳನ್ನು ಧರಿಸಿ ದಿವ್ಯಮೂರ್ತಿಯ ಅಲಂಕಾರವನ್ನು ಕಣ್ತುಂಬ ನೋಡಿ ರೋಮಾಂಚನಗೊಂಡು ಅನಂದಬಾಷ್ಪ ಸುರಿಸುತ್ತ ದೇವನನ್ನು ಸ್ತುತಿಸುತ್ತ ಭಕ್ತಿಯ ಭರದಲ್ಲಿ ಇಹಲೋಕದ ಅರಿವು ಅಳಿದು ಆನಂದದ ಕಡಲಿನಲ್ಲಿ ಮನಸ್ಸನ್ನು ತೇಲಿಸುತ್ತ ಶಿವನ ಕರುಣೆಗೆ ಪಾತ್ರನಾದ ಪರಮಭಕ್ತ ಹರಿಹರನ ಚಿತ್ರ ಸೊಗಸಾಗಿ ಮೂಡಿಬಂದಿದೆ.'[೧]

ಈ ಕುರಿತು ಡಿ.ಎಲ್.ಎನ್. ಒಂದು ಗೀತೆಯನ್ನು ಉಲ್ಲೇಖಿಸಿ,

'ನಿನ್ನ ಗೀತಂಗಳಂ ಹರುಪದಿಂ ಪಾಡುತಂ
ನಿನ್ನ ಪದ್ಯಂಗಳಂ ಪುಳಕಿಸುತೋದುತಂ
ನಿನ್ನವರ ಕೀತಿಯಾ ಕೈವರಿಸುತ ಬರುತೆ
ನಿನ್ನವರ ಮೂರ್ತಿಯುಂ ನೆನದು ಕರಗುತ ಬರುತೆ'[೨]

ಎಂದು ಬೇಡುತ್ತಾ, ಹಾಡುತ್ತ ಅವನು ಮುಂದೆ ಮುಂದೆ ಮೆಲ್ಲಗೆ ಹೋಗುವ ಚಿತ್ರಣವನ್ನು ಡಿ.ಎಲ್.ಎನ್. ಕಣ್ಣಿಗೆ ಕಟ್ಟುವಂತೆ ನಿರೂಪಿಸಿದ್ದಾರೆ. ಹರಿಹರನ ಜೀವನದ ಸ್ಥಿತಿಗಳ ಬಗ್ಗೆಯೂ ಡಿ.ಎಲ್.ಎನ್. ನಮಗೆ ಸಂಕ್ಷಿಪ್ತವಾಗಿ ಪರಿಚಯಿಸುವ ಕೆಲಸವನ್ನು ಮಾಡಿದ್ದಾರೆ. ಹರಿಹರನು ಹಂಪೆಯ ವಿರೂಪಾಕ್ಷನಲ್ಲಿ ಆತ್ಮಾರ್ಪಣೆ ಮಾಡಿ ಭಕ್ತನಾಗುವುದಕ್ಕೆ ಮೊದಲೇ ಬದುಕಿನ ಭಾರದಿಂದ ಕಂಗೆಟ್ಟಿದ್ದನೆಂದು ಹೇಳಿರುವ ಡಿ.ಎಲ್.ಎನ್. ಅವರು ಹರಿಹರನು ಕಷ್ಟದಲ್ಲಿಯೇ ಬೆಳೆದು ಯೌವ್ವನಾವಸ್ಥೆಗೆ ಬಂದಾಗ ತಂದೆ ತಾಯಿಗಳು ಯಾವುದೋ ದೈತ್ಯರೂಪದ ಹೆಣ್ಣನ್ನು ತಂದು ಮದುವೆ ಮಾಡಿದ್ದರೆಂದು ಹೇಳಿದ್ದಾರೆ. ಇದರಿಂದ ಬೇಸತ್ತ ಹರಿಹರ ವಿಚಲಿತಗೊಳ್ಳುವ ಸಂದರ್ಭವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ. ನಾಯಿ ಹಾಲನ್ನು ಕುಡಿದಂತೆ, ಪಿತ್ತ ನೆತ್ತಿಗೆರಿದಂತೆ, ಬದುಕನ್ನು ಸಾಗಿಸುವುದು ಶಿವನಲ್ಲಿ ಕರುಣೆಗಾಗಿ ಬೇಡಿಕೊಳ್ಳುವುದು ಜೀವನೋಪಾಯಕ್ಕೆ ಏನೂ ನೆಲೆಸಿಗದೆ ಸಂಸಾರಕ್ಕೆ ಅಡೆತಡೆಗಳು ಎದುರಾಗಿ ಜೀವನದುದ್ದಕ್ಕೂ ಒದಗಿದ ತುಂಬಾ ಸಂಕಷ್ಟಗಳನ್ನು, ಎದುರಿಸಲಾಗದ ಪರಿಸ್ಥಿತಿಗಳನ್ನು ಸಹ ಎಳೆ ಎಳೆಯಾಗಿ ಡಿ.ಎಲ್.ಎನ್. ಬಿಚ್ಚಿಟ್ಟಿದ್ದಾರೆ. ಈ ಸಂಸಾರದ ಸಂಕಷ್ಟಗಳನ್ನು ಎದುರಿಸಲು ಶಿವಧ್ಯಾನವೊಂದೆ ಪರಿಹಾರವೆಂದು ತಿಳಿದ ಹರಿಹರ ಶಿವಸ್ತೋತ್ರ ಮಾಡುತ್ತಾ

ಶಿವಶರಣ ಕಥೆಗಳನ್ನು ಹಾಡುತ್ತ ಸಮಾಜದ ಸಂಕೋಲೆಗಳನ್ನು ತೊರೆದು ತನ್ನನ್ನು ತಾನೆ ಮರೆಯುತ್ತಾನೆ ಇದು ಹರಿಹರನ ಜೀವನ ದೃಶ್ಯ ಎಂದು ಡಿ.ಎಲ್.ಎನ್. ತಮ್ಮ ಕೃತಿಯಲ್ಲಿ ಬಿತ್ತರಿಸಿದ್ದಾರೆ. ಹರಿಹರನ ಸಾಹಿತ್ಯ ಕೃತಿಗಳನ್ನು ಕುರಿತು ಡಿ.ಎಲ್.ಎನ್. ತಳಿದ ಕೆಲವು ನಿಲುವುಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ. ಹರಿಹರನ ಸಾಹಿತ್ಯ ಕೃತಿಗಳು ಶಿವಭಕ್ತಿಯಿಂದ ಬಾಯಲ್ಲಿ ಹಾಡಿದ ಕವಿತೆಗಳೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹೀಗೆ ಕೃತಿಗಳನ್ನು ಪಟ್ಟಿಮಾಡಿರುವ ಡಿ.ಎಲ್.ಎನ್. ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಮುಡಿಗೆ ಅಷ್ಟಕ, ಶಿವಶರಣರ ರಗಳೆಗಳು ಇತ್ಯಾದಿಗಳನ್ನು ಹೇಳಿದ್ದಾರೆ. ಈ ಎಲ್ಲಾ ಕೃತಿಗಳಲ್ಲಿನ ಕಾವ್ಯ ಹರಿಹರನ ಪಾಲಿಗೆ ಶಿವನನ್ನು ಹೋಲಿಸುವುದಕ್ಕೆ ಭಕ್ತ ಹೃದಯದಿಂದ ಮೂಡಿಬಂದ ರೂಪಗಳು ಎಂದು ಡಿ.ಎಲ್.ಎನ್. ಹೇಳಿದ್ದಾರೆ.

ಹರಿಹರನ ರಗಳೆಗಳಂತೂ ಒಂದೊಂದು ಹಲವು ಚಿತ್ರಗಳ ಸುರುಳಿಗಳಾಗಿವೆ. ಅವನ್ನು ಬಿಚ್ಚಿ ವೇಗವಾಗಿ ತಿರುಗಿಸುವ ಶಕ್ತಿ ಅವನಲ್ಲಿದ್ದಿತು. ಪ್ರತಿ ರಗಳೆಯಲ್ಲಿ ಕಥಾನಾಯಕನ ದೇಶ, ಊರು, ಅಲ್ಲಿನ ಶಿವಾಲಯ, ಭಕ್ತರ ಓಡಾಟ ಹೀಗೆ ದಿನದ ಬದುಕು ಅವನ ಮನಸ್ಸನ್ನು ಎವೆಯುಕ್ಕುವಂತೆ ಮಾಡಿದ್ದಾಗಿದೆ. ಹರಿಹರನಿಗೆ ರೂಪಕ ನಿರ್ಮಾಣ ಶಕ್ತಿ ವಿಶೇಷವಾಗಿದೆ ಎಂದು ಹೇಳುವ ಜೊತೆಗೆ ಇವನ ಕಾವ್ಯಗಳಲ್ಲಿನ ಸೊಗಸು, ಅವುಗಳ ವಸ್ತು, ಪಾತ್ರ, ಶೈಲಿ, ವರ್ಣನೆ ಮುಂತಾದವುಗಳನ್ನು ಅಭ್ಯಾಸದಿಂದಲೇ ಗ್ರಹಿಸಬಹುದಾಗಿದೆ.

**ಅಗ್ಗಳದೇವ**

ಪ್ರಬುದ್ಧ ಕರ್ನಾಟಕ ಸಂಪುಟ ೨೫, ಸಂಚಿಕೆ ೪ರಲ್ಲಿ ೧೯೫೪ರ ವೇಳೆಗೆ ಮೊದಲಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ಕವಿಕಾವ್ಯ ಕಾಲ ವಿಚಾರದ ೭ನೇ ಭಾಗವಾಗಿ ಉಲ್ಲೇಖಗೊಂಡುದ್ದಾಗಿದೆ.

೧೨ನೇ ಶತಮಾನ (೧೧೮೯)ದ ಕನ್ನಡ ಕವಿಗಳಲ್ಲಿ ಅಗ್ಗಳನು ಪ್ರಸಿದ್ಧನಾದ ಜೈನಕವಿ ಎನಿಸಿದ್ದಾನೆ. ಈಗಿನ ವಿಜಯಪುರ ಜಿಲ್ಲೆಯ ಇಂಗಳೇಶ್ವರದ ಚಂದ್ರಪ್ರಜಾಮೂರ್ತಿಯನ್ನು ತನಗೆ ಪರಮೇಶನೆಂದು ಹೇಳಿಕೊಂಡಿದ್ದರಿಂದ ಇಂಗಳೇಶ್ವರ ಇವನ ಸ್ಥಳವಾಗಿರಬೇಕು. ಇವನ ಬಗ್ಗೆ ವಿಸ್ತೃತ ಚರ್ಚೆ ನಡೆಸಿರುವ ಡಿ.ಎಲ್.ಎನ್ 'ಭಾರತೀಬಾಳನೇತ್ರ ಉಭಯಕವಿ ತಾರಕನೆಂದೂ, ಜೈನ ಜನಮನೋಹರ ಚರಿತನೆಂದೂ ಸಾಹಿತ್ಯ ವಿದ್ಯಾವಿನೋದನೆಂದೂ, ತನ್ನನ್ನು ತಾನು ಬಗೆ ಬಗೆಯ ಬಿರುದುಗಳಿಂದ ಕರೆದುಕೊಂಡಿದ್ದಾನೆಂದು ತಿಳಿಸುತ್ತಾ'[೩] ತಂದೆ ಶಾಂತೀಶನಿಂದ ಉಪಶಾಂತಗುಣ ತಾರಿಲಿ ವಾಚಂಬಿಕೆಯಿಂದ ರಮಣೀಯವಾದ 'ವಚಶ್ಚತೊ' (ವಾಕ್ಚಾತುರ್ಯತೆ) ಬಂದಿತ್ತೆಂದು ಉಲ್ಲೇಖಿಸಿದ್ದಾರೆ. ಹಾಗೆಯೇ ಇವನ ಕುರಿತು ಹೆಚ್ಚು ವಿಚಾರಗಳನ್ನು ಕಲೆ ಹಾಕಿದವು ಡಿ.ಎಲ್.ಎನ್. 'ಅಗ್ಗಳ' ಜಿನಮತ ಶ್ರೀ ಕೋಶವೇಶಾರ್ಗಳಂ ಎಂದರೆ 'ಜಿನಮತದ ಶ್ರೀಭಂಡಾರದ ಬಾಗಿಲಿಗೆ ಅಗುಳಿಯಾಗಿದ್ದನಂತೆ'

ಎಂದು ತಿಳಿಸುತ್ತಾರೆ. ಯಾವುದೋ ಒಂದು ಆಸ್ಥಾನ ಕವಿಯಾಗಿದ್ದು ಇವನು ತನ್ನಲ್ಲಿದ್ದ ಅಷ್ಟ ಕಲೆಗಳನ್ನು ಶ್ರೇಷ್ಠವಾದ ದೃಷ್ಟಿಯಿಂದ ಹರುಹಿದ್ದನೆಂದು ತಿಳಿಸಿದ್ದಾರೆ. ತನ್ನ ಪೂರ್ವಜ ಕವಿಗಳಾದ ಪಂಪ, ರನ್ನ, ಪೊನ್ನರನ್ನು ಹೊಗಳಿದ್ದ ಇವನು, ಬ್ರಹ್ಮಶಿವನ ಸ್ನೇಹಿತನಾಗಿದ್ದವನು. ಶ್ರುತಕೀರ್ತಿ, ತ್ರೈವಿದ್ಯ, ವೀರನಂದಿ ಎಂಬುವರು ಇವನಿಗೆ ಗುರುವಾಗಿದ್ದವರು. ಇವನ ಚತುರತೆಯ ಕಾವ್ಯ ದೃಷ್ಟಿ ಕಂಡು ಅಚ್ಚಣ್ಣ, ಕಮಲಭವ ಮುಂತಾದವರು ಹೊಗಳಿದ್ದರ ಜೊತೆಗೆ ಮುಂದಿನ ಕನ್ನಡ ಕವಿಗಳಿಗೆ ಇವನ ಪ್ರಭಾವ ಅಪಾರವಾದ್ದಾಗಿದೆ.

ಇವನು 'ಚಂದ್ರಪ್ರಭ ಪುರಾಣ' ಎಂಬ ಕಾವ್ಯವನ್ನು ರಚಿಸಿದ್ದು ಇದು ಎಂಟನೇ ಜೈನತೀರ್ಥಂಕರನಾದ ಚಂದ್ರಪ್ರಭನ ಕುರಿತ ಕಥಾವಸ್ತುವಾಗಿದೆ. ಕವಿತೆಯ ಅಭಿಮಾನ ದಿಂದಾಗಲಿ, ಕಾಲಹರಣದಿಂದಾಗಲೀ, ಈ ಕಾವ್ಯ ರಚಿತವಾಗಿರದೆ ಸಂಸಾರದಿಂದ ಪಾರು ಮಾಡುವ ಜಿನಕಥೆ ಪುಣ್ಯದಾಯಕವಾದುದೆಂದು ಕವಿ ಕೃತಿ ಆರಂಭದಲ್ಲಿ ಹೇಳಿರುವುದನ್ನು ಉಲ್ಲೇಖಿಸಿದೆ. ಇದಲ್ಲದೆ ರೂಪಸ್ತವನ, ಮಣಿ, ಪ್ರವಾಳ ಜಿನಾಸ್ಥಾನಸ್ತವನ, ಎಂಬ ಸ್ತೋತ್ರಗ್ರಂಥಗಳನ್ನು ಬರೆದಿದ್ದನೆಂದು ಪಾರ್ಶ್ವಕವಿಯು ತನ್ನ ಕಾವ್ಯದಲ್ಲಿ ಒಂದೆಡೆ ಉಲ್ಲೇಖಿಸಿದ್ದುಂಟು, ಆದರೆ ಇವು ಇಂದಿಗೂ ದೊರೆಯದ ಕಾವ್ಯಗಳಾಗಿವೆ.

ಪ್ರಸ್ತುತ ಚಂದ್ರಪ್ರಭ ಪುರಾಣ ಈ ಕಾವ್ಯವನ್ನು ತನ್ನ ಗುರುವಾದ ಶ್ರುತಕೀರ್ತಿಯ ಪ್ರಭಾವ, ಪ್ರೋತ್ಸಾಹದಿಂದ ಬರೆದಿದ್ದು ಈ ಕಾವ್ಯದುದ್ದಕ್ಕೂ ಶೃಂಗಾರಕ್ಕೆ ಪ್ರಾಧಾನ್ಯತೆ ನೀಡಲಾಗಿದೆ. ಅಲ್ಲದೆ ಈ ಕಾವ್ಯಕ್ಕೆ 'ಅಗ್ಗಳಲೀಲಾವತಿ' ಎಂಬ ಇನ್ನೊಂದು ಹೆಸರೂ ಉಂಟು. ೧೬ ಆಶ್ವಾಸಗಳಲ್ಲಿ ಹಬ್ಬಿರುವ ಈ ಕಾವ್ಯದ ಕೊನೆಯ ೫ ಆಶ್ವಾಸಗಳು ಮಾತ್ರ ಕಥಾನಾಯಕ ನಾಗಚಂದ್ರಪ್ರಭನಿಗೆ ಮೀಸಲಾಗಿವೆ. ಭವಾವಳಿ ರೂಪದಲ್ಲಿ ಬಿತ್ತರಗೊಂಡ ಈ ಕಾವ್ಯ ಹಲವು ಜನ್ಮಗಳಲ್ಲಿ ಸಂಚರಿಸುತ್ತಿದ್ದ ಆತ್ಮಹೊಂದು ಮುಕ್ತಿಯತ್ತಾ ಕೈಕೊಂಡ ಯಾತ್ರೆಯ ಕಥಾರೂಪವಾಗಿ ನಿರ್ವಾಣ ಫಲಪ್ರಾಪ್ತಿಯಲ್ಲಿ ಪರ್ಯವಸನಗೊಂಡದ್ದಾಗಿದೆ.

ಕನ್ನಡ ನಾಡಿನಲ್ಲಿ ವೀರಶೈವ ಧರ್ಮದ ಜಾಗೃತಿಯುಂಟಾಗಿ ಶಿವಶರಣ ಅನುಭಾವಿಗಳ ಪ್ರಭಾವದಿಂದ ಸಾಹಿತ್ಯ ಮತ್ತು ಸಮಾಜದಲ್ಲಿ ಕ್ರಾಂತಿ ನಡೆದ ಕಾಲಘಟ್ಟದಲ್ಲಿ ಅಗ್ಗಳ ತನ್ನ ಸಾಹಿತ್ಯದ ಮೂಲಕ ನಿರ್ಲಿಪ್ತನಂತೆ ಕಂಡು ಬಂದಿದ್ದಾನೆ.[೨] ಅಲ್ಲದೆ ಇವನ ಪ್ರಭಾವದಿಂದ ಇವನನ್ನು ಮೆಚ್ಚಿಕೊಂಡಿರುವ ಪಿರಿಯಾಪಟ್ಟಣದ ದೊಡ್ಡಯ್ಯ (೧೫೫೦) ದೊಡ್ಡಣಾಂಕ (೧೫೭೮) ಮಲ್ಲಿಕಾರ್ಜುನ, ಅಭಿನವವಾದಿ ವಿದ್ಯಾನಂದರು ತಮ್ಮ ತಮ್ಮ ಸಂಕಲನಗಳಲ್ಲಿ ಅಗ್ಗಳನನ್ನು ಮೆಚ್ಚಿ ಅವನ ಸಾಹಿತ್ಯದಲ್ಲಿನ ಹಲವು ಪದ್ಯಗಳನ್ನು ಆರಿಸಿ ಬಳಸಿಕೊಂಡಿರುವುದು ಉಂಟು ಇಂತಹ ನಮ್ಮ ಪಂಡಿತ ಪರಂಪರೆಯು ಇವನಲ್ಲಿ ಪೂಜ್ಯ ಗೌರವ ಭಾವನೆಯನ್ನು ಇರಿಸಿ ಮಾದರಿಯನ್ನಾಗಿಸಿಕೊಂಡಿದ್ದನ್ನು ನೋಡಿದರೆ, ಪಾಂಡಿತ್ಯದಲ್ಲಿ, ಬುದ್ಧಿ ಚಮತ್ಕಾರದಲ್ಲಿ ಅಪ್ರಯತ್ನ ವಾಗ್ಪೂರೂಢಿಯಲ್ಲಿ ತಿದ್ದಿ ತೀರಿದ ಪದ್ಯ ರಚನಾ ಚತುರತೆಯಲ್ಲಿ ಅಗ್ಗಳನು ಗಣ್ಯನಾದ ಕವಿ ಎನಿಸಿದ್ದಾನೆ.

**ಪೊನ್ನನೂ, ಕಾಳಿದಾಸನೂ**

ಪ್ರಬುದ್ಧ ಕರ್ನಾಟಕ ಸಂಪುಟ ೧೨ ಸಂಚಿಕೆ–೨ರಲ್ಲಿ ೧೯೨೦ರ ಹೊತ್ತಿಗೆ ಮೊದಲ ಬಾರಿಗೆ ಪ್ರಕಟವಾದ ಈ ಲೇಖನ ಮುಂದೆ ೧೯೭೧ರಲ್ಲಿ ಡಿ.ಎಲ್.ಎನ್ ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೮ನೇ ಭಾಗದಲ್ಲಿ ಮೂಡಿ ಬಂದುದಾಗಿದೆ.

'ಪೊನ್ನನು ಕವಿರತ್ನ ಕ್ರಮರಲ್ಲಿ ಒಬ್ಬನು ಇವನು ರನ್ನನಂತಹ ಕವಿಯಿಂದ ಅಸದೃಶ್ಯ ಪ್ರಶಸ್ತಿಯನ್ನು ಪಡೆದವನಾಗಿದ್ದನು. ಸಾಲದ್ದಕ್ಕೆ 'ಕವಿಚಕ್ರವರ್ತಿ' ಎಂಬ ಬಿರುದಾಂಕಿತನು ಹೌದು.'[೧]

ಇವನ ಗುರು 'ಇಂದ್ರನಂದಿ' ಎಂದೂ ಇವನು ರಾಷ್ಟ್ರಕೂಟ ರಾಜನಾದ ೩ನೇ ಕೃಷ್ಣನ ಆಸ್ಥಾನದಲ್ಲಿ ಉಭಯ ಭಾಷಾ ಪಂಡಿತ ಕವಿಯಾಗಿದ್ದನೆಂದು ತಿಳಿದುಬಂದಿದೆ. ಇವನ ಕಾವ್ಯಗಳು ಮೂರು ಇವೆ. ೧. ಭುವನೈಕ್ಯರಾಮಾಭ್ಯುದಯ ೨. ಶಾಂತಿಪುರಾಣ ೩. ಜಿನಾಕ್ಷರಮಾಲೆ ಎಂಬುದಾಗಿವೆ. ಭುವನೈಕ್ಯರಾಮಭ್ಯುಧಯ ಕೃತಿಯು ಹದಿನಾಲ್ಕು ಆಶ್ವಾಸಗಳನ್ನು ಹೊಂದಿದ್ದಾಗಿದ್ದು ಇದೊಂದು ರಾಮಕಥೆ ಸಾರುವ ಕಾವ್ಯ ಎಂದು ಹೇಳಲಾಗಿದೆ ಇದು ಇನ್ನೂ ದೊರೆಯದ ಕೃತಿಯಾಗಿದೆ.

ಇದುವರೆಗೂ ದೊರೆತ ಇವನ ಕಾವ್ಯ ಒಂದೇ, ಅದು 'ಶಾಂತಿಪುರಾಣ' ಇದು ಜೈನ ಮತ ಪ್ರಕ್ರಿಯೆಗಳಲ್ಲೊಂದಾದದ್ದಾಗಿದ್ದು ಜನ್ಮಾಂತರ ಕಥೆಗಳಿಂದ ಆವೃತವಾದ ಕಾವ್ಯವಾಗಿದೆ. ಆದರೆ ಪೊನ್ನನ ಯೋಗ್ಯತೆಯನ್ನು ಈ ಆಧಾರದ ಮೇಲೆ ಅಳೆಯಲಾಗದು. ಆದರೆ ಭುವನೈಕ್ಯ ರಾಮಾಭ್ಯುದಯ ಸಿಕ್ಕರೆ ಅದು ಸಾಧ್ಯವಲ್ಲದೆ ಇದು ಸಿಗುವವರೆಗೂ ಶಾಂತಿ ಪುರಾಣವನ್ನೇ ಆಶ್ರಯಿಸಿಬೇಕಾದುದ್ದು ಅವಶ್ಯವೆಂದು ಡಿ.ಎಲ್.ಎನ್ ಹೇಳಿದ್ದಾರೆ. ಪೊನ್ನನು ತನ್ನ ಕಾವ್ಯದಲ್ಲಿ ಹಿಂದೆ ಇದ್ದ ಪೂರ್ವ ಸೂರಿಗಳಲ್ಲಿ ಕನ್ನಡದ ಅಸಗನನ್ನು ಸಂಸ್ಕೃತದ ಕಾಳಿದಾಸನನ್ನೂ ಸ್ಮರಿಸಿದ್ದಾನೆ.

ಪಂಪ, ರನ್ನಾದಿ ಕವಿಗಳು ಕಾಳಿದಾಸನನ್ನು ಭಕ್ತಿಪೂರ್ವಕವಾಗಿ ನಮಿಸಿ ಮುಂದಕ್ಕೆ ಸಾಗಿದ್ದಾರೆ. ಆದರೆ ಪೊನ್ನನು ತಾನು ರಚನೆಯಲ್ಲಿ ಕಾಳಿದಾಸನಿಗಿಂತಲೂ ನಾಲ್ವಡಿ, ಹೆಚ್ಚು ಎಂದು ಹೇಳಿಕೊಂಡಿದ್ದಾನೆ. ಆದರೆ ಈ ವಿಷಯವನ್ನು ಡಿ.ಎಲ್.ಎನ್ ಪ್ರೇರಕವಾಗಿ ತೆಗೆದುಕೊಂಡು ಪೊನ್ನನು ನಿಜವಾಗಿ ಕಾಳಿದಾಸನಿಗಿಂತ ನಾಲ್ವಡಿ ಹೆಚ್ಚೆಂದು ಹೇಳಿಕೊಂಡಿರುವುದು ಸರಿ ಇದೆಯೇ ಎಂದು ಪರಿಶೀಲಿಸಿದ್ದಾರೆ.

ಕಾಳಿದಾಸನು ತನ್ನ ರಘುವಂಶ ಕೃತಿಯಲ್ಲಿ ಎಂತಹ ಸನ್ನಿವೇಶಗಳನ್ನು ಕಲ್ಪಿಸಿ ವರ್ಣಿಸಿರುವನೋ ಅಂತಹ ಸನ್ನಿವೇಶಗಳನ್ನೇ ತಾನು ಶಾಂತಿ ಪುರಾಣದಲ್ಲಿ ಕಲ್ಪಿಸಿ ಕಾಳಿದಾಸನಿಗಿಂತಲೂ ಬಹಳ ಚೆನ್ನಾಗಿ ವರ್ಣಿಸಿದ್ದೇನೆ ಎಂಬ ಕ್ರಮವನ್ನು ಅನುಸರಿಸಿ

ನೋಡಿದರೆ, ಪೊನ್ನನ ವರ್ಣನೆಯು ಕಾಳಿದಾಸನ ವರ್ಣನೆಗಿಂತ ತುಂಬಿದ ಪಡಿಹಚ್ಚಿನಂತಿದೆ. ಕಾಳಿದಾಸನ ಕೈವಾಡವನ್ನು ಪೊನ್ನನ ವರ್ಣನೆಯಲ್ಲಿ ಬಹಳ ವಿಶದವಾಗಿ ನೋಡಬಹುದಾಗಿದ್ದು ಪೊನ್ನನ ಕಾಳಿದಾಸನ ವರ್ಣನಾ ರೀತಿಯನ್ನೇ ಅನುಸರಿಸಿದ್ದು ಅವನಲ್ಲಿದ್ದ ಪದ್ಯಗಳನ್ನು ಭಾಷಾಂತರಿಸಿ ತನ್ನವೆಂದು ಹೇಳಿಕೊಂಡಿದ್ದಾನೆ. ಇದಕ್ಕೆ ರಘುವಂಶ ಶಾಂತಿಪುರಾಣದಲ್ಲಿನ ಕೆಲವು ಉದಾಹರಣೆಗಳನ್ನು ವಿವರಿಸಿದ ಡಿ.ಎಲ್.ಎನ್. ಕಾಳಿದಾಸನ ಪ್ರತಿಭೆಯನ್ನೇ ಎತ್ತಿ ತೋರಿಸಿದ್ದಾರೆ.

ಕಾಳಿದಾಸನ ಪದರಚನೆಯೊಡನೆ ಪೊನ್ನನ ಪದಬಂಧವನ್ನು ಹೋಲಿಸಿ ನೋಡಲಾಗಿ, ಪೊನ್ನನ ಪದಬಂಧವೆ ಸರಳವಿದ್ದಂತೆ ಕಂಡುಬಂದಿದೆ. ಕಾಳಿದಾಸನು ಪೊನ್ನನಿಗೆ ಎಲ್ಲಾ ರೀತಿಯಿಂದ ಗುರಿಯಾಗಿದ್ದು ಅವನು ಬಳಸಿದ ದೀರ್ಘ ಸಮಾಸಗಳನ್ನು ಕ್ರೋಡಿಕರಿಸದೇ ಸರಳ ಶೈಲಿಯ ಸಣ್ಣಸಣ್ಣ ಪದ ಬಳಸಿ ಕಾವ್ಯ ರಚಿಸಿದವನಾಗಿದ್ದಾನೆ.

ಪಂಪ, ರನ್ನರಂತೆ ಪದಬಳಕೆ ವಾಕ್ಯರಚನೆ ಮಾಡದ ಪೊನ್ನನು ತನ್ನ ಕಾವ್ಯದಲ್ಲಿ ಎಷ್ಟೋ ಕಡೆಗಳಲ್ಲಿ ಒಳವುಳ್ಳ ಕಾಳಿದಾಸನ ಧ್ವನಿಗಳನ್ನು ಬಿಚ್ಚಿ ಹೇಳಿ ಒಲವುಳ್ಳ ನಯವಾದ ಒಂದು ನೈಸರ್ಗಿಕತೆಯನ್ನು ಕೆಡಿಸಿರುವನು. ಇನ್ನೂ ಕೆಲವು ಪದ್ಯಗಳನ್ನು ಕಾಳಿದಾಸನ ಆಶಯಕ್ಕೆ ಸ್ವಲ್ಪ ಮಾತ್ರವೂ ಕೇಡುಂಟಾಗದಂತೆ ಹಾಗೆಯೇ ಭಾಷಾಂತರಿಸಿರುತ್ತಾನೆ. ಈಗೆ ಪೊನ್ನನು ಕಾಳಿದಾಸನಿಗೆ ಎಲ್ಲಾ ಮೂಲಗಳಿಂದ ಕಾವ್ಯ ರಚನೆಯ ನೆಲೆಯಲ್ಲಿ ಋಣಿಯಾಗಿದ್ದಾನೆಂದರೂ ತಪ್ಪಿಲ್ಲದ್ದಾಗಿದೆ.

**ಪೊನ್ನನ ಭುವನೈಕರಾಮಾಭ್ಯುದಯ**

ಪ್ರಬುದ್ಧ ಕರ್ಣಾಟಕ ಸಂಪುಟ–೧೫, ಸಂಚಿಕೆ–೨ರಲ್ಲಿ ೧೯೩೩ರ ಹೊತ್ತಿಗೆ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೯ ಭಾಗವಾಗಿ ಮೂಡಿಬಂದದ್ದಾಗಿದೆ. ಪೊನ್ನಕವಿಯು ರಾಮಕಥೆ ಅಥವಾ ಭುವನೈಕರಾಮಾಭ್ಯುದಯ ಎಂಬ ಹದಿನಾಲ್ಕು ಆಶ್ವಾಸಗಳುಳ್ಳ ಕಾವ್ಯ ಒಂದನ್ನು ಬರೆದಿದ್ದಾನೆಂದು ಆತನ ಇನ್ನೊಂದು ಕೃತಿಯಾದ ಶಾಂತಿಪುರಾಣವು ನಾಗವರ್ಮನ 'ಕಾವ್ಯವಲೋಕನ' ಮತ್ತು ಕೇಶಿರಾಜನ 'ಶಬ್ದಮಣಿದರ್ಪಣ'ಗಳಲ್ಲಿ ಉಲ್ಲೇಖಿತವಾಗಿರುವ ಪದ್ಯಗಳ ಮೂಲಕ ತಿಳಿದು ಬಂದಿದ್ದು ಇದೊಂದು ರಾಮಕಥೆಯನ್ನು ಕುರಿತ ಕಾವ್ಯವೆಂಬ ಹೇಳಿಕೆ.

ಡಿ.ಎಲ್.ಎನ್. ಅಭಿಪ್ರಾಯಿಸಿದಂತೆ "ಲೌಕಿಕ ಕಾವ್ಯವಾದ ಪಂಪಭಾರತಕ್ಕೆ ಮೂಲವು ವ್ಯಾಸಕೃತವಾದ ಮಹಾಭಾರತ, ಹಾಗೆಯೇ ಪೊನ್ನನ ಅಭಿಪ್ರಾಯದಲ್ಲಿಯೆ ಲೌಕಿಕ ಕಾವ್ಯವಾದ ರಾಮಕಥೆಗೆ ಮೂಲವು ವಾಲ್ಮೀಕಿ ರಾಮಾಯಣವಿರಬಹುದು. ಕಾವ್ಯಾವಲೋಕನದಲ್ಲಿ

ಯಾವುದೋ ಒಂದು ರಾಮಾಯಣದಿಂದ ಉದ್ಧರಿಸಲ್ಪಟ್ಟಂತೆ ತೋರುವ ಹದಿಮೂರು ಪದ್ಯಗಳಿವೆ. ಪೊನ್ನನ ರಾಮಕಥೆ, ಚಾವುಂಡರಾಯ ಪುರಾಣದಲ್ಲಿ ಅಡಕವಾಗಿರುವ ಗದ್ಯಮಯವಾದ ರಾಮಾಯಣ, ಅಭಿನವ ಪಂಪನ ರಾಮಚಂದ್ರ ಚರಿತಪುರಾಣ ಮೇಲೆ ಹೇಳಿರುವ ಹದಿಮೂರು ಪದ್ಯಗಳಲ್ಲಿ ಯಾವುದೂ ಪಂಪರಾಮಾಯಣದಲ್ಲಿ ದೊರೆಯುವುದಿಲ್ಲ. ಚಾವುಂಡ ರಾಯನ ರಾಮಾಯಣದಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ಇವು ಪೊನ್ನನ ರಾಮಕಥೆಗೆ ಸೇರಿರಬಹುದೆಂಬ ಶಂಕೆಗೆ ಅವಕಾಶವಾಗುತ್ತದೆ"[೮] ಎಂದು ಹೇಳಿದ್ದಾರೆ. ಈ ಹದಿಮೂರು ಪದ್ಯಗಳಿಂದ ರಾಮಾಯಣ ಕಥೆಗೆ ಸಂಬಂಧಪಟ್ಟ ಕೆಲವು ವಿಷಯಗಳು ಹೊರಪಡುತ್ತವೆ. ಇವುಗಳಲ್ಲಿ ಐದು ಪದ್ಯಗಳು ವಾಲ್ಮೀಕಿ ರಾಮಾಯಣದ ಸಾಂಪ್ರದಾಯಕ್ಕೆ ಸೇರಿದ್ದು ಇದರಲ್ಲಿ ಒಂದು ಪದ್ಯವು ಜೈನರಾಮಾಯಣಯಕ್ಕೆ ಸೇರಿದ್ದಾಗಿದೆ. ಉಳಿದ ಏಳು ಪದ್ಯಗಳು ಎರಡೂ ಸಾಂಪ್ರದಾಯಕ್ಕೆ ಸಾಮಾನವಾದದ್ದಾಗಿವೆ. ಹೀಗೆ ಸಮಾನವಾಗಿರುವ ಪದ್ಯಗಳನ್ನು ವಾಲ್ಮೀಕಿ ರಾಮಾಯಣದ ಸಾಂಪ್ರದಾಯವನ್ನು ಅನುಸರಿಸಿ ಪದ್ಯಗಳೊಡನೆ ಸೇರಿಸಿದರೆ ಜೈನರಾಮಾಯಣದ ಪದ್ಯವೊಂದೆ ಉಳಿಯುತ್ತದೆ ಎಂದು ಹೇಳುತ್ತಾ ಭುವನೈಕ್ಯ ರಾಮಾಭ್ಯುದಯವು ಜೈನರಾಮಾಯಣವಾಗಿರದೆ ಲೌಕಿಕ ಕಾವ್ಯವಾಗಿತ್ತೆಂದು ಪೊನ್ನನ ಅನುಲಬ್ಧ ಚಂಪೂಕಾವ್ಯದ ಬಗೆಗೆ ನಿಲುವನ್ನು ವ್ಯಕ್ತಪಡಿಸಿದ್ದು ಸೂಕ್ತವೆನಿಸಿದೆ.

**ಗಜಾಂಕುಶ**

೧೯೩೨ ರಲ್ಲಿ ಪ್ರಬುದ್ಧ ಕರ್ನಾಟಕ ಸಂಪುಟ–೧೪, ಸಂಚಿಕೆ–೨ರಲ್ಲಿ ಮೊದಲ ಬಾರಿಗೆ ಡಿ.ಎಲ್.ಎನ್. ಅವರಿಂದ ಪ್ರಸ್ತಾಪಗೊಂಡ ಈ ಚರ್ಚೆ ಮುಂದೆ ಅವರು ಸಂಖಲಿತ ಪೀಠಿಕೆಗಳು ಲೇಖನಗಳು ಕೃತಿಯ ಒಂಬತ್ತನೆಯ ಭಾಗದಲ್ಲಿ ಮೂಡಿ ಬಂದದ್ದಾಗಿದೆ.

ಗೋವಿಂದಪೈ ಅವರು ಮದ್ರಾಸ್‌ನ ಪ್ರಾಚ್ಯ ಪುಸ್ತಕಭಂಡಾರದಲ್ಲಿ ಸಂಪಾದಿಸಿದ್ದ ದುರ್ಗಸಿಂಹನ ಪಂಚತಂತ್ರ (೧೦೩೧) ೧ ಕೃತಿಯ ಒಂದು ಪದ್ಯದಲ್ಲಿ ಉಲ್ಲೇಖಗೊಂಡಿರುವ,

'ತ್ರಿ ಜಗನ್ನು ತವಾಗ್ವಿಭವದಿ
ನಜಂಗೆ ನೂರ್ಮಡಿಯೆನಿಪ್ಪಪೆಂಪಂ ತಳೆದಂ
ವಿಜಿತಾರಿದಂಡನಾಯಕ
ಗಂಜಾಂಕುಶಂ ಕುಶಲವಾಂಛಿತಪ್ರಿಯ ಶೌರ್ಯಂ'[೯]

ಎಂಬ ವಿಚಾರದಿಂದ ಗಜಾಂಕುಶನೆಂಬುವನು ಒಬ್ಬ ಕನ್ನಡದ ಪ್ರಸಿದ್ಧ ಕವಿಯಾಗಿದ್ದು ಇವನು ವಾಗ್ವಿಭವದಲ್ಲಿ ಬ್ರಹ್ಮನಿಗೆ ನೂರು ಮಡಿಯಾಗಿದ್ದನೆಂದೂ ದಂಡನಾಯಕನೂ ಆಗಿದ್ದನೆಂಬ ಪೈಗಳ ವಿಚಾರವನ್ನು ಡಿ.ಎಲ್.ಎನ್. ಸ್ಪಷ್ಟಪಡಿಸಿದ್ದಾರೆ.

ಮುಂದುವರೆದು ಹೆಚ್ಚಿನ ಮಾಹಿತಿಯನ್ನು ವಿಷಾದಪಡಿಸಿದ ಡಿ.ಎಲ್.ಎನ್. 'ಗಜಾಂಕುಶನು ಕ್ರಿ.ಶ. ೧೦೩೧ಕ್ಕಿಂತ ಹಿಂದೆಯೇ ಬಾಳಿದವನಾಗಿದ್ದನೆಂಬ ಕವಿಚರಿತೆ ಕಾರರ ಅಭಿಪ್ರಾಯವನ್ನು ತಿಳಿಸಿದ್ದಾರೆ. ನಂತರ ಸಾಲೋಟಗಿಯ ಒಂದು ಶಾಸನದಲ್ಲಿ (ಎಪಿಗ್ರಾಫಿಯಾ ಇಂಡಿಕಾ ೫೮) ಉಲ್ಲೇಖಿಸಿದಂತೆ 'ಗಜಾಂಕುಶ' ಎಂಬ ಅಪರನಾಮವುಳ್ಳ ರಾಷ್ಟ್ರಕೂಟರಾಜನಾದ ಮೂರನೇ ಕೃಷ್ಣನ ರಾಜ್ಯದಲ್ಲಿ (೯೩೯-೯೬೮) ಮಂತ್ರಿಯೂ ಮಹಿಷಿ ವಿಷಯದ 'ಕಾಂಚನ ಮುದುವೊಳಲ್' ಎಂಬ ಹಳ್ಳಿಯ ನಿವಾಸಿಯೂ ಇದ್ದ ನಾರಾಯಣ ಎಂಬೊಬ್ಬ ಕವಿಯ ವಿಷಯವನ್ನು ಸಂಗ್ರಹಿಸಿ ಹೇಳಿದ್ದಾರೆ.'[೬] ಒಟ್ಟಾರೆಯಾಗಿ ಪ್ರಾಕೃತ ಗಜಾಂಕುಶನು ಸಾಲೋಟಗಿಯ ಶಾಸನದ ನಾರಾಯಣ ಗಂಜಾಂಕುಶನೂ, ದಂಡನಾಯಕ ಗಜಾಂಕಶನೂ ಭಿನ್ನವ್ಯಕ್ತಿಗಳಿರಬೇಕೆಂದು ಸ್ಪಷ್ಟಪಡಿಸಿದ್ದಾರೆ. ಪ್ರಸ್ತುತ ಈ ಜೈನ ಕವಿಯು ದಂಡನಾಯಕ ಸಾಲೋಟಗಿಯ ಶಾಸನೋಕ್ತನಾದ ದಂಡನಾಯಕನಲ್ಲ ಆದ್ದರಿಂದ ಕನ್ನಡ ಕವಿ ದಂಡನಾಯಕ ಗಜಾಂಕುಶನು ತನ್ನ ಸ್ವಾಮಿನಿಷ್ಠೆಗಾಗಿ ಯುದ್ಧದಲ್ಲಿ ಮಡಿದ ಕೀರ್ತಿಕಾಯಕನಾದವನೆಂದು ಇಷ್ಟು ಪ್ರಖ್ಯಾತನಾದ ಈ ಕವಿಯ ಕಾಲದ ವಿಷಯವಾಗಿ ಹಾಗೂ ಕಾವ್ಯದ ಬಗೆಗೆ ಹೊಸ ಅಂಶಗಳೇನೂ ಹೊರಬಿದ್ದಂತೆ ಕಂಡುಬಂದಿಲ್ಲವೆಂಬ ಅಭಿಪ್ರಾಯವನ್ನು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ. ಆ ಕಾಲಕ್ಕೆ ಅನುಪಲಬ್ಧವಾದ ಚಂಪೂ ಕವಿಯ ಬಗೆಗೆ ಈ ಲೇಖನದಲ್ಲಿ ಡಿ.ಎಲ್.ಎನ್. ಪ್ರಸ್ತಾಪಿಸಿರುವುದು ವಿಶೇಷವೆನಿಸಿದೆ.

**ರುದ್ರಭಟ್ಟ**

ಡಿ.ಎಲ್.ಎನ್. ಅವರು ಆಕಾಶವಾಣಿಯ ಕೃಪೆಯಿಂದ ೧೯೫೦ರ ವೇಳೆಗೆ ಮಾಡಿದ ಭಾಷಣದ ಪ್ರತಿಯು ಇದಾಗಿದ್ದು ಮುಂದೆ ಪ್ರಬುದ್ಧ ಕರ್ಣಾಟಕದ ಸಂಪುಟ-೨೩, ಸಂಚಿಕೆ-೧ರಲ್ಲಿ ೧೯೫೧ರ ಹೊತ್ತಿಗೆ ಪ್ರಕಟಣೆ ಕಂಡುದ್ದಾಗಿದೆ. ನಂತರದ ದಿನಗಳಲ್ಲಿ ಅಂದರೆ ೧೯೭೧ರ ಹೊತ್ತಿಗೆ ಪ್ರಕಟಣೆ ಕಂಡ ಪೀಠಿಕೆಗಳು ಲೇಖನಗಳು ಕೃತಿಯ ೧೧ನೇ ಭಾಗವಾಗಿ ರುದ್ರಭಟ್ಟ ಎಂಬ ಈ ವಿಷಯ ಪ್ರಸ್ತಾಪವಾಗಿರುವುದನ್ನು ಕಾಣಬಹುದಾಗಿದೆ.

ಕನ್ನಡದ ಪ್ರಸಿದ್ಧ ಕವಿಕಾವ್ಯಗಳ ವಿಚಾರವಾಗಿ ತಿಳಿಸಿರುವ ಡಿ.ಎಲ್.ಎನ್. ಹಲವಾರು ಕವಿಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಅವರುಗಳಲ್ಲಿ ಪ್ರಸಿದ್ಧನಾದ ೧೨ನೇ ಶತಮಾನದ ಕೊನೆ ೧೩ನೇ ಶತಮಾನದ ಆರಂಭದಲ್ಲಿ ರಾಜ್ಯವನ್ನಾಳುತ್ತಿದ್ದ ಹೊಯ್ಸಳ ದೊರೆ ವೀರಬಲ್ಲಾಳನು ಕನ್ನಡ ನಾಡು-ನುಡಿಯ ಪೋಷಕನಾಗಿದ್ದನೆಂದು ತಿಳಿದು ಬಂದಿದೆ. ಈತನ ಕಾಲದಲ್ಲಿ ಆಶ್ರಯದಾತನ ಪ್ರಸಿದ್ಧಿಯನ್ನು ಪಡೆದ ಉತ್ತಮ ಕವಿಗಳಲ್ಲೊಬ್ಬ 'ರುದ್ರಭಟ್ಟನು' ಎಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ.

ಇವನು ತನ್ನ ಪ್ರಸಿದ್ಧ ಕಾವ್ಯ ಜಗನ್ನಾಥ ವಿಜಯದಲ್ಲಿ ತನ್ನ ದೊರೆಯಾದ ವೀರಬಲ್ಲಾಳನನ್ನು ಜಗನ್ನಾಥನೊಡನೆ ಸಮೀಕರಿಸಿ ಅಲ್ಲಲ್ಲಿ ಹೊಗಳಿರುವುದು ಕಂಡುಬಂದಿದೆ.

ಜಗನ್ನಾಥ ವಿಜಯವು ಮೂಲ ಕೃಷ್ಣಚರಿತೆಯನ್ನು ಹೇಳುವ ಕಾವ್ಯವಾಗಿದ್ದರಿಂದ ರುದ್ರಭಟ್ಟ ಒಬ್ಬ ವೈಷ್ಣವ ಕವಿ ಎಂಬ ವಿಚಾರ ಮುಕ್ತವಾದುದ್ದಾಗಿದೆ.

ಕೃಷ್ಣನ ಮಹಿಮೆಯನ್ನು ಅಪರಿಮಿತವಾಗಿ ವರ್ಣಿಸಿದ್ದನ್ನು ಡಿ.ಎಲ್.ಎನ್. ಸ್ಪಷ್ಟೀಕರಿಸಿ ರುದ್ರಭಟ್ಟನ ಈ ಕಾವ್ಯವನ್ನು ಓದುತ್ತಿದ್ದರೆ ಪೂರ್ವ ಕವಿಗಳಾದ ಪಂಪ, ರನ್ನಾದಿಗಳ ನೆನಪು ಮರುಕಳಿಸುತ್ತದೆ ಎಂದು ಹೇಳುವ ಮೂಲಕ ಪ್ರಾಚೀನ ಕವಿಗಳ ಪ್ರಭಾವ ರುದ್ರಭಟ್ಟನ ಮೇಲೆ ಎಷ್ಟರ ಪ್ರಮಾಣದಲ್ಲಿದ್ದಿತ್ತೆಂದು ತಮ್ಮ ಲೇಖನದುದ್ದಕ್ಕೂ ಅಭಿಪ್ರಾಯಿಸಿದ್ದು ಕಂಡುಬಂದಿದೆ.

**ವಡ್ಡಾರಾಧನೆ**

ಡಿ.ಎಲ್.ಎನ್. ಕರ್ಣಾಟಕ ಸಾಹಿತ್ಯ ಪರಿಷತ್ತು ಪತ್ರಿಕೆಯಲ್ಲಿ ೧೯೩೧ರ ವೇಳೆಗೆ ಮೊದಲ ಬಾರಿಗೆ ಪ್ರಸ್ತಾಪಪಡಿಸಿದ ಈ ವಿಚಾರವನ್ನು ಮುಂದೆ ತಮ್ಮ ಪೀಠಿಕೆಗಳು ಲೇಖನಗಳು ಕೃತಿಯ ೧೨ನೇ ಭಾಗವಾಗಿ ಸಂಕಲಿಸಿದ್ದು ಕಂಡುಬಂದಿದೆ.

ಪ್ರಮುಖವಾಗಿ ಈ ಲೇಖನವು ಕವಿ–ಕಾವ್ಯ ಕಾಲವಿಚಾರವಾಗಿ ವಿವಿಧ ಚರ್ಚೆಗಳನ್ನು ನಿರೂಪಿಸಿದ್ದು ಕಂಡುಬಂದಿದೆ.

ಡಿ.ಎಲ್.ಎನ್. ಅವರು ವಡ್ಡಾರಾಧನೆಯ ರಂಗ ಪ್ರವೇಶಿಸಿದ ವರ್ಷ ೧೯೩೧. ಈ ವಿಷಯದ ಕುರಿತು ಕನ್ನಡ ಪರಿಷತ್ ಪತ್ರಿಕೆಯ ಎಂಟು ಸಂಚಿಕೆಯಲ್ಲಿ ಕಾಲಕ್ಕನುಗುಣವಾದ ಚರ್ಚೆಗಳಿಂದ ವಿವಿಧ ವಿದ್ವಾಂಸರ ವಿಚಾರಗಳನ್ನು ಸಮೀಕರಿಸಿಕೊಂಡು ಕನ್ನಡದ ಪ್ರಥಮ ಗದ್ಯಗ್ರಂಥವನ್ನು ನೀಡಿದ್ದು ಸಾಹಿತ್ಯ ಲೋಕದ ಉನ್ನತ ಗರಿಯೇ ಸರಿ.

ವಡ್ಡಾರಾಧನೆ ಗ್ರಂಥದ ಹೆಸರಿನ ಬಗ್ಗೆ ಅವರು ನಡೆಸಿರುವ ಚರ್ಚೆ ಸಾಕಷ್ಟು ವಿವರವಾಗಿವೆ. ಸಂಪಾದನೆಗೆ ಬಳಸಿಕೊಂಡ ಐದು ಪತ್ರಿಕೆಗಳಲ್ಲಿ ಗ್ರಂಥದ ಹೆಸರು ವಡ್ಡಾರಾಧನೆ ಅದರ ಇತರ ರೂಪಕಗಳಲ್ಲಿ ಲಿಖಿತವಾಗಿರುವುದನ್ನು ಇವರು ಗುರುತಿಸಿದ್ದಾರೆ ಬೇರೆ ಬೇರೆ ಹಸ್ತಪ್ರತಿಗಳಲ್ಲಿ ಬಂದ ಕೃತಿಯ ಹೆಸರನ್ನು ಈ ಕೆಳಗಿನಂತೆ ನಾಲ್ಕು ಗುಂಪುಗಳಲ್ಲಿ ವಿಂಗಡಿಸಿದ್ದಾರೆ.

‘ವೃದ್ಧಾರಾಧನಂ>ವ(ವು)ಡ್ಡಾರಾಧಣಂ> ವೊಡ್ಡಾರಾಧಣಂ> ಒಡ್ಡಾರಾಧಾಣಂ

ವೃದ್ದಾರಾಧನಾ>ವ(ವು)ಡ್ಡರಾಧನೆ>ವೊಡ್ಡಾರಾಧನೆ> ಒಡ್ಡರಾಧನೆ

ಈ ಹೆಸರುಗಳ ಕುರಿತು ಮೂಲದ ಬಗ್ಗೆ ಸುದೀರ್ಘವಾಗಿ ಚರ್ಚಿಸಿದ ಡಿ.ಎಲ್.ಎನ್. ಅವರು ವಡ್ಡಾರಾಧನೆ ಎಂಬುದೇ ಅಂಗೀಕಾರಾರ್ಹವಾದ ರೂಪವೆಂದು ನಿರ್ಣಯಿಸಿದ್ದಾರೆ.’[೭] ಅಲ್ಲದೆ, ಕೃತಿಯ ಪರಿಸಮಾಪ್ತಿ ವಾಕ್ಯಗಳಲ್ಲಿರುವ ಈ ಪೇಳ್ದ ಪತ್ತೊಂಭತ್ತು ಕಥೆಗಳು ಶಿವಕೋಟ್ಯಾಚಾರ್ಯರ್ ಪೇಳ್ದೊರ್ ಎಂಬ ವಾಕ್ಯವಿರುವುದನ್ನು ಆಧರಿಸಿ ಆ.ನೆ. ಉಪಾಧ್ಯೆ ಅವರು ನೀಡಿರುವ ವಿಚಾರಗಳ ಬಗ್ಗೆ ಶಂಕೆಯನ್ನು ಅಭಿವ್ಯಕ್ತಿಪಡಿಸಿ ಈ ಕುರಿತ ಶಂಕೆ ಪರಿಹಾರವಾಗುವವರೆಗೂ ಕೃತಿಯನ್ನು ವಡ್ಡಾರಾಧನೆ ಎಂದು ಕರೆಯುವುದೇ ಸೂಕ್ತವೆಂದು

ಅಭಿಪ್ರಾಯಿಸಿದ್ದಾರೆ. ಇದರಿಂದ ಕನ್ನಡ ಗ್ರಂಥದ ಹೆಸರು ವಡ್ಡಾರಾಧನೆ ಎಂದು ಅದನ್ನು ಹೇಳಿದವನು ಶಿವಕೋಟ್ಯಾಚಾರ್ಯನೆಂದು ಸದ್ಯಕ್ಕೆ ನಿರ್ಣಯಿಸಬಹುದು ಎನ್ನುವ ತೀರ್ಮಾನಕ್ಕೆ ಬಂದಿದ್ದಾರೆ. ಒಟ್ಟಾರೆಯಾಗಿ ಬೌದ್ಧಿಕ ವಿಶೇಷ ಶಕ್ತಿಯನ್ನು ಹೊಂದಿದ್ದ ಡಿ.ಎಲ್.ಎನ್. ಪ್ರಾಚೀನ ಸಾಹಿತ್ಯ ಪರಂಪರೆಯ ವಿಸ್ತರಣೆಗೆ ಅಮೋಘವಾದ ಕೊಡುಗೆಯನ್ನು ನೀಡಿದವರಾಗಿದ್ದಾರೆ. ಅಲ್ಲದೆ ಸಂಪಾದನೆ ಒಂದು ವಿಜ್ಞಾನವಾಗಿ ಒಂದು ಕಾವ್ಯದ ಚಿಕಿತ್ಸಾ ಕ್ರಮವಾಗಿ ಕಂಡು ಬಂದು ಕೃತಿಗೆ ಹೆಚ್ಚಿನ ಪರಿಪೂರ್ಣತೆ ಪ್ರಾಪ್ತವಾಗುವಂತೆ ಮಾಡಿದ್ದಾಗಿದೆ.

**ಜಟಾಸಿಂಹ ನಂದಿಯ ವರಾಂಗ ಚರಿತೆ**

೧೯೪೦ರ ವೇಳೆಗೆ ಮೊದಲ ಬಾರಿಗೆ ಕನ್ನಡ ಸಾಹಿತ್ಯ ಪರಿಷತ್‌ಪತ್ರಿಕೆಯ ಸಂಪುಟ–೨೫, ಸಂಚಿಕೆ–೩ರಲ್ಲಿ ಪ್ರಕಟಗೊಂಡ ಈ ಲೇಖನ ತದ ನಂತರದಲ್ಲಿ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೧೩ನೇ ಭಾಗದಲ್ಲಿ ವಿಷಾದಿತಗೊಂಡದ್ದಾಗಿದೆ.

ಆ.ನೇ.ಉಪಾಧ್ಯೆ ಅವರು ವರಾಂಗ ಚರಿತೆ ಎಂಬ ಜೈನ ಸಂಸ್ಕೃತಿ ಮಹಾಕಾವ್ಯವನ್ನು ಎರಡು ಪ್ರತಿಗಳ ಸಹಾಯದಿಂದ ಮಾಣಿಕಚಂದ್ರ ದಿಗಂಬರ ಜೈನ ಗ್ರಂಥಮಾಲಾ, ಹಿರಾಭಾಗ ಮುಂಬಯಿ ವತಿಯಿಂದ ಮೊದಲ ಬಾರಿಗೆ ಮುದ್ರಿಸಿ ಪ್ರಕಟಿಸಿದವರಾಗಿದ್ದಾರೆ. ಈ ಕೃತಿಯ ಪ್ರಸ್ತಾವನೆ ಭಾಗದಲ್ಲಿ ಜೈನಸಾಹಿತ್ಯದಲ್ಲಿ ಅವರಿಗಿರುವ ವಿಸ್ತಾರವಾದ ಪಾಂಡಿತ್ಯವನ್ನು ಆ ಕುರಿತು ತಾವು ಜೈನಸಾಹಿತ್ಯದಲ್ಲಿ ಮಾಡಿರುವ ಪರಿಶ್ರಮಪೂರಿತ ಕಾರ್ಯಗಳನ್ನು ವಿವರಿಸಿದ್ದಾರೆ. 'ಈ ಕೃತಿಯನ್ನು ಬರೆದ ಕವಿ ಜಟಾಸಿಂಹನಂದಿ ಆಚಾರ್ಯ ನೆಂದು ಇವನ ಕಾಲ ಕ್ರಿ.ಶ. ೭ನೇ ಶತಮಾನವೆಂದು ಸಂಪಾದಕರಾದ ಆ.ನೆ.ಉಪಾಧ್ಯ ಅವರು ನಿರ್ಣಯಿಸಿದ್ದಾರೆ.'[೮]

ಇವನು ಕನ್ನಡ ಕವಿಗಳಿಗೆ ಚಿರಪರಿಚಿತನಾದವನಾಗಿದ್ದು ಕನ್ನಡದ ಪೂರ್ವಸೂರಿಗಳಾದ ಪಂಪ, ರನ್ನ, ಜನ್ನ, ಮೊದಲಾದ ಕವಿಗಳು ತಮ್ಮ ಹಿಂದಿನ ಕವಿಗಳನ್ನು ಸ್ತುತಿಸುವಾಗ ಜಟಾಸಿಂಹನಂದಿಯನ್ನು ಸ್ಮರಿಸಿರುವುದು ಉಂಟು.

ಈ ಕೃತಿಯ ಕರ್ತೃತ್ವ ವಿಚಾರವಾಗಿ ಕ್ರಿ.ಶ. ೭೮೩ರಲ್ಲಿದ್ದ ಜಿನಸೇನಾಚಾರ್ಯರು ತಮ್ಮ ಹರಿವಂಶ ಪುರಾಣದಲ್ಲಿ ಪದ್ಮಚರಿತೆ, ವರಹಾಚರಿತೆ ಎಂಬೆರಡು ಗ್ರಂಥಗಳನ್ನು ಗುರುತಿಸಿದ್ದು ಉದ್ಯೋತನಸೂರಿಯು ಕ್ರಿ.ಶ. ೭೭೮ರಲ್ಲಿ ತನ್ನ ಕುವಲಯಮಾಲ ಎಂಬ ಕೃತಿಯಲ್ಲಿ ವರಾಂಗ ಚರಿತೆ ಎಂದು ಉಲ್ಲೇಖ ಮಾಡಿರುವುದು ಕಂಡುಬಂದಿದೆ.

**ಕಥಾ ಹಂದರ**

ವರಾಂಗ ಚರಿತೆಯ ಕಥೆ ಮತ್ತು ಅದರ ಸ್ವರೂಪದ ವಿಷಯವಾಗಿ ಪ್ರಸ್ತಾಪಿಸುವುದಾದರೆ, ಇದೊಂದು ಜೈನ ಕೃತಿಯಾಗಿದ್ದು ಗ್ರಂಥಾರಂಭದಲ್ಲಿ ಅರ್ಹಂತನಸ್ತುತಿ ಇದೆ. ನಂತರದಲ್ಲಿ ಕಥಾ–ಪ್ರಬಂಧದ ಸ್ವರೂಪ ಮತ್ತು ಗುರುಶಿಷ್ಯರ ಸಂಬಂಧವನ್ನು ಕುರಿತು ಹೇಳಿದೆ.

ಮುಂದುವರೆದು ಕಥೆ ನಿರೂಪಣೆಗೊಂಡು ವೀನಿತಾಖಂಡದ ರಮ್ಯಾ ತಟದ ತೀರದಲ್ಲಿನ ಉತ್ತಮ ಪುರದ ಭೋಜವಂಶಕ್ಕೆ ಸೇರಿದ ಧರ್ಮಸೇನನೆಂಬ ಮೂನ್ನೂರು ಪತ್ನಿಯರಲ್ಲಿ ಗುಣವತಿ ಎಂಬವಳ ಮಗನೆ ವರಾಂಗನಾಗಿದ್ದು ಇವನು ಮದುವೆಯಾಗಿ ಸುಖವಾಗಿರಲು ತಂದೆ ಪಟ್ಟಕಟ್ಟಲು ತೀರ್ಮಾನಿಸಿದಾಗ ಮಲತಾಯಿ ಮೃಗಸೇನೆಯೂ ಅವಳ ಮಗ ಸುಸೇಣ, ಸುಬುದ್ಧಿ ಎಂಬ ಮಂತ್ರಿಯ ಕುತಂತ್ರದಿಂದ ವರಾಂಗನು ಕಾಡುಪಾಲಾದನು. ಮುಂದೆ ವರಾಂಗನು ಆನೆಯ ಸಹಾಯದಿಂದ, ಯಕ್ಷಿಯೊಬ್ಬಳ ಸಹಾಯದಿಂದ, ಬೇಡರ ಗುಂಪಿನಿಂದ ಸಹಾಯಪಡೆದು ಬಿಲ್ಲರೊಡನೆ ಕಾದಾಡಿ ಲಲಿತಪುರಕ್ಕೆ ಬಂದು ವಾಸಿಸಿದ್ದನು. ಲಲಿತಪುರದ ಮೇಲೆ ಒಂದು ಬಾರಿ ದಂಡೆತ್ತಿ ಬಂದ ಮಧುರೆಯ ರಾಜನನ್ನು ಸೋಲಿಸಿ ಲಲಿತಪುರದ ರಾಜಕುಮಾರಿಯನ್ನು ವಿವಾಹವಾಗಿ ಅರ್ಧರಾಜ್ಯಕ್ಕೆ ಒಡೆಯನಾದನು. ಮುಂದೆ ಲಲಿತಪುರಕ್ಕೆ ಸಹಾಯ ಬೇಡಲು ಬಂದ ತಂದೆಗೆ ಸಹಾಯಮಾಡಿ ಅವನ ರಾಜ್ಯವನ್ನು ಬಿಡಿಸಿಕೊಟ್ಟ ಸುಖವಾಗಿದ್ದನು. ನಂತರ ತನ್ನ ರಾಣಿಯ ಕೋರಿಕೆಯಂತೆ ಶ್ರಾವಕ ಧರ್ಮವನ್ನು ಬೋಧಿಸಿ ಜೈನ ಚೈತ್ಯಾಲಯವನ್ನು ಕಟ್ಟಿಸಿದನು. ಮುಂದೆ ಸುಗ್ರಾತ್ರ್ಯನೆಂಬ ಮಗ ಹುಟ್ಟುತ್ತಾನೆ. ಒಂದು ದಿನ ನಕ್ಷತ್ರ ಬೀಳುವುದನ್ನು ಕಂಡ ವರಾಂಗನು ಜೀವನ ನಶ್ವರವೆಂದು ತಿಳಿದು ಜೈನದೀಕ್ಷೆ ಪಡೆದು ಸಂಸಾರತೊರೆದು ಮೋಕ್ಷಸಾಧನೆಗಾಗಿ ತನ್ನ ರಾಣಿಯೊಡನೆ ಯತಿದೀಕ್ಷೆ ಪಡೆದು, ಬಾಹ್ಯ ದ್ವೇಷಗಳನ್ನು ತೊರೆದು ಉತ್ಕೃಷ್ಟ ಧ್ಯಾನದಿಂದ ಸರ್ವಾರ್ಥ ಸಿದ್ಧಿಯನ್ನು ಪಡೆದನು.

ಈ ಕಥೆಯು ವಸ್ತುವಿನ್ಯಾಸದಲ್ಲಿ ಯಾವ ಜೀನಲತೆಯೂ ಇರದೆ ಮಲತಾಯಿಯ ಅಸೂಯೆ, ಕಾಡಿಗೆ ತೆರಳುವುದು, ರಾಜ್ಯಮರಳಿ ಪಡೆಯುವುದನ್ನು ನೋಡಿದರೆ ಶ್ರೀರಾಮನ ಕಥೆಯನ್ನು ಸ್ಮರಣೆಗೆ ತರುವಂತಹದ್ದಾಗಿದೆ. ಇದೊಂದು ಮಹಾಕಾವ್ಯವೆಂದು ಕವಿ ಹೇಳಿಕೊಂಡಿದ್ದರೂ, ಇದೊಂದು ಮಹಾಕಾವ್ಯವಾಗಿರದೆ ಕಥಾವಸ್ತು ವಿನ್ಯಾಸದಲ್ಲಿ ಮಹಾಕಾವ್ಯವನ್ನು ಹೋಲುವಂತಹ ಎಲ್ಲಾ ಲಕ್ಷಣಗಳನ್ನು ಹೊಂದಿದ್ದಾಗಿದೆ. ಧರ್ಮ, ಅರ್ಥ, ಕಾಮ ಮೋಕ್ಷಗಳ ಸಂಪಾದನೆಯ ಈ ಕಥೆಯ ನಿದರ್ಶನವೆನಿಸಿದೆ.

ಮುಂದುವರೆದು ೧೧ನೇ ಶತಮಾನದಲ್ಲಿದ್ದ ಧವಲ ಕವಿಯು ವರಾಂಗ ಚರಿತೆಯ ಕುರಿತು ತನ್ನ ಹರಿವಂಶ ಕೃತಿಯಲ್ಲಿ ಉಲ್ಲೇಖಿಸಿದಂತೆ, ವರಾಂಗ ಚರಿತೆ ಬರೆದವನು ಜಡಿಲಮುನಿ ಎಂದು ಪ್ರಸ್ತಾಪಿಸಿದ್ದಾನೆ.

ಮುಂದೆ, ೯೭೪-೯೮೪ರ ವೇಳೆಗೆ ಬಂದ ಗಂಗರಾಜ ರಾಚಮಲ್ಲನ ದಂಡನಾಯಕನಾದ ಚಾವುಂಡರಾಯನು ತನ್ನ ಕಣ್ಣೆದುರಿಗೆ ವರಾಂಗಚರಿತೆಯನ್ನು ಇಟ್ಟುಕೊಂಡಿದ್ದನೆಂದು ಡಿ.ಎಲ್.ಎನ್. ಪ್ರಸ್ತಾಪಿಸಿ ಕೃತಿಯನ್ನು ಜಟಾಸಿಂಹ ನಂದ್ಯಾಚಾರ್ಯನೇ ಬರೆದಿದ್ದಾನೆಂದು ಅಭಿಪ್ರಾಯಿಸಿ ದೃಢಪಡಿಸಿದ್ದಾರೆ.

'ಜಟಾಸಿಂಹನಂದಾನಚಾರ್ಯನ ವಿಷಯವಾಗಿ ಪ್ರಸ್ತಾಪಿಸಿದ ಡಿ.ಎಲ್.ಎನ್. ಸಿಂಹನಂದಿಯು ಒಬ್ಬನಾಗಿದ್ದು ಅವನನ್ನು ಹಲವಾರು ಕನ್ನಡ ಕವಿಗಳು ಹೊಗಳಿದ್ದನ್ನು ದಾಖಲಿಸಿದ್ದಾರೆ. ಅಲ್ಲದೆ ಅವನ ಕಾಲ ಮತ್ತು ಕೃತಿ ವಿಚಾರದ ಬಗ್ಗೆ ಪ್ರಸ್ತಾಪಿಸುತ್ತಾ ಕ್ರಿ.ಶ. ೭೭೮ಕ್ಕಿಂತ ಹಿಂದೆಯೇ ಇವನು ಬದುಕಿರಬೇಕೆಂದು ಸ್ಪಷ್ಟೀಕರಿಸಿದ್ದಾರೆ.'[೬] ಜೊತೆಗೆ ಎಂಟನೇ ಶತಮಾನದ ಉತ್ತರಾರ್ಧದಲ್ಲಿ 'ವರಾಂಗ ಚರಿತೆ' ಈ ಕೃತಿಯು ಪ್ರಸಿದ್ಧವಾದ ಶ್ವೇತಾಂಬರ ದಿಗಂಬರ ಗ್ರಂಥಕರ್ತರ ಮನ್ನಣೆಗೆ ಪಾತ್ರವಾಗಿತ್ತೆಂದು ಹೇಳಿದ್ದುಂಟು.

ಮುಂದುವರೆದು, ಇತರ ವರಾಂಗ ಚರಿತೆಗಳು ಎಂಬ ವಿಷಯ ಗುರುತಿಸಿಕೊಂಡಿದ್ದ ಡಿ.ಎಲ್.ಎನ್. ಧರಣಿ ಪಂಡಿತನ ವರಾಂಗ ಚರಿತೆ, ಲಾಲಚಂದನ ಹಿಂದಿ ವರಾಂಗ ಚರಿತೆ, ಕಮಲನಯನನ ಹಿಂದಿ ವರಾಂಗ ಚರಿತೆಯ ಕುರಿತು ಪ್ರಸ್ತಾಪಿಸಿ ಆಯಾ ಕೃತಿಗಳಿಗೆ ಮೂಲ ಪ್ರೇರಕವಾದ ಭಾಷೆ, ಕೃತಿ, ಕಾಲಮಾನಗಳ ಕುರಿತು ಆ.ನೆ.ಉಪಾಧ್ಯೆ ಅವರು ರೂಪಿಸಿದ ಬರವಣಿಗೆಯನ್ನು ಈ ಲೇಖನದುದ್ದಕ್ಕೂ ಪ್ರಸ್ತಾಪಿಸಿ, ವಿಷಯ ನಿರೂಪಿಸಿದ್ದು ಕಂಡು ಬಂದಿದೆ.

**ಪದ್ಮನಾಭನ ಜಿನದತ್ತರಾಯ ಚರಿತ್ರೆ**

೧೯೫೪ರಲ್ಲಿ ಎಸ್.ವಿ.ರಂಗಣ್ಣ ಅವರಿಗೆ ಅರ್ಪಿಸಿದ 'ಬಾಗಿನ' ಪ್ರಬಂಧ ಸಂಪುಟದಲ್ಲಿ ಮೊದಲ ಬಾರಿಗೆ ದಾಖಲೆಗೊಂಡಿದ್ದ ಈ ಲೇಖನವನ್ನು ಮುಂದೆ ಡಿ.ಎಲ್.ಎನ್. ತಮ್ಮ ಪೀಠಿಕೆಗಳು ಲೇಖನಗಳು ಕೃತಿಯಲ್ಲಿನ ೧೪ನೇ ಭಾಗವಾಗಿ ನಿರೂಪಿಸಿದ್ದು ಕಂಡುಬಂದಿದೆ.

ಪದ್ಮನಾಭನು ರಚಿಸಿದ ಈ ಕಾವ್ಯಶೈಲಿ ಸರಳವೂ ಸುಲಭವೂ ಆಗಿದ್ದು ದೇಶಿ ನುಡಿಗಟ್ಟಿನಲ್ಲಿ ರಚಿತವಾದ ಕಾವ್ಯವೆನಿಸಿದೆ. ಈ ಕಾವ್ಯದ ಕಥಾ ಹಂದರದಲ್ಲಿ ಅಲ್ಲದೆ ದೇಶಿ ನುಡಿಗಟ್ಟಿನ ಗಾದೆಮಾತು (ಹಿತ್ತಲಗಿಡ ಮದ್ದಲ್ಲ, ರಸವನು ಬಿಟ್ಟ ಕಸವನು ಹಿಡಿದಂತೆ) ಒಗಟುಗಳು (ಮೂರುಕಣ್ಣುಗಳುಂಟು ಹರನಲ್ಲ ನಾರುಟ್ಟು ತಪಸ್ವಿಯಲ್ಲ) ಈ ಕಾವ್ಯದ ಶಕ್ತಿಯನ್ನು ಹೆಚ್ಚಿಸಿದ್ದಾಗಿವೆ. ಅಲ್ಲದೆ, ಅನ್ಯಭಾಷಾ ಶಬ್ದಗಳು (ಬಾಕು, ಹಜಾರ) ಹೆಚ್ಚಾಗಿ ಕಂಡುಬಂದದ್ದು ಕಥಾರಚನೆ ಪಾತ್ರವರ್ಣನೆ ಶೈಲಿಗಳ ದೃಷ್ಟಿಯಿಂದ ಇದು ಮೇಲಸ್ತರದ ಕಾವ್ಯವಾಗಿರುವುದಲ್ಲದೆ ಬೇರೊಂದು ದೃಷ್ಟಿಯಿಂದಲೂ ಗಮನಾರ್ಹವಾಗಿದೆ. ಜನ್ನನ ಯಶೋಧರ ಚರಿತೆಗೆ ಇದನ್ನು ಹೋಲಿಸಿ ನೋಡಿದರೆ ಇದರ ವೈಶಿಷ್ಟ್ಯ ವ್ಯಕ್ತವಾಗುತ್ತದೆ. ಅಲ್ಲಿ ಹೆಣ್ಣುದಾರಿತಪ್ಪಿ ನಡೆದುದ್ದನ್ನು ಜನ್ನ ತೋರಿಸಿದರೆ, ಇಲ್ಲಿ ಗಂಡು (ಪದ್ಮನಾಭ) ದಾರಿತಪ್ಪಿ ಅಧೋಗತಿಗಿಳಿದುದ್ದು ಮೂಡಿಬಂದಿದೆ. ಒಟ್ಟಿನಲ್ಲಿ ಹೆಣ್ಣು ದಾರಿತಪ್ಪಿನಿಂದ ದುರ್ಮಾರ್ಗಿಯಾಗುವುದು, ಗಂಡು ಉನ್ಮಾರ್ಗಿಯಾಗುವದು ಎರಡೂ ಕಾವ್ಯಗಳಲ್ಲಿ ಸಹಜವಾಗಿ ಕಂಡುಬಂದರೂ ಜನ್ನನ ಕಾವ್ಯದಲ್ಲಿ ಸಮತೆಯ ಕೊರತೆ ಕಂಡು ಬಂದಿದೆ. ಈ ಎರಡೂ ಕಾವ್ಯಗಳು ನಿಂದನೀಯವೇ ಆಗಿದ್ದರೂ ಮಿಗಿಲಾಗಿ ಶೋಚನೀಯವೇ ಆಗಿದ್ದರೂ ಅವರ

ಮತವಿರುವ ಹಾಗೆ ವರ್ಣಿಸಿದ್ದಾರೆ. ಈ ದೃಷ್ಟಿಯಿಂದ ಜನ್ನನ ಕೃತಿಗೆ ಪದ್ಮನಾಭನ ಕೃತಿ ಸಮನಾಗದಿದ್ದರೂ ಮಿಕ್ಕ ವಿಷಯಗಳಲ್ಲಿ ಸಮವೆನಿಸಿದೆ.

ಒಟ್ಟಿನಲ್ಲಿ, '೧೬೮೦-೧೭೦೦ರ ಕಾಲಘಟ್ಟದಲ್ಲಿ ತಿರುಮಲ ಸಾಮಂತನ ಕೋಶಾಧ್ಯಕ್ಷನಾಗಿದ್ದ ಪದ್ಮನಾಭನು ಜೀನದತ್ತರಾಯ ಚರಿತೆಯನ್ನು ರಚಿಸಿದ್ದನು. ಇದಕ್ಕೆ 'ಪದ್ಮಾವತೀ ಚರಿತೆ', 'ಅಮ್ಮನವರ ಚರಿತ್ರೆ' ಎಂಬ ಹೆಸರುಗಳಿವೆ ಎಂದು ಕವಿಚರಿತೆ ಕಾರರಾದ ರಾ.ನರಸಿಂಹಾಚಾರ್ ಅವರ ಹೇಳಿಕೆಯನ್ನು'[೧೦] ಡಿ.ಎಲ್.ಎನ್. ಅವರು ಬಹುವಾಗಿ ನಿರೂಪಿಸಿದ್ದನ್ನು ಸಮರ್ಥಿಸಬಹುದಾಗಿದೆ.

**ಕೆಲವು ರಗಳೆಯ ಕವಿಗಳು**

೧೯೩೬ರ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಸಂಚಿಕೆ-೪, ಸಂಪುಟ೧೭ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ ವಿಷಯ ಮುಂದೆ ಡಿ.ಎಲ್.ಎನ್. ೧೯೭೧ರ ವೇಳೆಗೆ ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೧೫ನೇ ಭಾಗದಲ್ಲಿ ಮೂಡಿ ಬಂದದ್ದಾಗಿದೆ.

ಸಾಹಿತ್ಯ ಲೋಕದಲ್ಲಿ ಹರಿಹರನು ರಗಳೆಯ ಕವಿ ಎಂದೇ ಪ್ರಸಿದ್ಧನಾದವನು ಇವನು ಕಥನಕಾವ್ಯಕ್ಕೆ ಹೊಂದಿಕೊಳ್ಳುವ ಹಾಗೆ ರಗಳೆಯ ಛಂದಸ್ಸನ್ನು ಮೊತ್ತ ಮೊದಲು ಉಪಯೋಗಿಸಿದವನು. ಈ ಹಿಂದೆ ಅಲ್ಲೊಂದು ಇಲ್ಲೊಂದು ರಗಳೆ ಪ್ರಸ್ತಾಪ ಕಂಡುಬಂದಿದ್ದರೂ ಅದಕ್ಕೆ ತನ್ನದೇ ಆದ ಸತ್ವವನ್ನು ನೀಡಿ ಜೀವ ತುಂಬಿದವನು ಹರಿಹರ. ಭಾಮಿನಿ ಷಟ್ಪದಿಗೆ ಕುಮಾರವ್ಯಾಸನು ಹೇಗೋ ಹಾಗೆ ರಗಳೆಯ ಛಂದಸ್ಸಿಗೆ ಹರಿಹರನು. ಇವನೊಬ್ಬ ರಗಳೆ ಕವಿ ಎಂದು ಗುರುತಿಸಲು ಇವನು ರಚಿಸಿದ ಶಿವಶರಣರ ರಗಳೆಗಳೇ ಸಾಕ್ಷೀಭೂತವಾಗಿವೆ.

ಇನ್ನೂ ಡಿ.ಎಲ್.ಎನ್. ಅವರು ತಿಳಿಸಿರುವ ಕೆಲವು ರಗಳೆಯ ಕವಿಗಳ ಬಗ್ಗೆ ನೋಡುವುದಾದರೆ, ಮೊದಲನೆಯದಾಗಿ 'ತ್ರಿಭುವನತಾತ' ಇವನು ಕೆರೆಯ ಪದ್ಮರಸನೊಡನೆ ವಾದ ಮಾಡಿ ಸೋತು ಅವನ ಶಿಷ್ಯನಾದನೆಂದು ಪದ್ಮಪುರಾಣದಲ್ಲಿ ಹೇಳಿದೆ. ಗುರುವಿಶ್ವಕೋಶ ಎಂಬ ಅಂಕಿತದಲ್ಲಿದ್ದ ಪದ್ಯವೊಂದು ದೊರೆತಿದ್ದು ಅದು ವಿಶ್ವೇಶ ಎಂಬುದು ಪದ್ಮರಸನ ದೈವದ ಹೆಸರು ಇದನ್ನೆ ಇವನು ಗುರುವಿನೊಂದಿಗೆ ಸಮೀಕರಿಸಿ ಇಟ್ಟುಕೊಂಡಿರಬಹುದೆಂದು ಕವಿಚರಿತೆಕಾರರು ಉಲ್ಲೇಖಿಸಿದ್ದಾರೆ. ಇವನವು ಅಮ್ಮವ್ವೆಯ ರಗಳೆ, ಪಗಲೋಳನ ರಗಳೆ, ಚೋಳಿಯಕ್ಕನ ರಗಳೆಗಳಾಗಿದ್ದು ಇವು ಶಿವಭಕ್ತರ ಚರಿತ್ರೆಯನ್ನು ಹೇಳುವ ರಗಳೆಗಳೆನಿಸಿವೆ. ಎರಡನೆಯದಾಗಿ "ಶಂಕಲಿಂಗ ಇವನು ೧೬೦೦ರಲ್ಲಿ ಇದ್ದಿರಬಹುದೆಂದು ಕವಿಚರಿತೆಕಾರರು ಉಲ್ಲೇಖಿಸಿದ್ದಾರೆ. ಇವನು ಕಲಿಗಣನಾಥನ ರಗಳೆ, ಪ್ರಸಾದ ರಗಳೆ, ಎಂದು ಎರಡು ರಗಳೆಗಳನ್ನು ಉಲ್ಲೇಖಿಸಿದ್ದು ಕಂಡುಬಂದಿದೆ. ಮೂರನೆಯದಾಗಿ 'ಸದಾಶಿವಲಿಂಗ' ಈ ಅಂಕಿತವುಳ್ಳ ಕವಿಯು ಸಾನಂದ ಗಣೇಶ್ವರನ ರಗಳೆಯನ್ನು ಬರೆದಿದ್ದು ಇದು ಲಲಿತ

ರಗಳೆಯಲ್ಲಿದೆ ಎಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ. ನಾಲ್ಕನೆಯದಾಗಿ ಪಾಲ್ಕುರಿಕೆಯ ಸೋಮನಾಥ ಇವನ ಕಾಲ ಸುಮಾರು ೧೧೯೫ ಎಂದು ಕವಿಚರಿತೆಕಾರರು ಉಲ್ಲೇಖಿಸಿದ್ದು. ಇವನು ಪಂಚರತ್ನ ಸದ್ಗುರು ರಗಳೆ, ಗಂಗೋದಯ ಕಾವ್ಯ (ಗಂಗೋತ್ಪತ್ತಿರಗಳೆ)ಗಳನ್ನು ಬರೆದಿದ್ದಾನೆಂದು ತಿಳಿದುಬಂದಿದೆ.

ಒಟ್ಟಾರೆಯಾಗಿ ಎಲೆಮರೆಯ ಕಾಯಿಯಂತೆ ಮೂಡಿಬಂದ ಈ ರಗಳೆ ಕವಿಗಳು ಕನ್ನಡ ಸಾಹಿತ್ಯ ಲೋಕದಲ್ಲಿ ತಮ್ಮದೇ ಆದ ಛಾಪು ಮೂಡಿಸಿದವರಾಗಿದ್ದಾರೆ.

**ಕೆಲವು ವಚನಕಾರರು**

ಪ್ರಬುದ್ಧ ಕರ್ಣಾಟಕದ ೧೯ನೇ ಸಂಪುಟ ೧ನೇ ಸಂಚಿಕೆಯಲ್ಲಿ ಮೊದಲನೇ ಬಾರಿಗೆ ಮೂಡಿಬಂದ ಈ ಪ್ರಸ್ತಾಪವನ್ನು ಡಿ.ಎಲ್.ಎನ್. ಮುಂದೆ ೧೯೭೧ರ ವೇಳೆಗೆ ರಚಿಸಿ ಪೀಠಿಕೆಗಳು ಲೇಖನಗಳು ಕೃತಿಯ ೧೬ನೇ ಭಾಗವಾಗಿ ಸಂಕಲಿಸಿದ್ದು ಕಂಡುಬಂದಿದೆ.

ವಚನ ಸಾಹಿತ್ಯವು ವಿಸ್ತಾರವಾದ ಪರಿಧಿಯನ್ನು ಹೊಂದಿದ್ದು ಈ ಕುರಿತು ಡಿ.ಎಲ್.ಎನ್. ಅವರು ಕೆಲ ಅರ್ಥವತ್ತಾದ ವಿಚಾರಗಳನ್ನು ತಿಳಿಸಿದ್ದು ತಿಳಿದು ಬಂದಿದೆ. ವಚನಗಳ ಹುಟ್ಟಿಗೆ ಸಮರ್ಪಕ ಉತ್ತರ ನೀಡಲು ಸಾಧ್ಯವಿಲ್ಲ ಎಂದು ಡಿ.ಎಲ್.ಎನ್. ಸ್ಪಷ್ಟೀಕರಿಸಿದ್ದಾರೆ. ಆದರೆ ಕೆಲ ಊಹೆಗಳಿಗೆ ಎಡೆಕೊಟ್ಟು ವೀರಶೈವರಿಂದ ಕನ್ನಡ ಸಾಹಿತ್ಯದಲ್ಲಿ ಉಂಟಾದ ವಿಪ್ಲವವು ದೇಶೀಯ ಛಂದೋರೂಪಗಳನ್ನು ಪುನರುಜ್ಜೀವನಗೊಳಿಸಿತು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ರಚನೆಗೆ ಕಾರಣವಾದ ಸನ್ನಿವೇಶಗಳನ್ನು ಲೇಖನದುದ್ದಕ್ಕೂ ಸವಿಸ್ತಾರವಾಗಿ ವಿವರಿಸಿರುವ ಡಿ.ಎಲ್.ಎನ್. ಸಾಮಾನ್ಯ ಜನರು ತಂಡೋಪತಂಡವಾಗಿ ವೀರಶೈವ ಧರ್ಮಾನು ಯಾಯಿಗಳಾದ್ದರಿಂದ ದೇಶೀಯ ಪದ್ಯ ಪ್ರಭೇದಗಳು ಸಾಹಿತ್ಯದಲ್ಲಿ ವಿಶೇಷವಾಗಿ ಬೆಳೆಯಲು ಕಾರಣವಾದವು ಎಂದಿದ್ದಾರೆ.

ಈಗೆ ಕಾರಣವಾಗಲು ಸಾವಿರಾರು ವಚನಕಾರರ ಶ್ರಮ ಮತ್ತು ಸಮಾಜದ ಬಗೆಗಿನ ಕಾಳಜಿ ಅಭಿವ್ಯಕ್ತಿಗೊಂಡಿದ್ದು ಪ್ರಮುಖವೆನಿಸಿದೆ. ಅಂತಹವರಲ್ಲಿ ಕೆಲವು ವಚನಕಾರರನ್ನಾಗಿ ಡಿ.ಎಲ್.ಎನ್. ಮಾದಾರ ಚನ್ನಯ್ಯ, ಕೆಂಭಾವಿ ಭೋಗಣ್ಣ, ಚಂದಿಮರಸ, ಕುಂಬಾರ ಗುಂಡಯ್ಯ, ಜೇಡರ ದಾಸಿಮಯ್ಯ, ವೀರಶೈವಾಚಾರ್ಯ ಪಂಚಕರು, ಏಕೋರಾಮಿತಂದೆ, ಮರುಳ ಸಿದ್ದೇಶ್ವರ, ಕಿನ್ನರಿಬೊಮ್ಮಣ್ಣ, ಮಾರಿತಂದೆ, ಮಡಿವಾಳ ಮಾಚಯ್ಯ, ಚೆನ್ನಬಸವ, ತೆಲುಗುಬೊಮ್ಮಯ್ಯ, ಮಾರಯ್ಯ, ಹಾಗೂ ಇದರಲ್ಲೇ ೫ ಜನ ಮಾರಿತಂದೆಗಳಲ್ಲಿ ೨ ಜನ ಮಾರಿತಂದೆಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಮುಂದುವರೆದು ಮೆರೆಮಿಂಡಯ್ಯ, ಏಲೇಶ್ವರದ ಕೇತಯ್ಯ, ಆದಯ್ಯ, ಹಾವಿನಾಳ ಕಲ್ಲಯ್ಯ, ಮಾದಾರಧೂಳಯ್ಯ, ಬಾಹೂರ ಬೊಮ್ಮಣ್ಣ, ತುರುಗಾಯಿ ರಾಮಣ್ಣ, ಸಕಲೇಶ ಮಾದರಸ, ಮುಸುಟೆಯ ಚೌಡಯ್ಯ, ಸುರುಗಿಯ

ಚೌಡಯ್ಯ, ಮಾರುಡಿಗೆಯ ನಾಚಯ್ಯ, ಕೊವೂರ ಬೊಮ್ಮಯ್ಯ, ಮಧುವಯ್ಯ, ಅಗ್ಘಣಿಯ ಹಂಪಯ್ಯ, ಅಮುಗಿ ದೇವಯ್ಯ, ಉಳಿಯುಮೇಶ್ವರ ಚಿಕ್ಕಣ್ಣ, ಮೈದುನ ರಾಮಯ್ಯ, ಬಾಲಸಂಗ, ಪ್ರಸಾದಿ ಲೆಂಕ ಬಂಕಣ್ಣ, ಕನ್ನಡಿಯ ಕಾಯಕದ ಅಮ್ಮಿದೇವಯ್ಯ, ಮಲಹರ ಕಾಯಕದ ಚಿಕ್ಕದೇವಯ್ಯ, ವೇದಮೂರ್ತಿ ಸಂಗಣ್ಣ, ಕಾಮಟ್ಟದ ಭೀಮಣ್ಣ, ಗುರುಬಸವೇಶ್ವರ, ನಿಂಬಿಯಕ್ಕ, ಸತ್ಯಕ್ಕ, ಕೋಳೂರು ಕೊಡಗೂಸು, ಮಹಾದೇವಿಯಕ್ಕ ಅಮ್ಮವ್ವೆ, ಜೆಮ್ಮವ್ವ ಹೀಗೆ ಮುಂತಾದವರು ಬಸವಣ್ಣನ ಸಮಕಾಲೀನರನ್ನಾಗಿ ಅವರವರ ವೃತ್ತಿ ಹಿನ್ನೆಲೆಯಲ್ಲಿ ಗುರುತಿಸಿಕೊಂಡಿದ್ದು ಇವರುಗಳು ತಮ್ಮ ವಚನಗಳಿಂದ ನಡುಗನ್ನಡ ಸಾಹಿತ್ಯದಲ್ಲಿ ಹೊಸ ಸಂಚಲನವನ್ನು ಮೂಡಿಸಿದ್ದ ರೀತಿಯನ್ನು ಡಿ.ಎಲ್.ಎನ್. ತಮ್ಮ ಈ ಲೇಖನದುದ್ದಕ್ಕೂ ವಿವರಿಸಿದ್ದು ಕಂಡುಬಂದಿದೆ.

**ಜನ್ನನೋ ವಾದಿರಾಜನೊ?**

೧೯೩೧ರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪುಟ–೧೫, ಸಂಚಿಕೆ–೪ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ವಿಚಾರ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೧೭ನೇ ಭಾಗದಲ್ಲಿ ಪ್ರಸ್ತಾಪಗೊಂಡದ್ದಾಗಿದೆ.

ಪ್ರಾಚೀನ ಸಾಹಿತ್ಯದ ಎಲ್ಲಾ ಕವಿ ಕಾಲದ ವಿಚಾರದ ಬಗ್ಗೆ ಚರ್ಚಿಸಿರುವ ಡಿ.ಎಲ್.ಎನ್. ಜನ್ನ ಮತ್ತು ವಾದಿರಾಜನ ಬಗ್ಗೆ ಕೂಲಂಕಷವಾಗಿ ಚರ್ಚಿಸಿದ ಪ್ರಸ್ತಾಪ ಈ ಲೇಖನದ್ದಾಗಿದೆ.

ಡಾ.ಕೀಥ್, ಬಿ.ಎಲ್.ರೈಸ್, ಆರ್.ನರಸಿಂಹಾಚಾರ್ ಅವರ ಉಲ್ಲೇಖಗಳನ್ನಿರಿಸಿಕೊಂಡ ಡಿ.ಎಲ್.ಎನ್. ಅವರು ವಾದಿರಾಜರ ಯಶೋಧರ ಕಾವ್ಯವನ್ನು ಅನುಸರಿಸಿ ಜನ್ನ ತನ್ನ 'ಯಶೋಧರ ಚರಿತೆ' ಬರೆದಿದ್ದಾನೆ ಎಂದು ಉಲ್ಲೇಖಿಸಿದ್ದಾರೆ. ಕನ್ನಡ, ಸಂಸ್ಕೃತದಲ್ಲಿನ ಈ ಕೃತಿಗಳ ವ್ಯತ್ಯಾಸಗಳ ಬಗ್ಗೆ ತಿಳಿಸಿದ ಡಿ.ಎಲ್.ಎನ್. ಮುಂದುವರೆದು, ಜನ್ನನು ವಾದಿರಾಜನಿಗಿಂತ ಹೆಚ್ಚು ನವಿರಾಗಿ ತನ್ನದೇ ಆದ ಪಾತ್ರರಚನೆಗೆ ಮೆರುಗು ನೀಡುವ ಮೂಲಕ ಸನ್ನಿವೇಶ ರಚನೆ, ಸಮಯೋಚಿತ ಪ್ರಕೃತಿವರ್ಣನೆಗಳಲ್ಲಾಗಲಿ ವಾದಿರಾಜನಿಗಿಂತ ಹೆಚ್ಚು ಶಕ್ತನಾಗಿದ್ದನೆಂದು ನಿರೂಪಿಸಿದ್ದಾರೆ. ಒಟ್ಟಾರೆಯಾಗಿ ಡಿ.ಎಲ್.ಎನ್. ತಮ್ಮ ಜ್ಞಾನದ ವಿಸ್ತಾರದ ಲಹರಿ ಮೂಲಕ ಜನ್ನನು ವಾದಿರಾಜನಿಗಿಂತ ಉತ್ತಮ ಕವಿಯೆಂದು ತೋರಿಸಿಕೊಟ್ಟಿದ್ದಾರೆ.

**ಆದಿದೇವ**

೧೯೩೪ರಲ್ಲಿ ರಚನೆಗೊಂಡ ಈ ಲೇಖನ ಜಯಕರ್ನಾಟಕ ಪತ್ರಿಕೆಯ ಸಂಪುಟ–೧೦, ಸಂಚಿಕೆ–೪ರಲ್ಲಿ ಮೊದಲಬಾರಿಗೆ ಪ್ರಕಟಗೊಂಡು ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೧೮ನೇ ಭಾಗದಲ್ಲಿ ಪ್ರಸ್ತಾಪಗೊಂಡದ್ದಾಗಿದೆ.

ಆದಿದೇವ ಇವನೊಬ್ಬ ಜೈನಕವಿಯಾಗಿದ್ದು ಸುಕುಮಾರ ಚರಿತೆ ಎಂಬ ಕೃತಿ ರಚನೆ ಮಾಡಿದ್ದಾನೆ. ಇವನ ಕಾಲವು ಸುಮಾರು ೧೫೦೦ ಎಂದು ಅಂದಾಜಿಸಿ ದಾಖಲಿಸಿದ ಡಿ.ಎಲ್.ಎನ್. ಇವನ ತಂದೆ ಯಕ್ಷಪುರೋಪಮ ರತ್ನತ್ರಯಪ್ಪರ ನಿವಾಸಿ ಆದ ವಿಜಯಪ್ಪಶರ್ಮ ತಾಯಿ ಬ್ರಹ್ಮಾಂಬಿಕೆ ಅಣ್ಣ ಬ್ರಹ್ಮದೇವ (ಇವನು ಆಯುರ್ವೇದ ಪಂಡಿತನಾಗಿದ್ದನು) ಎಂದು ಉಲ್ಲೇಖಿಸಿದ್ದಾರೆ. ಈ ಪ್ರಾಚೀನ ಕವಿಯ ಪೂರ್ವಪರತೆ ಬಗ್ಗೆ ತಿಳಿಸಿದ ಡಿ.ಎಲ್.ಎನ್. ಆದಿದೇವನು ಪೂರ್ವಕವಿಗಳನ್ನು ಸ್ತುತಿಸಿದ್ದರ ಬಗ್ಗೆ ವಿವರಿಸಿದ್ದಾರೆ. ಮುಂದುವರೆದು ಸುಕುಮಾರ ಚರಿತೆ ಬಗ್ಗೆ ವಿವರಿಸುತ್ತಾ ಇದೊಂದು ಸಾಂಗತ್ಯ ಗ್ರಂಥವೆಂದು ಇದರಲ್ಲಿನ ಪದ್ಯಗಳು ೩೨೨ರಿಂದ ೩೬೬ರ ವರೆಗೆ ಲಭ್ಯವಾದವುಗಳ ಬಗ್ಗೆ ವಿವರಿಸಿದ್ದಾರೆ.

**ಸಿದ್ಧಲಿಂಗೇಶ**

೧೯೩೪ರಲ್ಲಿ ರಚನೆಗೊಂಡ ಈ ಲೇಖನ ಜಯಕರ್ನಾಟಕ ಪತ್ರಿಕೆಯ ಸಂಪುಟ-೯, ಸಂಚಿಕೆ-೪ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡು ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೧೯ನೇ ಭಾಗದಲ್ಲಿ ಪ್ರಸ್ತಾಪಗೊಂಡದ್ದಾಗಿದೆ.

ಸಿದ್ಧಲಿಂಗೇಶ, ಇವನು ೧೬೦೦ರ ಕಾಲದಲ್ಲಿದ್ದವನೆಂದು ಸುಜ್ಞಾನಬೋಧೆ ಗ್ರಂಥವನ್ನು ಸಾಂಗತ್ಯದಲ್ಲಿ ರಚಿಸಿದ್ದಾನೆಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ. ಇವನು ವೀರಶೈವ ಕವಿಯಾಗಿದ್ದು ಇವನಿಗೆ 'ಪುರಾಣದ ಸಿದ್ಧಲಿಂಗ' ಎಂಬ ಹೆಸರು ಉಂಟು ಎಂದು ಪ್ರಸ್ತಾಪಿಸಲಾಗಿದೆ. 'ಸುಜ್ಞಾನಬೋಧೆ' ಕೃತಿಯು ೧೩ ಸ್ಥಲಗಳನ್ನು ೧೦೨೫ ಪದ್ಯಗಳನ್ನು ಹೊಂದಿದೆ. (ಸಾಂಗತ್ಯ ೧೦೧೪+ಕಂದ ೧೧) ಈ ಕಾವ್ಯ ಗುರು ಚಿತ್ತಾರಾಧ್ಯರ ಚರಿತ್ರೆ ಹೇಳಿದ್ದು, ಇದು ಸಾಮಾನ್ಯ ರೀತಿಯಲ್ಲಿ ಮೂಡಿಬಂದು ಮತ ಪ್ರಚಾರಣೆಗಾಗಿ ಕಥೆಯನ್ನು ಸಾರಿದ ರೂಪ ಅಗತ್ಯವಾಗಿ ಮೂಡಿ ಬಂದುದಾಗಿದೆ.

**ಶಿವಸಿದ್ಧರಾಮ**

೧೯೩೧ರಲ್ಲಿ ರಚನೆಗೊಂಡ ಈ ಲೇಖನ ಜಯಕರ್ನಾಟಕ ಪತ್ರಿಕೆಯ ಸಂಪುಟ-೯, ಸಂಚಿಕೆ-೪ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡು ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೨೦ನೇ ಭಾಗದಲ್ಲಿ ಪ್ರಸ್ತಾಪಗೊಂಡದ್ದಾಗಿದೆ.

ಶಿವಸಿದ್ಧರಾಮನು ಒಬ್ಬ ವೀರಶೈವ ಕವಿಯಾಗಿದ್ದು ಇವನು ತನ್ನ 'ವೀರಶೈವ ಶಿಖಾರತ್ನ' ಕೃತಿಯಲ್ಲಿ ತನ್ನ ಗುರುಪರಂಪರೆಯನ್ನು ಹೇಳಿಕೊಂಡು ಸ್ತುತಿಸಿದ್ದಾನೆ. ತನ್ನ ಗುರು ಪರಂಪರೆ ಹೇಳುವಾಗ ತೋಂಟದಾಚಾರ್ಯನ ಕುರಿತು ಪ್ರಸ್ತಾಪಿಸಿದ್ದರಿಂದ ಇವನ ಕಾಲಮಾನ ೧೪೭೦ ಇದ್ದಿರಬೇಕೆಂದು ಆರ್.ನರಸಿಂಹಾಚಾರ್ ಅವರ ಕವಿಚರಿತೆ ಸಂಪುಟ-೨ರಿಂದ ತಿಳಿದುಬಂದಿದೆ.

ಇವನ ಕೃತಿಯಾದ 'ವೀರಶೈವ ಶಿಖಾರತ್ನ' ಇದೊಂದು ವಾರ್ಧಕಷಟ್ಪದಿ ಕೃತಿಯಾಗಿದ್ದು ಇದು ೧೯ ಸಂಧಿಗಳು ೬೩೨ ಪದ್ಯಗಳಿಂದ ಆವೃತ ಕಾವ್ಯವಾಗಿದೆ. ಇದರಲ್ಲಿನ ಕೊನೆಯ ೧೯ನೇ ಸಂಧಿಯು ಮಾತ್ರ ಪರಿವರ್ಧಿನಿ, ಭೋಗಷಟ್ಪದಿಯಲ್ಲಿ ರಚನೆಗೊಂಡಿದ್ದು ಇದೊಂದು ವೀರಶೈವರ ಮತ ಪ್ರಕ್ರಿಯೆಗಳನ್ನು ತಿಳಿಸುವ ಕೃತಿಯಾಗಿ ಕಂಡುಬಂದಿದೆ.

**ದೇವಾಂಗದಾಸಿಮಯ್ಯ ಪುರಾಣ**

೧೯೫೩ರ ದೇವರದಾಸಿಮಾಯ್ಯ ಪ್ರಶಸ್ತಿ ಕೃತಿಯ ಭಾಗದಲ್ಲಿ ಮೊದಲಿಗೆ ಪ್ರಕಟಗೊಂಡ ಈ ಲೇಖನ ಮುಂದೆ ೧೯೭೧ರ ವೇಳೆಗೆ ಡಿ.ಎಲ್.ಎನ್ ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೨೧ನೇ ಭಾಗದಲ್ಲಿ ಪ್ರಸ್ತಾಪಗೊಂಡದ್ದಾಗಿದೆ.

ಡಿ.ಎಲ್.ಎನ್. ಈ ಕೃತಿಯ ಬಗ್ಗೆ ಹೇಳುತ್ತಾ, 'ಈ ಸಾಂಗತ್ಯ ಗ್ರಂಥವು ಏಳು ಸಂಧಿಗಳನ್ನು ೧೭೦೭ ಪದ್ಯಗಳನ್ನು ಒಳಗೊಂಡಿದ್ದು ಇದರ ಕೊನೆಯಲ್ಲಿ ದೇವರ ದಾಸಿಮಯ್ಯನ ಕಥೆ ನಿರೂಪಿತಗೊಂಡಿದೆ.'[೧೧] ಎಂದು ಉಲ್ಲೇಖಿಸುತ್ತಾ, ಈ ಲೇಖನದುದ್ದಕ್ಕೂ ಮೊದಲ ಭಾಗದಲ್ಲಿ ದೇವಾಂಗ ಋಷಿಯ ಕಥೆಯನ್ನು ಅನೇಕ ಕಥಾನಕಗಳನ್ನು ಜೋಡಿಸಿ ಸವಿಸ್ತಾರವಾಗಿ ನಿರೂಪಿಸಿದ್ದಾರೆ. ಎರಡನೇ ಭಾಗವಾಗಿ ದೇವರದಾಸಿಮಯ್ಯ (ದೇವಾಂಗ ದಾಸಿಮಯ್ಯ)ನ ಪೂರ್ವಪರತೆ ಚರಿತೆಯನ್ನು ಸವಿಸ್ತಾರವಾಗಿ ತಿಳಿಸಿದ್ದು ಕಂಡುಬಂದಿದೆ. ಮೂರನೇ ಭಾಗವಾಗಿ ಗ್ರಂಥಕರ್ತೃ ರಾಘವಾಂಕನೇ? ಎಂದು ಆರ್.ಸಿ.ಹಿರೇಮಠರು ವಾದಿಸಿದ ವಿಚಾರಕ್ಕೆ ಪ್ರತ್ಯುತ್ತರ ಸಾಕ್ಷಿಗಳನ್ನು ಪುರಾವೆ ಸಹಿತ ಡಿ.ಎಲ್.ಎನ್. ಚರ್ಚಿಸಿದ್ದು ಕಂಡು ಬಂದಿದೆ. ಮುಂದುವರೆದು ನಾಲ್ಕನೆಯ ಭಾಗವಾಗಿ ದೇವರ ದಾಸಿಮಯ್ಯನ ಕಥೆಗಳನ್ನು ತಿಳಿಸುವ ಎಲ್ಲಾ ಪುರಾವೆಗಳನ್ನು ಹೋಲಿಸಿ ನೋಡಿ ಮುಂದೆ ಸೂಕ್ತ ನಿರ್ಧಾರ ಕೈಗೊಳ್ಳುವುದು ಅವಶ್ಯವೆಂದು ಮುಂದಿನ ಅಧ್ಯಯನಕಾರರಿಗೆ ದಾರಿ ನೀಡಿದ್ದಾರೆ.

ಈ ಲೇಖನದ ಒಟ್ಟಾರೆ ವಿಚಾರವಾಗಿ ದೇವಾಂಗ ದಾಸಿಮಯ್ಯ ಪುರಾಣವನ್ನು ಯಾರೋ ಬರೆದು ರಾಘವಾಂಕನ ತಲೆಗೆ ಕಟ್ಟಿದ್ದು ಸತ್ಯವೆನಿಸುತ್ತದೆ, ರಾಘವಾಂಕನ ಕಾಲಕ್ಕೂ ಈ ಪುರಾಣದಲ್ಲಿನ ವಿಚಾರಗಳಿಗೂ ಎಲ್ಲಿಯೂ ಸಂಬಂಧವಿಲ್ಲದ್ದಂತೆ ಕಂಡುಬಂದಿದ್ದು ೧೫-೧೬ನೇ ಶತಮಾನದಲ್ಲಿ ಮೂಡಿಬಂದ ಪುರಾಣಕಾವ್ಯ ಇದು ಎನಿಸಿದೆ. ಒಟ್ಟಿನಲ್ಲಿ ದೇವರ ದಾಸಿಮಯ್ಯ, ದೇವಾಂಗದಾಸಿಮಯ್ಯ, ಶಂಕರದಾಸಿಮಯ್ಯ, ಜೇಡರದಾಸಿಮಯ್ಯಗಳ ಕುರಿತು ಇನ್ನೂ ವಿದ್ವಾಂಸರ ಒಮ್ಮತ ಚರ್ಚೆ ಅವಶ್ಯಕವೆಂದು ಸಾರಿದ್ದಾರೆ.

**ರನ್ನ**

೧೯೪೯ರಲ್ಲಿ ನಡೆದ ರನ್ನಕವಿಯ ಸಹಸ್ರ ವಾರ್ಷಿಕೋತ್ಸವದ ಅಂಗವಾಗಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಡಿ.ಎಲ್.ಎನ್. ಮಾಡಿದ ಭಾಷಣದ ಸಾರಾಂಶದ ಪ್ರತಿಯು ಇದಾಗಿದ್ದು

ಮುಂದೆ ಕನ್ನಡ ನುಡಿಯ ಸಂಪುಟ–೧೨, ಸಂಚಿಕೆ–೬ರಲ್ಲಿ ಬಿತ್ತರಗೊಂಡುದ್ದಾಗಿದೆ. ನಂತರದಲ್ಲಿ ಡಿ.ಎಲ್.ಎನ್. ಅವರು ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೨೨ನೇ ಭಾಗವಾಗಿ ನಿರೂಪಿತಗೊಂಡ ವಿಷಯ ಇದಾಗಿದೆ.

ಕನ್ನಡ ಸಾಹಿತ್ಯದ ರತ್ನತ್ರಯರಲ್ಲೊಬ್ಬನಾದ ರನ್ನನ ಕುರಿತು ಅವನ ಕೃತಿಗಳಾದ ಅಜಿತನಾಥ ಪುರಾಣ, ಗದಾಯುದ್ಧ ಕೃತಿಯ ಕುರಿತು ಡಿ.ಎಲ್.ಎನ್. ಈ ಲೇಖನದಲ್ಲಿ ಚರ್ಚಿಸಿ ರನ್ನನ ಕಾವ್ಯ ಶೈಲಿ, ಪಾಂಡಿತ್ಯದ ವಿಚಾರದ ಕುರಿತು ಪ್ರಸ್ತಾಪಿಸುತ್ತಾ ರನ್ನನ ಕಾವ್ಯಶೈಲಿಯೂ ಇಂದಿಗೂ ಸಾಹಿತ್ಯ ಲೋಕದಲ್ಲಿ ಅವಶ್ಯಕ ಎಂಬ ನಿಲುವನ್ನು ವ್ಯಕ್ತಪಡಿಸಿದ್ದು ಮುಖ್ಯವೆನಿಸಿದೆ.

ಮೊದಲಿಗೆ ಅಜಿತ ಪುರಾಣದ ಬಗ್ಗೆ ಪ್ರಸ್ತಾಪಿಸಿದ ಡಿ.ಎಲ್.ಎನ್. ಇದೊಂದು ವಿರಕ್ತಿ ಸಾಹಿತ್ಯ, ವೈರಾಗ್ಯ ಸಾಹಿತ್ಯ ಹಿಂದಿನ ಪರಂಪರೆಗೆ ಸೇರಿದ ಸಾಹಿತ್ಯವಾಗಿ ವೈರಾಗ್ಯದ ರಸವನ್ನೇ ರನ್ನಕವಿ ಹಿಡಿದಿಟ್ಟಿದ್ದಾನೆಂದು ಪ್ರಸ್ತಾಪಿಸಿ, ಈ ಕೃತಿಯಲ್ಲಿನ ರಚನಾ ಸ್ವರೂಪದ ಪ್ರಾಚೀನತೆ ಈ ಕೃತಿಯಲ್ಲಿ ಬಳಕೆಗೊಂಡ ಸಾಹಿತ್ಯವು ತುಂಬಾ ಭಾವನಾತ್ಮಕವಾದದ್ದೆಂದು ಅಭಿಪ್ರಾಯಿಸಿದ್ದಾರೆ. ಅಜಿತ ಪುರಾಣದ ಕಥೆ ವೀರಕಥೆ ಎಂದು ಹೇಳುತ್ತಾ ರನ್ನನು ಕೃತಿಯ ಆರಂಭ ಮತ್ತು ಅಂತ್ಯದಲ್ಲಿ ಅತ್ತಿಮಬ್ಬೆಯ ಆದರ್ಶವನ್ನು ಹಿನ್ನೆಲೆಯಾಗಿಟ್ಟುಕೊಂಡು ನಡುನಡುವೆ ಅಜೀತ ತೀರ್ಥಂಕರರ ಚರಿತ್ರೆಯನ್ನು ಸೇರಿಸಿಸಿದ್ದಾನೆಂದು ಹೇಳಿದ್ದಾರೆ. ಹಾಗೆಯೇ ರನ್ನನಲ್ಲಿದ್ದ ಧರ್ಮ ನೀತಿಯನ್ನು, ವೈಭವೀಕರಿಸುವ ರೀತಿಯನ್ನು, ಅಚ್ಚುಕಟ್ಟಾಗಿ ನಿರೂಪಿಸಿದ ಸಹೃದಯ ಡಿ.ಎಲ್.ಎನ್.ರವರ ಈ ಲೇಖನದಲ್ಲಿ ಮೂಡಿಬಂದಿದೆ.

ಈ ಕೃತಿಯಲ್ಲಿ ಅಜಿತನಾಥನು ಬೆಳದಿಂಗಳ ನೋಡಿ ವೈರಾಗ್ಯ ತಳೆದದ್ದು, ತಪೋವನಕ್ಕೆ ತೆರಳಿದ್ದು, ಅಜಿತನು ತಪೋವನಕ್ಕೆ ತೆರಳುವಾಗ ಅವನ ಪರಿವಾರದವರು ತೋರಿದ ಪರಿತಾಪದ ವಿಧಾನವನ್ನು ರನ್ನನ ವರ್ಣಿಸಿದ ವಿಧಾನಕ್ಕೆ ಹತ್ತಿರವಾಗಿ ಡಿ.ಎಲ್.ಎನ್. ಎಲ್ಲಾ ಭಾಷೆಯವರಿಗೂ ಅರ್ಥವಾಗುವ ರೀತಿಯಲ್ಲಿ ಅಜಿತನು ಧರ್ಮೋಪದೇಶ ಮಾಡುವ ಬಗೆಯನ್ನು ಸರ್ವಭಾಷಾ ಸಾಮಾನ್ಯ ಶ್ರೀವಚನಂ ಎಂಬ ಮಾತಿನ ಪ್ರಯೋಗದ ಮೂಲಕ ಅರ್ಥವತ್ತಾಗಿ ಈ ಕಥಾಭಾಗವನ್ನು ವಿವರಿಸಿದ್ದಾರೆ.

ಮುಂದುವರೆದು 'ರನ್ನನು ಇನ್ನೊಂದು ಕೃತಿ ಗದಾಯುದ್ಧದ ಕುರಿತು ಪ್ರಸ್ತಾಪಿಸಿದ ಡಿ.ಎಲ್.ಎನ್. ರನ್ನನ ಗದಾಯುದ್ಧ ಕಾವ್ಯದ ಆಶಯ ಉದ್ದೇಶ, ಮೌಲ್ಯ ಈ ಕೃತಿಯಲ್ಲಿನ 'ವೀರತ್ವ ತ್ಯಾಗ' ಕಾಲಕಾಲಕ್ಕೂ ಚಿರಾಯು ಎಂದು ಶ್ಲಾಘಿಸಿದ್ದಾರೆ.'[೧೨]

ಈ ಎರಡೂ ಕೃತಿಗಳು ವೀರತನವನ್ನೊಳಗೊಂಡಿದ್ದರೂ ಸಹ ವೀರಾವೇಶವನ್ನು ಹೆಚ್ಚಾಗಿ ಜನಪ್ರಿಯಗೊಳಿಸಲು ಗದಾಯುದ್ಧವನ್ನೇ ಆಯ್ಕೆ ಮಾಡಿಕೊಂಡಿರುವುದಾಗಿ

ಡಿ.ಎಲ್.ಎನ್. ಅಭಿಪ್ರಾಯಿಸಿ ರನ್ನನು ಗದಾಯುದ್ಧವನ್ನು ವಿಜಯದ ಸ್ಮಾರಕವಾಗಿ, ವೀರತ್ವಕ್ಕೆ ಸಂಕೇತವಾಗಿ ಮೂಡಿಸಿದ್ದಾನೆ, ಹಾಗೂ ತನ್ನ ಆಶ್ರಯದಾತನ ಕೀರ್ತಿ ಶಿಖರವನ್ನು ಈ ಕೃತಿಯಲ್ಲಿ ನೆಟ್ಟಿದ್ದಾನೆ. ಎಂದು ಹೇಳುವ ಮೂಲಕ ಡಿ.ಎಲ್.ಎನ್. ಕನ್ನಡ ಕಾವ್ಯಗಳ ಮನೋಧರ್ಮವನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದನ್ನು ಈ ವಿಚಾರಗಳಿಂದ ತಿಳಿಯಬಹುದಾಗಿದೆ.

ಭಾಸನ 'ಊರುಭಂಗ' ನಾಟಕದ ದೃಶ್ಯಾವಳಿಯನ್ನು ರನ್ನನ ಗದಾಯುದ್ಧದಲ್ಲಿ ಪ್ರಸ್ತಾಪಗೊಳಿಸುತ್ತಾ ಡಿ.ಎಲ್.ಎನ್. ಅಲ್ಲಿನ ಯುದ್ಧವರ್ಣನೆ ತುಂಬಾ ಸುಂದರವಾಗಿ ಮೂಡಿ ಬಂದಿದ್ದನ್ನು ಪ್ರಸ್ತಾಪಿಸಿದ್ದಾರೆ.

**ಕುಮಾರರಾಮನ ಸಾಂಗತ್ಯ**

ಕನ್ನಡ ನುಡಿ ಸಂಪುಟ–೪೪, ಸಂಚಿಕೆ–೩ರಲ್ಲಿ ಮೂಡಿಬಂದ ಈ ಲೇಖನ ೧೯೪೧ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಮಾಡಿದ ಭಾಷಣದ ಪ್ರತಿಯದ್ದು ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೨೩ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಲೇಖನದ ಆರಂಭದಲ್ಲಿ ಡಿ.ಎಲ್.ಎನ್. ವ್ಯಕ್ತಪಡಿಸಿದ ಇಂಗಿತದ ವಿಷಯವಾಗಿ ನಂಜುಂಡಕವಿಯು, ಬಾಣ, ಕಾಳಿದಾಸ ಮುಂತಾದ ಕವಿಗಳ ಕೃತಿಗಳನ್ನು ಓದಿ ರಚಿಸಿದವನಾಗಿದ್ದು, ಇತರೆ ಕನ್ನಡ ಕವಿಗಳಾದ ಪಂಪ, ನಾಗಚಂದ್ರ, ಜನ್ನ, ಹರಿಹರಗಳಾದಿ ಕವಿಗಳ ಕಾವ್ಯ ಶರಧಿಯಲ್ಲಿ ಓಲಾಡಿದವನಾಗಿ, ಸ್ವತಃ ವೀರಯೋಧನಾಗಿ ಕಾಳಗದ ಕಲೆ ಉಳ್ಳವನಾಗಿದ್ದ ಇವನು ಹುಟ್ಟು ಕವಿ. ಇವನ ಕುರಿತು, ಇವನ ಕಾವ್ಯ 'ಕುಮಾರರಾಮನ ಸಾಂಗತ್ಯದ' ಕುರಿತು ತಿಳಿದು ಅಭ್ಯಾಸಿಸಿ ಕಾವ್ಯದ ಸೊಗಸನ್ನು ಕಂಡು ಬೆರಗಾಗಿ ಈ ಕಾವ್ಯ ಪರಿಚಯವನ್ನು ಮಾಡಿಸುತ್ತಿದ್ದೇನೆಂಬ ಮಾತು ನಂಜುಂಡ ಕವಿಯ ಪ್ರಾಮುಖ್ಯತೆಯನ್ನು ಎತ್ತಿತೋರಿಸಿದ್ದಾಗಿದೆ.

ಡಿ.ಎಲ್.ಎನ್. ಕುಮಾರರಾಮನ ಸಾಂಗತ್ಯದ ಕಥೆಯನ್ನು ಆರಂಭದಲ್ಲಿ ಪ್ರಸ್ತಾಪಿಸುತ್ತಾ 'ಕಂಪಿಲರಾಜ್ಯ ಅಲ್ಲಿನ ರಾಣಿ ಹರಿಹರ ದೇವಿ, ಮಂತ್ರಿ ಬೈಚಪ್ಪನ ವಿಚಾರವಾಗಿ ಚರ್ಚಿಸುತ್ತಾ ಕಂಪಿಲನು ರತ್ನಾಜಿ ಎಂಬ ಸುಂದರಿಯನ್ನು ವಿವಾಹವಾದದ್ದು ಹರಿಹರದೇವಿಗೆ ಶಿವಪ್ರಸಾದವಾಗಿ ಕುಮಾರರಾಮ ಹುಟ್ಟಿದ್ದು ಇವನು ಬೆಳೆದು ಸಕಲ ವಿದ್ಯೆಯಲ್ಲಿ ಪಾರಂಗತನಾಗಿ ಹರೆಯದ ೧೬ನೇ ವಯಸ್ಸಿಗೆ ಕುಮಾರರಾಮ ಬರಲು ವೀರತ್ವ ಇವನಲ್ಲಿ ಉಮ್ಮಳಿಸಿ ಕಾಕತೀಯ, ಕಪಿಲೇಶ, ದೆಹಲಿ ಸುಲ್ತಾನರೊಡನೆ ಯುದ್ಧಮಾಡಿ ಗೆದ್ದ ವಿಚಾರಗಳನ್ನು'[೧೩] ಡಿ.ಎಲ್.ಎನ್. ಸರಳವಾಗಿ ಪ್ರಸ್ತಾಪಿಸಿದ್ದಾರೆ.

ಮುಂದೆ, ಚಿಕ್ಕಮ್ಮನಾದ ರತ್ನಾಜಿಯು ಇವನ ರೂಪ ಲಾವಣ್ಯಕ್ಕೆ ಮೋಹಗೊಂಡ ವಿಚಾರವನ್ನು, ಚೆಂಡಾಟದ ಸನ್ನಿವೇಶವನ್ನೂ ಪ್ರಸ್ತಾಪಿಸುತ್ತಾ ರತ್ನಾಜಿಯು ಮೋಹದ ಬಲೆಯಲ್ಲಿ ಬಿದ್ದು ಒದ್ದಾಡುತ್ತಿರುವುದನ್ನು ನಂಜುಂಡನ ಶೈಲಿಯಲ್ಲಿ ಒಳ ಹೊಕ್ಕು ತೋರಿದ ಪ್ರತಿಭೆ ಡಿ.ಎಲ್.ಎನ್. ಅವರದ್ದಾಗಿ ಈ ಲೇಖನದುದ್ದಕ್ಕೂ ರಸವತ್ತಾದ ಚರ್ಚೆಗಳು ಸರಳವಾಗಿ ಮೂಡಿಬಂದವಾಗಿವೆ. ಕಥೆಯ ಭಾವಾರ್ಥವನ್ನು ಸಂಪೂರ್ಣವಾಗಿ ನಿರೂಪಿಸಿದ ಡಿ.ಎಲ್.ಎನ್. ಈ ಕಾವ್ಯಕ್ಕೆ ಹೋಲಿಕೆಯಾಗಿ ರಾಮಾಯಣ, ಮಹಾಭಾರತದ ಕಥೆಗಳ ಹಂದರವಲ್ಲದೆ ಗ್ರೀಕ್ ಭಾಷೆಯ ಈಡಿಪಸ್, ಕಾಂಪ್ಲೆಕ್ಸ್ ಮಾದರಿಯನ್ನು ಹೋಲಿಸಿಕೊಂಡು ನೋಡಬಹುದು ಎಂದಿದ್ದಾರೆ. ಈ ಕಾವ್ಯದಲ್ಲಿ ಸ್ವಾತಂತ್ರ್ಯ, ಸಂಪ್ರದಾಯ ಎರಡೂ ಇದ್ದು ಎಲ್ಲಾ ಪ್ರಾಚೀನ ಕಾವ್ಯಗಳಲ್ಲಿನ ವಾಸ್ತವಿಕೆಯು ಇಲ್ಲಿಯೂ ಇದೆ ಎಂದು ನಿರೂಪಿಸಿದ್ದಾರೆ.

ಒಟ್ಟಾರೆಯಾಗಿ ಈ ಕೃತಿಯಲ್ಲಿ ಮುಖ್ಯವಾಗಿ ರಾಜಕೀಯ ಚರಿತ್ರೆ, ಮೋಹ ಪ್ರೇಮಗಳ ಕಥೆ, ಪುರಾಣದ ಛಾಯೆ ಇದ್ದು ದೇಶಪ್ರೇಮ, ಧರ್ಮಾನುರಕ್ತ ಸ್ವಾತಂತ್ರ್ಯ ಸಾಂಪ್ರದಾಯವೂ ಕಂಡುಬಂದು ಇದೊಂದು ಚಾರಿತ್ರಿಕ ಕಾವ್ಯವೆಂದರೂ ತಪ್ಪಾಗದ್ದಾಗಿದೆ. ಇಂತಹ ಕಾವ್ಯ ನೀಡಿದ ನಂಜುಂಡ ಕವಿಯು ನಿಜವಾಗಿಯೂ 'ಕವಿತಾ ಶಾರದ' ನೆನಿಸಿದ್ದಾನೆ.

**ದೇವಿಚಂದ್ರಗುಪ್ತ ನಾಟಕ**

೧೯೩೬ರಲ್ಲಿ ಮೊದಲ ಬಾರಿಗೆ ಪ್ರಬುದ್ಧ ಕರ್ನಾಟಕ ಸಂಪುಟ ೧೮, ಸಂಚಿಕೆ–೨ರಲ್ಲಿ ಪ್ರಕಟವಾದ ಈ ಲೇಖನ ಮುಂದೆ ಡಿ.ಎಲ್.ಎನ್ ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೨೪ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಯಾವುದೇ ನಾಟಕ ಕಥೆಗಾಗಲಿ ಯಾವುದೇ ಒಂದು ಕಥಾವಸ್ತು ಇರಲೇಬೇಕು. ಕವಿ ಈ ವಿಷಯವನ್ನು ಎಲ್ಲಿಂದಲಾದರೂ ತೆಗೆದುಕೊಳ್ಳಬಹುದು ಅಥವಾ ಸೃಜಿಸಿಕೊಂಡು ರೂಪಿಸಬಹುದು. ಪ್ರಸ್ತುತ ಡಾ.ವಿಂಟರ್ ನಿಟ್ಸ್ ಎಂಬ ವಿದ್ವಾಂಸರು ಈ ಬಗೆಯ ಐತಿಹಾಸಿಕ ನಾಟಕಗಳ ಕುರಿತು ``Historical dreems in Indian literatcal" ಎಂಬ ಒಂದು ಪ್ರಬಂಧವನ್ನು ಬರೆದಿದ್ದಾರೆ. ಅದರಲ್ಲಿ ಇವರು ದೇವಿಚಂದ್ರಗುಪ್ತ ಮತ್ತು ಕೌಮುದಿ ಮಹೋತ್ಸವ ವಿಷಯಗಳ ಬಗ್ಗೆ ತಿಳಿಸಿದ್ದಾರೆ. ಕೌಮುದಿ ಮಹೋತ್ಸವ ಮಲಯಾಳ ಪ್ರಾಂತ್ಯದಲ್ಲಿ ದೊರೆತು ಇಂದಿಗೂ ಅಭ್ಯಾಸಕ್ಕೆ ಯೋಗ್ಯವಾಗಿ ದೊರೆಯುವಂತಹದ್ದಾಗಿದೆ. ಆದರೆ ದೇವಿಚಂದ್ರಗುಪ್ತ ನಾಟಕದ ಕಥೆ ಎಲ್ಲಿಯೂ ಪೂರ್ತಿಯಾಗಿ ದೊರೆಯದಿದ್ದರಿಂದ ಪ್ರಾಚೀನ ಅಲಂಕಾರಿಕ ಗ್ರಂಥಗಳಲ್ಲಿ ಇದರಿಂದ ಎತ್ತಿಕೊಂಡಿರುವ ಭಾಗಗಳೂ, ಪದ್ಯಗಳು ಅನೇಕ ಇವೆ. ಸಂಸ್ಕೃತದ ಪ್ರಖ್ಯಾತ ಕವಿಯಾದ ವಿಶಾಖದತ್ತನೇ ದೇವಿಚಂದ್ರಗುಪ್ತವನ್ನು ಬರೆದಿದ್ದಾನೆ. ಈ ನಾಟಕ ಗುಪ್ತರ ಕಾಲದ ಅನೇಕ ಚರಿತ್ರೆಗಳನ್ನು ನಿರೂಪಿಸುವ ವಿಷಯವಸ್ತು ಹೊಂದಿದ್ದಾಗಿದೆ.

ಒಟ್ಟಾರೆ ಕಥಾಸಾರಾಂಶವಾಗಿ, ಸಮುದ್ರಗುಪ್ತನ ನಂತರ ರಾಮಗುಪ್ತನು ಸಿಂಹಾಸನವನ್ನು ಏರುತ್ತಾನೆ. ಇವನ ಹೆಂಡತಿ ರಾಣಿಧ್ರುವದೇವಿಯನ್ನು ಇವನ ತಮ್ಮ ಚಂದ್ರಗುಪ್ತ ಅವಳನ್ನು ಮೋಹಿಸಿ ಮದುವೆಯಾಗುವ ಪರಿ ಈ ಕಾವ್ಯದುದ್ದಕ್ಕೆ ಮೂಡಿಬಂದುದ್ದಾಗಿದೆ.

**ನಾಲ್ಕನೆಯ ಮಂಗರಸ**

೧೯೩೧ರಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಮೊದಲ ಬಾರಿಗೆ ಪ್ರಸ್ತಾಪಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಅವರು ಸಂಕಲಿಸಿ ಪೀಠಿಕೆಗಳು ಲೇಖನಗಳು ಕೃತಿಯ ೨೫ನೇ ಭಾಗವಾಗಿ ಪ್ರಕಟಗೊಂಡುದ್ದಾಗಿದೆ.

ನಾಲ್ಕನೆಯ ಮಂಗರಸನು ಕ್ರಿ.ಶ. ೧೭೪೯ರ ಕಾಲಘಟ್ಟದಲ್ಲಿದ್ದ ಇವನು 'ಮನ್ಮಥಮಣಿದರ್ಪಣ' ಎಂಬ ಕೃತಿಯನ್ನು ಬರೆದವನಾಗಿದ್ದಾನೆ. ಇವನ ನಿಜನಾಮ ರಾಯಣ್ಣ ಎಂದು ಇವನದು. ಸ್ಥಲವೇಣಿಪುರವೆಂದು ಅಭಿನವಮಂಗರಸ ಎಂಬುದು ಇವನ ಬಿರುದೆಂದು ಇವನ ಗುರು ಕೇಸರಿಪುರದ ಅಭಿನವ ಲಕ್ಷ್ಮೀಸೇನನೆಂದು ಪದ್ಯವೊಂದರ ಆಧಾರದಿಂದ ತಿಳಿದುಬಂದುದಾಗಿದೆ.

ಇವನು ತನ್ನ ಕೃತಿಯಲ್ಲಿ ರತ್ನತ್ರಯರನ್ನು ಮಾತ್ರ ಸ್ಮರಿಸಿದ್ದು ಸಾಂಗತ್ಯದಲ್ಲಿ ಹರಿವಂಶವನ್ನು ಬರೆದಿದ್ದಾನೆ. ಮೂರನೇ ಮಂಗರಸನ ತರುವಾಯ ಇವನು ಇದ್ದುದ್ದರಿಂದ ಇವನಿಗೆ ಅಭಿನವ ಮಂಗರಸ ಎಂದು ಹೆಸರಿಸಿದ್ದಾಗಿದೆ.

ಮನ್ಮಥಮಣಿದರ್ಪಣದ ಬಗ್ಗೆ ತಿಳಿಯುವುದಾದರೆ, ಇದು ಭಾಮಿನಿಷಟ್ಪದಿಯಲ್ಲಿ ರಚಿತವಾಗಿದ್ದು ಡಿ.ಎಲ್.ಎನ್. ಅವರಿಗೆ ದೊರೆತ ಪ್ರತಿ ಅಸಂಮೃದ್ಧವಾಗಿತ್ತೆಂದು ಅವರೇ ಹೇಳಿಕೊಂಡಿದ್ದಾರೆ.

'ಧರೆಯೊಳಗೆ ಸಂಚರಿಸುತಲಿ ಭಕ್ತರಿ
ಗೆರೆದು ಬೋದಾಮೃತವ ವಾದಿಗೆ
ಅರುಹಿ ದೃಷ್ಠಾಂತವನು ತೋರಿಸಿ ಪರಮ ಗುರುವೆನಿಸಿ
ತರಣಿ ಸಭದೊಳಗೆಂತು ನಿಮ್ಮುರು
ತರದ ಜಸವೆಂತಂತೆ ಕೇಸರಿ
ಪುರಿಯ ಅಭಿನವ ಲಕ್ಷ್ಮೀಸೇನ.'[೧೪] ಎಂಬ ಉಲ್ಲೇಖ ದೊರತದ್ದಾಗಿದೆ.

**ಚೌಂಡರಸನ ಕಾಲವಿಚಾರ**

೧೯೩೦ರಲ್ಲಿ ಜಯಕರ್ಣಾಟಕ ಪತ್ರಿಕೆಯ ಸಂಚಿಕೆ–೮, ಸಂಪುಟ–೧೧ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ ಲೇಖನ ಮುಂದೆ ಟಿ.ವಿ.ವೆಂಕಾಚಲಶಾಸ್ತ್ರಿ ಅವರು ಸಂಪಾದಿಸಿದ

ಪ್ರೊಫೆಸರ್ ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು (೨೦೦೮) ಎಂಬ ಕೃತಿಯ ಮೊದಲನೆ ಭಾಗದಲ್ಲಿ ಸಂಕಲಿತಗೊಂಡದ್ದಾಗಿದೆ.

ಈ ಕುರಿತು ಡಿ.ಎಲ್.ಎನ್. ಅವರು ಅಭಿನವ ದಶಕುಮಾರಚರಿತೆಯನ್ನು ಬರೆದಿರುವ ಚೌಂಡರಸನ ಕಾಲವಿಚಾರವಾಗಿ ಕವಿಚರಿತೆಕಾರರು, ಎ.ವೆಂಕಟಸುಬ್ಬಯ್ಯ ನವರ ನಿರ್ಣಯಗಳಿಗೆ ಮಣೆಹಾಕಿದ್ದಾರೆ ಎನಿಸಿದೆ.

ಈ ವಿಚಾರದ ವಿಸ್ತೃತ ಚರ್ಚೆಯಾಗಿ ಎನ್.ಎಂ. ವೃಷಬೇಂದ್ರಸ್ವಾಮಿ ಅವರು ಸಂಪಾದಿಸಿದ ಡಿ.ಎಲ್.ಎನ್. ಬೋಧಿಸಿದ ಕನ್ನಡ ಸಾಹಿತ್ಯ ಇತಿಹಾಸ ಕೃತಿಯಲ್ಲಿನ ವಿಚಾರದನ್ವಯ ಅಭಿನವದಶಕುಮಾರಚರಿತ್ರೆ, ನಳಚರಿತ್ರೆ ಈತನ ಕೃತಿಗಳಾಗಿದ್ದು, ಭಾರದ್ವಾಜ ಗೋತ್ರದವನಾಗಿದ್ದ ಇವನು ತಂದೆ ಮಧುಸೂದನ ತಾಯಿ ಮಲ್ಲವ್ವ ಹೆಂಡತಿ ಲಕ್ಷ್ಮೀ, ಇವನ ಅಣ್ಣ ಸರಸಕವೀಶ್ವರನಾಗಿದ್ದನೆಂದು ತಿಳಿದು ಬಂದಿದೆ. ಅಲ್ಲದೆ ಇವನು ಪಂಡರಾಪುರದ ನಿವಾಸಿ ಆಗಿದ್ದಿರಬಹುದೆಂದು ಊಹಿಸಿದ್ದಾರೆ.

ಇವನು ರುದ್ರಭಟ್ಟನನ್ನು ಹೊಗಳಿದ್ದರಿಂದ ೧೧೮೦ಕ್ಕೆ ಈಚೆ ಇದ್ದಿರಬೇಕೆಂದು ಹೇಳಬಹುದಾಗಿದೆ. ಆದರೆ ಇವನ ಕಾಲ ನಿರ್ಣಯಕ್ಕೆ ಯಾವುದೇ ಆಧಾರವಿಲ್ಲ ಸರಸಕವಿ ಕವಿರಾಜ ಎಂಬ ಬಿರುದುಗಳನ್ನು ಹೊಂದಿದ್ದ ಇವನು ಜೈನನಾಗಿದ್ದು ಪಂಪ, ರನ್ನರನ್ನು ಗೌರವದಿಂದ ಸ್ಮರಿಸಿದ್ದಾನೆ. ಇದರಿಂದ ಇವನು ೧೨-೧೩ನೇ ಶತಮಾನದಲ್ಲಿದ್ದಿರಬಹುದಾದ ಕವಿ ಎಂದು ಅಂದಾಜಿಸಲಾಗಿದೆ.

**ಕೆಲವು ಅಜ್ಞಾತ ಕವಿಗಳೂ ಕಾವ್ಯಗಳೂ; ಚನ್ನವೀರೇಶ್ವರ (ಕಾಲ ಸು.೧೫೦೦)**

೧೯೩೨ರಲ್ಲಿ ಮೊದಲ ಬಾರಿಗೆ ಜಯಕರ್ಣಾಟಕ ಪತ್ರಿಕೆಯಲ್ಲಿ ಪ್ರಕಟವಾದ ಈ ಲೇಖನ ಮುಂದೆ, ಟಿ.ವಿ.ವೆಂಕಟಾಚಲಶಾಸ್ತ್ರೀ ಅವರು ಸಂಪಾದಿಸಿದ ಪ್ರೊಫೆಸರ್ ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ಎರಡನೇ ಭಾಗದಲ್ಲಿ ಸಂಕಲಿತಗೊಂಡದ್ದಾಗಿದೆ.

'ಚನ್ನವೀರೇಶ್ವರ' ಇವನು ವೀರಶೈವ ಕವಿಯಾಗಿದ್ದು ಇವನ ಕಾಲ ಸು. ೧೫೦೦ ಇರಬಹುದೆಂದು ಡಿ.ಎಲ್.ಎನ್. ಪ್ರಸ್ತಾಪಿಸಿದ್ದಾರೆ. ಇವನು ಷಟ್ಸಲವಲ್ಲಭ ಎಂಬ ಗ್ರಂಥವನ್ನು ಬರೆದಿದ್ದಾನೆಂದು ತಿಳಿದು ಬಂದಿದ್ದು ಇದು ೧೯೮೦ರ ವೇಳೆಗೆ ವೀರಶೈವ ಅಧ್ಯಯನ ಸಂಸ್ಥೆ ತೋಂಟದ ಸಂಸ್ಥಾನಮಠ, ಡಂಬಳ ಗದಗದಿಂದ ಪ್ರಕಟವಾಗಿದೆ. ಈ ಕೃತಿಯ ಆದಿಯಲ್ಲಿ ಚನ್ನವೀರೇಶನು ಶ್ರೀ ಗುರುಮೂರ್ತಿ ಮಂತ್ರಮಯಮಹಾಗುರು ಮೂರ್ತಿಯಾದ ತೋಂಟದ ಸಿದ್ಧಲಿಂಗಯತಿಯನ್ನು ವಿಶೇಷವಾಗಿ ಸ್ತುತಿಸಿ ನಂತರದಲ್ಲಿ ಸಿದ್ಧಮಲ್ಲೇಶನನ್ನು ಕುರಿತು 'ಸಿದ್ಧಮಲ್ಲೇಶ ಗುರುವರನು ಮೆಂಬಾತನಂಘ್ರಿದ್ವಯಂ ಹೃದ್ರುಂದ್ರಾಂಭೋಜದಲ್ಲಿರ್ಕೆಯ ನವರತಂ' ಎಂದು ಹೇಳಿದ್ದರಿಂದ ಇವನ ಗುರು ಸಿದ್ಧಮಲ್ಲೇಶನೆಂದು ತೋರಿಬಂದಿದೆ.

ಇವನು ರಚಿಸಿದ 'ಷಟ್ಸ್ಥಲವಲ್ಲಭ' ಕೃತಿಯು ಇದೊಂದು ಚಂಪೂ ಗ್ರಂಥವಾಗಿ ಮೂಡಿ ಬಂದಿದ್ದು, ಅಸಮಗ್ರ ಪ್ರತಿಯಾಗಿದೆ. ಇದು ೮ ಆಶ್ವಾಸಗಳೂ ೯ ಭಾಗಗಳು ೧೧೧ ಪದ್ಯಗಳಿಂದ ಆವೃತವಾಗಿದ್ದಾಗಿದೆ. ಈ ಕೃತಿಯ ಮೊದಲ ಆರು ಆಶ್ವಾಸಗಳಲ್ಲಿ ಸಿದ್ಧಲಿಂಗಯತಿಯ ಚರಿತ್ರೆ ವರ್ಣಿಸಿದ್ದರೆ ಉಳಿದ ಭಾಗದಲ್ಲಿ ವೀರಶೈವ ಮತ ಪ್ರಕ್ರಿಯೆಗಳ ಬಗ್ಗೆ ಹೇಳಿದ್ದಾಗಿದೆ. ಇವನ ಪದ್ಯಬಂಧವು ಬಹಳ ಶಿಥಿಲವಾದದ್ದಾಗಿದ್ದು, ಬಹಳ ಕಡೆ ಛಂದೋದೋಷಗಳು, ಪ್ರಾಪ್ತದೋಷಗಳು ಇದ್ದು ಇವು ಪ್ರತಿಕಾರನ ದೋಷವಿರಬಹುದೆಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ.

**ಅಶ್ವಘೋಷನ ರಾಷ್ಟ್ರಪಾಲನಾಟಕ**

ಪ್ರಬುದ್ಧ ಕರ್ನಾಟಕ ಪತ್ರಿಕೆಯ ವಸ್ತುಕೋಶಭಾಗವಾಗಿ ಸಂಪುಟ-೨೧, ಸಂಚಿಕೆ-೨ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ ವಿಷಯದ ಪ್ರಸ್ತಾಪವು ಮುಂದೆ ಟಿ.ವಿ.ವೆಂಕಟಾಚಲ ಶಾಸ್ತ್ರಿಯವರು ಸಂಪಾದಿಸಿದ ಪ್ರೊಫೆಸರ್ ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ಮೂರನೆಯ ಭಾಗದಲ್ಲಿ ಸಂಕಲಿತಗೊಂಡದ್ದಾಗಿದೆ.

'ಅಶ್ವಘೋಷನು' ಸಂಸ್ಕೃತದ ಹೆಸರಾಂತ ಕವಿಗಳಲ್ಲೊಬ್ಬನಾಗಿದ್ದು ಇವನು 'ಸಾರಿಪುತ್ರ ಪ್ರಕರಣ,' 'ರಾಷ್ಟ್ರಪಾಲ' ಎಂಬ ಎರಡು ನಾಟಕಗಳನ್ನು ರಚಿಸಿದ್ದಾನೆಂದು, ಪ್ರೊ. ಸಿಲ್ವೆನ್ ಲೆವಿ ಅವರು ಚೀನಿಭಾಷೆಯಲ್ಲಿರುವ ತ್ರಿಪಿಟಕಾ ಗ್ರಂಥದಿಂದ ತಿಳಿದು ಹೇಳಿದ್ದನ್ನು ಡಿ.ಎಲ್.ಎನ್. ಉದಾಹರಿಸಿದ್ದು ಕಂಡುಬಂದಿದೆ.

ಕ್ರಿ.ಶ. ೬ನೇ ಶತಮಾನದಲ್ಲಿದ್ದ 'ಧರ್ಮಕೀರ್ತಿ' ಎಂಬಾತನು ತನ್ನ 'ವಾದನ್ಯಾಯ' ಗ್ರಂಥದಲ್ಲಿ ಅಶ್ವಘೋಷನ ಕುರಿತು ಉಲ್ಲೇಖಿಸಿದ್ದನ್ನು ಪ್ರೊ. ವಿಧುಶೇಖರ ಭಟ್ಟಾಚಾರ್ಯರು (ಎ ನಿವ್ ಡ್ರಾಮಾ ಆಫ್ ಅಶ್ವಘೋಷ) ಎಂಬ ತಮ್ಮ ಲೇಖನದಲ್ಲಿ (ದ ಜನರಲಂ ಆಫ್ ದಿ ಗ್ರೇಟ್ ಇಂಡಿಯಾ ಸೊಸೈಟಿ ವ್ಯಾಲ್ಯೂಂ ೧೫) ಉಲ್ಲೇಖಿಸಿದ್ದನ್ನು ಡಿ.ಎಲ್.ಎನ್. ಪ್ರಸ್ತಾಪಿಸಿ ಬಲವಾದ ಸಾಕ್ಷಿಯನ್ನು ಒದಗಿಸಿದ್ದಾರೆ.

ಮುಂದುವರೆದು, ಚೀನಿ ಭಾಷೆಯಲ್ಲಿರುವ ಮತ್ತೊಂದು ಗ್ರಂಥವಾದ ``Sardesai commeno rarion volume P-261-263, The Rastrapale nataka of Asvaghosa" ಡಾ. ಬಗಚಿ ಅವರು ಕಂಡುಹಿಡಿದ ವಿಷಯದನ್ವಯ ಮಧ್ಯ ಏಷ್ಯಾದಲ್ಲಿದ್ದ ``ki-kiaye" ಎಂಬ ಹೆಸರಿನ ಬೌದ್ಧ ಭಿಕ್ಷು ಕ್ರಿ.ಶ. ೪೭೨ರಲ್ಲೆ ಈ ಕರ್ನಾಟಕದ ಕುರಿತು ಪ್ರಸ್ತಾಪವನ್ನು ತನ್ನ ಧರ್ಮಪೀಠಿಕ ಕೃತಿಯಲ್ಲಿ ಮಾಡಿದ್ದಾನೆಂಬ ಉಲ್ಲೇಖ ಕಂಡುಬಂದಿದೆ.

ಈ ಪ್ರಸ್ತಾಪಕ್ಕೆ ಸಂಬಂಧಿಸಿದಂತೆ ರಾಷ್ಟ್ರಪಾಲ ಎಂಬ ರಾಜನ ಕಥೆಯೇ ಈ ನಾಟಕದ ವಸ್ತುವಾಗಿದ್ದು ತನ್ನ ಇಷ್ಟಕ್ಕೆ ವಿರೋಧಿಗಳಾಗಿದ್ದ ತಂದೆ ತಾಯಿಗಳನ್ನು ಕಷ್ಟದಿಂದ

ಒಪ್ಪಿಸಿ ಅವನು ಬೌದ್ಧನಾಗಿದ್ದು, ಕೆಲವು ಕಾಲದ ನಂತರ ಮರಳಿ ಊರಿಗೆ ಬಂದದ್ದು, ತನ್ನ ಸಂಬಂಧಿಕರನ್ನು ಬೌದ್ಧಧರ್ಮಕ್ಕೆ ಮತಾಂತರಿಸಲು ಮುಂದಾದಾಗ ತಂದೆ ತಾಯಿಗಳು ತಡೆದದ್ದು ಆ ಊರಿನ ರಾಜನೊಡನೆ ಸಂಭಾಷಣೆ, ಉಪದೇಶ ಮುಂತಾದ ವಿಷಯಗಳು ನಿರೂಪಿತಗೊಂಡದ್ದಾಗಿದೆ.

ಒಟ್ಟಾರೆಯಾಗಿ ಪಾಟಲಿಪುತ್ರದಲ್ಲಿದ್ದ ಅಶ್ವಘೋಷನು ಧರ್ಮಪ್ರಚಾರಕ್ಕಾಗಿ ಹಾಗೂ ಆ ರಾಜ್ಯದ ಜನರೆಲ್ಲರನ್ನು ಬೌದ್ಧಧರ್ಮಕ್ಕೆ ಸೇರಿಸಬೇಕೆಂಬ ಕಾರಣಕ್ಕಾಗಿ ಈ ರಾಷ್ಟ್ರಪಾಲನಾಟಕ ರಚಿಸಿದ್ದಾನೆಂದು ತಿಳಿದು ಬಂದಿದೆ.

**ಮಂಗರಾಜನ ಅಭಿನವಾಭಿದಾನಂ**

ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಪುಟ-೨೫, ಸಂಚಿಕೆ-೪ರಲ್ಲಿ ೧೯೫೪ರ ವೇಳೆಗೆ ಮೊದಲ ಬಾರಿಗೆ ಪ್ರಕಟವಾದ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರೀಯವರು ಸಂಕಲಿಸಿದ ಪ್ರೊಫೆಸರ್ ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೬ನೇ ಭಾಗವಾಗಿ ಮಾಡಿದ್ದಾಗಿದೆ.

ಎಂ.ಮರಿಯಪ್ಪಭಟ್ಟರವರು ಮದ್ರಾಸಿನ ವಿಶ್ವವಿದ್ಯಾಲಯದಿಂದ ಮೊದಲಬಾರಿಗೆ ಸಂಪಾದಿಸಿ ಪ್ರಕಟಿಸಿದ್ಧ ಕನ್ನಡ ಗ್ರಂಥಮಾಲೆಯ ೧೦ನೇ ಗ್ರಂಥವಾಗಿ ಮೂಡಿಬಂದ ಈ 'ಮಂಗರಾಜನ ಅಭಿನವಾಭಿಧಾನಂ' ಎಂಬ ಹಳಗನ್ನಡದ ವ್ಯಾಕರಣ ಕೃತಿ ವಿಚಾರವಾಗಿ ಡಿ.ಎಲ್.ಎನ್. ಪ್ರಸ್ತಾಪಿಸಿದ್ದು ಈ ಲೇಖನದ ಪ್ರಮುಖ ಉದ್ದೇಶವೆನಿಸಿದೆ.

ಎಂ.ಮರಿಯಪ್ಪಭಟ್ಟ ಅವರು ಈ ಗ್ರಂಥವನ್ನು ಮೂರು ತಾಳೆಪ್ರತಿಗಳ ಸಹಾಯದಿಂದ ಪರಿಷ್ಕರಣೆ ಮಾಡಿ ಮುನ್ನುಡಿಯಿಂದಲೂ ಗ್ರಂಥಸ್ಥವಾದ ವರ್ಣಾನುಕ್ರಣಿಕೆಯಲ್ಲಿ ಕ್ರಮವಾಗಿ ವಿಚಾರವನ್ನು ಪ್ರಸ್ತಾಪಿಸಿರುವುದು ತುಂಬಾ ಸ್ತೋತ್ರಾರ್ಹವೆಂದು ಡಿ.ಎಲ್.ಎನ್. ಪ್ರಸ್ತಾಪಿಸಿದ್ದಾರೆ. ಕನ್ನಡ ಕಾವ್ಯಗಳಲ್ಲಿ ಸಾಮಾನ್ಯವಾಗಿ ಪ್ರಯೋಗವಾಗುವ ಸಂಸ್ಕೃತ ಶಬ್ದಗಳ ಅರ್ಥವನ್ನು ತಿಳಿಸಲು ಹೊರಟಿರುವ ಗ್ರಂಥಗಳಲ್ಲಿ ನಾಗವರ್ಮನಿಂದ ರಚಿತವಾದವನ್ನು ಬಿಟ್ಟರೆ ಮಂಗರಾಜನ ಈ ನಿಘಂಟು ಪ್ರಧಾನವಾದದ್ದೆಂಬ ಅಂಶವನ್ನು ನಿರೂಪಿಸಿದ್ದಾರೆ ಹಾಗೂ ಈ ಗ್ರಂಥ ರಚನೆಯಲ್ಲಿ ಹಲಾಯುಧನ 'ಅಭಿಧಾನರತ್ನಮಾಲೆ'ಯನ್ನು ಕವಿ ಆಶ್ರಯಿಸಿರುವುನೆಂದು ಸಂಪಾದಕರು ತೋರಿಸಿದ್ದನ್ನು, ಎತ್ತಿಹೇಳಿ ಈ ನಿಘಂಟಿನ ವಿಶಿಷ್ಟ ಅಂಶಗಳಾಗಿ ಅಲ್ಲಿ ಮೂಡಿಬಂದ ಅರಬ್ಬ, ಪಾರ್ಸಿ, ಭಾಷೆ ಪದಗಳ ಉಲ್ಲೇಖದ ಜೊತೆಗೆ ಗ್ರಂಥಕರ್ತನ ವಿಚಾರವಾಗಿ ಚರ್ಚಿಸಿದ್ದಾಗಿದೆ.

**ಪಂಪ**

ದಿನಾಂಕ ೫.೬.೧೯೪೮ ರಲ್ಲಿ ಬೆಂಗಳೂರಿನಲ್ಲಿ ನಡೆದ ವಸಂತೋತ್ಸವ ಕಾರ್ಯಕ್ರಮದಲ್ಲಿ ಡಿ.ಎಲ್.ಎನ್. ಮಾಡಿದ ಭಾಷಣದ ಪ್ರತಿ ಇದಾಗಿದ್ದು ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ

ಅವರು ಸಂಕಲಿಸಿದ ಪ್ರೊಫೆಸರ್ ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ಭಾಷಣಗಳು ಭಾಗದ ೧ನೇ ವಿಷಯವಾಗಿ ಪ್ರಸ್ತಾಪಗೊಂಡದ್ದಾಗಿದೆ.

ಪಂಪನು ಕನ್ನಡ ಸಾಹಿತ್ಯದ ಅಗ್ರಗಣ್ಯ ಕವಿಗಳಲ್ಲಿ ಒಬ್ಬನಾಗಿದ್ದು ಇವನ ಕೃತಿಗಳಾದ ಆದಿಪುರಾಣ ವಿಕ್ರಮಾರ್ಜುನ ವಿಜಯ ಕಾಲಕಾಲಕ್ಕೂ ಸುಪ್ರಸಿದ್ಧವಾದ ಕಾವ್ಯಗಳೆನಿಸಿವೆ. ಇವನು ಚಂಪೂ ಸಾಂಪ್ರದಾಯದಲ್ಲಿ ಅಪೂರ್ವತ್ವವನ್ನೂ ಸಾಧಿಸಿದ ಕವಿಯಾಗಿದ್ದು ಇವನಿಂದೀಚೆಗಿನ ಕವಿಗಳ ಹತ್ತಾರು ವಿಷಯಗಳನ್ನು ಇವನ ಕಾವ್ಯಗಳಿಂದ ಎರವಲಾಗಿ ಪಡೆದದ್ದು ಕಂಡುಬಂದಿದೆ.

ಪಂಪನು ತನ್ನ ಕಾವ್ಯಕ್ಕೆ ಜೀವ ಯಾವುದು? ರೀತಿ ಯಾವುದು? ಎಂಬುದನ್ನು ಒಂದೆಡೆ ಹೇಳುತ್ತಾ, 'ಉತ್ತಮ ಕಾವ್ಯಕ್ಕೆ ವಿಚಾರ ಹೊಸತಾಗಿರಬೇಕು, ಆ ಹೊಸವಿಚಾರಕ್ಕೆ ಮೃದುಬಂಧವಿರಬೇಕು, ಈ ಮೃದುಬಂಧಕ್ಕೆ ದೇಶಿಮಾರ್ಗಗಳು ಕೂಡಿದರೆ ಕಾವ್ಯ ಬಂಧವು ಒಪ್ಪುವುದು' ಎಂಬ ಉಲ್ಲೇಖಿತ ಮಾತ್ರ ನೂರಕ್ಕೆ ನೂರರಷ್ಟು ಸತ್ಯವೆಂದು ಇವನ ಸಾಹಿತ್ಯದಿಂದಲೇ ತಿಳಿಯಬಹುದಾಗಿದೆ.

ಒಟ್ಟಾರೆಯಾಗಿ ಪಂಪನು ಪಾರಲೌಕಿಕ ಜೀವನದ ವಿವಿಧ ರೂಪಗಳನ್ನು ಆದಿಪುರಾಣದಲ್ಲಿಯೂ ಲೌಕಿಕ ಜೀವನದ ರೂಪಗಳನ್ನು ವಿಕ್ರಮಾರ್ಜುನ ವಿಜಯದಲ್ಲಿಯೂ ರೂಪಿಸಿದ್ದಾನೆ. ಹಾಗೆಯೇ ಇವನ ಕಾವ್ಯಮಾರ್ಗವೂ ಕ್ಲಿಷ್ಟವಾಗಿದ್ದು ಅದನ್ನು ಅರಗಿಸಿಕೊಂಡರೆ ಸುಖವೂ, ಲಾಲಿತ್ಯವೂ, ಮಧುರವೂ ಸಿಗುವುದೆಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದು ಅತಿ ಮುಖ್ಯವೆನಿಸುತ್ತದೆ.

ಒಟ್ಟಾರೆಯಾಗಿ, ಪಂಪನ ಕಾವ್ಯಗಳಲ್ಲಿನ ಹತ್ತಾರು ಉದಾಹರಣೆಗಳನ್ನು ತಿಳಿಸುವ ಮೂಲಕ ಡಿ.ಎಲ್.ಎನ್. ಲೇಖನ ನಿರೂಪಿಸಿದ್ದು ಪಂಪನಲ್ಲಿದ್ದ ಕೌಶಲ್ಯವನ್ನು ಎತ್ತಿ ತೋರಿದಂತೆ ಮೂಡಿಬಂದಿದೆ.

**ಹರಿಹರ ಕವಿ ಮತ್ತು ಅವನ ಕೆಲವು ರಗಳೆಗಳು**

೧೯೬೮ರಲ್ಲಿ ಫ.ಗು.ಹಳಕಟ್ಟಿ ಸ್ಮಾರಕ ಸಂಪುಟ (ಬಿ.ಎಸ್.ಗಣಾಚಾರಿ ಮತ್ತು ಸಂಗಮನಾಥ ಜಿ.ಹಂಡಿ)ದಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿ ಸಂಕಲಿಸಿದ ಪ್ರೊಫೆಸರ್ ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ಆರನೆಯ ಲೇಖನವಾಗಿ ಪ್ರಸ್ತಾಪಗೊಂಡದ್ದಾಗಿದೆ.

ಮುಖ್ಯವಾಗಿ ಈ ಲೇಖನದಲ್ಲಿ ಡಿ.ಎಲ್.ಎನ್. ಅವರು ಹರಿಹರನನ್ನು ಎರಡು ದೃಷ್ಟಿಯಿಂದ ನೋಡಿದ್ದು ಪ್ರಮುಖವೆನಿಸಿದೆ. ಒಂದು ಹರಿಹರ ಒಬ್ಬ ಕವಿಯಾಗಿ ತನ್ನ

ಕಾವ್ಯದುದ್ದಕ್ಕೂ ಶಿವಶರಣರ ಸಂಕೀರ್ತನಕ್ಕೆ ಮೀಸಲು ಮಾಡಿಕೊಂಡದ್ದು ಎರಡನೆಯದಾಗಿ ಅವನು ಲೌಕಿಕವನ್ನು ಸಂಪೂರ್ಣವಾಗಿ ಉದಾಸೀನ ಮಾಡಿ ತನ್ನ ಕಾವ್ಯ ಶಕ್ತಿಯಿಂದ ಮೋಕ್ಷಕ್ಕೆ ಏಣಿ ಮಾಡಿಕೊಂಡಿದ್ದು. ಈ ಎರಡೂ ಕ್ರಮಗಳಿಂದ ಹರಿಹರನು ತಾನು ಬರೆದ ಕಾವ್ಯವೆಲ್ಲವನ್ನು ಕಾವ್ಯರಚನೆಗಾಗಿ ಸೀಮಿತವಾಗಿರಿಸದೆ ಶಾಶ್ವತವಾದ ಆನಂದಕ್ಕೆ ರೂಪಿಸಿಕೊಂಡವನಾಗಿದ್ದನೆಂದು ತಿಳಿದುಬಂದಿದೆ.

ಹರಿಹರನ ಕಾವ್ಯಗಳಲ್ಲಿ ಸ್ವಾಮಿಭಕ್ತಿ, ಭಾವ, ಸತಿಪತಿ ವಿಚಾರ, ಕಳ್ಳ-ಕಟುಕ, ಕಾಮುಕತೆ ಎಲ್ಲವೂ ಕಂಡುಬಂದಿವೆ! ಅವರು ತಮ್ಮ ತಮ್ಮ ಭಕ್ತಿಮೂಲ ಕ್ರಿಯೆಗಳಿಂದ ಮೋಕ್ಷಕ್ಕೆ ಹವಣಿಸಿದ್ದಾರೆ. ಹರಿಹರನದು ಭಕ್ತಿ ಪ್ರಪಂಚದ ದೃಷ್ಟಿ ಸರ್ವವ್ಯಾಪ್ತಿತನದ್ದಾಗಿ ಮೂಡಿಬಂದಿದೆ.

ಹರಿಹರನು ಆವೇಶಪೂರ್ಣವಾದ ಕವಿಯಾಗಿದ್ದು ಅವನ ಕಥಾವಸ್ತುವಿನಲ್ಲಿ ಭಕ್ತಿ, ಧರ್ಮದ ರೂಪುಗಳಿಂದ ಆವೇಶ ತುಂಬಿ ಉಕ್ಕಿ ಹರಿದಿದೆ, ಇದಕ್ಕೆ ಪೂರಕವಾಗಿ ಇವನು ಪುಷ್ಪರಗಳೆಯನ್ನು ಪರಿಶುದ್ಧವಾದ ಭಾವಗೀತೆಯಾಗಿ ಮಾಡಿದ್ದು ಇದು ಇವನ ಸಾತ್ವಿಕ ಜೀವನದ ಅನುಭವವನ್ನು ಇಲ್ಲಿ ಕಾವ್ಯವನ್ನಾಗಿಸಿದೆ, ಇದೇ ರೀತಿ ಲಿಂಗಾರ್ಚನೆ ರಗಳೆ ಇಲ್ಲಿಯೂ ಭಕ್ತಿಸುಖಕ್ಕಿಂತ ಇತರ ಸುಖವೆಲ್ಲಿ ಎಂಬುದನ್ನು ಎತ್ತಿತೋರಿಸಿದ್ದಾಗಿದೆ. ಇನ್ನೂ ಇವನ ಪುರಾತನ ರಗಳೆಗಳ ವಿಷಯಕ್ಕೆ ತಲೆಹಾಕಿದರಂತೂ, ಅವುಗಳ ಪೂರ್ವಪರ ವಿಚಾರ, ತುಲನಾತ್ಮಕ ವಿಮರ್ಶೆಗಳಿಂದ ಪರಿಗ್ರಹಿಸಿ ನೋಡಿದರೆ, ಅವುಗಳಲ್ಲಿ ಮೂಡಿದ ಪ್ರತಿಮೆಗಳ ಸೌಂದರ್ಯದ ಗುಟ್ಟೇನು? ಎಂಬುದು ತಿಳಿದುಬರುವುದಾಗಿದೆ.

ಡಿ.ಎಲ್.ಎನ್. ಅವರು ಅಭಿಪ್ರಾಯಿಸಿದಂತೆ 'ಹರಿಹರನು ತಮಿಳಿನ ಪೆರಿಯಪುರಾಣ (ಶೆಕ್ಕಿಳಾರ್ ಎಂಬ ಕವಿ ಕ್ರಿ.ಶ. ೧೧ನೇ ಶತಮಾನ) ಮತ್ತು ಸ್ಕಂದ ಪುರಾಣದಿಂದ ಈ ಶಿವಶರಣರ ರೂಪುಗಳನ್ನು ಮಾರ್ಪಡಿಸಿ ಬರೆದಿರಬಹುದೆಂದು ಅಭಿಪ್ರಾಯಿಸಿದ್ದಾರೆ.'[೧೬] ಅಲ್ಲದೆ ಪೆರಿಯಾಪುರಾಣದಲ್ಲಿನ ಕಥೆಗಳನ್ನು ಹೇಗೆ ಮಾರ್ಪಡಿಸಿ ಶಿವಶರಣರ ರೂಪುಗಳಿಗೆ ಬಣ್ಣ ಹಚ್ಚಿದ್ದಾನೆ ಎಂಬುದಕ್ಕೆ ಡಿ.ಎಲ್.ಎನ್. ತಿರುನೀಲಕಂಠರ ಕಥೆ, ಇಳೆಯಾಂಡ ಗುಂಡಿಮಾರರ ರಗಳೆ, ಅನಾಯನಾರ ರಗಳೆ, ಕಣ್ಣಪ್ಪನ ರಗಳೆ, ಮುಂತಾದ ಕಥೆಗಳ ಸಂಕ್ಷಿಪ್ತ ವಿವರಣೆಗಳಿಂದ ಹರಿಹರನ ಕಥೆಗಳಿಗೆ ಮೂಲ ಪೆರಿಯಪುರಾಣವೆಂದು ಖಂಡಿತವಾಗಿ ನಿರೂಪಿಸಿದ್ದು ಲೇಖನದುದ್ದಕ್ಕೂ ಕಂಡುಬಂದಿದೆ.

ಮುಂದುವರೆದು ಡಿ.ಎಲ್.ಎನ್. ಮಾದರ ಚೆನ್ನಯ್ಯನ ರಗಳೆ, ಮಲಹಣನ ರಗಳೆಗಳ ಬಗ್ಗೆ ಹೇಳಿ 'ಅಂತರ ಜ್ಯೋತಿಯಿಂದ ನಿಗಿನಿಗಿ ಹೊಳೆಯುವ ಸ್ಫಟಿಕದ ಹರಳಿನಂತೆ ಈ ವಿಚಾರಗಳು'[೧೭] ಎಂದಿದ್ದಾರೆ.

ಇವನ ಸುದೀರ್ಘ ರಗಳೆಗಳಾದ ನಂಬಿಯಣ್ಣನ ರಗಳೆ, ಬಸವರಾಜದೇವರ ರಗಳೆಗಳು ಉತ್ತಮವಾಗಿ ಮೂಡಿಬಂದಿದ್ದಾಗಿವೆ ಅಲ್ಲದೆ ಇವನು ಬಳಸಿದ ಕಾವ್ಯಗಳಲ್ಲಿನ ಭಾಷೆ, ಛಂದಸ್ಸು ಅತ್ಯುತ್ತಮ ಸ್ಥಾನವನ್ನಲಂಕರಿಸಿದ್ದಾಗಿವೆ. ಇಷ್ಟೇ ಅಲ್ಲದೇ, ಸಾಮಾನ್ಯ ಭಾಷೆಯನ್ನೇ ಬಳಸಿ ಮೂರ್ತಿ ನೀಡುವ ಶಕ್ತಿವಂತ ಕವಿ ಇವನಾಗಿದ್ದನೆಂದರೆ ತಪ್ಪಾಗದ್ದಾಗಿದೆ.

ಇವನು ಮಹಾಕವಿಯಾಗಿ ಒಂದು ಹೊಸ ಮಾರ್ಗದರ್ಶನಕ್ಕೆ ನಾಂದಿಹಾಡಿದ್ದು ಇವನ ಸ್ವತಂತ್ರ ವ್ಯಕ್ತಿತ್ವಕ್ಕೆ ಆರೋಹಣವಾಗಿದೆ. ಮುಂದೆ ಬಂದ ಚಂಪೂಕವಿಗಳು, ಷಟ್ಪದಿ ಕವಿಗಳು ಇವನನ್ನು ಅನುಸರಿಸಿದ್ದು ಕಂಡುಬಂದಿದೆ. ಒಟ್ಟಾರೆಯಾಗಿ ಭಕ್ತಿಪ್ರಪಂಚದ ಆವಿಷ್ಕಾರವು ಕಾವ್ಯದಲ್ಲಿ ಹೇಗಿರಬೇಕು ಎಂಬುದನ್ನು ಕನ್ನಡ ಸಾಹಿತ್ಯದಲ್ಲಿ ತೋರಿಸಿಕೊಟ್ಟ ಹರಿಹರನು ನಿಜವಾಗಿಯೂ ಮಹಾಕವಿ ಎನಿಸಿದ್ದಾನೆ.

**ಕವಿ ಕುವೆಂಪು**

ಕುವೆಂಪು ರವರ ವಿಚಾರವಾಗಿ ಡಿ.ಎಲ್.ಎನ್. ಪ್ರಬುದ್ಧ ಕರ್ಣಾಟಕದ ವಸ್ತುಕೋಶದಲ್ಲಿ ಮೊದಲ ಬಾರಿಗೆ ಸಂಚಿಕೆ–೪, ಸಂಪುಟ–೪೨ರಲ್ಲಿ ದಾಖಲಿಸಿದ್ದು ಕಂಡುಬಂದಿದೆ. ಈ ವಿಚಾರವನ್ನು ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಎತ್ತಿಕೊಂಡು ಪ್ರೊ.ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಎಂಬ ಸಂಪಾದಿತ ಸಂಕಲನದ ೫ನೇ ಭಾಗದಲ್ಲಿ ಗುರುತಿಸಿದ್ದು ಕಂಡು ಬಂದಿದೆ.

ಈ ಲೇಖನದುದ್ದಕ್ಕೂ ಡಿ.ಎಲ್.ಎನ್. ತಮಗೂ ಕುವೆಂಪುರವರಿಗೂ ಪರಿಚಯವಾದ ಸಂದರ್ಭಗಳನ್ನು, ಕುವೆಂಪುರವರ ಪ್ರತಿಭಾ ಪೂರ್ಣ ಬರವಣಿಗೆ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ಶಬ್ದಮಣಿದರ್ಪಣ ಕಲಿಯುವ ಆಸಕ್ತಿಯಿಂದ ಕುವೆಂಪುರವರು ಡಿ.ಎಲ್.ಎನ್. ಅವರ ಪಾಂಡಿತ್ಯ ಪುರ್ಣಸ್ನೇಹ ಬೆಳೆಸಿದ ವಿಚಾರ ತಿಳಿಸಿದ್ದಾರೆ. ಅಲ್ಲದೆ ಪುಟ್ಟಪ್ಪನವರ ಕಾವ್ಯದಲ್ಲಿನ ಲಾಲಿತ್ಯ, ಭವ್ಯತೆ, ಪ್ರಕೃತಿ ವರ್ಣನೆಗಳಷ್ಟೇ ಅಲ್ಲದೆ ಅವರ ಕಾವ್ಯಗಳಲ್ಲಿನ ಅಮಾನುಷ ಅನುಭವದ ನಿರೂಪಣೆ ಮಾಡಿದ್ದಾರೆ ಎಂಬ ಅಭಿಪ್ರಾಯ ವ್ಯಕ್ತಿಪಡಿಸಿ ಅವರಲ್ಲಿನ ರಸದೃಷ್ಟಿ ಸ್ಪೂರ್ತಿ ಎಲ್ಲ ಸಹೃದಯರಿಗೂ ಇರಲಿ ಎಂದು ಡಿ.ಎಲ್.ಎನ್. ತಮ್ಮ ಲೇಖನದುದ್ದಕ್ಕೂ ಬಿತ್ತರಿಸಿದ್ದು ಕಂಡುಬಂದಿದೆ.

**ಲಕ್ಷ್ಮೀಶನ ಕಾಲ**

೧೯೩೪ರಲ್ಲಿ ಪ್ರಬುದ್ಧ ಕರ್ಣಾಟಕ ಪತ್ರಿಕೆ ಸಂಪುಟ–೧೫ ಸಂಚಿಕೆ–೩ರಲ್ಲಿ ಮೊದಲ ಬಾರಿಗೆ ಪ್ರಕಟವಾದ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯಲ್ಲಿ ೭೫ನೇ ಭಾಗವಾಗಿ ವಿಸ್ತೃತಗೊಂಡದ್ದಾಗಿದೆ.

ಕರ್ಣಾಟಕ ಸಂಘ ಚಿಕ್ಕಮಂಗಳೂರು ಅವರು ಪ್ರಕಟಿಸಿದ್ದ ಕವಿ ಲಕ್ಷ್ಮೀಶ ಎಂಬ ಕೃತಿಯಲ್ಲಿ ಎಂ.ಆರ್. ಶ್ರೀನಿವಾಸಮೂರ್ತಿ ಅವರು ಅದರಲ್ಲಿನ ವಿಷಯ ಕುರಿತು ಪ್ರಸ್ತಾಪಿಸಿದ್ದನ್ನು ಪತ್ರವ್ಯವಹಾರದ ಮೂಲಕ ಡಿ.ಎಲ್.ಎನ್. ಎಂ.ಆರ್.ಶ್ರೀ ಅವರಿಗೆ ಅಭಿವ್ಯಕ್ತಿಸಿದ ವಿಚಾರಗಳೇ ಈ ಲೇಖನದುದ್ದಕ್ಕೂ ಮೂಡಿಬಂದವಾಗಿವೆ. ಅಲ್ಲದೆ ಎಂ.ಆರ್. ಶ್ರೀನಿವಾಸಮೂರ್ತಿ ಅವರು ಈ ಲೇಖನಕ್ಕೆ ಸಂಬಂಧಿಸಿದ ಪ್ರಮುಖ ಮೂರು ಪ್ರಶ್ನೆಗಳನ್ನು ಎತ್ತಿ ಪತ್ರ ಬರೆದದ್ದು ಅದರಲ್ಲಿನ ಸಂದೇಹಗಳಿಗೆ ಡಿ.ಎಲ್.ಎನ್. ವಿನಯಪೂರ್ವಕವಾಗಿ ಉತ್ತರಿಸಿದ್ದು ಕಂಡುಬಂದಿದೆ.

ಮೊದಲನೆಯದಾಗಿ, ಕವಿಕಾಲ ನಿರ್ಣಯಕ್ಕೆ ಉದಾಹರಿಸಿರುವ ಪದ್ಯದಲ್ಲಿ ಚಾತುರಾಸ್ಯ ರುದ್ರಲಕ್ಷ್ಮೀ ಪತಿ ಅನಂತ ಇವರ ಹೆಸರುಗಳಿವೆ, ಆದರೆ ಇಲ್ಲಿ ಹೇಳಿರುವ ಕವಿಗಳಾರು ಎಂದು? ಪ್ರಶ್ನಿಸಿದ್ದಕ್ಕೆ ಡಿ.ಎಲ್.ಎನ್. ಇಲ್ಲಿನ ಕವಿಗಳಾರಾರು ಎಂದು ನಿರ್ದಿಷ್ಟವಾಗಿ ಹೇಳುವುದಾಗುವುದಿಲ್ಲವೆಂದು ಚತುರಾಸ್ಯನು ಚತುರಾಸ್ಯ ನಿಘಂಟುವಿನ ಕರ್ತನಾಗಿರಬಹುದು. ಅಲ್ಲದೆ ಇವನು ವೀರಶೈವನಾಗಿರುವುದಕ್ಕೆ ಕಾರಣಗಳು ಇಲ್ಲದುವುದಾಗಿವೆ. ಆದರೆ ರುದ್ರಪನು (ರುದ್ರಭಟ್ಟನು) ವೀರಶೈವನೆಂಬುದಕ್ಕೆ ಕಾರಣಗಳಿವೆ ಅಲ್ಲದೆ ಬ್ರಾಹ್ಮಣ ಕವಿಯಾದ ಗೋವಿಂದನು ವೀರಶೈವ ಕವಿಗಳನ್ನು ಸ್ತುತಿಸಿದ್ದು ಅಸಂಭವವಾದ ಅಂಶ. ಎರಡನೆಯದಾಗಿ ಅನಂತನೆಂಬ ಮಹಾಕವಿ ಬರೆದಿರುವ ಒಂದು ಕಾವ್ಯವಾದರು ಒಂದು ಶಾಸನವಾದರೂ ಉಪಲಬ್ಧತೆ ಇಲ್ಲದಿರುವಷ್ಟು ದುರದುಷ್ಟವೇ ಕನ್ನಡ ನಾಡಿನದು? ಎಂಬುದಕ್ಕೆ ಉತ್ತರವಾಗಿ ಡಿ.ಎಲ್.ಎನ್. ಕನ್ನಡ ಸಾಹಿತ್ಯದಲ್ಲಿ ಶಾಸನ ಕವಿತೆ ೧೪ನೇ ಶತಮಾನಕ್ಕೆ ನಿಂತು ಹೋದುದ್ದೆ ಇದಕ್ಕೆ ಕಾರಣವಾಗಿರಬಹುದೆಂದು ಅಭಿಪ್ರಾಯಿಸಿದ್ದಾರೆ. ಮೂರನೆಯ ಅಂಶವಾಗಿ, ಲಕ್ಷ್ಮೀಪತಿಯು ಜೈಮಿನಿಯ ಕರ್ತೃವಲ್ಲದೆ 'ಪಶ್ಚಿಮ ರಂಗಧಾಮಸ್ತುತಿ'ಯನ್ನು ಬರೆದ ಲಕ್ಷ್ಮೀಶನೋ ಏನೂ? ಎಂಬ ಅಭಿಪ್ರಾಯಕ್ಕೆ, ಗೋವಿಂದ ಕವಿ ಹೆಜ್ಜೆಗೂ ಲಕ್ಷ್ಮೀಶನ ಪದಪುಂಜವನ್ನು ಅವನ ಶೈಲಿಯನ್ನು ಅನುಸರಿಸಿದ್ದರಿಂದ ಲಕ್ಷ್ಮೀಶನು ಪ್ರಮುಖವಾಗಿ ಕಂಡು ಬರುವವನಾಗಿದ್ದಾನೆ.

ಒಟ್ಟಾರೆಯಾಗಿ ಲಕ್ಷ್ಮೀಶ ಸ್ತುತಿಸಿರುವ ಚತುರಸ್ಯ ರುದ್ರ ಇತ್ಯಾದಿಗಳವರು ಯಾರೇ ಇರಲಿ ಅದು ಮುಖ್ಯವಲ್ಲ ಲಕ್ಷ್ಮೀಶ (ಲಕ್ಷ್ಮೀಪತಿ)ನು ಜೈಮಿನಿ ಭಾರತವನ್ನು ಬರೆದ ಪ್ರಮುಖ ಕವಿ ಎಂದು ನಿರ್ಧರಿಸಿದ್ದ ಡಿ.ಎಲ್.ಎನ್. ಇವನ ಕಾಲ ೧೬೦೦ಕ್ಕೂ ಹಿಂದೆ ಇದ್ದಿರಬೇಕೆಂದು ಅಭಿಪ್ರಾಯಿಸಿದ್ದು ಕಂಡುಬಂದಿದೆ.

**ಅಭಿನವ ಪಂಪ**

೧೯೫೨ರಲ್ಲಿ ಪ್ರಬುದ್ಧ ಕರ್ಣಾಟಕ ಸಂಚಿಕೆ-೩, ಸಂಪುಟ ೧೬ರಲ್ಲಿ ಪ್ರಕಟಗೊಂಡ ಈ ಲೇಖನ ಮೊದಲಿಗೆ ನಾಗಚಂದ್ರನ ಕಾಲನಿರ್ಣಯ ಮತ್ತು ಕಾವ್ಯವಿಮರ್ಶೆ ವಿಚಾರವಾಗಿ

ಕರ್ಣಾಟಕದ ಸಂಘ, ಕರ್ನಾಟಕ ಕಾಲೇಜು, ಧಾರವಾಡದವರು ಪ್ರಕಟಿಸಿದ ಅಭಿನವ ಪಂಪ ಎಂಬ ಕೃತಿಗೆ ಬರೆದ ಲೇಖನದ ಪ್ರತಿಯಾಗಿದೆ. ನಂತರದಲ್ಲಿ ಡಿ.ಎಲ್.ಎನ್. ಅವರು ತಾವು ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೭೬ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಈ ಲೇಖನದಲ್ಲಿ ಡಿ.ಎಲ್.ಎನ್. ಅವರು ಅಭಿನವ ಪಂಪ ನೆನಿಸಿದ ನಾಗಚಂದ್ರನ ಕಾಲನಿರ್ಣಯ ವಿಚಾರ ಕುರಿತು, ಅವನ ಮೂಲ ಪ್ರದೇಶದ ಕುರಿತು ಬೇಂದ್ರೆ ಅವರು ಪಂಡಿತ ಪೂಜಾರ ಅವರು ನಡೆಸಿದ ಚರ್ಚೆಯನ್ನು ಎತ್ತಿಕೊಂಡು ನಾಗಚಂದ್ರನ ಕಾವ್ಯದ ವಸ್ತು, ಪಾತ್ರ ರಚನೆ, ವರ್ಣನೆ, ಉದಾತ್ತತೆ ಮುಂತಾದವನ್ನೂ ಹಿಂದಿನ ಕವಿಗಳಿಂದ ಎರವಲು ಪಡೆದ ರೂಪಗಳೆಂದು ಅಭಿಪ್ರಾಯಿಸಿದ್ದು ಕಂಡುಬಂದಿದೆ. ಮುಂದೆ ನಾಗಚಂದ್ರನ ಕಾಲ, ದೇಶದ ವಿಚಾರವಾಗಿ ಗೋವಿಂದ ಪೈ, ಬೇಂದ್ರ ಯವರ ವಿಚಾರಗಳನ್ನು ಕೈಗೆತ್ತಿಕೊಂಡು ಪ್ರಾಸಂಗಿಕ ಅಂಶಗಳನ್ನು ತಿಳಿಸಿದ್ದು ಕಂಡುಬಂದಿದೆ.

'ಗೋವಿಂದಪೈ-ಗಳವರು ಅಭಿಪ್ರಾಯಿಸಿದಂತೆ ನಾಗಚಂದ್ರನ ಗುರುವಾಗಿದ್ದ ಬಾಲಚಂದ್ರ ಯಾರು ಎಂಬುದನ್ನು ಚರ್ಚಿಸುತ್ತಾ ಶ್ರವಣಬೆಳಗೊಳದ ೧೪೦ನೇ ಶಾಸನದಲ್ಲಿ ಕಂಡುಬರುವ ಸಂಕಲನ ಚಂದ್ರನ ಶಿಷ್ಯನಾದ ಮೋಘ ಚಂದ್ರ ತ್ರೈವಿದ್ಯನ ಸಧರ್ಮನಾದ ಶುಭಕೀರ್ತಿಯ ಗುರುವಾದ ಬಾಲಚಂದ್ರ ಮುನಿರಾಜನೇ ನಾಗಚಂದ್ರನ ಗುರು, ಎಂದು ಉಲ್ಲೇಖಿಸಿ ಕವಿಚರಿತೆಕಾರರು ಮತ್ತು ಮತ್ತು ಜಿ.ವೆಂಕಟಸುಬ್ಬಯ್ಯ ಅವರಿಂದ ನುಣಿಚಿಕೊಂಡ ವಿಚಾರವನ್ನು ಪ್ರತಿಪಾದಿಸಿದ್ದನ್ನು ಸಮರ್ಥಿಸಬಹುದಾಗಿದೆ.

ಎರಡನೆಯ ವಿಷಯವಾಗಿ ನಾಗಚಂದ್ರನೇ ಬರೆದಿರುವಂತೆ ಕಾಣುವ ಬಿಜಾಪುರದ ಶಿಲಾಲೇಖನದ ಕಾಲವನ್ನು ಪೈಗಳು ನಿರ್ಣಯಿಸಲು ಪ್ರಯತ್ನಿಸಿದ್ದು ಕಂಡುಬಂದಿದೆ, ಇದು ಮಲ್ಲಿಕಾರ್ಜುನನ ಆಳ್ವಿಕೆಯ ಕಾಲದಲ್ಲಿ ಬಂದಿರಬಹುದೆಂದು ಊಹಿಸಿದ್ದಾರೆ. ಈ ವಿಚಾರಕ್ಕೆ ಸೂಕ್ತ ಪ್ರಸ್ತಾಪವಾದ ಸೊರಬದ ೧೭೨ನೆಯ ಒಂದು ವೀರಗಲ್ಲನ್ನು (ಕಾಲ ೧೦೭೭-೧೦೭೮) ಪ್ರಸ್ತಾಪಿಸಿದ್ದು ಕಂಡುಬಂದು ಈ ಹೇಳಿಕೆಗೆ ಸೂಕ್ತವೆನ್ನುವಂತೆ ಎಂ.ಎಂ.ಕಲಬುರ್ಗಿ ಅವರು ತಮ್ಮ ಮಾರ್ಗ ಸಂಪುಟ-೩ರಲ್ಲಿ ಉಲ್ಲೇಖಿಸಿದ ಭಾಗ ಮೂರರ ಅಭಿನವ ಪಂಪಯುಗ ವಿಚಾರದ ಪ್ರಸ್ತಾಪದಲ್ಲಿ ವಿಜಾಪುರದಲ್ಲಿ ಭವ್ಯವಾದ ಮಲ್ಲಿನಾಥನ ಬಸದಿಯನ್ನು ನಾಗಚಂದ್ರನು ಕಟ್ಟಿಸಿದ್ದು, ಈತನ ಒಬ್ಬ ಮೊಮ್ಮಗ ಮಲ್ಲಿನಾಥನು ವಿಜಾಪುರ ಸಮೀಪದ ಬಾಬಾನಗರದ ಶಾಸನ ಬರೆದಿರುವನೆಂದು ಉಲ್ಲೇಖ ಮೂಡಿಬಂದಿದೆ ಹಾಗೆಯೇ ಇನ್ನೊಬ್ಬ ಮೊಮ್ಮಗ 'ಕೂಚಿರಾಜ' ಕೊಲ್ಲಾಪುರದ ಶಿಲಾಹಾರ ಗುಂಡರಾದಿತ್ಯನಲ್ಲಿ ಮಂತ್ರಿಯಾಗಿದ್ದನೆಂದು ವಿಷಾದಪಡಿಸಿ ಇವನ ಕುಟುಂಬ ವಿಜಯಪುರದಲ್ಲಿ ವಾಸವಾಗಿತ್ತೆಂದು ತಿಳಿಸಿದ್ದಾರೆ. ಆದರೆ ಇವನ ಕಾಲದ ನಿರ್ಣಯ ಇನ್ನು ವಿಚಾರಗ್ರಸ್ತವಾಗಿದೆ ಎಂದು ತಿಳಿದಿದ್ದರೂ ಸಾಹಿತ್ಯಿಕವಾಗಿ

ಈವರೆಗೆ ಓದಿಕೊಂಡು ಬಂದಂತೆ ಇವನ ಕಾಲಮಾನ ಕ್ರಿ.ಶ. ೧೧೧೦ ರಿಂದ ೧೧೭೦ ರ ಅವಧಿ ಎಂದು ಅಂದಾಜಿಸಬಹುದಾಗಿದೆ.

ಒಟ್ಟಿನಲ್ಲಿ ಇವನ ಕಾಲಮಾನ ಏನೇ ಇರಲಿ ಕನ್ನಡ ಸಾಹಿತ್ಯಲೋಕಕ್ಕೆ ಮಲ್ಲಿನಾಥ ಪುರಾಣ, ಪಂಪರಾಮಾಯಣ (ರಾಮಚಂದ್ರ ಚರಿತ ಪುರಾಣ) ದಂತಹ ಮೌಲಿಕ ಕೃತಿಗಳನ್ನು ಪಂಪ, ರನ್ನರಂತೆ ತಮ್ಮ ಲೌಕಿಕ ಕಾವ್ಯಗಳಲ್ಲಿ ತಂತಮ್ಮ ಪೋಷಕರನ್ನು ಕಥಾನಾಯಕನೊಡನೆ ಹೋಲಿಸಿ ಹೇಳಿರುವಂತೆ ಮಲ್ಲಿನಾಥ ಪುರಾಣವನ್ನು ಚಾಲುಕ್ಯ ಚಕ್ರವರ್ತಿ ಆರನೇ ವಿಕ್ರಮಾದಿತ್ಯನನ್ನು ಅವನ ಮಗ ಸೋಮೇಶ್ವರನನ್ನು ಕಥಾನಾಯಕರೊಡನೆ ಹೋಲಿಸಿ ಬರೆದಿದ್ದಾನೆ ಎಂಬುದು ವಾಸ್ತವಾಂಶವಾಗಿದೆ.

**ಜಕ್ಕಣಾಚಾರ್ಯ**

೧೯೩೭ರಲ್ಲಿ ಪ್ರಬುದ್ಧಕರ್ಣಾಟಕ ಪತ್ರಿಕೆಯ ಸಂಪುಟ-೧೮ರಲ್ಲಿ ಸಂಚಿಕೆ-೩ರಲ್ಲಿ ಮೊದಲ ಬಾರಿಗೆ ಮೂಡಿ ಬಂದ ಈ ವಿಷಾದಪ್ರಸ್ತಾಪವನ್ನು ಡಿ.ಎಲ್.ಎನ್. ತಮ್ಮ ಪೀಠಿಕೆಗಳು ಲೇಖನಗಳು ಕೃತಿಯ ೮೫ನೇ ಭಾಗವಾಗಿ ಸಂಬಂಧಿಸಿದ್ದು ಕಂಡುಬಂದಿದೆ.

ಡಿ.ಎಲ್.ಎನ್. ಎ.ಪದ್ಮನಾಭಶರ್ಮಾ ರವರು ಅನುವಾದಿಸಿದ ಕರ್ನಾಟಕ ಇಸ್ಟೀರಿಕಲ್ ರಿವೀವ್ ಸಂಪುಟ-೩ ಸಂಖ್ಯೆ ಒಂದು ಮತ್ತು ಎರಡರಲ್ಲಿ ಸಂಕಲಿತ ವಿಷಯಗಳನ್ನಾಧರಿಸಿ ಈ ಚರ್ಚೆ ನಡೆಸಿದ್ದಾರೆನ್ನಲಾಗಿದೆ.

ಜಕ್ಕಣಾಚಾರ್ಯ ಡಂಕಣಾಚಾರ್ಯ ಎಂಬ ವಿಷಯವಾಗಿ ಈ ಶಿಲ್ಪಿಗಳಿಗೆ ಸೇರಿದ ಕಥೆಗಳನ್ನೆಲ್ಲಾ ಕ್ರೋಡಿಕರಿಸಿ ರೂಪಿಸಿದ ವಿಸ್ತೃತ ಭಾಗವೇ ಈ ಲೇಖನದ್ದಾಗಿದೆ.

ಇಲ್ಲಿ ಪ್ರಸ್ತಾಪಗೊಂಡ ವಿಷಯುವಸ್ತುವಾಗಿ ಜಕ್ಕಣಾಚಾರಿಯು ಕ್ಷತ್ರಿಯ ರಾಜಕುಮಾರನಾಗಿದ್ದರೂ ಬ್ರಾಹ್ಮಣನನ್ನು ಕೊಂದ-ಪಾಪ ವಿಮೋಚನೆಗಾಗಿ ಕನ್ಯಾಕುಮಾರಿಯಿಂದ ಕಾಶಿಯವರೆಗೆ ಇಪ್ಪತ್ತು ವರ್ಷ ಯಾತ್ರೆಮಾಡಿ ದಾರಿಯಲ್ಲಿ ದೇವಾಲಯಗಳನ್ನು ನಿರ್ಮಿಸುತ್ತಾ ಹೋದನೆಂದು ಕಥೆ ಇದೆ. 'ಇವನು ವಿಶ್ವಕರ್ಮನ ಶಿಷ್ಯನಾಗಿದ್ದು ಇವನ ಹುಟ್ಟೂರು ಕೈದಾಳವೆಂದು ಅಲ್ಲಿರುವ ಕೇಶವದೇವಾಲಯವನ್ನು ಕಟ್ಟಿದ್ದನೆಂಬ ಪ್ರತೀತಿ ಇದೆ. ಅಲ್ಲದೆ ಲಕ್ಕುಂಡಿಯಲ್ಲಿರುವ ಐವತ್ತು ಹಳೆಯ ದೇವಸ್ಥಾನಗಳನ್ನು ಅವನೇ ಕಟ್ಟಿದ್ದನೆಂದೂ ಇನ್ನೊಂದು ಐತಿಹ್ಯವಿದ್ದುದ್ದನ್ನು ಪದ್ಮನಾಭರು ಉಲ್ಲೇಖಿಸಿದ್ದಾರೆ.'[೧೯]

ಒಟ್ಟಿನಲ್ಲಿ ಕನ್ನಡ ನಾಡಿನಲ್ಲಿ ೧೪೧೦ರಿಂದ ೧೮೯೦ರ ಅವಧಿಯಲ್ಲಿ ಜಕ್ಕಣ್ಣ, ಜಕ್ಕಪ್ಪ, ಜಕ್ಕಣಾಚಾರ್ಯ ಎಂದು ಹತ್ತಾರು ಹೆಸರುಗಳು ಬಳಕೆಯಲ್ಲಿದ್ದರಿಂದ ಜಕ್ಕಣಚಾರ್ಯ, ಒಟ್ಟಾರೆ ಕನ್ನಡದವನೆಂದು, ಅವನು ಕೆತ್ತನೆಯಲ್ಲಿ ಪ್ರವೀಣನಾಗಿದ್ದನೆಂದು ಒಪ್ಪುವುದು ಮಾತ್ರ ಸೂಕ್ತವೆನಿಸಿದೆ.

ಒಟ್ಟಾರೆ ಈ ಎಲ್ಲಾ ಕವಿ, ಕಾವ್ಯ ಕಾಲನಿರ್ಣಯದ ವಿಚಾರಗಳಲ್ಲಿ ಡಿ.ಎಲ್.ಎನ್. ಅವರ ಚಿಂತನೆಗಳು ಅರ್ಥಪೂರ್ಣವಾಗಿ ಬೆಳೆದುಬಂದಿದ್ದು ಇಂದಿನ ತಲೆಮಾರಿನ ಚಿಂತಕರ ನೆಲೆಯಲ್ಲಿ ಅಂದಿನ ಉಲ್ಲೇಖಿತ ವಿಚಾರಗಳು ಚರ್ಚಿತವಾಗಿ ಸಾಗಿವೆ. ಡಿ.ಎಲ್.ಎನ್. ಅವರು ಹಳಗನ್ನಡ ಕಾವ್ಯಪರಂಪರೆಯೊಂದಿಗೆ ಸಂವಾದ ನಡೆಸುತ್ತಾ ಸಾಗಿದ್ದವರು. ಪಂಪನಿಂದ, ಕುವೆಂಪುರವರೆಗೂ ಯಾವುದೇ ಕವಿ, ಕಾವ್ಯ ಕಾಲ ವಿಚಾರ ಕುರಿತು ಪರಂಪರೆ ಜೊತೆ ಕವಿ ಪ್ರತಿಕ್ರಿಯಿಸಿದ ರೀತಿಗಳನ್ನು ಆಯಾ ಕಾಲಕ್ಕನುಗುಣವಾಗಿ ಗುರುತಿಸಿದ್ದು ಎದ್ದುಕಂಡಿದೆ. ಇಲ್ಲಿನ ಲೇಖನಗಳೆಲ್ಲವೂ ಪರಂಪರತೆಯನ್ನು ಸಾಗಿಸಿದ ಇತಿವೃತ್ತಿ ವಿಚಾರಗಳಾಗಿದ್ದು ಕಾಲಾನುಕ್ರಮಣಿಕೆಗೆ ಭದ್ರಬುನಾದಿ ಎನಿಸಿವೆ. ಚಂಪೂ, ವಚನ, ಸಾಂಗತ್ಯ, ರಗಳೆ, ಪುರಾಣ, ಚರಿತೆ, ಇಂತಹ ಲೇಖನಗಳೆಲ್ಲವನ್ನು, ಹಳಗನ್ನಡ ಸಾಹಿತ್ಯ ಪರಂಪರೆಯನ್ನು ಆಧುನಿಕ ಬೆಳಕಿನಲ್ಲಿ ನಿಂತು ವಿಶ್ಲೇಷಿಸಿದವರಾಗಿದ್ದಾರೆ. ಡಿ.ಎಲ್.ಎನ್. ಅವರು ಆಯಾ ಚರ್ಚೆಗಳಿಗನುಗುಣವಾಗಿ ಅನೇಕ ಪೂರ್ವಪರತೆ ಸಂಗತಿಗಳನ್ನು ಅಧ್ಯಯನಕಾರರು ಗಮನಸೆಳೆಯುವಂತೆ ಮಾಡಿದ್ದು ಅವರಲ್ಲಿನ ಅಪೂರ್ವದ ಒಳನೋಟದ ಶಕ್ತಿಯನ್ನು ಎತ್ತಿತೋರಿಸಿದ್ದಾಗಿದೆ. ಈ ರೀತಿಯ ಡಿ.ಎಲ್.ಎಲ್. ಅವರ ಆಳವಾದ ಪಾಂಡಿತ್ಯಪೂರ್ಣ ವಿಚಾರಗಳು ಸರ್ವಕಾಲಕ್ಕೂ ಅವಶ್ಯವೆನಿಸಿದ್ದಾಗಿವೆ.

### ೫.೨. ವಿಮರ್ಶಾ ಸಾಹಿತ್ಯ

ನಮ್ಮ ಸಾಹಿತ್ಯ ರೂಪಗಳಲ್ಲಿ ವಿಮರ್ಶೆಯು ಒಂದಾಗಿದ್ದು, ಇದು ಇಂದಿನ ಪ್ರಸ್ತುತ ಕಾಲಮಾನದಲ್ಲಿ ಒಂದು ವಿಶಿಷ್ಠ ರೂಪತಾಳಿ ಒಂದು ಅಧ್ಯಯನದ ಶಿಸ್ತಾಗಿ ಬೆಳೆಯುತ್ತಿರುವ ಸಾಹಿತ್ಯದ ಕಲೆ ಎನಿಸಿದೆ. ಆದರೆ ಡಿ.ಎಲ್.ಎನ್. ಅವರ ವಿಮರ್ಶಾ ರೂಪವೇ ಬೇರೆಯಾಗಿದೆ. ಅವರ ಬರವಣಿಗೆಯಲ್ಲಿ ಮೂಡಿಬಂದಂತೆ ಪ್ರಮುಖವಾಗಿ ಎರಡು ಸಂಗತಿಗಳನ್ನು ಗುರುಸಬಹುದಾಗಿದ್ದು ಗುಣದೋಷಗಳನ್ನು ಗುರುತಿಸಿ ಅವುಗಳ ಕುರಿತು ಗಂಭೀರವಾಗಿ ಚರ್ಚಿಸುತ್ತಾ (ಪೂರ್ವಪರ ವಿಚಾರಗಳೊಂದಿಗೆ) ಸಂಶೋಧನೆಯತ್ತ ಕೊಂಡ್ಯೊಯ್ಯುವುದು. ಎರಡನೆಯದಾಗಿ, ಒಂದು ವಿಚಾರವನ್ನು ಇನ್ನೊಂದು ವಿಚಾರದೊಂದಿಗೆ ತೌಲನಿಕವಾಗಿ ವಿವೇಚಿಸುತ್ತಾ ಬಹುಶಿಸ್ತೀಯ ಆಯಾಮವನ್ನು ಗುರುತಿಸುವುದು. ಈ ರೀತಿಯಾಗಿ ಕೃತಿಯ ಗುಣದೋಷಗಳನ್ನು ಹೇಳುವಾಗಿನ ಅವರ ಆಳವಾದ ಓದಿನ ವಿಸ್ತಾರತೆ, ವಿನಯದಿಂದ ದೋಷಗಳನ್ನು ಬರಿದೋಷಗಳೆಂದು, ಕೊರತೆ ಎಂದು ಜರಿಯದೇ ಅದಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸಿ ಅದಕ್ಕೊಂದು ಹೊಸ ಆಯಾಮವನ್ನು ನೀಡುವುದು ಈ ವಿಮರ್ಶಾ ವಿಚಾರಗಳಲ್ಲಿ ಎದ್ದು ಕಾಣುವ ಅಂಶಗಳೆನಿಸಿವೆ.

ನಮ್ಮಲ್ಲಿ ಇಂದು ಬರುತ್ತಿರುವ ವಿಮರ್ಶೆಯಲ್ಲಿ ಬಹುಪಾಲು ಕೇವಲ, ಟೀಕೆ ಅಥವಾ ಪ್ರಶಂಸೆಗಳಿನಿಸಿವೆ ಆದರೆ ಡಿ.ಎಲ್.ಎನ್. ಅವರು ಈ ಎರಡೂ ಪಂಥಗಳಿಗೆ ಸೇರದವರಾಗಿದ್ದಾರೆ.

ಒಂದು ವಿಮರ್ಶೆ ಎಷ್ಟೇ ಒಳ್ಳೆಯದಾದರೂ ಅದೇ ಕೃತಿಯ ಸ್ಥಾನವನ್ನು ಅದು ಯಾವತ್ತು ಆಕ್ರಮಿಸಿಕೊಳ್ಳಲು ಸಾಧ್ಯವಿಲ್ಲದ್ದು; ಮತ್ತು ಆಕ್ರಮಿಸಿಕೊಳ್ಳಲು ಪ್ರಯತ್ನಪಡಲು ಬಾರದ್ದಾಗಿದೆ ಮೂಲಕೃತಿಯನ್ನು ಓದದೇ ಇದ್ದರೂ ಚ್ಯುತಿ ಇಲ್ಲವೆನಿಸಬಾರದು. ಅದರಲ್ಲಿನ ಅಂಶಗಳನೆಲ್ಲ ವಿಮರ್ಶೆಯಲ್ಲಿ ತಿಳಿಸುವುದರಿಂದ ಮೂಲಕೃತಿಯನ್ನು ಓದಬೇಕಾಗಿಲ್ಲ ಎನಿಸಬಾರದು. ವಿಮರ್ಶೆ ಬರೆದರೆ ಮೂಲವನ್ನು ಜಾಲಾಡುವಂತಹ ಅಂಶಗಳನ್ನು ದಾಖಲಿಸಬೇಕಾದದ್ದು ಅತಿ ಅವಶ್ಯ.

ಒಟ್ಟಾರೆಯಾಗಿ, ವಿಮರ್ಶೆಯು ತನ್ನ ಮುಂದಿಟ್ಟುಕೊಂಡ ಗುರಿಯನ್ನು ಸಾರಬೇಕು ಹಾಗೂ ಕಲಾಕೃತಿಗಳ ಮೇಲೆ ಬೆಳಕನ್ನು ಚೆಲ್ಲುವುದು, ರುಚಿಯನ್ನು ತಿದ್ದುವುದು ಅದರ ಗುರಿಯಾಗಿರಬೇಕಾದುದು ಅತಿ ಅವಶ್ಯ ಎಂಬ ಟಿ.ಎಸ್. ಎಲಿಯಟ್ ಅವರ ಮಾತು ಡಿ.ಎಲ್.ಎನ್. ಅವರ ಈ ವಿಮರ್ಶಾ ಸಾಹಿತ್ಯ ಅಧ್ಯಯನಕ್ಕೆ ಸಂಪೂರ್ಣವಾಗಿ ಒಪ್ಪತಕ್ಕ ಅಂಶವೆನಿಸಿದೆ.

ಡಿ.ಎಲ್.ಎನ್. ಅವರು ತಮ್ಮ ಸಮಕಾಲೀನ ಚಿಂತಕರು ನಿರೂಪಿಸಿದ ಹಾಗೂ ಅಲ್ಲಲ್ಲಿ ಚಿಂತನೆಗಳ ಮೂಲಕ ನಿರೂಪಿತಗೊಂಡ ವಿಚಾರಗಳು ಇಲ್ಲಿ ವಿಮರ್ಶಾ ರೀತಿಯಲ್ಲಿ ಒಟ್ಟು ೪೩ ರೂಪಗಳಾಗಿ ಕಂಡು ಬಂದಿವೆ. ಇವುಗಳು ಪ್ರತಿಯೊಂದು ತನ್ನದೇ ಆದ ವೈಶಿಷ್ಟ್ಯಗಳಿಂದ ಮೂಡಿಬಂದ ಅಂಶಗಳೆನಿಸಿ ವಿಷಯ ನಿರೂಪಣೆಯಲ್ಲಿ ಡಿ.ಎಲ್.ಎನ್. ಅವರ ಸೂಕ್ಷ್ಮ ಮತ್ತು ವಸ್ತುನಿಷ್ಠವಾದ ಬರವಣಿಗೆ ರೂಪ ರೂಪಿಸಿದ್ದು ವಿಮರ್ಶಾ ಮಾದರಿಗೆ ಅತ್ಯುಪಯುಕ್ತ ಅಂಶಗಳೆನಿಸಿವೆ.

**ಕರ್ನಾಟಕ ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆ**

೧೯೨೬ ರಲ್ಲಿ ರಚಿಸಿದ ಈ ಲೇಖನವನ್ನು ಡಿ.ಎಲ್.ಎನ್. ತಮ್ಮ ಪೀಠಿಕೆಗಳು ಲೇಖನಗಳು ಕೃತಿಯ ೨೬ನೇ ಭಾಗವಾಗಿ ಸಂಕಲಿಸಿದ್ದು ಕಂಡುಬಂದಿದೆ.

ಪ್ರಕೃತಿಗೂ, ಪುರುಷನಿಗೂ ಇರುವ ಸಂಬಂಧವು ಅಗಾಧವಾದದು. ಪುರುಷನು ಪ್ರಕೃತಿಯಿಂದ ಬೇರೆಯಾಗಿ ಜೀವಿಸಲಾರನು ಆತನು ಪ್ರಕೃತಿಯ ಜೊತೆಯಲ್ಲೆ ಹುಟ್ಟಿ, ಬೆಳೆದು ಅದರಲ್ಲೆ ಲೀನವಾಗುತ್ತಾನೆ. ಪ್ರಕೃತಿಯ ಸ್ಥಿತಿಯಲ್ಲಿ ಕಾಲಕಾಲಕ್ಕೆ ಯಾವ ಯಾವ ಬದಲಾವಣೆಗಳು ಉಂಟಾಗುತ್ತವೆಯೋ ಅದೇ ರೀತಿ ಬದಲಾವಣೆಗಳು ಮನುಷ್ಯನ ಜೀವನದಲ್ಲಾಗುವುದುಂಟು. ನಮ್ಮ ಪೂರ್ವಿಕರಿಗೆ ಪ್ರಕೃತಿಯ ಮಡಿಲೇ ತೌರುಮನೆಯಂತಿದ್ದು ನಮ್ಮ ನಾಗರಿಕತೆಗಳೆಲ್ಲ ಹುಟ್ಟಿ ಬೆಳೆದದ್ದು ಇಲ್ಲಿಯೇ ಎಂಬುದು ಚರಿತ್ರಾರ್ಹ ಅಂಶವೆನಿಸಿದೆ.

ಪ್ರಕೃತಿಯ ಸೌಂದರ್ಯಗಳನ್ನು ಚಿರಕಾಲ ನಿಲ್ಲುವ ಹಾಗೆ ಬಣ್ಣಿಸುವುದಕ್ಕೆ ಎರಡು ಮಾರ್ಗಗಳನ್ನು ಅವಲಂಬಿಸಬೇಕಾದದ್ದು ಅವಶ್ಯವೆಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ,

'ಮೊದಲನೆಯದು ವ್ಯಕ್ತಿಸೌಂದರ್ಯ–ಇದು ನಮ್ಮ ಚರ್ಮ, ಚಕ್ಷುಸ್ಸಿಗೆ ಗೋಚರವಾಗಿ ಮನಸ್ಸಿನಲ್ಲಿ ಕ್ಷಣಿಕವಾದ ಉದ್ರೇಕವನ್ನು ಹುಟ್ಟಿಸುವಂತಹದ್ದಾಗಿದೆ. ಎರಡನೆಯದು ಅವ್ಯಕ್ತ ಸೌಂದರ್ಯ ಇದು ಮದೋನೇತ್ರಗಳಿಗೆ ಗೋಚರವಾಗಿ ಧ್ಯಾನ ನಂತರ ಮನಸ್ಸಿನಲ್ಲಿ ಎಂದೂ ಅಳಿಸಿಹೋಗದೆ ಇರುವ ಉದ್ರೇಕದ ಗುರುತುಗಳನ್ನು ನಿಲ್ಲಿಸುವಂತಹದು. ಈ ಎರಡರ ಸ್ವರೂಪವು ಹೀಗೆಯೇ ಇರುತ್ತದೆ ಎಂದು ಹೇಳಲಿಕ್ಕಾಗದು ಇವುಗಳನ್ನು ಓದಿ ತಿಳಿದು ಆಸ್ವಾದಿಸಿದರೆ ಮಾತ್ರ ಪರಿಗ್ರಹಿಸಲು ಸಾಧ್ಯ ಎಂದಿದ್ದಾರೆ.'[೯] ಇದಕ್ಕೆ ಪೂರಕವೆಂಬಂತೆ ಯಾವುದೇ ವರ್ಣನೆ ಇರಲಿ ಅದನ್ನು ಪ್ರತಿಪಾದಿಸಲು ಔಚಿತ್ಯ ಅತಿಮುಖ್ಯವಾಗಿ ಬೇಕಾದ ಅಂಶವೆಂದು ಪರಿಗಣಿಸುವುದು ಅವಶ್ಯವೆನಿಸಿದೆ, ಇದಕ್ಕೆ ಸಕಾರಣವಾಗಿ ಪಾಶ್ಯಾತ್ಯ ಸಾಹಿತ್ಯದಲ್ಲಿ 'ಷೆಲ್ಲಿ' ಯ ಕವಿತೆಯಲ್ಲಿನ ಪ್ರಕೃತಿ ಕುರಿತ ವರ್ಣನೆಗಳು. ಕನ್ನಡ ಸಾಹಿತ್ಯದಲ್ಲಿ ಲಕ್ಷ್ಮೀಶನ ಕಾವ್ಯದಲ್ಲಿನ ವರ್ಣನೆಗಳು ಇದಕ್ಕೆ ತಕ್ಕ ಉದಾಹರಣೆಗಳೆನಿಸಿವೆ. ಒಟ್ಟಿನಲ್ಲಿ ಪ್ರಕೃತಿಗೂ ಮನುಷ್ಯನಿಗೂ ಇರುವ ಸಂಬಂಧ ಅಗಾದವಾಧದ್ದು. ಕಾಲದ ಪರಿಮಿತಿಯಲ್ಲಿ ಎರಡೂ ಜೊತೆಯಾಗಿ ಬಂದವುಗಳಾಗಿವೆ.

ಕನ್ನಡ ಸಾಹಿತ್ಯದ ವಿಚಾರಕ್ಕೆ ಪೂರಕವಾಗಿ ಪ್ರಕೃತಿ ವರ್ಣನೆಗಳ ಕುರಿತು ವಿವೇಚಿಸುವುದಾದರೆ, ಕನ್ನಡ ಸಾಹಿತ್ಯದಲ್ಲಿನ ಕಾವ್ಯಗಳೆಲ್ಲ ಒಂದೇ ಮಟ್ಟದ ವರ್ಣನೆಯ ಮಾರ್ಗಗಳನ್ನು ಅವಲಂಬಿಸಿದ್ದು ಕಂಡು ಬಂದಿವೆ. ಇದಕ್ಕೆ ಪೂರಕವೆಂಬಂತೆ ಎರಡು ಅಂಶಗಳನ್ನು ಗುರುತಿಸುವುದಾದರೆ, ಮೊದಲನೆಯದಾಗಿ, ನಮ್ಮ ಪೂರ್ವ ಲಾಕ್ಷಣಿಕರು ಕೆಲ ಪೂರ್ವಸೂರಿಗಳ ಪ್ರಸಿದ್ಧ ಕಾವ್ಯಗಳನ್ನು ಓದಿ, ಅವುಗಳನ್ನೆ ಮಾದರಿಯನ್ನಾಗಿಸಿಕೊಂಡು ಮುಂದೆ ಬರುವ ಎಲ್ಲಾ ಕಾವ್ಯ ಸರಣಿ ಹೀಗೆಯೇ ಇರಬೇಕೆಂಬ ನಿರ್ಬಂಧದ ನಿಲುವು ಎರಡನೆ ಯದಾಗಿ ಈ ಶಾಸ್ತ್ರ ಸಾಹಿತ್ಯಜ್ಞರ ಅಭಿಪ್ರಾಯವನ್ನು ಕಂಡಿಸಿ ಸ್ವತಂತ್ರವಾದ ಪ್ರತಿಭಾಶಕ್ತಿಯಿಂದ ಕಲ್ಪನಾ ಚಾತುರ್ಯದಿಂದಲು ಕಾವ್ಯ ಸೃಷ್ಠಿ ಮಾಡಿದರೆ ಎಲ್ಲಿ ತಮ್ಮ ಕಾವ್ಯಗಳು ನಿರ್ನಾಮವಾಗುವವೊ ಎಂಬ ಭೀತಿ ಈ ಎರಡು ಅಂಶಗಳಿಂದ ಕಂಡುಬಂದು ಕನ್ನಡ ಸಾಹಿತ್ಯದಲ್ಲಿ ಒಳ್ಳೆಯ ಕಾವ್ಯ ರೂಪಗಳ ಸಂಖ್ಯೆಯೇ ಕಡಿಮೆ ಎನಿಸಿದೆ. ಇನ್ನೊಂದು ಪ್ರಮುಖ ಅಂಶವೆಂದರೇ ನಮ್ಮ ಪೂರ್ವ ಸೂರಿಗಳ ಕಾಲಕ್ಕೆ ಕಾವ್ಯ ಎಷ್ಠೆ ಸುಂದರವಾಗಿದ್ದರೂ ಪಂಡಿತವರ್ಗದ ಅನುಮತಿ, ಆಶ್ರಯ, ಅವಶ್ಯವಾಗಿ ಬೇಕಾಗಿತ್ತು ಇಲ್ಲದಿದ್ದರೆ ಕವಿಯ ಕಾವ್ಯದ ಆಯಸ್ಸು ತುಂಬಾ ಕ್ಷಣಿಕವೆನಿಸಿದ್ದಾಗಿತ್ತು ಕೆಲ ಕವಿಗಳು ಈ ನಿರ್ಧಾರಕ್ಕೆ ಬದ್ಧರಾಗಿ ಬಂದರೆ, ಇನ್ನೂ ಕೆಲ ಕವಿಗಳು ಇದನ್ನು ಮೀರಿ ಬೆಳೆದವರಾಗಿದ್ದಾರೆ. ಈ ಕವಿಗಳಿಂದಲೆ ಪ್ರಕೃತಿ ವರ್ಣನೆ ಎಂಬುದು ಕಾವ್ಯದುದ್ದಕ್ಕೂ ಜೀವಂತವಾಗಿ ಬೆಳೆದು ಬರಲು ಕಾರಣವೆನಿಸಿದೆ. ಆದಿಕವಿ ಪಂಪನು ಇದಕ್ಕೆ ಸೂಕ್ತ ಮಾರ್ಗದರ್ಶಿಯಾಗಿ ಆದಿ ರೂಪಿಸಿಕೊಟ್ಟವನಾಗಿದ್ದಾನೆ ಇವನ ನಂತರದ ಕವಿಗಳು ಇವನ ಮಾರ್ಗವನ್ನನುಸರಿಸದೆ, ಲಾಕ್ಷಣಿಕರಿಂದ ನಿರೂಪಿತವಾದ

ಕವಿಸಮಯಗಳ ಪಾಶಕ್ಕೆ ಸಿಲುಕಿ ಇದನ್ನು ಪರೋಕ್ಷ ರೂಪದಲ್ಲಿ ಬೆಳೆಸಲು ಮುಂದಾಗಿದ್ದಾರೆ ಎನಿಸಿದೆ.

ಲಾಕ್ಷಣಿಕ 'ಉದಯಾದಿತ್ಯ' ನ ಆದಿಯಾಗಿ ಮಹಾಕಾವ್ಯಗಳಲ್ಲಿ ೩೧೮ ಪ್ರಮುಖ ವರ್ಣನೆಗಳು ಇರಬೇಕೆಂಬುದು ನಿಯಮವಾಗಿದೆ. ಇದರಲ್ಲಿ ಪ್ರಕೃತಿಗೆ ಸಂಬಂಧಿಸಿದಂತೆ ಏಳು ವರ್ಣನೆಗಳಿವೆ. ಎಂದು ಲಾಕ್ಷಣಿಕರ ನಿಯಮವನ್ನು ಎತ್ತಿಕೊಂಡ ಡಿ.ಎಲ್.ಎನ್. ತಮ್ಮ ಲೇಖನದುದ್ದಕ್ಕೂ ಒಂದೊಂದು ವರ್ಣನೆಗಳು ಯಾವ ಯಾವ ಕಾವ್ಯದಲ್ಲಿ, ಯಾವ ಯಾವ ಲಾಕ್ಷಣಿಕರು ಹೇಗೆ ರೂಪಿಸಿದ್ದಾರೆಂದು ಸವಿಸ್ತಾರವಾಗಿ ವಿವರಿಸಿದ್ದು ಕಂಡುಬಂದಿದೆ. ಮೊದಲನೆಯದು, ಸಮುದ್ರ ವರ್ಣನೆ ಇದು ಗುಣವರ್ಮ ದುರ್ಗಸಿಂಹ, ಹರಿಹರ, ಮಲ್ಲಿಕಾರ್ಜುನ, ಪದ್ಮಣಾಂಕ, ಷಡಕ್ಷರಿ ಲಕ್ಷ್ಮೀಶನ ಕಾವ್ಯಗಳಲ್ಲಿ ಹೇರಳವಾಗಿ ಕಾಣಬಹುದಾಗಿದೆ. ಈ ವರ್ಣನಾ ವಿಧಾನ ಸಮದ್ರದ ತೆರೆಗೆಳು, ಅಲ್ಲಿನ ಜಲಚರಗಳ ವರ್ಣನೆ ಸಮುದ್ರದ ಅಲ್ಲೋಲ ಕಲ್ಲೋಲ ಚಿತ್ರಣ, ನಂತರದ ಶಾಂತಚಿತ್ತರೂಪದ ವರ್ಣನೆಯನ್ನೂ ಬಗೆಯಾಗಿ ವಿವರಿಸಿದ ಕವಿಗಳು ನಿಜವಾಗಿ ಸಮುದ್ರವನ್ನು ಓದುಗ(ಸಹೃದಯಿ) ನೋಡಬಹುದಾದಂತಹ ರೂಪಗಳನ್ನು ಚಿತ್ರಿಸಿದವರಾಗಿದ್ದಾರೆ.

ಎರಡನೆಯದು, ಋತುವರ್ಣನೆ ವಸಂತ, ಗ್ರಿಷ್ಮ ವರ್ಷಾಕಾಲ, ಶರದ್, ಹೇಮಂತ, ಸೂರ್ಯ, ಚಂದ್ರ, ಪರ್ವತ, ಉದಕ, ಶಿಶಿರ, ವನಸ್ಪತಿ ವಿಚಾರವಾಗಿ ಹರಿಹರ, ರಾಘವಾಂಕ, ಅಗ್ಗಳ, ವಿಶ್ವಪಂಡಿತ, ಜನ್ನ, ಆಂಡಯ್ಯ, ನಾಗರಾಜ, ಪದ್ಮಣಾಂಕ, ವಿರೂಪಾಕ್ಷ ಪಂಡಿತ, ಕಮಲಭವ ಮುಂತಾದ ಕವಿಗಳ ಕಾವ್ಯಗಳಲ್ಲಿನ ಉಲ್ಲೇಖಗಳನ್ನು ಡಿ.ಎಲ್.ಎನ್. ಪರಿಯಾಗಿ ವಿವರಿಸಿ ಆಯಾಕಾಲಕ್ಕನುಗುಣವಾದ ನೈಸರ್ಗಿಕ ಬದಲಾವಣೆಯ ರೂಪಗಳು ಇದಕ್ಕೆ ಪೂರಕವೆಂಬಂತೆ ಮಾನವನ ಬದುಕಿನ ಬದಲಾವಣೆಗಳು, ಆಹಾರ ಪದಾರ್ಥಗಳ ಬಳಕೆ, ಸೃಷ್ಠಿಯಲ್ಲಿನ ಇತರೆ ವೈಚಿತ್ರ್ಯಗಳನ್ನು ಕುರಿತು ವಿವರಿಸಿದ್ದು ಕಂಡುಬಂದಿದೆ. ಮುಂದುವರೆದು ಇತರೆ ವರ್ಣನೆಗಳ ಬಗ್ಗೆ ಚರ್ಚಿಸಿದ ಡಿಎಲ್.ಎನ್. 'ಉದಯಾದಿತ್ಯ' ಲಾಕ್ಷಣಿಕರು ನಿರೂಪಿಸದೆ ಉಳಿದ ಕೆಲವು ವರ್ಣನೆಗಳು ಕನ್ನಡ ಕಾವ್ಯದಲ್ಲಿ ಅಲ್ಲಲ್ಲಿ ದೊರೆತಿದ್ದನ್ನು ಹೆಕ್ಕಿ ತೆಗೆದು ತೋರಿಸಿದ್ದಾರೆ. ಇವುಗಳಲ್ಲಿ ಪ್ರಮುಖವಾಗಿ ಗಾಳಿಯ ವರ್ಣನೆ, ಪ್ರಾಣಿಗಳ ವರ್ಣನೆಗಳು ನಾಗವರ್ಮನ ಕಾವ್ಯಾವಲೋಕನ, ಆಂಡಯ್ಯ ಅಗ್ಗಳ, ನೇಮಿಚಂದ್ರರ ಕಾವ್ಯಗಳಲ್ಲಿ ಅಲ್ಲಲ್ಲಿ ಮೂಡಿಬಂದಿದ್ದನ್ನು ಡಿ.ಎಲ್.ಎನ್. ಗುರುತಿಸಿ ನಿರೂಪಿಸಿದ್ದುಂಟು.

ಮುಂದುವರೆದು ಆಧುನಿಕ ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆ ಕುರಿತ ವಿಚಾರ 'ನವೋದಯ' ಕಾಲಘಟ್ಟದ ಕವಿಗಳ ಕಾವ್ಯ ಕಾದಂಬರಿಗಳಲ್ಲಿ ಅತಿಯಾಗಿ ಕಂಡುಬಂದಿದ್ದು ಇದರಿಂದ ಪರಂಪರಾಗತವಾಗಿ ಪ್ರಕೃತಿಗೂ, ಮಾನವನಿಗೂ ಬಿಡಿಸಲಾಗದ ನಂಟೊಂದು ಬೆಸದು ಕೊಂಡು ಸಾಗಿದೆ ಎನ್ನಬಹುದಾಗಿದೆ.

**ಕುಮಾರವ್ಯಾಸನ ದೃಷ್ಟಿಯಲ್ಲಿ ಕರ್ಣ**

ಡಿ.ಎಲ್.ಎನ್. ೧೯೫೬ ರಲ್ಲಿ ಮೈಸೂರಿನ ಎ.ಐ.ಆರ್.ನಲ್ಲಿ ಮಾಡಿದ ಭಾಷಣದ ಪ್ರತಿ ಇದಾಗಿದ್ದು, ಮುಂದೆ ಇದನ್ನು ತಮ್ಮ ಸಂಶೋಧನಾ ಗ್ರಂಥವಾದ ಪೀಠಿಕೆಗಳು ಲೇಖನಗಳು ಕೃತಿಯ ೨೭ ನೇ ಭಾಗವಾಗಿ ಸಂಕಲಿಸಿದ್ದು ಕಂಡುಬಂದಿದೆ.

'ಕರ್ಣನ ಪಾತ್ರ' ಕುಮಾರವ್ಯಾಸ ಭಾರತದ ರಸ ಸೃಷ್ಟಿ. ದ್ವಾಪರಯುಗದ ಮಹಾಪುರುಷರಲ್ಲಿ ತನ್ನದೇ ಆದ ಛಾಪು ಮೂಡಿಸಿದ್ಧ ವ್ಯಕ್ತಿ ಎಂದರೆ ಕರ್ಣ. ಇತರ ಪಾತ್ರಗಳು ಬೇರೆ ಬೇರೆ ದೃಷ್ಟಿಗಳಿಂದ ಇವನನ್ನು ಮೀರಿಸಿದ್ದರೂ ಇವನ ಕ್ಷೇತ್ರದಲ್ಲಿ ಅವರು ಯಾರು ಇವನನ್ನು ಮೀರಿಸುವಂತಿಲ್ಲ. ಇತರರಲ್ಲಿ ಕಾಣದ ವಿಶಿಷ್ಟತೆ ಕರ್ಣನ ರೂಪದಲ್ಲಿ ಕುಮಾರವ್ಯಾಸ ಭಾರತದಲ್ಲಿ ಮೈಗೂಡಿದ್ದಾಗಿದೆ. ಈ ಮಹಾಕಾವ್ಯದ ಆಳದಲ್ಲಿ ಇವನಿಗೆ ಬಂದಂತಹ ಧರ್ಮ ಸಮಸ್ಯೆಗಳಿಗೆ ಸದೃಶ್ಯವಾದ ಸಂದರ್ಭಗಳು ಉಳಿದ ಪಾತ್ರದಾರಿಗಳಿಗೇನಾದರೂ ಒದಗಿದ್ದರೆ ಅವರ ನಡತೆ ಇವನ ನಡತೆಗಿಂತ ಏನೂ ಉತ್ತಮವಾಗಿರುತ್ತಿದ್ದಲ್ಲವೇನೂ? ಎನಿಸುತ್ತದೆ. ಈ ದೃಷ್ಟಿಯಿಂದ ಕರ್ಣನ ಪಾತ್ರ ಒಂದು ಉತ್ತುಂಗಕ್ಕೇರಿದಂತಹದ್ದಾಗಿದೆ.

ಕರ್ಣನ ವ್ಯಕ್ತಿತ್ವವನ್ನು ತನ್ನ ಮನದಲ್ಲಿ ಮೂಡಿಸಿಕೊಳ್ಳುವಾಗ ಕುಮಾರವ್ಯಾಸನ ದೃಷ್ಟಿ ಯಾವುದಿತ್ತೆಂಬುದನ್ನು ಡಿ.ಎಲ್.ಎನ್. ತಮ್ಮ ಈ ಲೇಖನದುದ್ದಕ್ಕೂ ವಿಸ್ತೃತ ಗೊಳಿಸಿದ್ದು ಕಂಡು ಬಂದಿದೆ.

ವ್ಯಾಸರು ತಮ್ಮ ಭಾರತ ಕಥಾನಕದಲ್ಲಿ ಕರ್ಣನ ಪಾತ್ರವನ್ನು ಪಕ್ಷಾವೇಶಿಯಾಗಿಲ್ಲದಂತೆ ಎಲ್ಲರೂ ಸಮಾನರೆಂಬ ರೀತಿಯಲ್ಲಿ ಕಥನವನ್ನು ಚಿತ್ರಿಸಿದ್ದುಂಟು. ಇದರ ಜಾಡನ್ನೆ ಹಿಡಿದ 'ಭಾಸ' ಮುನಿಯು ಕರ್ಣನನ್ನು ಸ್ವಲ್ಪ ಸಹಾನೂಭೂತಿಯಿಂದ ಕಂಡು ಚಿತ್ರಿಸಿದ್ದುಂಟು. ಇವರಿಬ್ಬರಲ್ಲಿ ಮುಂದೆ ಭಾಸನನ್ನು ಅನುಸರಿಸಿ ಅವನ ಹೃದಯವನ್ನು ಹೊಕ್ಕು ಹೊಸಹೊಳವನ್ನು ತೋರಿಸಿದವನು ಕನ್ನಡದ 'ಪಂಪ' ಮಹಾಕವಿ ಇವನು ಭಾರತವು ಕರ್ಣರಸಾಯನವಾಗುವುದಕ್ಕೆ ಮುಖ್ಯಕಾರಣಕರ್ಣನೊಬ್ಬನೇ ಎಂದು ತನ್ನ ಕಾವ್ಯದಲ್ಲಿ ನಿರೂಪಿಸಿದ್ದು ಕಂಡು ಬಂದಿದೆ. ಇದಕ್ಕೆ ಪೂರಕವೆಂಬಂತೆ ಪಂಪ ಭಾರತದಲ್ಲಿ ಉಲ್ಲೇಖಗೊಂಡ "ನೆನೆಯದಿರಣ್ಣ ಭಾರತದೊಳಿಂ ಪೆಟಿರಾರು ಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯೆ॥" ಎಂದು ಪಂಪ, ಕರ್ಣನ ವೈಶಿಷ್ಠ್ಯವನ್ನು ಸಾರಿ ಹೇಳಿದ್ದಾನೆ ಭಾಸ–ಪಂಪ ಈ ಇರ್ವರ ದೃಷ್ಟಿಕೋನಗಳು ಮಿಲನಗೊಂಡು ಇವರಿಬ್ಬರಿಗೆ ಮಿಗಿಲಾಗಿ ಒಂದು ಹೆಜ್ಜೆ ಮುಂದುಹೋದ 'ಕುಮಾರವ್ಯಾಸ' ತನ್ನದೇ ಆದ ಶೈಲಿಯಲ್ಲಿ ಕರ್ಣನನ್ನು ಚಿತ್ರಿಸಿದ್ದು ಕರ್ಣನ ಪಾತ್ರದಲ್ಲಿ ಅವನುಕಂಡ ಆಧ್ಯಾತ್ಮಿಕತೆ, ಅವನ ಶಕ್ತತೆ, ತಾಯಿ ಪ್ರೀತಿ, ವಿಧಿಸ್ವರೂಪ ಮಾಯಾಲೀಲನೂ ಆದ ಕೃಷ್ಣನ

ಮಾಯಜಾಲ ದೊಳಗೆ ಕರ್ಣನ ಪಾತ್ರ ಅದ್ದಿ ತೆಗೆದಂತೆ ಎಣೆದುಕೊಂಡದ್ದು ಈ ಸೃಷ್ಠಿಯ ದೃಷ್ಠಿಗೆ ಸಮರ್ಥನೆ ನೀಡುವಂತಹದ್ದಾಗಿದೆ.

ಕರ್ಣನ ಜನನ ಕುಂತಿಯ ಬಾಲ್ಯದ ಹುಡುಗಾಟದಲ್ಲಾದರೂ ಹೆತ್ತ ತಾಯಿ ತಳ್ಳಿದರೂ 'ಲೋಕದ ತಾಯಿ' ಜಾಹ್ನವಿ ಅವನನ್ನು ಎತ್ತಿ ಮೆರೆಸಿದ್ದಾಳೆ. ಪಾಂಡವರ ಮೊದಲ ಸಂತತಿ ಪುತ್ರನಾಗಿದ್ದರೂ ಕೌರವರ ಜೊತೆ ಸೇರಿ ಪಾಂಡವರ ವಿರುದ್ದ ಹೋರಾಡಿ ವೀರಮರಣವನ್ನಪ್ಪುವ ಸ್ಥಿತಿ ಕರ್ಣನದ್ದಾಗಿದೆ. ಮೂರು ಬಾರಿ ಕುಂತಿಗೆ ತನ್ನ ಮಗ ಕರ್ಣನೆಂದು ಸಂದರ್ಭಗಳು ಒದಗಿ ಬಂದರೂ ಕಾಲದ ಜಾಲದಲ್ಲಿ ಸಿಲುಕಿದ ಕುಂತಿ ಅವನನ್ನು ಸಮಾಜದ ದೃಷ್ಟಿಯಿಂದ ಮಗನೆಂದು ಒಪ್ಪಿಕೊಳ್ಳಲು ಮುಂದೆ ಬರಲಿಲ್ಲ. ಇದರಿಂದ ಕರ್ಣಸೂತಜ, ಕುಲಜ, ಎಂಬ ಹಣೆಪಟ್ಟಿಯನ್ನು ಕಟ್ಟಿಕೊಳ್ಳಬೇಕಾಯಿತು, ಕೌರವರ ಸಂಗಡ ಸೇರಬೇಕಾಯಿತು. ಕೌರವಾಧೀಶ ದುರ್ಯೋಧನನ ಗೆಳೆತನದಲ್ಲಿ ಸುಖವನ್ನು ಕಂಡ ಕರ್ಣ ತನ್ನ ಜೀವನಪರ್ಯಂತ ತನ್ನ ಮೊದಲ ಬಗ್ಗೆ ಲೋಕಕ್ಕೆ ಅರುಹದೆ ಕೊರಗ ಬೇಕಾಯಿತು.

ದುರ್ಯೋಧನ ಸ್ನೇಹ ಸ್ವಲ್ಪ ಸ್ವಾರ್ಥದ್ದಾಗಿದ್ದರೂ, ಕರ್ಣನದು ನಿರ್ಮಲವಾದದ್ದಾಗಿತ್ತು. ಪ್ರಾಣಾರ್ಪಣೆ ಮಾಡುವಂತಹದ್ದಾಗಿತ್ತು. ಕರ್ಣನ ಸತ್ಯಸಂದತೆಯ ತ್ಯಾಗ ಗುಣಗಳು ಒಂದು ದೃಷ್ಠಿಯಿಂದ ಅವನ ಮರಣಕ್ಕೆ ಕಾರಣವಾದವ. ಪರಮಾರ್ಥ ದೃಷ್ಠಿಯಿಂದ ಅವನ ಜೀವಿತದ ಪರಿಪೂರ್ಣತೆಗೆ ಸಾಧನವೆನಿಸಿ ಅವು ಅವನ ದೌರ್ಬಲ್ಯಗಳೆನಿಸಿದರೂ ಅವನ ತಲೆಕಾಯ್ದ ಅಂಶಗಳೆನಿಸಿವೆ.

ಕರ್ಣನ ದಾನಕೋರತ್ವದ ಪ್ರತೀಕವಾಗಿ ಇಂದ್ರನಿಗೆ ತನ್ನ ಒಡ ಹುಟ್ಟಿದ ವಜ್ರ ಕವಚವನ್ನು ಕೊಟ್ಟಿದು, ತೊಟ್ಟ ಬಾಣ ತೊಡನೆಂದು ಯುದ್ಧರಂಗಕ್ಕೆ ತೆರಳುವಾಗ ತಾಯಿಗೆ ಮಾತುಕೊಟ್ಟಿದ್ದು, ಯುದ್ಧರಂಗದಲ್ಲಿ ಗೆಲುವು ಸೋಲಿನ ಮಧ್ಯ ಹೊರಳಾಡುತ್ತಿದ್ದಾಗ ಮಾರುವೇಷಧಾರಿಯಾಗಿ ಬಂದ ಕೃಷ್ಣನಿಗೆ ತನ್ನ 'ಕುಂಡಲಿಗಳನ್ನೇ 'ಬಿಚ್ಚಿಕೊಟ್ಟದ್ದ ಪ್ರಮುಖ ಅಂಶಗಳನಿಸಿದರೂ ಇವನು 'ತ್ಯಾಗ ಸಿಂಹಾಸನದ ಮೇಲಿದ್ದಾಗ ಕೈಹೊಡ್ಡಿ ಬಂದವರು ಬರಿಗೈಯಲ್ಲಿ ಹೋದ ಪ್ರಶ್ನೆಯೇ ಇಲ್ಲದಂಹ ಕೀರ್ತಿಗಳಿಸಿದವನು ಕರ್ಣ ಈ ರೂಪದಿಂದಲೇ ಪಂಪ 'ಕರ್ಣರಸಾಯನ ಮಲ್ತೆಭಾರತಂ' ಎಂದು ಕರ್ಣನ ಕುರಿತು ಹಾಡಿ ಹೊಗಳಿದ್ದನೆನಿಸುತ್ತದೆ.

ಲೋಕದ ದುಃಖ, ನಿಂದನೆ, ತಿರಸ್ಕಾರಗಳಿಂದ ನೊಂದು, ನಲುಗಿ, ಪುಟವಿಟ್ಟ ಬಂಗಾರದಂತೆ ಮೆರೆದ ಕರ್ಣ, ಯುದ್ಧರಂಗದಲ್ಲಿ ಕೃಷ್ಣನ ಕುತಂತ್ರದಿಂದ ವೀರಮರಣವನ್ನಪ್ಪಿ ಪಾಂಡವರಿಗೂ ಸುಲಭವಾಗಿ ದೊರೆಯದ ಪರಮಪದವನ್ನು ಅವರಿಗಿಂತ ಮುಂಚೆಯೇ ಪಡೆದವನಾಗಿದ್ದಾನೆ.

ಕರ್ಣನ ಪಾತ್ರದಲ್ಲಿ ಕುಮಾರವ್ಯಾಸನೇ ಹೊಕ್ಕು ಆಧ್ಯಾತ್ಮದ ಹೊನ್ನಿನೆಳೆಯನ್ನು ಕಂಡ ಅವನು ಮತ್ತಷ್ಟು ಉಜ್ವಲ ಗೊಳಿಸಿದ್ದಾನೆ. ಭಾಸ-ಪಂಪರು ಕಂಡರಿಸಿದ ಕರ್ಣನ ಪ್ರವಾಹ ರೂಪಕ್ಕೆ ಕುಮಾರವ್ಯಾಸ ವಜ್ರ ಕಿರೀಟವನ್ನು ತೊಡಿಸಿ ಮೆರೆಸಿದ್ದಾನೆ. ಈ ವಿಚಾರದಿಂದಲೇ 'ಕರ್ಣ'ನ ವ್ಯಕ್ತಿತ್ವ ನಮ್ಮ ಕಾಲದುದ್ದಕ್ಕೂ ಜನಮನ್ನಣೆ ಪಡೆದು ಎಂದಿಗೂ ಕುಂದದ ಪ್ರತಿಭೆ ಎನಿಸಿದೆ.

**ಕಣ್ಮರೆಯಾದ ಕನ್ನಡ, ಮಹಾರಾಷ್ಟ್ರದ ಮೂಲ**

೧೯೫೨ರಲ್ಲಿ ಶಂ.ಬಾ.ಜೋಶಿ ಮನೋಹರ ಗ್ರಂಥ ಪ್ರಕಾಶನದಿಂದ ಪ್ರಕಟವಾದ ಈ ಕೃತಿಗಳ ಕುರಿತ ವಿಮರ್ಶಾ ಲೇಖನವಾಗಿ ಡಿ.ಎಲ್.ಎನ್. ತಮ್ಮ ಪೀಠಿಕೆಗಳು ಲೇಖನಗಳು ಕೃತಿಯ ೨೮ನೇ ಭಾಗವಾಗಿ ಮೂಡಿ ಬಂದುದಾಗಿದೆ.

ಈ ಎರಡು ಕೃತಿಗಳ ಕುರಿತು ಡಿ.ಎಲ್.ಎನ್. ನೃಪತುಂಗನಿಗಿಂತ ಹಿಂದೆ ಪ್ರಾಚೀನ ಕಾಲದಲ್ಲಿ ಕರ್ನಾಟಕದ ಎಲ್ಲೆ ಎಷ್ಟಿದ್ದಿತ್ತು? ಅಂದಿನ ಭಾಷಾ ಪ್ರಭಾವ ಏನಿದ್ದಿತ್ತು? ಎಂಬುದನ್ನು ದೊರೆತ ಆಧಾರಗಳ ಮೇಲೆ ತರ್ಕಿಸಿ, ಕನ್ನಡದ ಮೂಲಸ್ಥಾನ ಯಾವುದಿತ್ತೆಂದು ಹಾಗೆಯೇ, ಮರಾಠರ ಮೂಲಸ್ಥಾನ ಯಾವುದೆಂದು ಗುರುತಿಸುವ ಸವಿಸ್ತಾರ ಚರ್ಚೆ ಈ ಲೇಖನದ್ದಾಗಿದೆ.

ಭಾಷೆಯ ದೃಷ್ಟಿಯಿಂದ ರಾಜಕೀಯ ಪ್ರಾಂತ್ಯಗಳನ್ನು ರಚಿಸಬೇಕೆಂದು ಹವಣಿಸುತ್ತಿರುವ ಈ ಕಾಲದಲ್ಲಿ ಇಂತಹ ಕೃತಿಗಳಿಂದ ಕೊಂಚ ವಿಚಾರಗಳು ಬೆಳಕು ಚೆಲ್ಲುವುದು ಸ್ವಾಭಾವಿಕ. ಕಾವೇರಿ, ನರ್ಮದಾ ನಡುವಣ ಪ್ರದೇಶ ಬಹುಕಾಲದಿಂದ ಕನ್ನಡ ತೆಲುಗು ಮರಾಠಿಗಳ ಕದನಕ್ಷೇತ್ರವಾಗಿದೆ ಈಗಲೂ ಹಾಗೆಯೇ ಮುಂದುವರೆದಿದೆ. ಈ ಮೂರು ಭಾಗಗಳ ತಿಕ್ಕಾಟದಲ್ಲಿ **ಗಡಿನಾಡ ಜನರ** ಪಾಡು ಹೇಳತೀರದ್ದಾಗಿದೆ.

ಮೂಲ ಕನ್ನಡದ ಸ್ಥಾನಮಾನ ನಿರ್ದೇಶಿಸುವುದಕ್ಕೆ ಜೋಷಿ ಅವರು ನೀಡಿದ ಆಧಾರಗಳ ಕುರಿತು ಡಿ.ಎಲ್.ಎನ್. ಅವುಗಳಲ್ಲಿನ ಕೆಲ ವಿಚಾರಗಳನ್ನು ಭಾಷೆಯ ನೆಲೆಯಲ್ಲಿ ಕೆಲವನ್ನು ಉಲ್ಲೇಖಿತ ಗ್ರಂಥಗಳ ನೆಲೆಯಲ್ಲಿ, ಇನ್ನೂ ಕೆಲವನ್ನು ಚರಿತ್ರಾರ್ಹ ವಿಷಯಗಳ ನೆಲೆಯಲ್ಲಿ, ಮಾನವ ಕುಲಶಾಸ್ತ್ರೀಯ ನೆಲೆಯನ್ನು ಸಮೀಕರಿಸಿ ಕೊಂಡಂತಹ ಅವರ ವಿಚಾರಗಳ ಬೆನ್ನಲ್ಲೆ ತಮ್ಮ ತೀರ್ಮಾನವನ್ನು ಅಭಿವ್ಯಕ್ತಿಪಡಿಸಿದ್ದು ಈ ಲೇಖನದಲ್ಲಿ ಎದ್ದು ಕಂಡ ಅಂಶವಾಗಿದೆ.

**ಮರಳಿ ಮಣ್ಣಿಗೆ**

೧೯೪೩ ರಲ್ಲಿ ಮೊದಲ ಬಾರಿಗೆ ಪ್ರಬುದ್ಧ ಕರ್ಣಾಟಕದ (ಕಾವ್ಯಾವಲೋಕನ) ಸಂಪುಟ-೨೪, ಸಂಚಿಕೆ-೪ರಲ್ಲಿ ಪ್ರಕಟಗೊಂಡ ಈ ವಿಷಯ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೨೯ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಶಿವರಾಮಕಾರಂತರ ಮರಳಿ ಮಣ್ಣಿಗೆ ಕೃತಿಗೆ 'ಬರೆದ ವಿಮರ್ಶೆ ಆ ಕಾಲದಲ್ಲಿ ಒಂದು ಹೊಸ ಸಂಚಲನವನ್ನೇ ಸೃಷ್ಟಿಸಿತ್ತು. ಈ ಕಾದಂಬರಿ ಮೂಲದಿಂದ ಅಂದಿನ, ಮುಂದಿನ ಕಾದಂಬರಿಕಾರರ ಪೀಳಿಗೆಗೆ ಡಿ.ಎಲ್.ಎನ್. ಒಂದು ಸಂದೇಶ ನೀಡಿದ್ದು, ಕಾದಂಬರಿಕಾರಾದವರು ಅನಗತ್ಯವಾದ ವರ್ಣನೆಗಳನ್ನೂ ಬಿಡಬೇಕು, ಇಲ್ಲದಿದ್ದಲ್ಲಿ ಕಲೆಗಾರಿಕೆಗೆ ಕುಂದು ಎಂಬುದು ಸ್ಪಷ್ಟ ವಿಚಾರ, ಅಲ್ಲದೆ ಕಾದಂಬರಿಯಲ್ಲಿನ ವರ್ಣನೆಗಳು ಎಷ್ಟೋ ಚೆನ್ನಾಗಿದ್ದರೂ ಅವುಗಳ ಮಿತಿಯ ಚೌಕಟ್ಟಿನಲ್ಲಿದ್ದರೆ ಚೆನ್ನ ಎಂದು ಹೇಳಿ ಕಾರಂತರ ಮರಳಿ ಮಣ್ಣಿಗೆ ಕಾದಂಬರಿಯನ್ನು ವಿಮರ್ಶಿಸುತ್ತಾ ಡಿ.ಎಲ್.ಎನ್. ಮಂಗಳೂರಿನ ಪಡು ಕರಾವಳಿಯ ಬದುಕು ಬಡತನದೊಂದಿಗೆ ಸೆಣಸಿ ನಡೆಸುತ್ತಿರುವ ಸಂಸಾರವನ್ನು ಕಾರಂತರು ಎಳೆ ಎಳೆಯಾಗಿ ರಸವತ್ತಾಗಿ ಬಿಚ್ಚಿ ತೋರಿಸಿದ್ದಾರೆ, ಕನ್ನಡಕ್ಕೆ ಸ್ವತಂತ್ರ ಕಾದಂಬರಿಗಳಿಲ್ಲವೆಂಬ ಕೊರತೆಯನ್ನು ಮಾತ್ರ ಇದು ಹೋಗಲಾಡಿಸಿದೆ ಹಾಗೂ ಕನ್ನಡ ಕಾದಂಬರಿ ಪ್ರಪಂಚ ಕಾರಂತರ ಕೈಯಲ್ಲಿ ಉನ್ನತಿ ಪಡೆದಿದ್ದಾಗಿದೆ ಎಂದು ಈ ಕಾದಂಬರಿ ಕುರಿತು ಚರ್ಚೆ ಮುಂದುವರೆಸಿ ಈ ಕಥೆಯನ್ನು ಸಂಗ್ರಹಿಸ ಹೊರಡುವುದು ಅನ್ಯಾಯ, ಆದರೂ ವಿಮರ್ಶೆಯ ಸೌಕರ್ಯಕ್ಕಾಗಿ ಅದರ ನಡುಗೆಯನ್ನು ಮಾತ್ರ ಇಲ್ಲಿ ಗಮನಿಸಬಹುದಾಗಿದೆ.

'ಈ ಕಾದಂಬರಿಯಲ್ಲಿ ಮೂರು ತಲೆಮಾರುಗಳ ಕಥೆ ಒಂದಕ್ಕೊಂದು ಬೆಸೆದುಕೊಂಡು ಬೆಳೆದಿವೆ. ಬಡತನದ ಕೋಟಲೆಯಲ್ಲಿ ಈ ತಲೆಮಾರಿನವರು ಬೆಂದು ಬಣ್ಣ ಬಣ್ಣವಾಗಿ ಬಾಡಿ ಬದುಕಿನ ಮರ್ಮವೇನೆಂಬುದನ್ನು ಕಂಡುಕೊಂಡ ಕಥೆ ಇದರ ಮುಖ್ಯ ವಸ್ತುವಾಗಿದೆ.'[೨೦]

'ಕಥೆಯನ್ನು ಓದುವಾಗ ಕೆಲವು ಬೇಸರದ ಕ್ಷಣಗಳನ್ನು ಗುರುತಿಸಿದ ಡಿ.ಎಲ್.ಎನ್. ಈ ರೀತಿಯಲ್ಲಿ ವಿವರಿಸಿದ್ದಾರೆ, ಕಥೆಯ ನಿರೂಪಣಾ ಅವಧಿಯಲ್ಲಿ ಒಂದೇ ವಿಷಯವನ್ನು ಕುರಿತ ವರ್ಣನೆ ಅತಿಯಾಗಿ ಮೂಡಿ ಬಂದಿದೆ ಪಾರ್ವತಿ, ಸತ್ಯಭಾಮೆ, ಲಚ್ಚ, ಮುಂತಾದವರ ವರ್ಣನೆ ಒಂದು ಮಾದರಿಯಾಗಿ ಮೂಡಿಬಂದರೆ, ಅಲ್ಲಿ ಬರುವ ಮೂರು ಮದುವೆಗಳಲ್ಲೂ ಅದೇ ದಿಬ್ಬಣ, ಅದೇ ಗರ್ನಾಲುಗಳ ಹಾರಾಟ, ಅದೇ ಕೋಲಾಹಲಗಳು ಎದ್ದು ಕಂಡಿದ್ದು ಇವುಗಳಲ್ಲಿ ಮುಖ್ಯವಾಗಿ ಒಂದಕ್ಕೆ ಎಲ್ಲಾ ವರ್ಣನೆಯನ್ನು ತೆಗೆದಿಟ್ಟು ಮಿಕ್ಕವನ್ನು ಅದರಂತೆ ಎಂದು ತೇಲಿಸಿದ್ದರೆ, ಮೊದಲಾರ್ಧದ ಪ್ರಮಾಣವು ಕಡಿಮೆಯಾಗಿ ಬೇಸರವೂ ತಿಳಿಯಾಗುತ್ತಿತ್ತು. ಪಡುಕರಾವಳಿಯ ಹಳ್ಳಿಯ ಜನರ ಬದುಕಿನ ವೃತ್ತಿಗಳ ನಾನಾ ಅಂಶದ ವಿವರಣೆಗಳು ಇಲ್ಲಿ ಕೊಟ್ಟಿರುವಷ್ಟೆಲ್ಲಬೇಕೇ? ಮೇಲಿಂದ ಮೇಲೆ ಉಳುವ, ನೆಡುವ, ನೀರು ಹಾಯಿಸುವ, ಕೆತ್ತುವ, ಹೆಣೆಯುವ ನಾನಾ ಕಸುಬಿನ ವಿವರಗಳು ಬರುವುದರಿಂದ ಇದೇನು ಸಮಾಜ ವಿಜ್ಞಾನವೋ? ಎಂಬ ಸಂದೇಹ ಬರುವಂತಿದೆ'[೨೧] ಎಂದು ಹಲವು ಅನಗತ್ಯ ವರ್ಣನೆಗಳು ಕಾದಂಬರಿಯಲ್ಲಿನ ಗುಣದೋಷಗಳೆಂದು ಸ್ಪಷ್ಟಪಡಿಸಿದ್ದಾರೆ. ಅಲ್ಲದೇ, ಅಲ್ಲಿನ ಕೆಲವಾರು ವಿಚಾರಗಳನ್ನು ಮೆಚ್ಚಿಕೊಂಡ ಡಿ.ಎಲ್.ಎನ್. 'ಕಾರಂತರ ಕಲೆ ಇಲ್ಲಿ ರಸಾಯನವಾಗಿದೆ,

ಕಾರಂತರ ಶೈಲಿ ಸೂಚಿಯಾನ ಕಲೆಯಲ್ಲಿ ಪರಿಣತವಾಗಿ ಈ ಕಾದಂಬರಿಯ ವಿಧಾನದಲ್ಲಿ ಚಿತ್ರಗಳ ಚಲುವನ್ನು ಸೃಷ್ಟಿಸಿದೆ ಎಂದು ಮೆಚ್ಚಿಕೊಂಡಿದ್ದಾರೆ.'[೨೨] ಒಟ್ಟಿನಲ್ಲಿ ಈ ಕಾದಂಬರಿಯ ಕಟ್ಟುವಿಕೆಯಿಂದ ಕಾರಂತರು ಮುಗಿಲಿಗೆ ಬಣ್ಣ ಕಟ್ಟುವಕೌಶಲ್ಯ, ಮನಸ್ಸಿನ ಅಳಲು ಹಿಗ್ಗು (ಸಂತೋಷ) ಚಿಂತೆ (ದುಡುಗ) ಬೇಸರಗಳನ್ನು ಮಸೆದು ಸೆರೆಹಿಡಿದು ನಿಲ್ಲಿಸುವ ನಯಗಾರಿಕೆ ಹೊಂದಿದ್ದವರಂತೆ ಮೂಡಿಬಂದಿದ್ದಾರೆ. ಇದು ಕಾರಂತರ ಶೈಲಿಯ ಗುಣವೆನಿಸಿದೆ. ವರ್ಣಿಸುವ ವಸ್ತು ಯಾವುದೇ ಇರಲಿ ಅದನ್ನು ಚಿತ್ರಕ್ಕೆ ತುಂಬವ ಬಣ್ಣದಂತಹ ಶಕ್ತಿ ಅವರಲ್ಲಿದ್ದುದ್ದುಂಟು ಎಂದು ಈ ವಿಮರ್ಶೆಯ ಒಟ್ಟಾರೆ ಸಾರಾಂಶದಿಂದ ತಿಳಿಯಬಹುದಾಗಿದೆ.

**ವೈದ್ಯರಾಜ**

೧೯೩೩ ರಲ್ಲಿ ಮೊದಲ ಬಾರಿಗೆ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಸಂಪುಟ-೧೪-ಸಂಚಿಕೆ-೧ರಲ್ಲಿ ಮೂಡಿ ಬಂದ ಈ ವಿಮರ್ಶಾ ಲೇಖನ ಮುಂದೆ ಡಿ.ಎಲ್.ಎನ್. ಸಂಪಾದಿತ ಪೀಠಿಕೆಗಳು ಲೇಖನಗಳು ಕೃತಿಯ ೩೦ನೇ ಭಾಗವಾಗಿ ಮೂಡಿ ಬಂದದ್ದಾಗಿದೆ.

'ಶ್ರೀರಂಗ' ಅವರು ರಚಿತ ಸಾಮಾಜಿಕ ನಾಟಕ ಈ 'ವೈದ್ಯರಾಜ' ಕೃತಿ ಈ ಕುರಿತು ಡಿ.ಎಲ್.ಎನ್. ಅವರು ಆರು ಪುಟಗಳಲ್ಲಿ ನಾಟಕದ, ರೂಪರೇಷೆಗಳನ್ನು ವಿಮರ್ಶಿಸಿದ್ದನ್ನು ಇಲ್ಲಿ ಪರಾಮರ್ಶಿಸಿ ನೋಡಬಹುದಾಗಿದೆ.

ತಮ್ಮ ಹೆಸರು ನಾಲ್ಕು ಜನರ ಬಾಯಲ್ಲಿ ಬರಲೆಂಬ ಆಸೆಯನ್ನಿಟ್ಟುಕೊಂಡು ಕೀಳ ಕಾಮಿಗಳಾಗಿ ತಾವು ಸಮಾಜದ ಸುಧಾರಕರೆಂಬ ವೇಷವನ್ನು ಶ್ರೀರಂಗರು ಈ ನಾಟಕದಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸಿದ್ದಾರೆ. ಈ ಮೊದಲು ಮಾತುಗಳಲ್ಲಿಯೇ ವಿಮರ್ಶಕ ಡಿ.ಎಲ್.ಎನ್. ಶ್ರೀರಂಗರು ನಾಟಕದ ಸಾರವನ್ನು ತೋರಿಸಿಕೊಟ್ಟಿದ್ದಾರೆ. ಕೃತಿಯ ಒಳಮರ್ಮವನ್ನರಿತು, ಅದನ್ನು ನಾಲ್ಕು ಮಾತಿನಲ್ಲಿ ಅಳವಡಿಸುವುದು ವಿಮರ್ಶಕನ ಮುಖ್ಯಕಾರ್ಯ. ಅನಂತರ ಕೃತಿಯ ಕಥೆಯ ನಡೆಯನ್ನು ಸೂಚಿಸಿ ಅದರ ವಿಮರ್ಶೆಗೆ ತೊಡಗುವುದು ಸಹಜ. ನಾಟಕವಾಗಲೀ, ಕಾದಂಬರಿ ಆಗಲೀ, ಬೇರೊಂದು ಕಲಾಕೃತಿಯೇ ಆಗಲೀ, ಅನಾವಶ್ಯಕವಾದವುಗಳನ್ನು ಬಿಟ್ಟು ಅಲ್ಲಿಗೆ ಹೊಂದಿಕೊಳ್ಳುವಂತಹ ಘಟನೆ, ಮಾತು, ಮುಂತಾದ ಪರಿಕರಗಳನ್ನೇ ಬಳಸಬೇಕು. ಆಗ ಮಾತ್ರ ಕೃತಿಗೆ ಸಾಮರಸ್ಯವೂ ಒಪ್ಪವೂ ಬರುತ್ತದೆ. ಈ ವಿಷಯವನ್ನು ಡಿ.ಎಲ್.ಎನ್. ಈ ಬಗೆಯಾಗಿ ವಿವರಿಸಿದ್ದು ಕಾಣಬಹುದು. 'ಕೆಲವಡೆ ನಾಟಕ ಬೇಗ ಮುಂದುವರೆದರೆ, ಕೆಲವೆಡೆ ಅನಾವಶ್ಯಕ ಮಾತುಗಾರಿಕೆಯಿಂದ ಕಲೆಗೆಯೇ ಕಡಿಮೆ ಪ್ರಯೋಜನ'[೨೩] ಎಂದು ಹೇಳಿದ್ದಾರೆ. ಈ ನಾಟಕದಲ್ಲಿ ಅಲ್ಲಲ್ಲಿ ಹೊರಹೊಮ್ಮಿದ ತಿಳಿ ಆದ ಹಾಸ್ಯ ಉಲ್ಲಾಸವನ್ನು ಉಂಟುಮಾಡುತ್ತದೆ. ಈ ನಾಟಕದ ಜೀವಾಳವಾಗಿ ವಿದ್ಯಾನಧರನು ಹರಿಹರರಾಯನ ಧರ್ಮಪುತ್ರನಲ್ಲವೆಂಬುದರ ಮೇಲೆ ಅವಲಂಬಿಸಿದೆ. ಗ್ರಂಥಕರ್ತರು ಈ ವಿಷಯವನ್ನು ಬಹಳ ಎಚ್ಚರಿಕೆಯಿಂದ ಕಾದಿಟ್ಟು ಕೊನೆಗೆ ಪ್ರೇಕ್ಷಕರನ್ನು

ವಿಷ್ಮಯದಲ್ಲಿ ಮುಳುಗಿಸಿದ್ದು ಎದ್ದು ಕಂಡಿದೆ ಹಾಗೂ ಹಾಸ್ಯವು ಬಲವಂತವಾಗಿ ಬಂದು ಸೂರೆಗೊಂಡಂತೆ ಕಂಡು ಬದುದಾಗಿದೆ.

**ಕನ್ನಡ ನುಡಿಯ ಹುಟ್ಟು**

೧೯೩೮ ರಲ್ಲಿ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಸಂಪುಟ-೧೯, ಸಂಚಿಕೆ-೨ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೨೧ನೇ ಲೇಖನವಾಗಿ ಪ್ರಸ್ತಾಪಗೊಂಡದ್ದಾಗಿದೆ.

ಶಂಬಾ ಜೋಶಿಯವರ "ಕನ್ನಡ ನುಡಿಯ ಹುಟ್ಟು" ಎಂಬ ಗ್ರಂಥದ ಬಗೆಗೆ ನಾಲ್ಕು ಮಾತುಗಳನ್ನು ಅರುಹಿದ ಡಿ.ಎಲ್.ಎನ್. 'ಜೋಷಿಯವರು ಕನ್ನಡ ನಾಡು, ನುಡಿಯ ವಿಚಾರ ಕುರಿತು ತಮ್ಮದೇ ಓದಿನ ಶೈಲಿಯಲ್ಲಿ ಗ್ರಹಿಸಿಕೊಂಡ ವಿಚಾರಗಳನ್ನು ಈ ಕೃತಿಯ ಮೂಲಕ ಸಂಗ್ರಹಿಸುವುದರಲ್ಲಿ ಮುಂದಾಗಿದ್ದಾರೆ. ಈ ರೀತಿಯಲ್ಲಿ ನಡೆಯುವ ದಾರಿಹೋಕರಿಗೆ ಮಾರ್ಗ ಹಾಕಿಕೊಟ್ಟಿದ್ದಾರೆ. ಅವರ ಮನಸ್ಸಿನಲ್ಲಿದ್ದ ಕನ್ನಡದ ಮೇಲಿನ ಅಭಿಮಾನ, ಮುಂದೆ ಅದು ಬೆಳೆದು ಹೆಮ್ಮರವಾಗಬೇಕೆಂಬ ಆಶಯಕ್ಕೂ ಈ ಕೃತಿಪೂರಕ ಅಂಶವಾಗಿದೆ. ಇಷ್ಟೆ ಅಲ್ಲದೆ ಇದನ್ನು ಅಭ್ಯಾಸಿಸುವವರಿಗೂ ಇದೇ ರೀತಿ ಭಾವನೆಗಳು ಮನದಲ್ಲಿ ಮೇಳೈಸುವಂತೆ ಮಾಡಿದ್ದಾರೆ.'[೨೪] ಇಂತಹ ಮೆಚ್ಚುಗೆಯ ಮಾತು ಅವರ ವಿಮರ್ಶೆಗೆ ಕೈಗನ್ನಡಿಯಾಗಿದೆ. ಕೆಲವು ಶಬ್ದಗಳಿಗೆ ಕೊಟ್ಟಿರುವ ನಿರುಕ್ತದ ಬಗೆಗೆ ಅವರು ತಮ್ಮ ಆಕ್ಷೇಪಣೆಯನ್ನು ಎತ್ತಿರುವರು. ಶಬ್ದಗಳ ಉತ್ಪತ್ತಿ ವಿಚಾರ ಕುರಿತು ಪ್ರಸ್ತಾಪಿಸುವಾಗ ಜೋಶಿಯವರು ದ್ರಾವಿಡ ಭಾಷೆಗಳ ಸಹಾಯವನ್ನು ಪಡೆಯಲು ಹಿಂಜರಿಯುವುದನ್ನು ಸೂಕ್ಷ್ಮವಾಗಿ ಗಮನಿಸಬಹುದಾಗಿದೆ.

ಕನ್ನಡ ಸಾಹಿತ್ಯದ ಯಾವುದೇ ವಿಚಾರಗಳನ್ನು ಪ್ರಸ್ತಾಪಿಸುವಾಗ ಜೋಷಿಯವರಂತೆ ಯಾವುದೇ ಮುಚ್ಚು ಮರೆಯಿಲ್ಲದೇ ನೇರವಾಗಿ ಪ್ರಸ್ತಾಪಿಸಬೇಕು ಆಗಲೇ ಸಾಹಿತ್ಯದ ಏಳ್ಗೆ ಸಾಧನ ಎಂದು ಡಿ.ಎಲ್.ಎನ್. ಜೋಷಿಯವರ ನೇರ ಮಾತಿನ ಕುರಿತು ಹೇಳಿದ್ದು ಸಮಂಜಸವೆನಿಸಿದೆ.

**ಅಕ್ಕಮಹಾದೇವಿ**

೧೯೩೮ ರಲ್ಲಿ ಮೊದಲ ಬಾರಿಗೆ ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಚಿಕೆ-೨-೩ ಸಂಪುಟ-೧೯ರಲ್ಲಿ ಪ್ರಸ್ತಾಪಗೂಂಡ ಈ ವಿಚಾರ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೨೦ನೇ ಲೇಖನವಾಗಿ ಮೂಡಿ ಬಂದದ್ದಾಗಿದೆ.

ರಂ.ಶ್ರೀ. ಮುಗಳಿ ಅವರು ರಚಿಸಿದ 'ಅಕ್ಕಮಹಾದೇವಿ' ನಾಟಕವನ್ನು ಕುರಿತು ಡಿ.ಎಲ್.ಎನ್. 'ಅಕ್ಕಮಹಾದೇವಿಯ ಭಾವಗೀತೆ' ಎಂದು ಕರೆದಿದ್ದಾರೆ.

ನಾಟಕದಲ್ಲಿ ಅಡಗಿರುವ ವಸ್ತು, ಲೌಕಿಕವನ್ನು ಮೀರಿ ಆಧ್ಯಾತ್ಮದ ನಿಲುವಿನಲ್ಲಿ ನಿಂತು ಕಂಗೊಳಿಸುತ್ತಿರುವ ಅಕ್ಕಮಹಾದೇವಿಯ ಜೀವನ ಗಾಥೆ, ಅಲ್ಲದೆ ಇಲ್ಲಿ ಮೂಡಿ ಬಂದಿರುವ ಕೆಲವು ಪುರಾಣೋಕ್ತ ಸಂದರ್ಭಗಳ ಚಿತ್ರಣ. ಆಕೆಯ ಲೌಕಿಕ ಜೀವನವು ಮುಕ್ತಿಗೆ ಸೋಪಾನವಾಗುವ ಕ್ರಮವನ್ನು ಲೇಖಕರು ಶ್ರಮವಹಿಸಿ ಅಕ್ಷರಗಳಲ್ಲಿ ಸೆರೆಹಿಡಿದಿದ್ದನ್ನು ಡಿ.ಎಲ್.ಎನ್. ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಆಧ್ಯಾತ್ಮದ ಜೀವನವೊಂದನ್ನು ತೆಗೆದುಕೊಂಡು ಅದನ್ನು ನಾಟಕದಲ್ಲಿ ಚಿತ್ರಿಸುವುದು ತುಂಬಾ ಕಷ್ಟದ ಕೆಲಸ ಅದರಲ್ಲಿನ ಲೌಕಿಕ, ಅಲೌಕಿಕ ವಿಚಾರಗಳನ್ನು ಪ್ರಸ್ತಾಪಿಸುವುದು ಕಷ್ಟ ಇಂತಹ ಒಂದು ಪ್ರಯತ್ನಕ್ಕೆ ಕೈಹಾಕಿ ಯಶಸ್ವಿಯಾದ ಮುಗಳಿ ಅವರ ಕೃತಿ ಕುರಿತು ಶ್ಲಾಘಿಸಿದ ಡಿ.ಎಲ್.ಎನ್. 'ಈ ನಾಟಕ ಅಕ್ಕನ ವಚನಗಳಿಗೆ ರಸಮಯವಾದ ವ್ಯಾಖ್ಯಾನ ವಾಗಿದೆ'[೨೫] ಎಂದು ಅಭಿಪ್ರಾಯಿಸಿದ್ದಾರೆ.

**ವೀಣಾನಾದ**

ಪ್ರಬುದ್ಧ ಕರ್ಣಾಟಕ ಸಂಚಿಕೆ-೧-ಸಂಪುಟ-೧೭ ರಲ್ಲಿ ಮೊದಲ ಬಾರಿಗೆ ಪ್ರಸ್ತಾಪಿತ ಗೊಂಡ ಈ ವಿಷಯ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೩೧ನೇ ಲೇಖನವಾಗಿ ಮೂಡಿಬಂದದ್ದಾಗಿದೆ.

ಶ್ರೀ ಕುಲಕರ್ಣಿ. ಕೃ. ಹ. ಅವರ ಒಂಬತ್ತು ಕಥೆಗಳ ಸಂಕಲನವಾದ ಈ 'ವೀಣಾನಾದ' ಕೃತಿಯು ಮನೋಹರ ಗ್ರಂಥಮಾಲೆ ಧಾರವಾಡದಿಂದ ಪ್ರಕಟಗೊಂಡದ್ದಾಗಿದ್ದು, ಈ ಕುರಿತು ಡಿ.ಎಲ್.ಎನ್. ಪುಟ್ಟದಾಗಿ ವಿಮರ್ಶೆ ಬರೆದರೂ 'ಕೃತಿಯ ಅಂತರಂಗವನ್ನು ಹೊಕ್ಕು ವಿವೇಚಿಸಿದ್ದಾರೆ ಕಾಣಿಕೆ, ಪೂಜೆ, ಕೊಡೆಯ ಸಮಸ್ಯೆ ವ್ಯಾಪಾರ, ಟಿಪ್ಪು ನಾಯಿಕುನ್ನಿ, ವೀಣಾನಾದ, ಮಾಲಗರಿ, ಮೇರಿಜಾನಳ ಕಥೆಗಳಲ್ಲಿ ಮೂಡಿಬಂದ ಕಥೆಯ ನಿರೂಪಣೆಯ ಸರಳವಾದ ಗೇಯತೆ, ಅನಾವಶ್ಯಕವಾದ ಮಾತುಗಾರಿಕೆ ವರ್ಣನೆ ಅತಿಯಾಗಿ ಮೂಡಿಬಂದಿದ್ದನ್ನು ಎಚ್ಚರವಹಿಸಿ ಗ್ರಹಿಸಿದ್ದನ್ನು ಡಿ. ಎಲ್.ಎನ್. ಅವರು ಈ ಕೃತಿಯ ಮೆಚ್ಚುಗೆ ವ್ಯಕ್ತಪಡಿಸಿದ್ದು ಕಂಡುಬದಿಂದೆ.

**ಜೀವನ ಯಾತ್ರೆ**

ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಸಂಚಿಕೆ-೧- ಸಂಪುಟ-೧೭ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೩೨ನೇ ಭಾಗವಾಗಿ ಪ್ರಸ್ತಾಪಗೊಂಡದ್ದಾಗಿದೆ.

ಅ.ನ.ಕೃಷ್ಣರಾಯರು ರಚಿಸಿದ 'ಜೀವನಯಾತ್ರೆ' ಈ ಕಾದಂಬರಿಯು ನೇರ, ನಿಷ್ಟುರ ಮಾತಿನ ಡಿ.ಎಲ್.ಎನ್. ಅವರು ಈ ಕೃತಿ ವಿಚಾರ ಕುರಿತು ಮೂವತ್ತೆರಡು ಪುಟಗಳಷ್ಟು ವಿಮರ್ಶೆ ಬರೆದಿದ್ದಾರೆ.

ಸಮಾಜದಲ್ಲಿ, ಬಾಲ್ಯವಿವಾಹ, ಸೂಳೆಗಾರಿಕೆ ಇತರೆ ಹಲವಾರು ಸಮಸ್ಯೆಗಳು ಅತಿ ಎತ್ತರವಾಗಿ ಬೆಳೆಯುತ್ತಿವೆ ಇಂತಹವುಗಳನ್ನು ಹತ್ತಿಕ್ಕಲು ಪ್ರಯತ್ನಿಸಬೇಕು ಆದರೆ, ಈ ಕೃತಿಯ ಲೇಖಕರು ಇಂತಹ ವಿಚಾರಗಳನ್ನು ಎಲ್ಲೆಲ್ಲೋ ಪ್ರೇರೇಪಿಸುತ್ತಿದ್ದಾರೆಂದು ಕಟುವಾಗಿ ಟೀಕಿಸಿದ ಡಿ.ಎಲ್.ಎನ್. 'ಪ್ರಕೃತ ಕಲಾದೃಷ್ಟಿಯಿಂದ ಜೀವನಯಾತ್ರೆ ನೋಡವುದಾದರೆ, ಪಟ್ಟಣ ನೋಡುವುದಕ್ಕೆ ಹೋಗಿ ಚರಂಡಿ ಹೊಕ್ಕಾಂತಾಗಿದೆ. ಇಂಥ ವಿಷಯವನ್ನು ಪ್ರತಿಪಾದಿಸಬೇಕಾದರೆ, ಅದನ್ನೆ ಅಧಿಕಸಿ ಸಮಗ್ರ ಕಾದಂಬರಿಯನ್ನು ಬರೆಯುವುದಕ್ಕಿಂತ ಇನ್ನಾವುದಾದರೂ ಘನವಾದ ಆದರ್ಶಯುಕ್ತ ವಸ್ತುವಿನ ನಿರೂಪಣೆಯಲ್ಲಿ ಒಂದು ಅಂಗವನ್ನಾಗಿ ಸೇರಿಸಿ ಹೇಳುವುದು ಒಳ್ಳೆಯದೆಂದು ಕಾಣುತ್ತದೆ. ಇಂಥಹ ನೀಚ ವಿಷಯವನ್ನೇ ಎತ್ತಿ ಹೇಳಿದರೆ ಏನೂ ತಿಳಿಯದ ಸ್ತ್ರೀ ಪುರುಷರ ಮನಸ್ಸನ್ನು ಮೇಲಿನ ಮಾಡುವ ಸಂಭವವೇ ಹೆಚ್ಚು ಅದು ದೇವರು ಕೊಟ್ಟಿರುವ ಶಕ್ತಿಯ ಅಪವ್ಯಯ'[೨೬] ಎಂದು ನಿಷ್ಠುರವಾದ ಬರವಣಿಗೆಯ ಈ ರೂಪ ಅವರ ಸತ್ಯಾಸತ್ಯತೆಯನ್ನು ಎತ್ತಿತೋರುವ ಶಕ್ತಿ ಎನಿಸಿ. ಇದು ಎಲ್ಲಾ ಬರವಣಿಗೆಗಾರರು ಗ್ರಹಿಸಬೇಕಾದ ಅತ್ಯುಪಯುಕ್ತ ಅಂಶವೆನಿಸಿದೆ ಎಂದಿದ್ದಾರೆ.

**ಪ್ರೇಮಾಹುತಿ**

ಟಿ.ವಿ. ರಾವು ಅವರ ಈ ಕೃತಿ ಕುರಿತ ವಿಮರ್ಶೆ ವಿಚಾರವಾಗಿ ಡಿ.ಎಲ್.ಎನ್. ಪ್ರಸ್ತಾಪಿತ ಈ ಲೇಖನ 'ಪೀಠಿಕೆಗಳು ಲೇಖನಗಳು' ಕೃತಿಯ ವಿಮರ್ಶಾ ಭಾಗದಲ್ಲಿ ೩೩ನೇ ವಿಷಯವಾಗಿ ಪ್ರಸ್ತಾಪಗೊಂಡದ್ದಾಗಿದೆ.

ಪ್ರಮುಖವಾಗಿ ಈ ಕಾದಂಬರಿ ಪ್ರಣಯ ಸ್ವರೂಪವನ್ನು ತಿಳಿಸುವಂತಹದ್ದಾಗಿದೆ. ಇಲ್ಲಿ ಮುಖ್ಯಪಾತ್ರಧಾರಿಗಳಾಗಿ ಕಮತಿ, ವಾಸುದೇವ, ಮದನಮೋಹನರಾಯರು ಕಂಡುಬರುತ್ತಾರೆ. ಕಮತಿ ಮದನಮೋಹನನಿಗೆ ಪತ್ನಿಯಾದರೆ, ವಾಸುದೇವನಿಗೆ ಪ್ರಿಯಕರೆ. ತನ್ನದೇಹ ಪತಿಗೆ ನೀಡಿ ಪ್ರೀಯಕರನಾದ ವಾಸುದೇವನಿಗೆ ಆತ್ಮವನ್ನೇ ನಿವೇದಿಸಿದ್ದಾಳೆ. ಯಾವುದೇ ತೆರನಾದ ಪ್ರತಿಫಲಾಪೇಕ್ಷೆ ಪಡದೆ ಪ್ರಣಯಾಗ್ನಿಯಲ್ಲಿ ಕಮತಿ ವಾಸುದೇವರ ಆತ್ಮಗಳು ನೊಂದು, ನಲುಗಿ ಒಂದಾದದ್ದನ್ನು ಜಾಣ್ಮೆಯಿಂದ ಲೇಖಕರು ರೂಪಿಸಿದ್ದ ಎದ್ದು ಕಂಡಿದೆ.

ಡಿ.ಎಲ್.ಎನ್. ಈ ಕಾದಂಬರಿ ಕುರಿತು 'ಕೃತಿಯುದ್ದಕ್ಕೂ ಅಲ್ಲಲ್ಲಿ ಬರುವ ಪ್ರಕೃತಿ ವರ್ಣನೆಯ ಪಾತ್ರಗಳ ಮನೋಧರ್ಮದ ವಿಭಜನೆಯೂ ಕೊಂಚ ಹೆಚ್ಚಾಗಿರುವಂತೆ ಕಂಡು ಬಂದು ಬೇಸರ ಹುಟ್ಟಿಸುವ ಆಗಿದೆ ಅಲ್ಲದೆ ಪಾತ್ರಗಳ ಕಾರ್ಯದಿಂದಲೂ ಅವರು ಆಡುವ

ಮಾತುಗಳಿಂದಲೂ ಅವರ ಸ್ವಭಾವವನ್ನು ನಿರೂಪಿಸುವುದು ಕಾದಂಬರಿಕಾರರು ತಾವೇ ವರ್ಣಿಸುವುದಕ್ಕಿಂತ ಉತ್ತಮವಾದ ಅಂಶ ಎಂದು'[೨೭] ಕೃತಿಯಲ್ಲಿ ಮೂಡಿ ಬಂದು ವಿಚಾರಗಳು ಕುರಿತು ಈ ಮಾತನ್ನು ಹೇಳಿದ್ದು ಸಮಂಜಸವೆನಿಸುತ್ತದೆ.

**ತಿಳಿಗನ್ನಡ ವ್ಯಾಕರಣ**

೧೯೩೫ರಲ್ಲಿ ಆರ್.ಎನ್.ಸೂರ್ಯನಾರಾಯಣ ಅವರು ರಚಿಸಿದ ಈ ಕೃತಿಗೆ, ಡಿ.ಎಲ್.ಎನ್. ಬರೆದದ್ದು ಅದು ಇವರು ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದಲ್ಲಿ ಸಂಕಲಿತಗೊಂಡ್ದಾಗಿದೆ.

ಅಂದಿನ ಲೋವೆರ್ ಸೆಕಂಡರಿ ಮತ್ತು ಮಿಡಲ್ ಸ್ಕೂಲ್ ಓದುವ ವಿದ್ಯಾರ್ಥಿಗಳಿಗಾಗಿ ಸುಲಭವಾಗಿ ವ್ಯಾಕರಣ ಕಲಿಸುವ ಪ್ರಭೇದದ ಕೃತಿ ಇದಾಗಿತ್ತು. ಇಲ್ಲಿ ವಿಶಿಷ್ಠವಾಗಿ ಕನ್ನಡದ ಭಾಷಾ ಪ್ರಭೇದಗಳಲ್ಲೊಂದಾದ 'ತಿಳಿಗನ್ನಡ'ದ ವಿಚಾರ ಕುರಿತು ಚರ್ಚಿಸಿದ್ದನ್ನು ಡಿ.ಎಲ್.ಎನ್. ಅನುಲಕ್ಷಿಸಿ 'ತಿಳಿಗನ್ನಡ' ಪದದ ಬಳಕೆ ಬೇರಾವ ರೂಪವಲ್ಲ ಇಂದಿನ ಹೊಸಗನ್ನಡ ಪ್ರಭೇದವೇ ಆಗಿದೆ. ಪ್ರಮುಖವಾಗಿ ಈ ಕೃತಿಯಲ್ಲಿ ಉದಾಹರಣೆಗಳನ್ನು ಮೊದಲು ಕೊಟ್ಟು ಅವುಗಳಿಂದಲೇ ನಿಯಮಗಳನ್ನು ಕಲಿಸುವ ಕ್ರಮವನ್ನು ಅನುಸರಿಸಿದ್ದು ಎದ್ದು ಕಂಡಿದೆ,ಅಲ್ಲದೆ ಉದಾಹರಣೆಗಳನ್ನು ತಾವೇ ಸೃಷ್ಠಿಸಿ ಉಲ್ಲೇಖಿಸಿದ್ದನ್ನು ಡಿ.ಎಲ್.ಎನ್. ಖಂಡಿಸಿ ಸಾಹಿತ್ಯದಲ್ಲಿ ಈಗಾಗಲೇ ಪ್ರಚಲಿತಗೊಂಡ ವಿಷಯಗಳ ಪ್ರಸ್ತಾಪವನ್ನು ಆರಿಸಿಕೊಂಡಿದ್ದರೆ ಚೆನ್ನಾಗಿತ್ತೆಂದು ಅಭಿಪ್ರಾಯಿಸಿದ್ದಾರೆ.

**ಕರ್ನಾಟಕ ದರ್ಶನ**

೧೯೩೬ ರಲ್ಲಿ ಪ್ರಬುದ್ಧ ಕರ್ಣಾಟಕ ಸಂಚಿಕೆ-೧ ಸಂಪುಟ-೨೦ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ವಿಮರ್ಶಾ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೩೫ನೇ ವಿಚಾರವಾಗಿ ಪ್ರಸ್ತಾಪಿತಗೊಂಡದ್ದಾಗಿದೆ.

ಬುರ್ಲಿಬಿಂದುಮಾದವ ಅವರು ಸಂಪಾದಿಸಿರುವ 'ಕರ್ನಾಟಕ ದರ್ಶನ' ಈ ಕೃತಿಯು ೯ ಲೇಖನಗಳಿಂದ ಸಂಕಲಿತವಾದದ್ದಾಗಿದೆ. ಡಿ.ಎಲ್.ಎನ್. ಈ ಕುರಿತು ಪ್ರಸ್ತಾಪಿಸಿ 'ಕರ್ನಾಟಕ ಏಕೀಕರಣವಾಗಬೇಕೆಂದು ಜನರೆಲ್ಲ ಹಾತೊರೆಯುತ್ತಿರುವಾಗ ಸಮಗ್ರ ಕರ್ನಾಟಕವನ್ನು ಕುರಿತು ತಕ್ಕ ತಿಳುವಳಿಕೆಯನ್ನು ಉಂಟುಮಾಡಬೇಕಾಗಿದ್ದು ಅವಶ್ಯಕ ಎಂದು ಹೇಳಿ'[೨೮] ಕನ್ನಡ ನಾಡಿನ ಅಂದಿನ ಸ್ಥಿತಿಗತಿಗಳನ್ನು ಪರಿಶೀಲಿಸದ ಹಲವು ವಿದ್ವಾಂಸರ ಚರ್ಚೆಗಳನ್ನು ಹಿಡಿಯಾಗಿ ಸಂಗ್ರಹಿಸಿ ಪ್ರಕಟಸಿದ್ದಕ್ಕೆ ಸಂಪಾದಕರ ಕಾರ್ಯಕ್ಷಮತೆಯನ್ನು ಮೆಚ್ಚಿ ಶ್ಲಾಘಿಸಿದ್ದಾರೆ.

ನಮ್ಮ ತನವನ್ನು ನಾವು ಗುರುತಿಸಿಕೊಳ್ಳುವ ಅಖಂಡ ಭಾರತದಂತೆ ಅಖಂಡ ಕರ್ನಾಟಕ ನಾಡು, ನುಡಿ, ಎಲ್ಲೆಗಳ ಕುರಿತು ಎಚ್ಚರಿಸುವ ವಿಚಾರಗಳ ಸರಣಿಕೆ ಈ ಕೃತಿಯ ಲೇಖನದ್ದಾಗಿವೆ. ಆಲೂರ ವೆಂಕಟರಾಯರ ಕರ್ನಾಟಕಾಂತರ್ಗತ ಭಾರತಮಾತೆಗೆ ನಮಸ್ಕಾರ ಹಾಕಿ ಮುಂದಕ್ಕೆ ಹೋಗಬೇಕು. ಮುದವೀಡು ಕೃಷ್ಣರಾಯ ಮತ್ತು ಕರಮರ್‌ಕರ್ ಅವರ ಕರ್ನಾಟಕ ರಾಷ್ಟ್ರೀಯ ಜೀವನ ಕುರಿತು ವಿಚಾರಗಳು ಮುಂದಿನ ಮೂರು ಲೇಖನಗಳನ್ನು ಎಂ.ಶ್ರೀನಿವಾಸರಾಯರು, ಜೋಷಿ ಶಂಕರನಾರಾಯಣರು, ಪ್ರೊ. ಯಲಬುರ್ಗಿ ಅವರು ಕರ್ನಾಟಕ ಏಕೀಕರಣಕ್ಕಿದ್ದ ಅಡ್ಡಿಆತಂಕ ಅವುಗಳ ನಿವಾರಣೋಪಾಯಗಳು, ನಾಡಿನ ಜಾತಿಜನಾಂಗ ಹಾಗೂ ಕರ್ನಾಟಕದ ಕೈಗಾರಿಕೋದ್ಯಮ ಖನಿಜ ಸಂಪತ್ತಿನ ವಿಚಾರಗಳ ಬಗ್ಗೆ ಚರ್ಚಿಸಿದ್ದನ್ನು ಡಿ.ಎಲ್.ಎನ್. ಪ್ರಸ್ತಾಪಿಸಿದ್ದಾರೆ. ಮುಂದುವರೆದು ಕನ್ನಡ ಸಾಹಿತ್ಯದ ವಿಚಾರವಾಗಿ ಬೇಂದ್ರೆ, ಬೆಟಗೇರಿ ಕೃಷ್ಣಶರ್ಮ, ಸೀತಾರಾಮ ಜಹಗೀರದಾರರು ಸಂಕಲಿಸಿದ ಕಾವ್ಯ, ಕಥೆ, ಕಾದಂಬರಿಗಳ ಕುರಿತು ಚರ್ಚಿಸಿದ್ದನ್ನು ಪ್ರಸ್ತಾಪಿಸಿ, ಸಮಗ್ರ ಭರತಖಂಡದಲ್ಲಿ ಕೀರ್ತಿ ಸಂಪಾದಿಸಿ ಕಾರ್ಯಸಾಧನೆ ಮೆರೆದ ಕರ್ನಾಟಕ ಕಲಿಗಳ ಬಗ್ಗೆ ಬಗೆಯಾಗಿ ವಿವರಿಸಿದ ಉಲ್ಲೇಖ ಕಂಡುಬಂದಿದೆ.

ಒಟ್ಟಾರೆಯಾಗಿ ಕನ್ನಡಿಗರಿಗೆ ತಮ್ಮ ಶಕ್ತಿ ತಾವೇ ಅರಿಯವಂತೆ ಮಾಡಲು ಇಂತಹ ಕೃತಿಗಳು ಕೈಗನ್ನಡಿಯಂತೆ ರೂಪು ತಾಳಿವೆ. ಎಂಬ ಡಿ.ಎಲ್.ಎನ್. ಅವರು ಮಾತು ಅರ್ಥಪೂರ್ಣವೆನಿಸಿದೆ.

**ಗಂಡುಗೊಡಲಿ ಮತ್ತು ಹನಿಗಳು**

೧೯೩೫ರ ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆಯ ಸಂಚಿಕೆ–೧, ಸಂಪುಟ ೨೦ರಲ್ಲಿ ಮೊದಲ ಬಾರಿಗೆ ಪ್ರಸ್ತಾಪಗೊಂಡ ಈ ಚರ್ಚೆ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೩೬ನೇ ಲೇಖನವಾಗಿ ಮೂಡಿಬಂದದ್ದಾಗಿದೆ.

ಜಿ.ಪಿ.ರಾಜರತ್ನಂ ಅವರು ರಚಿಸಿದ 'ಗಂಡುಗೊಡಲಿ ಮತ್ತು ಹನಿಗಳು' ಎಂಬ ಏಕಾಂಕ ನಾಟಕದ ಕುರಿತು ಡಿ.ಎಲ್.ಎನ್. ಕೆಲವು ವಿಚಾರಗಳನ್ನು ಈ ಲೇಖನದಲ್ಲಿ ಅರುವಿದ್ದು ಕಂಡು ಬಂದು, ಮುಖ್ಯವಾಗಿ ಜಮದಗ್ನಿ, ಕಾರ್ತವೀರ್ಯ ಪರಶುರಾಮರಂತಹ ಪುರಾಣ ವ್ಯಕ್ತಿಗಳ ರೂಪದೊಂದಿಗೆ ಸಮಾಜದಲ್ಲಿನ ಅನಾಚಾರ, ದಬ್ಬಾಳಿಕೆಗಳನ್ನು ಸೆದೆಬಡಿಯುವ ವಿಚಾರ ನಾಟಕದುದ್ದಕ್ಕೂ ಕಂಡು ಬಂದಿದ್ದನ್ನು ಡಿ.ಎಲ್.ಎನ್. ಪರಿಯಾಗಿ ವಿವರಿಸಿದ್ದಾರೆ.

ಇಲ್ಲಿ ಪ್ರಮುಖವಾಗಿ ಜಮದಗ್ನಿ ಪರಶುರಾಮರ ಉದ್ದೇಶಗಳು ಒಂದೇ ಆಗಿ ಮೂಡಿ ಬಂದರೂ ಅವರ ವಿಚಾರಗಳು ಬೇರೆಯಾಗಿ ಸಾಧಿಸುವ ಕ್ರಮವೂ ಬೇರೆಯಾಗಿ

ಕಂಡುಬಂದಿದೆ. ಅಲ್ಲದೆ ಜಮದಗ್ನಿಯ ದಯಾಮಯ ವ್ಯಕ್ತಿತ್ವ ಕಾಂತವೀರ್ಯನ ಕತ್ತಿಗೆ ತುತ್ತಾಯ್ತು. ಆದರೇ ಪರಶುರಾಮನ ಕ್ರಾಂತಿಯತೆ ಬಿಸಿರಕ್ತದ ಕುದಿತ ಗಂಡುಗೊಡಲಿ ರೂಪದಲ್ಲಿ ಕಾಂತವೀರ್ಯನ ದಬ್ಬಾಳಿಕೆ ಮತ್ತು ಅವನನ್ನು ನಿರ್ನಾಮ ಮಾಡಿತು.

ಈ ನಾಟಕದ ವಿಚಾರವಾಗಿ ಡಿ.ಎಲ್.ಎನ್. ಅಂದಿನ ಸ್ವಾತಂತ್ರ್ಯ ಸಾಧನೆಗೆ ಪ್ರೇರಕವಾಗಿ ಅನ್ವಯೀಕರಿಸಿ ನೋಡಿದರೆ, ಜಮದಗ್ನಿ ಹಾದಿ ಒಳ್ಳೆಯದೋ? ಪರಶುರಾಮನ ಹಾದಿ ಒಳ್ಳೆಯದೋ? ಎಂಬ ಚಿಂತನೆಗೆ ಕೃತಿಕಾರರು ಪರಶುರಾಮನ ಹಾದಿಯನ್ನೇ ಬಲಪಡಿಸಿ ನೋಡಿದ್ದರೆ ಆದರೆ ಕಾಲದ ಅಂತರದಲ್ಲಿ ಎಲ್ಲವೂ ತಮ್ಮಷ್ಟಕ್ಕೆ ತಾವು ಗತಿಸಿಹೋದ ನೆಲೆಗಳಿಂದ ಒಂದು ರೀತಿ ಜಮದಗ್ನಿ ಹಾದಿಯೇ ಮುಖ್ಯವಾದಂತೆ ಕಂಡುಬಂದಿದೆ. ಏನೇ ಇರಲಿ, ಈ ನಾಟಕದ ವಸ್ತುವಿನ ಘನತೆ ಬಿಗಿಯಾದ ಗಂಡು ಶೈಲಿಯಿಂದ ಮನೋರಂಜಕವಾಗಿ ಮೂಡಿ ಬಂದುದಾಗಿದೆ. ಅಲ್ಲದೆ ಹೃದಯವನ್ನು ಪ್ರಚೋದಿಸುವಂತಿದೆ.

**ಕನ್ಯಾಬಲಿ ಅಥವಾ ಸೂಳೆಯ ಸಂಸಾರ**

ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಚಿಕೆ-೪, ಸಂಪುಟ-೧೪ರಲ್ಲಿ ಮೊದಲ ಬಾರಿಗೆ ಮೂಡಿಬಂದ ಈ ಲೇಖನದ ಪ್ರಸ್ತಾಪ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೩೭ನೇ ರೂಪವಾಗಿ ಕಂಡುಬಂದಿದೆ.

ಶಿವರಾಮಕಾರಂತರು ರಚಿಸಿದ 'ಕನ್ಯಾಬಲಿ ಅಥವಾ ಸೂಳೆಯ ಸಂಸಾರ' ಎಂಬ ಕೃತಿಯು ಅಂದಿನ ಸಾಮಾಜಿಕ ವೈಚಿತ್ರವನ್ನು ಕಟ್ಟಿಕೊಟ್ಟಿರುವ ರೂಪವೆನಿಸಿದೆ. ಈ ಕೃತಿಯಲ್ಲಿ ಕಾರಂತರು ಬಾಲವಿಧವೆಯಾದ ಮಾಲತಿ ಎಂಬ ನಾಯಕಿಯನ್ನಿರಿಸಿ ಅವಳ ಜೀವನ ಕಥೆಯನ್ನು ಚಿತ್ರಿಸಿದ್ದು ಕಂಡುಬಂದಿದೆ.

ಈ ದುರಂತದ ಕಥೆಯನ್ನು ಕಾರಂತರು ಬಿಚ್ಚಿ ಹೇಳಿದ್ದನ್ನು ಡಿ.ಎಲ್.ಎನ್. ತೀರಾ ವಸ್ತುನಿಷ್ಠವಾಗಿ ಗಮನಿಸಿ ಈ ಕುರಿತು ಕೆಲವು ಅಭಿಪ್ರಾಯಗಳನ್ನು ಅರುಹಿದ್ದಾರೆ. ಕಾರಂತರು ಕಥೆಯನ್ನು ಚೆನ್ನಾಗಿ ನಿರ್ವಹಿಸಿದ್ದು ಇಲ್ಲಿ ಮೂಡಿಬಂದ ದೃಶ್ಯಗಳು ಒಂದಾದ ಮೇಲೊಂದರಂತೆ ತೆರೆ ಚಿಮ್ಮಿ ಹರಿದು ಕರುಣೆಯನ್ನು ಉಕ್ಕಿಸುವಂತವಾಗಿವೆ. ಇಲ್ಲಿಯ ಪಾತ್ರಗಳಾದ, ಮಾಲತಿಯ ನಿರಾಸೆ, ಪ್ರಫುಲ್ಲನಪ್ರೇಮ, ಮಹೇಶನ ಮರುಕ, ವೀರೇಶನ ಕಾಮ ಕಲುಷಿತ ದಯೆ ಇವೆಲ್ಲವೂ ದಯಾಶೂನ್ಯವಾದ, ಸಂಪ್ರದಾಯಬದ್ಧವಾದ, ಕಣ್ಣಿಲ್ಲದ ಹೃದಯ ಶೈಲಿಯೂ ಮೋಹಕವಾಗಿ ಶಕ್ತಿಯುತವಾಗಿ ಮೂಡಿಬಂದಿವೆ. ಅಲ್ಲದೆ ಇಲ್ಲಿ ಹೃದಯಕ್ಕೆ ಸತ್ಯವೆಂದು ಕಂಡುದನ್ನು ದಯೆ-ದಾಕ್ಷಿಣ್ಯವಿಲ್ಲದೆ ಬಣ್ಣಿಸುವ ಮಾತಿನ ಜೋರು ಹೆಚ್ಚಾಗಿ ಮೂಡಿಬಂದಿದೆ. ಅಲ್ಲದೆ ಕಥೆಯಲ್ಲಿ ಅಲ್ಲಲ್ಲಿ ಕಂಡುಬಂದ ವ್ಯಂಗ್ಯಮಯವಾದ ಹಾಸ್ಯವು ಕರುಣೆಯನ್ನು ಕೆರಳಿಸಿದೆ ಹಾಗೂ ಕಥೆಯ ಸತ್ಯಕ್ಕೆ ಕುಂದುಂಟಾಗುವ ಸ್ಥಿತಿ ಈ ಕಥೆಗಿದೆ ಎಂಬ ರೂಪ ಎದ್ದುಕಂಡಿದೆ.

**ಹಾವು**

ಕೆ.ಶಿವರಾಮಕಾರಂತರು ರಚಿಸಿದ ಒಂಬತ್ತು ಕಥೆಗಳ ಸಂಕಲನ ಈ 'ಹಾವು' ಕೃತಿ ಈ ಕುರಿತು ಡಿ.ಎಲ್.ಎನ್. ತಮ್ಮ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದಲ್ಲಿ ೩೮ನೇ ವಿಷಯವಾಗಿ ವಿಮರ್ಶೆ ನಿರೂಪಿಸಿದ್ದು ಕಂಡು ಬಂದಿದೆ.

ಇಲ್ಲಿ ಸಂಕಲಿತಗೊಂಡ, ಹಾವು, ಸತ್ಯ ಸೋಮಪ್ಪನ ಸಾಹಸಗಳು, ಚಕ್ರ ತಿರುಗಿತು, ಕೊಳ್ಳುವ ಕಾಲಬರಲು, ಕಾಂತಾರಾಮ, ಮುಕುಂದನ ಆಸೆ, ನನ್ನಿಂದಾಗದು, ಎಂಬ ಇತರೆ ನಾಟಕಗಳಲ್ಲಿ ಕಂಡುಬಂದ ಪ್ರಮುಖ ಅಂಶಗಳೆಂದರೆ, ಮನುಷ್ಯ ಜೀವನದಲ್ಲಿ ವಿದ್ಯಾಭ್ಯಾಸ ದೆಸೆಯಲ್ಲಿ ಉಂಟಾಗುವ ಆಸೆ, ನಿರಾಸೆ, ಸ್ನೇಹ, ದ್ವೇಷ, ಹಾಸ್ಯ, ಕ್ರೋಧ ಮುಂತಾದವುಗಳ ವಿರುದ್ಧ ಭಾವಗಳ ವಿಭಜನೆ ಈ ಗ್ರಂಥದಲ್ಲಿ ಅಡಗಿದ್ದಾಗಿವೆ. ಕಾಲವಾಹಿನಿಯಲ್ಲಿ ಮುಂದೆ ಸಾಗಿ ನಿಂತು ಹಿಂದಿರುಗಿ ನೋಡುವವರಿಗೆ ಕಳೆದ ಕಾಲವು ರಮ್ಯಸ್ಮೃತಿಗೆ ತರುವಂತವಾಗಿವೆ.

ಈ ಕತೆಗಳಲ್ಲಿ 'ಕನ್ಯಾಬಲಿ'ಯಲ್ಲಿ ಕಂಡುಬಂದ ಶೈಲಿ, ಕಾವು, ಹುರುಪು ಈ ಕಥೆಗಳಲ್ಲಿ ಅಷ್ಟಾಗಿ ಮೂಡಿಬಂದಿಲ್ಲ, ಇದಕ್ಕೆ ಕಾರಣ ವಸ್ತುಭಿನ್ನತೆ ಇರಬಹುದಾಗಿದ್ದು ಕೆಲ ಕಥೆಗಳನ್ನು ಓದುವಾಗ ನಗು ಬರುತ್ತದೆ. ಇದರಿಂದ ಬೇಜಾರು ಕಳೆದುಕೊಳ್ಳಬಹುದೇ ವಿನಃ ಇದಕ್ಕಿಂತ ಹೆಚ್ಚಿನ ಫಲ ಈ ಕಥೆಗಳಿಂದ ಅಪೇಕ್ಷಿಸಲು ಸಾಧ್ಯವಿಲ್ಲ.'[೨೯] ಎಂಬ ಡಿ.ಎಲ್.ಎನ್. ಅವರ ನೇರನುಡಿ ಅವರ ವ್ಯಕ್ತಿತ್ವದ ಒಂದು ಭಾಗವಾಗಿ ಕಂಡಿದೆ. ಇದರಿಂದ ಅವರ ನಿಷ್ಠುರತೆ ಅವರು ಪ್ರಿಯ ಅಪ್ರಿಯತೆಯ ಕುರಿತು ಕಡ್ಡಿಮುರಿದ ಹಾಗೆ ಯಾವುದೇ ಮುಚ್ಚು ಮರೆಯಿಲ್ಲದೆ ಹೇಳುವ ಮಾತು ಇಲ್ಲಿ ಪ್ರಮುಖವೆನಿಸಿದೆ.

**ಮಹಾದೇವಿ ಅಕ್ಕ**

೧೯೫೯ ರಲ್ಲಿ ಮೊದಲ ಬಾರಿಗೆ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಸಂಚಿಕೆ–೧, ಸಂಪುಟ–೨೧ರಲ್ಲಿ ಪ್ರಕಟವಾದ ಈ ವಿಮರ್ಶಾ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯಲ್ಲಿ ೫೯ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಕೆ.ಜಿ. ಕುಂದಣಗಾರ ಅವರು ರಚಿಸಿದ ಮಹಾದೇವಿ ಅಕ್ಕ ಎಂಬ ಅಕ್ಕನ ಜೀವನ ಚರಿತ್ರೆಯ ಕುರಿತ ಕೃತಿಯನ್ನು ವಿಮರ್ಶಿಸಿದ ಡಿ.ಎಲ್.ಎನ್. 'ಅಕ್ಕನ ಸಾತ್ವಿಕ ಜೀವನ ನಮ್ಮ ನಾಡಿನ ಸ್ತ್ರೀಯರಿಗೆ ಆದರ್ಶಪ್ರಾಯವಾದದ್ದು ವಚನಕಾರರಲ್ಲಿ ಬಸವಣ್ಣನನ್ನು ಬಿಟ್ಟರೆ ಅನುಭಾವಿ ವಚನಗಳ ನಿರೂಪಣೆಯಲ್ಲಿ ಅಕ್ಕನದೆ ಮೇಲ್ಪಂಕ್ತಿಯಾಗಿದ್ದು ಆಕೆಯ ವಚನಗಳು ಭಾವಗೀತದ ಮಟ್ಟಕ್ಕೆ ಏರಿದ್ದಾಗಿವೆ. ಅವು ಶುದ್ಧ ಕಾವ್ಯದ ಕಾಂತಿಯನ್ನು ಹೊಂದಿದಂತವುಗಳೆಂದು'[೩೦] ಡಿ.ಎಲ್.ಎನ್. ಅಭಿಪ್ರಾಯಿಸಿದ್ದು ಕಂಡುಬಂದಿದೆ.

ಈ ಕೃತಿ ಉದ್ದಕ್ಕೂ ಕಂಡು ಬಂದ 'ಅಕ್ಕನ' ಜೀವನದ ಕೆಲವಾರು ಅಂಶಗಳು ಚರಿತ್ರೆಯ ದೃಷ್ಟಿಯಿಂದ ಸತ್ಯವೆನಿಸಿವೆ. ಅಲ್ಲದೆ ಅಕ್ಕನನ್ನು ಕಂಡರಿಯದ ಹರಿಹರನೇ ಅಕ್ಕನನ್ನು ಬಗೆಯಾಗಿ ಚಿತ್ರಿಸಿದ ಮೊದಲಿಗ. ನಂತರ ಚೆನ್ನಬಸವಾಂಕ ಮುಂತಾದವರು ಇವನಿಗಿಂತ ಭಿನ್ನವಾಗಿ ಚಿತ್ರಿಸುತ್ತಾ ಬಂದಿದ್ದಾರೆ. ಇಂದಿಗೂ ಹಲವಾರು ರೂಪಗಳಲ್ಲಿ ಐತಿಹಾಸಿಕ ಸತ್ಯಗಳು ಮರೆಯಾಗಿ ಕಲ್ಪಿತ ಕಥೆಗಳು ಅಧಿಕವಾಗಿ ಮೂಡಿ ಬಂದು ಅಕ್ಕನ ಚರಿತ್ರೆ ಒಂದು ವಿಶಿಷ್ಟರೂಪ ತಾಳಿದೆ.

ಕುಂದಣಗಾರರ ರೂಪ ಇಂದಿನ ಬಗೆಯದು ಇಲ್ಲಿನ ಪ್ರಯತ್ನದಲ್ಲಿ ಅಕ್ಕನ ವಿವಾಹವಾದ ಜಾಡನ್ನು ಹಿಡಿದ ಕುಂದಣಗಾರರು ಕಾದಂಬರಿಕಾರನ ಪದ್ಧತಿಯನ್ನು ಅನುಸರಿಸಿ ಈ ಕಥೆಯನ್ನು ಸಹೃದಯ ಓದುಗನಿಗೆ ಬೇಸರವಾಗದಂತೆ ಆಕೆ ಹುಟ್ಟಿ ಬೆಳೆದ ಸನ್ನಿವೇಶ ಇತರೆ ಹಿನ್ನೆಲೆಗಳನ್ನು ವರ್ಣನಾತ್ಮಕವಾಗಿ ವಿವರಿಸಿದ್ದು ಕಂಡುಬಂದಿದೆ. ಒಟ್ಟಾರೆಯಾಗಿ ಅಕ್ಕನ ಜೀವನವನ್ನು ಕುಂದಣಗಾರರು ಬಣ್ಣಿಸಿ ನಿರೂಪಿಸಿದ್ದನ್ನು ಡಿ.ಎಲ್.ಎನ್. ಮೆಚ್ಚಿದ್ದಾರೆ.

**ಇಂದಿನ ಕನ್ನಡ ಕವಿತೆ**

೧೯೪೩ರಲ್ಲಿ ಮೊದಲ ಬಾರಿಗೆ ತರಂಗರಂಗ ಸಂಚಿಕೆಯಲ್ಲಿ ಆಕಾಶವಾಣಿ ಮೈಸೂರು ಕೃಪೆಯಿಂದ ಮಾಡಿದ ಭಾಷಣದ ಪ್ರತಿ ಈ ಲೇಖನವಾಗಿದ್ದು ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ವಿಮರ್ಶಾ ಭಾಗದ ೪೦ನೇ ವಿಚಾರವಾಗಿ ಪ್ರಸ್ತಾಪಿತಗೊಂಡದ್ದಾಗಿದೆ.

ಕವಿಗಳಿಗೆ ನಿಜವಾದ ಸ್ಫೂರ್ತಿ ಎರಡು ರೀತಿಯದ್ದಾಗಿವೆ. ಮೊದಲನೆಯದು ತನ್ನೊಳಗೆ ವಿಕಾಸಗೊಳ್ಳುವ ಭಾವವೇಗಗಳೂ ಆಲೋಚನೆಗಳು, ಚಿತ್ರಗಳೂ ಅವನ ನಾಲಿಗೆಗಳನ್ನು ಕುಣಿಸುತ್ತವೆ. ಸುತ್ತಲಿನ ಪರಿಸ್ಥಿತಿಗಳು ಅವನ ಮನಸ್ಸನ್ನು ಸೆರೆಹಿಡಿದು ಉದ್ರೇಕಗೊಳಿಸಿ ಅವನ್ನು ನುಡಿಸುತ್ತವೆ. ಇವು ಒಂದರೊಡನೆ ಒಂದು ಬೆರತು ಇರುವುದೇ ಹೆಚ್ಚು ಎನಿಸಿದೆ.

ಡಿ.ಎಲ್.ಎನ್. ಅವರು ಈ ಮೇಲಿನ ಮಾತಿನನ್ವಯ ೧೯೪೦ರ ಸುಮಾರಿನಲ್ಲಿ ರಚಿತವಾದ ಕೆಲ ಕವನಗಳನ್ನು ಪ್ರಾತಿನಿಧಿಕವಾಗಿ ಬಳಸಿಕೊಂಡು ಆ ಕಾಲದ ಕವನಗಳಲ್ಲಿ ಭಾಷಾಪ್ರೇಮ ನಾಡು-ನುಡಿಯ ಗೇಯತೆ, ನೈಸರ್ಗಿಕ ಚಿತ್ರಣ, ದೇಶಪ್ರೇಮ, ಏಕೀಕರಣ, ಭಾವೈಕ್ಯತೆ, ಪ್ರಕೃತಿ ಚಿತ್ರಣ ಮುಂತಾದವನ್ನು ತಮ್ಮ ಈ 'ಇಂದಿನ ಕನ್ನಡ ಕವಿತೆ' ಎಂಬ ಲೇಖನದಲ್ಲಿ ತುಂಬಾ ಸೊಗಸಾಗಿ ರೂಪಿಸಿದ್ದು ಕಂಡುಬಂದಿದೆ.

**ಮೆಹೆಂಜೋದಾರೊದಲ್ಲಿ ಈಚಗೆ ನಡೆದ ಭೂ ಸಂಶೋಧನೆ**

ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಪುಟ-೧೬ ಸಂಚಿಕೆ-೧೪ರಲ್ಲಿ ಮೊದಲ ಬಾರಿಗೆ ಇಂಗ್ಲಿಶ್‌ನಿಂದ ಕನ್ನಡಕ್ಕೆ ಅನುವಾದಗೊಂಡು ಪ್ರಕಟಗೊಂಡ ಈ ಲೇಖನವನ್ನು ಮೊದಲಿಗೆ

ಡಾ.ಇ.ಜೆ.ಎಚ್. ಮ್ಯಾಕೆ ಎಂಬುವವರು ತಾವು ಸಂಶೋಧಿಸಿರುವ ವಿಷಯದ ಕುರಿತು ಲಂಡನ್ನಿನ ಪ್ರಸಿದ್ಧ ಪತ್ರಿಕೆಯಾಗಿದ್ದ ಜರ್ನಲ್ ಆಫ್ ದ ರಾಯಲ್ ಸೊಸೈಟಿ ಆಫ್ ಆರ್ಟ್ಸ್‌ನಲ್ಲಿ ೧೯೩೮ನೇ ಜನವರಿ ವೇಳೆಗೆ ಪ್ರಕಟಿಸಿದ್ದರು. ಇದನ್ನು ನಮ್ಮ ಕನ್ನಡಿಗರಿಗೆ ಹರುವಲು ಡಿ.ಎಲ್.ಎನ್. ಈ ಪತ್ರಿಕೆಯ ಸರಳಾನುವಾದವನ್ನು ಚಿತ್ರಸಹಿತ ಪ್ರಬುದ್ಧ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಮುಂದೆ ಬಿ.ವಿ. ವೆಂಕಟಾಚಲಶಾಸ್ತ್ರಿ ಅವರು ೨೦೦೮ರ ಹೊತ್ತಿಗೆ ತಾವು ಸಂಪಾದಿಸಿ ಸಂಕಲಿಸಿದ ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೪ನೇ ಲೇಖನವಾಗಿ ಪ್ರಸ್ತಾಪಿಸಿದ್ದು ಕಂಡುಬಂದಿದೆ.

ಈ ಲೇಖನದುದ್ದಕ್ಕೂ ಇ.ಜೆ.ಎಚ್.ಮ್ಯಾಕೆ ಅವರು ತಾವು ಸಂಶೋಧಿಸಿರುವ ಸಿಂಧೂ ತೀರದ ಆಶ್ಚರ್ಯಕರವಾದ ನಾಗರಿಕತೆಯನ್ನು ಚೆನ್ನಾಗಿ ತಿಳಿಯಲು ಸಹಾಯವಾಗುವಂತೆ ಇತರೆ ಸಮಕಾಲೀನ ನಾಗರೀಕತೆಗಳಿಗೂ ಇರುವ ಸಂಬಂಧವನ್ನು ವ್ಯಕ್ತಪಡಿಸಿದ್ದು ಕಂಡುಬಂದಿದೆ.

ಭಾರತದ ಪಂಜಾಬಿನ ಮಾಂಟ್‌ಗಾಮರಿ ಜಿಲ್ಲೆಯ ಹರಪ್ಪಾ, ಮೊಹೆಂಜೋದಾರೊ ಪ್ರದೇಶದ ಕುರಿತು ರಾಯ್ ಬಹದ್ದೂರ್ ದಯಾರಾಮ್, ಆರ್.ಡಿ.ಬ್ಯಾನರ್ಜಿ, ಸರ್.ಜಾನ್‌ಮಾರ್ಷಲ್, ಎಂ.ಎಸ್. ವ್ಯಾಟ್ಸ್. ಕೆ.ದೀಕ್ಷಿತ್ ರವರುಗಳು ನಡೆಸಿದ ಸಂಶೋಧನಾ ದಾಖಲೆಗಳನ್ನಾಧರಿಸಿ ಇ.ಜೆ.ಎಚ್.ಮ್ಯಾಕೆ ಅವರು ಸಂಶೋಧಿಸಿದ ಕೆಲ ವಿಚಾರಗಳ ಕುರಿತು ಇಲ್ಲಿ ಚರ್ಚಿಸಲಾಗಿ ಸಿಂಧೂ ಬಯಲಿನಲ್ಲಿ ಕ್ರಿ.ಪೂ. ೨೭೫೦ರ ಸುಮಾರಿನಲ್ಲಿ ವಾಸಿಸಿದ ಜನಜೀವನ ವಿಚಾರ, ಅವರ ವಾಸ ವಸತಿ ಗೃಹಗಳ ವ್ಯವಸ್ಥೆ, ಸಣ್ಣಸಣ್ಣ ಬೀದಿಗಳು, ನಗರ ಚರಂಡಿ ವ್ಯವಸ್ಥೆಗಳು ಯಾವ ರೀತಿ, ಇದ್ದವೆಂದು ಪರಿಯಾಗಿ ವಿವರಿಸಿದ ಲೇಖಕರು ಅಲ್ಲಿನ ಸಂಸ್ಕೃತಿ, ಆಚಾರ–ವಿಚಾರ, ಜನಜೀವನ ಕ್ರಮ, ಅವರು ಬಳಸುತ್ತಿದ್ದ ಸಲಕರಣೆಗಳು, ರತ್ನದ ಮಣಿಗಳು ಮಣ್ಣಿನ ಬೊಂಬೆಗಳು ಆಟದ ವಸ್ತುಗಳು, ದೇವತಾ ವಿಗ್ರಹ ಇತರೆ ಆಯುಧ ಉಪಕರಣಗಳು, ಚಿನ್ನ, ತಾಮ್ರದ ಕೊಡಲಿ, ಆಕಾರದಲ್ಲಿ ದೊರೆತ ಸಾಮಗ್ರಿಗಳಲ್ಲಿನ ಚಿತ್ರಲಿಪಿಗಳು, ಇತರೆ ಮಣ್ಣಿನ ಪಾತ್ರೆಗಳ ಕುರಿತು ಚಿತ್ರಸಹಿತ ಬಗೆಯಾಗಿ ವಿವರಿಸಿದ್ದನ್ನು ಡಿ.ಎಲ್.ಎನ್. ಅಕ್ಷರಶಃ ಭಾಷಾಂತರಿಸಿಲ್ಲವಾದ್ದರೂ ಅಲ್ಲಿನ ವಿಚಾರಗಳನ್ನು ಸರಳಾನುವಾದದ ವಿಚಾರವಾಗಿ ಇಲ್ಲಿ ರೂಪಿಸಿದ್ದು ಕಂಡು ಬಂದಿದೆ.

**ದಿವಂಗತ ಆಟೋಸುಸ್ಪುರ್ಸನ್ (೧೮೬೦–೧೯೪೩)**

ಪ್ರಬುದ್ಧ ಕರ್ನಾಟಕ ಪತ್ರಿಕೆಯ ವಸ್ತುಕೋಶ ಭಾಗದ ೨೫–೧ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿತ ಪ್ರೊ.ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೫ನೇ ಭಾಗವಾಗಿ ಮೂಡಿ ಬಂದದ್ದಾಗಿದೆ.

ಪ್ರಪಂಚದ ಭಾಷಾಶಾಸ್ತ್ರಜ್ಞರಲ್ಲಿ ಒಬ್ಬರಾದ ಡೆನ್ಮಾರ್ಕನ 'ಆಟೋಸುಸ್ಪುರ್ಸನ್' ಭಾಷಾಶಾಸ್ತ್ರಕ್ಕೆ ತಮ್ಮದೇ ಪ್ರಮುಖ ಕೊಡುಗೆ ನೀಡಿದವರಾಗಿದ್ದಾರೆ. ಇವರು ತಮ್ಮ ಅಭ್ಯಾಸಕ್ಕೆ ಎತ್ತಿಕೊಂಡ ಶಾಸ್ತ್ರವನ್ನು ನಾನಾ ಮುಖಗಳಿಂದ ಚಿಂತಿಸಿ ನೋಡಿದವರಾಗಿದ್ದಾರೆ. ಬಹುಭಾಷಾ ಪಂಡಿತರೆನಿಸಿದ ಇವರು ೧೮೬೦ ಜುಲೈ ೧೬ರಂದು ಡೆನ್ಮಾರ್ಕ್ ನಗರದಲ್ಲಿ ಜನಿಸಿದ್ದರು. ಕೋಪನ್, ಹೇಗನ್ ನ್ಯೂಯಾರ್ಕ್‌ನ ಕೊಲಂಬಿಯಾ, ಇಂಗ್ಲೆಂಡ್‌ನ ವಿಶ್ವವಿದ್ಯಾಲಯಗಳಲ್ಲಿ ತಮ್ಮ ಕರ್ತವ್ಯ ನಿರ್ವಹಿಸಿದವರಾಗಿದ್ದಾರೆ ಇವರು ಬರೆದಿರುವ ಗ್ರಂಥ ಮತ್ತು ಲೇಖನಗಳು ೪೦೦ಕ್ಕೂ ಅಧಿಕವಾಗಿವೆ. ಇವರು ಗ್ರಂಥಗಳಲ್ಲಿ ಅನುಸರಿಸಿದ ಮಾರ್ಗವೂ, ನಿರೂಪಿಸಿದ ಶೈಲಿಯೂ, ಶಾಸ್ತ್ರೀಯವಾದ ವಿಚಾರ ಪದ್ಧತಿಯೂ ಇವರು ಹೊಸದಾಗಿ ಸೂಚಿಸಿದ ಅಂಶಗಳೂ ಎಲ್ಲಾ ಭಾಷಾವರ್ಗಕ್ಕೂ ಅನ್ವಯಿಸುವಂತಹವಾಗಿವೆ.

ಇವನು ವ್ಯಾಕರಣದಲ್ಲಿ ಒಂದು ಭಾಷೆಯ ಲಕ್ಷಣವನ್ನು ಹೇಳುವುದು ಮುಖ್ಯವಾಗಿ ಕಂಡುಬಂದರೂ ಕಲಿಕೆಯ ದೃಷ್ಟಿಯಿಂದ ಅದನ್ನು ರಚಿಸಿರಬೇಕೆಂಬ ನಿಯಮ ಅವನಲ್ಲಿದ್ದದ್ದು ಕಂಡುಬಂದಿದೆ. ಇದನ್ನು ಕಾಲಕಾಲಕ್ಕೆ ವಿಮರ್ಶೆಗೆ ಒಳಪಡಿಸಿ ತಿದ್ದುವ ಅವಶ್ಯಕತೆ ಇದ್ದೆ ಇದೆ.

**ಪುನರಾಲೋಕನ: ಸಿದ್ಧರಾಮನ ವೀರಶೈವತ್ವ**

ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಚಿಕೆ–೩, ಸಂಪುಟ–೪೫ರಲ್ಲಿ ೧೯೬೩ರ ವೇಳೆಗೆ ಮೊದಲ ಬಾರಿಗೆ ಪ್ರಸ್ತಾಪಿತಗೊಂಡ ಈ ವಿಷಯ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರೀ ಅವರು ಸಂಪಾದಿಸಿದ ಪ್ರೊ.ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹ ಮತ್ತು ಭಾಷಣಗಳು ಕೃತಿಯ ೭ನೇ ವಿಷಯವಾಗಿ ಪ್ರಸ್ತಾಪಿತಗೊಂಡದ್ದಾಗಿದೆ.

೧೯೪೧ರ ಕಾಲಘಟ್ಟಕ್ಕೆ ಡಿ.ಎಲ್.ಎನ್. ಅವರು ಸಂಪಾದಿಸಿ ಪ್ರಕಟಿಸಿದ ಸಿದ್ಧರಾಮ ಚಾರಿತ್ರ್ಯದ ಮುನ್ನುಡಿಯು ಒಂದು ಸಮಸ್ಯೆ ಎಂಬ ಭಾಗದಲ್ಲಿ ಈ ವಿಷಯ ಚರ್ಚಿತಗೊಂಡುದ್ದಾಗಿದೆ. ಈತನ ಕಾವ್ಯದುದ್ದಕ್ಕೂ ಸಿದ್ಧರಾಮನ ವಿಚಾರವಾಗಿ ಎಳೆ ಎಳೆಯಾಗಿ ವಿವರಿಸಿದ ಡಿ.ಎಲ್.ಎನ್. ಅಲ್ಲಮ ಮುಂತಾದ ಶಿವಶರಣರ ಉಪದೇಶವನ್ನು ಸಿದ್ಧರಾಮನನ್ನು ಕೇಳಿ ತಮ್ಮ ಅಂಗೀಕಾರವನ್ನು ವ್ಯಕ್ತಪಡಿಸಿದ್ದರಿಂದ ಅವನಿಗೆ (ಸಿದ್ಧರಾಮನಿಗೆ) ಲಿಂಗಾದೀಕ್ಷೆಯಾಗಿತ್ತೆಂಬುದು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಡಾ.ಆ.ನೆ.ಉಪಾಧ್ಯೆ ಅವರು**

೪೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ ಅಭಿಷೇಕದಲ್ಲಿ ೧೯೬೭ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿ ಸಂಕಲಿಸಿದ ಪ್ರೊ. ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೮ನೇ ಭಾಗವಾಗಿ ಮೂಡಿಬಂದುದ್ದಾಗಿದೆ.

ಡಿ.ಎಲ್.ನರಸಿಂಹಾಚಾರ್ ಅವರು ಡಾ.ಆದಿನಾಥ ನೇಮಿನಾಥ ಉಪಾಧ್ಯೆ (ಆ.ನೆ.ಉಪಾಧ್ಯೆ) ಅವರು ಶ್ರವಣ ಬೆಳಗೊಳದಲ್ಲಿ ನಡೆದ ೪೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದಾಗ ಅವರ ಸಾಹಿತ್ಯ ಸೇವೆ ಅವರೊಂದಿಗಿನ ಒಡನಾಟಗಳ ವಿಚಾರ ಕುರಿತು ಬರೆದ ಲೇಖನದ ಪ್ರತಿ ಇದಾಗಿದೆ.

ಸಂಸ್ಕೃತ, ಪ್ರಾಕೃತ, ಅರ್ಧಮಾಗಧೀ ಭಾಷಾಸಾಹಿತ್ಯಗಳಲ್ಲಿ ಮೂರ್ಧನ್ಯ ವಿದ್ವಾಂಸರಾಗಿರುವ ಆ.ನೆ.ಉಪಾಧ್ಯೆ ಅವರು ಜೈನಸಾಹಿತ್ಯಕ್ಕೆ ಸಲ್ಲಿಸಿರುವ ಸೇವೆ ಕುರಿತು ಅವರ ೨೦೦ಕ್ಕೂ ಬರಹರೂಪ ಪಡೆದ ವಿದ್ವತ್‌ಪೂರ್ಣ ಕೃತಿ ಕುರಿತು ಅವರ ಪಾಂಡಿತ್ಯದ ಖಚಿತತೆ, ವಿಮರ್ಶನಾಶಕ್ತಿ, ನಿಶ್ಚಿತ ಭಾವ, ತಲಸ್ಪರ್ಶಿ ಸಂಶೋಧನಾ ಭಾವ, ನಿರೂಪಣೆಯ ಅಸಂದಿಗ್ಧತೆ, ಕಾವ್ಯಶಾಸ್ತ್ರ ಪರಿಚಯದ ಅಪಾರ ಶಕ್ತಿ, ಪ್ರತಿಭಾ ವಿಹಾರದ ಮನೋಜ್ಞತೆಯನ್ನು ಪರಿಯಾಗಿ ವಿವರಿಸಿದ್ದು ಲೇಖನದುದ್ದಕ್ಕೂ ಕಂಡುಬಂದಿದೆ.

ಉಪಾಧ್ಯೆ ಅವರು ಹುಟ್ಟಿನಿಂದ ಕನ್ನಡಗಿರಾಗಿದ್ದು ಅವರ ಜೀವನ, ವಿದ್ಯಾಭ್ಯಾಸ ಹಾಗೂ ಸಾಹಿತ್ಯ ಸೇವೆ ಕುರಿತು ವಿಸ್ತರಿಸಿದ ಡಿ.ಎಲ್.ಎನ್. ಇವರು ಸಂಪಾದಿಸಿದ ಗ್ರಂಥಗಳೂ ಬರೆದಿರುವ ಲೇಖನಗಳೂ ಪ್ರಾಕೃತ ಜೈನಸಾಹಿತ್ಯಕ್ಕೆ ಸೇರಿದ್ದವಾದರೂ ಕನ್ನಡ ವಿದ್ವತ್ತಿನ ದೃಷ್ಟಿಯಲ್ಲಿ ಕೆಲವು ಗ್ರಂಥಗಳು ಲೇಖನಗಳ ಮಹತ್ವಪೂರ್ಣದ್ದಾಗಿವೆ.

ಇವರ ಬರಹಗಳಲ್ಲಿ ವಿಷಯನಿಷ್ಠೆ, ಸಂಯಮ, ಸಮಗ್ರದೃಷ್ಟಿ, ಸಾಧಾರತೆ, ಪ್ರಾಮಾಣಿಕತೆ ಮುಂತಾದ ಗುಣಗಳು ಮೇಳೈಸಿದ್ದಾಗಿವೆ.

ಇವರ ವರಾಂಗ ಚರಿತೆ, ಬೃಹತ್ಕಥಾಕೋಶ, ವಡ್ಡಾರಾಧನೆ, ದೂರ್ತಖ್ಯಾನ (ಧರ್ಮಪರೀಕ್ಷೆ) ಲೀಲಾವತಿ ಕಾವ್ಯ, (ಲೀಲಾವತೀ ಕಾವ್ಯ) ಕುವಲಯಮಾಲಾ, ತಿಲೋಯ ಪಣ್ಣತ್ತಿ, ಜಂಭೂದೀನ ಪಣ್ಣತ್ತಿ, ಮುಂತಾದ ಕೃತಿಗಳು ಇವರ ವಿದ್ವತ್ತಿನ ಸಾಕ್ಷಿಯಾಗಿವೆ.

ಉಪಾಧ್ಯೆ ಅವರು ನೇರವಾಗಿ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿಲ್ಲವಾದರೂ, ಕನ್ನಡ ಜೈನ ಸಾಹಿತ್ಯದ ಪ್ರೇರಕ ಶಕ್ತಿಗಳಾಗಿದ್ದು ಪ್ರಾಚೀನ ಜೈನ ಪ್ರಾಕೃತ ಸಂಸ್ಕೃತ ವಾಙ್ಮಯಗಳ ಬೃಹದ್ ದ್ವಾರವನ್ನು ತೆರೆದವರಾಗಿದ್ದಾರೆ. ಇವುಗಳ ಅಭ್ಯಾಸ ಕನ್ನಡ ಸಾಹಿತ್ಯಕ್ಕೆ ಅತ್ಯಾವಶ್ಯಕವೆನಿಸಿದೆ.

'ಸಜ್ಜನರೂ, ಬಹುಶ್ರುತರೂ, ಮೇಧಾವಿಗಳೂ ಆಗಿದ್ದ ಆ.ನೆ.ಉಪಾಧ್ಯೆ ಅವರ ಪ್ರತಿಭೆ ಎಲ್ಲಕಾಲಕ್ಕೂ ಪ್ರಜ್ವಲಿಸಲಿ'[೩೧] ಎಂಬ ಡಿ.ಎಲ್.ಎನ್. ಅವರ ಮಾತು ಎಲ್ಲ ಕಾಲಕ್ಕೂ ಪ್ರಸ್ತುತವೆನಿಸಿದೆ.

ಅವಲೋಕನ ಪತ್ರಿಕೆಯಲ್ಲಿ ೧೯೬೯ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ, ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿ ಸಂಕಲಿಸಿದ ಪ್ರೊ. ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೯ನೇ ಭಾಗವಾಗಿ ಮೂಡಿಬಂದುದ್ದಾಗಿದೆ.

ಕುವೆಂಪುರವರ ಕಾವ್ಯದಲ್ಲಿ ಕಾಣಬರುವ ಮೃದು-ಮಧುರ ಭಾವದ ಪದಬಂಧದ ಬಗೆ ಬಗೆಯ ಭಾವದ ಐಸಿರಿ, ಇತ್ಯಾದಿಗಳು ಕಾವ್ಯದ ಗೌಣ್ಯವನ್ನು ಹೆಚ್ಚಿಸುವುದಾಗಿವೆ.

ಯಾವುದೇ ಮಹಾಕಾವ್ಯದ ಕುರಿತು ಚರ್ಚಿಸುವಾಗ ಯಾವ ಕಾವ್ಯ ಯಾವ ಕಾಲದಲ್ಲಿ ಹುಟ್ಟಿತ್ತೆಂದು ಇಲ್ಲಿ ತಿಳಿದು ಬರುವ ಅಂಶವೆನಿಸಿದೆ. ಅಷ್ಟೇ ಅಲ್ಲದೆ ಇನ್ನೊಂದು ಇಲ್ಲಿನ ಮುಖ್ಯ ವಿಚಾರವೆಂದರೆ ಮಹಾಕಾವ್ಯದ ಇನ್ನೊಂದು ಗುಣ ಚಿರಯೌವ್ವನ ಅದಕ್ಕೆ ಮುಪ್ಪಿಲ್ಲ ಸಾವಿಲ್ಲದೆ ಮತ್ತೆ ಮತ್ತೆ ಓದಿಸಿಕೊಂಡು ಹೋಗುವ ಅಂಶ ಈ ಲೇಖನದ್ದಾಗಿದೆ.

**ವಿಜಯನಗರ ಕಾಲದ ಕನ್ನಡ ಸಾಹಿತ್ಯ (ಕ್ರಿ.ಶ. ೧೩೩೬-೧೫೬೫)**

೧೯೭೦ರ ವೇಳೆಗೆ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮೊದಲಿಗೆ ಕರ್ನಾಟಕ ಪರಂಪರೆ ಭಾಗ-೨ರ ಅಧ್ಯಾಯ-೧ರ ಮಧ್ಯಕಾಲ ಭಾಗದ ೧೪ನೇ ವಿಷಯವಾಗಿ ಪ್ರಸ್ತಾಪಗೊಂಡುದ್ದಾಗಿದೆ. ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ೨೦೦೮ರಲ್ಲಿ ಸಂಪಾದಿಸಿ ಸಂಕಲಿಸಿದ ಪ್ರೊ. ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೧೦ನೇ ಭಾಗವಾಗಿ ವಿಷಾದಗೊಂಡಿದ್ದು ಕಂಡು ಬಂದಿದೆ.

ಮೂಲ ಇಂಗ್ಲೀಷನಲ್ಲಿ ಡಿ.ಎಲ್.ಎನ್. ಅವರು ರಚಿಸಿದ ಈ ಲೇಖನವನ್ನು ಸಿ.ಮಹದೇವಪ್ಪನವರು ಕನ್ನಡಕ್ಕೆ ಅನುವಾದಿಸಿ ಕರ್ನಾಟಕ ಪರಂಪರೆ ಸಂಪುಟಗಳಲ್ಲಿ ದಾಖಲಿಸಿದ್ದು ಕಂಡುಬಂದಿದೆ.

ವಿಜಯನಗರ ಕಾಲದ ಕನ್ನಡ ಸಾಹಿತ್ಯವನ್ನು ಸಾಹಿತ್ಯಿಕವಾಗಿ, ಸಾಮಾಜಿಕವಾಗಿ ಆರ್ಥಿಕವಾಗಿ ಇತರೆ ಮೂಲಗಳಿಂದ ಹೊಕ್ಕು ನೋಡಿದ ಡಿ.ಎಲ್.ಎನ್. ಈ ಕಾಲಕ್ಕೂ ಪೂರ್ವ ಕನ್ನಡನಾಡಿನ ಸ್ಥಿತಿಗತಿ ಬಗ್ಗೆ, ಇಲ್ಲಿನ ಮತಧರ್ಮಗಳ ಬಗ್ಗೆ ಲೇಖನದ ಪೂರ್ವದಲ್ಲಿ ಹಿನ್ನೋಟದಲ್ಲಿ ಇಣುಕಿನೋಡಿದ್ದು ಕಂಡುಬಂದಿದೆ.

ಈ ವಿಚಾರವಾಗಿ ಕನ್ನಡ ಸಾಹಿತ್ಯ ವಿಜಯನಗರ ಪೂರ್ವದಲ್ಲಿ ಎರಡು ಪ್ರಬಲ ಆಂದೋಲನಗಳನ್ನು ಕಂಡದ್ದಾಗಿತ್ತು ಅವು ತನ್ನ ರೀತಿ ಲಕ್ಷಣಗಳನ್ನು ಶಾಶ್ವತ ಮುದ್ರೆ ರೂಪದಲ್ಲಿ ಹೊತ್ತಿದ್ದನ್ನು ಗ್ರಹಿಸಬಹುದಾಗಿದ್ದು. ಮೊದಲನೆಯದಾಗಿ ಜೈನಧರ್ಮದ ಪ್ರಭಾವ

ಎರಡನೆಯದಾಗಿ ವೀರಶೈವ ಆಂದೋಲನ ಈ ಎರಡು ಆಂದೋಲನಗಳು ವಿಜಯನಗರ ಪೂರ್ವದಲ್ಲೆ ಕನ್ನಡ ಸಾಹಿತ್ಯ ಲೋಕದಲ್ಲೆ ಬಿರುಗಾಳಿಯಂತೆ ಅಪ್ಪಳಿಸಿ ಕೊನೆಗೆ ತನ್‌ತಾನೆ ತಮ್ಮ ರೂಪಗಳು ಕಳಚಿ ಸಾಮಾನ್ಯರಂತೆ ಉಳಿದುಕೊಂಡ ಸಂಸ್ಕೃತಿಗಳೆನಿಸಿವೆ.

ದೇಶಿ ಶೈಲಿಯಲ್ಲಿ ಜನರ ಭಾವನೆಗಳನ್ನು ಹೊರಗೆಡುವಿದ ಬಸವಣ್ಣ ಹಾಗೂ ಇತರೆ ವಚನಕಾರರು ಒಂದು ಹೊಸ ಭಾಷೆ, ಭಾವವನ್ನೇ ಕಟ್ಟಿ ಬೆಳೆಸಿದವರಾಗಿದ್ದಾರೆ. ಆದರೆ ಈ ಹಿಂದಿನ ಜೈನಸಾಹಿತ್ಯ ಮಾರ್ಗಶೈಲಿಗೆ ದೇಶಿಶೈಲಿ ಎಡೆಮಾಡಿಕೊಟ್ಟ ರೂಪವಾಗಿ ಭಾಷೆ ಸಾಮಾನ್ಯವಾಗಿ ಕನ್ನಡ ಪ್ರತ್ಯಯಗಳಿಂದ ಕೂಡಿದ ಸಂಸ್ಕೃತ ರೂಪವಾಗಿದ್ದು ಇದು ಜನಸಾಮಾನ್ಯರ ಮನಮುಟ್ಟಲು ಕಷ್ಟವಾಗಿ ಜೈನಧರ್ಮದ ಅನುಕರಣೆಯ ಸಾಹಿತ್ಯ ಪಂಪನಂತಹ ಕೆಲ ಕವಿಗಳು ಇದನ್ನು ಕನ್ನಡಕ್ಕೆ ದೇಶಿಯತೆಗೆ ಹೊಂದಿಸಲು ಪ್ರಯತ್ನಿಸಿದ್ದರೂ ಅದು ಸಾಧ್ಯವಾಗದೇ ಅದರ ಅಳಿವು ಸುಲಭವೆನಿಸಿತು.

ಮುಂದೆ ದೇಶಿ ಮಟ್ಟುಗಳಾದ ತ್ರಿಪದಿ, ಸಾಂಗತ್ಯ, ರಗಳೆ ಹಾಗೂ ಜನರೂಢಿಯ ಹಾಡುಗಳಂತಹ ದೇಶೀಯ ಛಂದಸ್ಸುಗಳು ಮತ್ತೆ ಚೇತರಿಸಿ ಹೊಸ ಧರ್ಮ ಸಾಧನೆಗಳಾದರೂ ಇಲ್ಲಿ ಹಳೆಯ ಜೈನಸಾಹಿತ್ಯದ ವೈರಾಗ್ಯ ಹಾಗೂ ಇಹಲೋಕದ ಅನನ್ಯತೆ ಬಗ್ಗೆ ಹರಿಹರ ನಂತ ಕವಿಗಳು ಒತ್ತಿ ಹೇಳುತ್ತಿರಲು ೧೩ನೇ ಶತಮಾನಕ್ಕಾಗಲೇ ವೀರಶೈವ ಸಾಹಿತ್ಯದ ಇಷ್ಟಲಿಂಗದಲ್ಲಿನ ಭಕ್ತಿಯನ್ನು ಎತ್ತಿ ಹಿಡಿಯುವಂತಾಯಿತು. ಇದು ಕೆಲಕಾಲ ನಡೆದು ಮುಂದಾಳುಗಳು ಇಲ್ಲದ್ದರಿಂದ ಇದು ಕ್ಷೀಣಿಸಿ ೧೩ನೇ ಶತಮಾನದ ಕೊನೆಗೆ ವೈಷ್ಣವರ ಕಾರ್ಯಪರತೆ ಬೆಳೆದು ಇವರ ಭಕ್ತಿ ಪ್ರಾಶಸ್ತ್ಯ ವಿಶಿಷ್ಟವಾಗಿ ರೂಪುಗೊಂಡು ಬೆಳೆದವಾಗಿವೆ.

ಈ ಲೇಖನವನ್ನು ವಿಸ್ತಾರವಾಗಿ ರೂಪಿಸಿದ ಡಿ.ಎಲ್.ಎನ್. ವಿಜಯನಗರ ಕಾಲಘಟ್ಟದಲ್ಲಿ ಮೂಡಿಬಂದ ಸಾಹಿತ್ಯ ರಚನೆಗಳು ಮತ್ತು ಅದರ ಪ್ರಸಾರದ ಕಾರ್ಯ ಕುರಿತು ಇಲ್ಲಿ ವಿಧವಾಗಿ ರೂಪಿಸಿದ್ದು ಭಕ್ತಿ ಪ್ರಸಾರಕಾರ್ಯ ಅಲ್ಲಿನ ಜೈನ, ವೀರಶೈವ, ಬ್ರಾಹ್ಮಣ ಎಂಬ ಧರ್ಮದ ಮೇಲಿನ ವಿಂಗಡನಾ ಕ್ರಮವನ್ನು ರೂಪಿಸಿದ್ದು ಕಂಡುಬಂದಿದೆ. ಮುಂದೆ ತೀರ್ಥಂಕರರ ಚರಿತ್ರೆಗಳು, ಕಥೆಗಳು, ವ್ಯಾಖ್ಯಾನಗಳು, ಮಿಶ್ರರೂಪ, ವೀರಶೈವ ಪುರಾಣಗಳು, ಬ್ರಾಹ್ಮಣಿಕ ವೀರಕಾವ್ಯಗಳು, ವಚನಸಾಹಿತ್ಯದ ಮರುರೂಪ, ಭಕ್ತಿಗೀತೆಗಳು, ಶತಕಗಳು ಲೌಕಿಕ ವಿದ್ಯಾಶಾಸ್ತ್ರಗಳು ಹಾಗೂ ಅಸಮಗ್ರ ಐತಿಹಾಸಿಕ ಕೃತಿಗಳಾಗಿ ವಿಜಯನಗರ ಕಾಲದಲ್ಲಿ ಹತ್ತಾರು ಕವಿಗಳಿಂದ ಮೂಡಿಬಂದ ಸಾಹಿತ್ಯವನ್ನು ಡಿ.ಎಲ್.ಎನ್. ಸಮಗ್ರವಾಗಿ ಈ ಲೇಖನದಲ್ಲಿ ಮೂಡಿಸಿದ್ದು ಕಂಡುಬಂದು ಸುಮಾರು ಎರಡೂವರೆ ಶತಮಾನಗಳ ಕಾಲದ ಸಾಹಿತ್ಯ ಚಟುವಟಿಕೆಯ ಮೇಲಣದ ಪರಿಚಯದಿಂದ ಕವಿತ್ವದಲ್ಲಿ ಕೆಲವು ಗುಣೋತ್ಕರ್ಷದ ಶಿಖರಸ್ಥಾನಗಳಾಗಿವೆ ಎಂಬುದು ಈ ಲೇಖನದಲ್ಲಿ ಸ್ಪಷ್ಟವಾಗಿ ಕಂಡುಬಂದ ರೂಪಗಳೆನಿಸಿವೆ.

**ದಿವಂಗತ ಪೂಜ್ಯ ವೆಂಕಣ್ಣಯ್ಯನವರು**

ತ.ವೆಂ.ಸ್ಮಾರಕ ಗ್ರಂಥಮಾಲೆಯ ಮೂಲಕ ೧೯೭೦ರಲ್ಲಿ ಹೊರಬಂದ ಸವಿನೆನಪು, ಕೃತಿಯಲ್ಲಿ ಮೊದಲಿಗೆ ಅಚ್ಚಾದ ಡಿ.ಎಲ್.ಎನ್. ಅವರು ರಚಿತ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿ ಸಂಕಲಿಸಿದ ಪ್ರೊ.ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೧೧ನೇ ಭಾಗವಾಗಿ ಪ್ರಸ್ತಾಪಗೊಂಡುದ್ದಾಗಿದೆ.

ಡಿ.ಎಲ್.ನರಸಿಂಹಾಚಾರ್ಯರು ತಮ್ಮ ಗುರುಗಳಾದ ಟಿ.ಎಸ್.ವೆಂಕಣ್ಣಯ್ಯನವರೊಂದಿಗಿನ ಒಡನಾಟದ ಅನುಭವಗಳನ್ನು ಈ ಲೇಖನದುದ್ದಕ್ಕೂ ಹರುವಿದ್ದು, ಅವರ ನಿಷ್ಠುರತೆ, ಪ್ರಾಮಾಣಿಕತೆಯ ಜೀವನದ ರಸಕ್ಷಣಗಳನ್ನು, ಶಿಷ್ಯತ್ವದ ಮೇಲೆ ಅವರು ಹೊಂದಿದ ಪ್ರೀತಿ, ವಾತ್ಸಲ್ಯಗಳನ್ನು ಅಕ್ಷರ ರೂಪದಲ್ಲಿ ಮೂಡಿಸಿದ್ದು ಇವರ ಬಹುಮುಖ ಶಕ್ತಿಯೇ ಸರಿ ಎನಿಸಿದೆ.

ವೆಂಕಣ್ಣಯ್ಯನವರು ಸಾಹಿತ್ಯ ಲೋಕದಲ್ಲಿ ಅಪಾರ ಕೃಷಿಗೈದು ಮುಗಿಸದೆ ಬಿಟ್ಟುಹೋದ ಕುಮಾರವ್ಯಾಸ ಭಾರತವನ್ನು ಅಮೂಲಾಗ್ರವಾಗಿ ಹಸ್ತಪ್ರತಿಗಳ ಸಹಾಯದಿಂದ ಸಾಹಿತ್ಯ ಪರಿಷತ್ತಿನ ಸಹಾಯದಿಂದ ಮುಗಿಸಿದ ಕೀರ್ತಿ ಡಿ.ಎಲ್.ಎನ್. ಅವರಿಗೆ ಸಲ್ಲುತ್ತದೆ. ಹಾಗೆಯೇ ೧೯೩೮ರ ಹೊತ್ತಿಗೆ ಕರ್ನಾಟಕ ಸಾಹಿತ್ಯ ಪರಿಷತ್ತನ್ನು ಕನ್ನಡ ಸಾಹಿತ್ಯ ಪರಿಷತ್ತು ಎಂದು ಮರುನಾಮಕರಣ ಮಾಡಿದ ಕೀರ್ತಿ ಟಿ.ಎಸ್.ವೆಂಕಣ್ಣಯ್ಯನವರಿಗೆ ಸಲ್ಲುತ್ತದೆ.

ಡಿ.ಎಲ್.ಎನ್. ತಾವೇ ಹೇಳಿಕೊಂಡಂತೆ 'ಶಾಂತಿ, ಕ್ಷಮೆ, ದಾನ ಮುಂತಾದ ಅನೇಕ ಗುಣಗಳು ಸಿದ್ಧಪುರುಷರಲ್ಲಿ ಇರುವಂತವು ಅವು ವೆಂಕಣ್ಣಯ್ಯ ಗುರುಗಳಲ್ಲಿ ಮೇಳೈಸಿವೆ ಅವರ ಸಂಗ, ಸಹವಾಸ, ಉಪದೇಶ, ಆಚಾರ ಇವೆಲ್ಲವು ನನ್ನಲ್ಲಿದ್ದ ಕೊಂಕು ಡೊಂಕುಗಳನ್ನು ನನಗೆ ಬಾಳುವ ಮಾರ್ಗವನ್ನು ತೋರಿಸಿದ ಹಿರಿಯ ಗುರುಗಳಾದ ಬಿ.ಎಂ.ಶ್ರೀಕಂಠಯ್ಯರವರು ಕನ್ನಡ ವಿದ್ಯೆಯಲ್ಲಿ ಪರಿಣತಿಯನ್ನು ಪಡೆಯಲು ಮಾರ್ಗದರ್ಶಕರಾದರೆ ವೆಂಕಣ್ಣಯ್ಯರವರು ನಾನು ಮನುಷ್ಯನಾಗಿ ಮನುಷ್ಯರಂತೆ ಬಾಳುವುದನ್ನು ಕಲಿಸಿಕೊಟ್ಟವರು. ಯಾವ ಪುಣ್ಯದ ಫಲವೋ ನನಗೆ ಅವರ ಸಂತ್‌ಸಂಗ ಲಭ್ಯವಾದುದು'[೩೨] ಎಂಬ ಮಾತು ನಿಜವಾಗಿಯೂ ಗುರುವಿನ ಮೇಲಿನ ಭಕ್ತಿಯನ್ನು ಎತ್ತಿತೋರಿಸುವ ಅಂಶಗಳೆನಿಸಿವೆ. ಇನ್ನೂ ಇಂತಹ ಅನೇಕ ವಿಷಯಗಳನ್ನು ಡಿ.ಎಲ್.ಎನ್., ಟಿ.ಎಸ್.ವೆಂಕಣ್ಣಯ್ಯರವರೊಂದಿಗಿನ ಒಡನಾಟದ ಕ್ಷಣಗಳನ್ನು ಈ ಲೇಖನದುದ್ದಕ್ಕೂ ವಿವರಿಸಿದ್ದು ಕಂಡುಬಂದಿದೆ.

**ದಿವಂಗತ ಆರ್.ಎಲ್.ನರಸಿಂಹಯ್ಯನವರು**

೧೯೬೯ರಲ್ಲಿ ವಿಜ್ಞಾನ ಕರ್ನಾಟಕ ಪತ್ರಿಕೆಯ ಸಂಚಿಕೆ–೧, ಸಂಪುಟ–೪ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಕಲಿಸಿದ

ಪ್ರೊ. ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೧೨ ಲೇಖನವಾಗಿ ಮೂಡಿಬಂದುದಾಗಿದೆ.

೧೯೩೦ರ ವೇಳೆಗೆ ವಿಜ್ಞಾನ ವಿಷಯಗಳನ್ನು ಕುರಿತು ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಕನ್ನಡದಲ್ಲಿ ಕೃತಿಗಳನ್ನು ಬರೆದ ಅತ್ಯಲ್ಪರಲ್ಲಿ ಆರ್.ಎಲ್.ನರಸಿಂಹಯ್ಯನವರು ಒಬ್ಬರಾಗಿದ್ದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಭೌತವಿಜ್ಞಾನದ ಉಪಾಧ್ಯಾಯರಾಗಿದ್ದ ಇವರಿಂದ ಕನ್ನಡಸಾಹಿತ್ಯದಲ್ಲಿ ವಿಜ್ಞಾನ ರಚನೆಗೆ ಆಗಿರುವ ಸೇವೆ ಮಿಗಿಲಾಗಿದ್ದೆನಿಸಿದೆ, ಇದಕ್ಕೆ ಪೂರಕವೆಂಬಂತೆ ಶಬ್ದ ಪ್ರಪಂಚ ಜಗತ್ತುಗಳ ಹುಟ್ಟು, ಸಾವು, ರೇಡಾರ್, ಪಂಚಾಂಗಗಳು ಖಗೋಳಗಳ ವಿಜ್ಞಾನವೂ ಎಂಬ ಈ ನಾಲ್ಕು ಗ್ರಂಥಗಳು ಹಾಗೂ ಹತ್ತಾರು ಲೇಖನಗಳು ಇದಕ್ಕೆ ಸಾಕ್ಷಿ ಎನಿಸಿವೆ. ಒಬ್ಬ ಸಾಧಾರಣ ಕನ್ನಡಿಗನು ಇವುಗಳನ್ನು ಓದಿ ಗ್ರಹಿಸಿಕೊಳ್ಳುವ ಮಟ್ಟಕ್ಕೆ ಈ ಕೃತಿಯ ಲೇಖನಗಳು ಮೂಡಿಬಂದವಾಗಿವೆ. ಎಂದು ಡಿ.ಎಲ್.ಎನ್. ಸ್ಪಷ್ಟಪಡಿಸಿ ವಿಜ್ಞಾನದ ಹತ್ತಾರು ವಿಷಯಗಳನ್ನು ಕನ್ನಡ ಜನಕ್ಕೆ ಪ್ರಿಯವಾಗಿಸುವ ಕೆಲಸ ಇವರ ಗ್ರಂಥ, ಲೇಖನಗಳಲ್ಲಿ ಮೂಡಿವೆ ಎಂದು ಅಭಿಪ್ರಾಯಿಸಿದ್ದಾರೆ.

೧೯೪೫ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಇವರ ಸಹಪಾಠಿಯಾಗಿ, ಸ್ನೇಹಿತರಾಗಿ ಬೆಳೆದುಬಂದ ಡಿ.ಎಲ್.ಎನ್. ಇವರಲ್ಲಿನ ವಿದ್ವತ್ತನ್ನು ಇವರೊಂದಿಗಿನ ಒಡನಾಟದ ಕ್ಷಣಗಳನ್ನು ಈ ಲೇಖನದುದ್ದಕ್ಕೂ ಹರುವಿದ್ದ ಕಂಡುಬಂದಿದೆ. ನಿವೃತ್ತಿ ನಂತರ ನರಸಿಂಹಯ್ಯನವರು ಬೆಂಗಳೂರಿನ ಹಲವು ರೇಡಿಯೊ ಸಂಸ್ಥೆಗಳಿಗೆ ತಜ್ಞ ಸಲಹೆಗಾರರಾಗಿ ಮೈಸೂರು ವಿ.ವಿ.ಯ ಇಂಗ್ಲೀಷ್ ಕನ್ನಡ ನಿಘಂಟಿನ ಸಂಪಾದಕ ಸಮಿತಿಯ ಸದಸ್ಯರಾಗಿ, ಕನ್ನಡ ವಿಶ್ವಕೋಶದ ಭೌತಶಾಸ್ತ್ರ ವಿಭಾಗದ ಸಹ ಸದಸ್ಯರಾಗಿ ಮಾಡಿದ ಸೇವೆ ಅಪಾರವಾಗಿದೆ ಎಂದು ಡಿ.ಎಲ್.ಎನ್. ನರಸಿಂಹಯ್ಯನವರ ಕನ್ನಡ ಸೇವೆ ಕುರಿತು ಅಪಾರವಾಗಿ ಶ್ಲಾಘಿಸಿದ್ದು ಲೇಖನದಲ್ಲಿ ತಿಳಿದುಬಂದ ಪ್ರಮುಖ ಅಂಶವೆನಿಸಿದೆ.

**ಬಹುಮುಖ ಶಕ್ತಿಯ ಕುಲಪತಿ**

೧೯೭೨ರಲ್ಲಿ ತ.ವೆಂ.ಸ್ಮಾರಕ ಗ್ರಂಥಮಾಲೆ ಮೈಸೂರುನಿಂದ ಹೊರಬಂದ ಅಂತಃಕರಣ ಕೃತಿಯಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಟಿ..ವಿವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿ ಪ್ರಕಟಿಸಿದ ಪ್ರೊ. ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ೧೩ ಲೇಖನವಾಗಿ ಮೂಡಿಬಂದುದಾಗಿದೆ.

ದೇ. ಜವರೇಗೌಡರು ಮೈಸೂರು ವಿಶ್ವವಿದ್ಯಾಲಯದ ಕುಲಪತಿ ಹುದ್ದೆ ಅಲಂಕರಿಸಿದಾಗ ಡಿ.ಎಲ್.ಎನ್. ಅವರು ಇವರ ಬಹುಮುಖ ಶಕ್ತಿಯ ಕುರಿತು ಬರೆದ ಲೇಖನ ಇದಾಗಿದೆ.

ಅಬ್ರಾಹಂ ಲಿಂಕನ್‌ನನ್ನು ನಿದರ್ಶಿಸಿ ಜವರೇಗೌಡರನ್ನು ಲೇಖನದುದ್ದಕ್ಕೂ ನಿರೂಪಿಸಿದ ಡಿ.ಎಲ್.ಎನ್. ಅವರ ಕುರಿತು, ಅವರ ವ್ಯಕ್ತಿತ್ವ ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದು ಇಲ್ಲಿ ಕಂಡುಬಂದಿದೆ.

ಬಡತನದಲ್ಲಿ ಬೆಳೆದು ಬಂದ ಜವರೇಗೌಡರು ಉನ್ನತ ಮಟ್ಟದ ಬುದ್ಧಿಜೀವಿಯಾಗಿ ತಮ್ಮನ್ನು ತಾವು ಮಾರ್ಪಡಿಸಿಕೊಂಡಿದ್ದರು. ಕನ್ನಡ ನಾಡಿನ ಜನತೆಗೆ ಇಲ್ಲಿನ ಯುವ ಪೀಳಿಗೆಗೆ ಎಂದಿಗೂ ಅನುಕರಣೀಯರಾಗಿ ಅಪಾರ ಹೊಗಳಿಕೆ, ಗೌರವಗಳಿಗೆ ಪಾತ್ರರಾಗಿದ್ದನ್ನು ಡಿ.ಎಲ್.ಎನ್. ಗುರುತಿಸಿದ್ದಾರೆ. ಕನ್ನಡ ಭಾಷೆ ಸಾಹಿತ್ಯಗಳಲ್ಲಿ ವಿದ್ವಾಂಸರಾಗಿದ್ದ ಜವರೇಗೌಡರು ಕನ್ನಡ ಸಾಹಿತ್ಯ ಲೋಕದಲ್ಲಿ ಅನೇಕ ಕೃತಿಗಳನ್ನು ಸಂಕಲಿಸಿ, ಸಂಪಾದಿಸಿ, ಗಣ್ಯಸ್ಥಾನವನ್ನು ಪಡೆದವರಾಗಿದ್ದಾರೆ.

ಗಿರಿಜಾಕಲ್ಯಾಣ, ಅಜಿತಪುರಾಣ, ಧರ್ಮಾಮೃತ, ಕಬ್ಬಿಗರ ಕಾವ್ಯ, ಲೀಲಾವತಿ ಪ್ರಬಂಧ, ಇತರೆ ಕೃತಿಗಳು ಹಾಗೂ ಪಾಠ ಸಂಯೋಜನೆ ಪಾಠನಿರ್ಧಾರದಿಂದ ಮೂಲ ರೂಪವನ್ನು ಪುನರ್ರಚಿಸುವಲ್ಲಿ ಪ್ರಾಚೀನ ಕನ್ನಡ ಕಾವ್ಯ, ವ್ಯಾಕರಣ, ನಿಘಂಟು ಶಾಸ್ತ್ರ ವಿಚಾರಗಳಲ್ಲಿ ವ್ಯಾಪಕ ಅಧ್ಯಯನ ಮಾಡಿದವರಾಗಿದ್ದರು. ಇವರು ತಮ್ಮ ಕೃತಿಗಳಿಗೆ ರಚಿಸಿದ ಉಜ್ವಲವಾದ, ವಿಸ್ತಾರವಾದ ಪ್ರಸ್ತಾವನೆಗಳು ಕೃತಿಯ ಮಹತ್ವವನ್ನು ಸಾರುವಂತವಾಗಿವೆ.

ಇವರು ಬರಹಗಾರರು ಸಂಪಾದಕರು ಮಾತ್ರವಲ್ಲದೆ ಉತ್ತಮ ಭಾಷಾಂತರಕಾರರೂ ಆಗಿದ್ದರೂ, ಇದಕ್ಕೆ ಪೂರಕವೆಂಬಂತೆ ಇಂಗ್ಲೀಷ್‌ನ 'ಪ್ರೈಡ್ ಆ್ಯಂಡ್ ಪ್ರಿಜುಡಿಸ್ ಕೌಂಟ್ ಟಾಲ್‌ಸ್ಟಾಯ್' ಅವರ ರಿಸರಕ್ಷನ್ ಆದಿಯಾಗಿ ಹತ್ತಾರು ಕೃತಿಗಳನ್ನು ಕನ್ನಡಕ್ಕೆ ತಂದವರಾಗಿದ್ದಾರೆ. ಸುಮಾರು ೬೦ಕ್ಕೂ ಅಧಿಕ ಕೃತಿಯನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಕೊಟ್ಟ ಜವರೇಗೌಡ ಅವರು ಕನ್ನಡದ ಕಟ್ಟಾಳು ಎನಿಸಿದ್ದಾರೆ.

ಕನ್ನಡ ಶಾಖೆಯ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ, ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ ಸಾವಿರಾರು ವಿದ್ಯಾರ್ಥಿಗಳ ಗೌರವ ಪ್ರೀತಿಗೆ ಭಾಜನರಾದ ಇವರು ಅಗಾಧ ಜ್ಞಾನದ ಬೆಂಬಲವನ್ನುಳ್ಳ ಮಹೋನ್ನತ ಆಚಾರ್ಯರಾಗಿ ಕನ್ನಡ ನಾಡಿನ ಹೆಮ್ಮೆಯ ಆಸ್ತಿಯಾಗಿದ್ದರೆಂದು ಡಿ.ಎಲ್.ಎನ್. ಜವರೇಗೌಡರ ಕುರಿತು ಹೆಮ್ಮೆಯ ಮಾತನ್ನು ಚಿಕ್ಕದಾದ ಲೇಖನದಲ್ಲಿ ಚೊಕ್ಕವಾಗಿ ಬಿತ್ತರಿಸಿದ್ದು ಕಂಡುಬಂದಿದೆ.

**ಕನ್ನಡವನ್ನು ಜನಪ್ರಿಯವಾಗಿಸುವ ವಿಧಾನ**

ಜೀವನ ಪತ್ರಿಕೆಯ ಸಂಚಿಕೆ-೯ಸಂಪುಟ-೧೦ ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಟಿ.ವಿ. ವೆಂಕಟಾಚಲಶಾಸ್ತ್ರಿಯವರು ೨೦೦೮ರಲ್ಲಿ ಸಂಪಾದಿಸಿದ ಪ್ರೊಫೆಸರ್ ಡಿ.ಎಲ್.ಎನ್. ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು ಕೃತಿಯ ಭಾಗ-೨ರಲ್ಲಿ ಮೂಡಿಬಂದದ್ದಾಗಿದೆ.

ಕನ್ನಡ ನಾಡಿನಲ್ಲೆ ಕನ್ನಡವನ್ನು ಪ್ರಚಾರಗೊಳಿಸುವ ಪರಿಸ್ಥಿತಿ ಕುರಿತು ಡಿ.ಎಲ್.ಎನ್. ಅವರು ಈ ಲೇಖನದುದ್ದಕ್ಕೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದು ಕಂಡು ಬಂದಿದೆ.

ಕನ್ನಡವೆಂಬುದು ಒಂದು ವ್ಯವಹಾರಿಕ ದೃಷ್ಠಿಯ ಒಂದು ನೆಲೆಯಾದರೆ ಅದರಲ್ಲಿ ರಚಿತವಾದ ಸಾಹಿತ್ಯವನ್ನು ಇನ್ನೊಂದು ದೃಷ್ಠಿಯಾಗಿ ನೋಡಲಾಗುತ್ತಿದೆ. ಕನ್ನಡವು ಯಾವ ಯಾವ ವರ್ಗಕ್ಕೆ ಅವಶ್ಯವಾಗಿದೆ ಎಂದು ಪ್ರಸ್ತಾಪಿಸಿದ ಡಿ.ಎಲ್.ಎನ್. ಮೂರು ಭಾಗಗಳಾಗಿ ವಿಭಜಿಸಿ ಅವರುಗಳು ಎಷ್ಟು ಪ್ರಮಾಣದಲ್ಲಿ ಕನ್ನಡವನ್ನು ಯಾವ ರೀತಿ ಬಳಸಿಕೊಂಡು ಹೋಗುತ್ತಿದ್ದಾರೆ ಹಾಗೂ ಅವರುಗಳಿಂದ ಕನ್ನಡದಸ್ಥಿತಿಗತಿ ಹೇಗಿದೆ ಎಂದು ತಮ್ಮ ಈ ಲೇಖನದುದ್ದಕ್ಕೂ ಬಿತ್ತರಿಸಿದ್ದು ಎದ್ದು ಕಂಡಿದೆ.

ಡಿ.ಎಲ್.ಎನ್. ಮುಖ್ಯವಾಗಿ ಕನ್ನಡಿಗರಲ್ಲಿ ಕಲಿತವರು, ಅರ್ಧಕಲಿತವರು, ನಿರಕ್ಷಕರು ಎಂಬ ಪಂಗಡಗಳನ್ನಾಗಿ ರೂಪಿಸಿ ಇವರುಗಳಲ್ಲಿನ ಕನ್ನಡದ ರೂಪ ಹೇಗೆ ಬೆಳೆದು ಬಂದಿದೆ ಮತ್ತು ಮುಂದೆ ಹೇಗೆ ಸಾಗಬಹುದು ಎಂಬುದನ್ನು ವಿವೇಚಿಸಿ ಕಲಿತವರು, ಕನ್ನಡವನ್ನು ಚೆನ್ನಾಗಿ ಓದುವವರು ಬರಹವನ್ನು ಚೆನ್ನಾಗಿ ತಿಳಿದವರು ಹಾಗೂ ಇಂಗ್ಲೀಷ್ ಸಂಸ್ಕೃತವನ್ನು ಇತರೆ ಬೇರೆ ಭಾಷೆಗಳನ್ನೂ ಶಾಸ್ತ್ರಗ್ರಂಥಗಳನ್ನು ಆಳವಾಗಿ ತಿಳಿವಾಗಿ ತಿಳಿದವರು ಇವರು ಕನ್ನಡದ ಬಗ್ಗೆ ಅಸಡ್ಡೆ ವ್ಯಕ್ತಪಡಿಸಿ ಇದೊಂದು ಸಂಸ್ಕೃತದ ಎಂಜಲು; ಇದರಲ್ಲಿ ಆಧುನಿಕ ಕಥೆಯನ್ನು ಕಟ್ಟಿ ಕೊಡಲು ಸ್ಥಾನವಿಲ್ಲ ಇದರಲ್ಲಿ ಏನೂ ಹೊಸತಿಲ್ಲ ಅದೇ ಪುರಾಣಗಳ ಕಟ್ಟುಕಥೆ ಎಂದು ಪರಿಯಾಗಿ ಕನ್ನಡವನ್ನು ತಿರಸ್ಕರಿಸುವವರೇ ಹೆಚ್ಚಾಗಿದ್ದಾರೆ. ಇವರಿಗೆ ಸಂಖ್ಯಾಬಲವಿಲ್ಲದಿದ್ದರೂ ಪರಭಾಷೆಯ ವ್ಯಾಮೋಹ ಇರುವುದರಿಂದ ಇವರು ಏನಾದರೂ ಮಾಡಬಹುದು. ಆದರೆ ಇವರು ಮನಸ್ಸು ಮಾಡಿದರೆ, ಇವರಲ್ಲಿನ ದೇಶಾಭಿಮಾನ ಸಿಡಿದೆದ್ದರೆ ಕನ್ನಡಕ್ಕೆ ಉಪಕಾರವಾಗುವುದು ಖಚಿತ, ಹೇಗೆಂದರೆ, ಇವರು ಪರಭಾಷೆಯಲ್ಲಿರುವ ವಿಚಾರಗಳನ್ನು ಕನ್ನಡದಲ್ಲೆ ರಚಿಸಿ ಸಮಾಜಕ್ಕೆ ಬಿತ್ತರಿಸಲು ಮುಂದಾಗಬೇಕು ಹಾಗೂ ನಮ್ಮಲ್ಲಿನ ಮಾನವಿಕ, ಕೈಗಾರಿಕಾ ಇತರೆ ತಾಂತ್ರಿಕ ವಿಚಾರಗಳನ್ನೊತ್ತ ಕೃತಿಗಳನ್ನು ಕನ್ನಡದಲ್ಲೆ ರಚಿಸಿ ನಮ್ಮ ನಾಡಿನಲ್ಲಿ ಹರುವಬೇಕು ಆಗ ಮಾತ್ರ ಕನ್ನಡಕ್ಕೆ ಕನ್ನಡಿಗರಿಗೆ ಅತಿ ಉಪಕಾರ ಸಾಧ್ಯ. ಇದಕ್ಕೆ ಪೋಷಕವಾಗಿ ಖಾಸಗಿ ಕಂಪನಿಗಳು, ಸರಕಾರ ಇವರಿಗೆ ಅವಕಾಶಗಳನ್ನು ಒದಗಿಸಿ ಕೊಡಲು ಮುಂದಾಗಬೇಕು ಕಲಿತವರು ಕನ್ನಡಕ್ಕೆ ಹಿಂದಿರುಗಬೇಕು. ಆಗ ಮಾತ್ರ ಕನ್ನಡದ ಒಂದು ರೀತಿಯ ಬೆಳವಣಿಗೆ ಸಾಧ್ಯ.

ಎರಡನೆಯ ವಿಚಾರವಾಗಿ ಅರ್ಧಕಲಿತವರಿಂದ ಆಗುವ ಕನ್ನಡ ಪ್ರಚಾರದ ವಿಧಾನ ಇವರಿಗೆ ಅನ್ಯಭಾಷಾ ವ್ಯಾಮೋಹ ಇರುವುದಿಲ್ಲ ಹಾಗೂ ದೇಶಿಯ ಸಾಹಿತ್ಯ, ವಿಚಾರಗಳಿಗೆ ಕಟ್ಟುಬಿದ್ದು ಸಾಗುವ ಜನರಿವರಾಗಿದ್ದು ಹೊರಗಿನ ಪ್ರಪಂಚ ಅಷ್ಟಾಗಿ ತಿಳಿದಿರುವುದಿಲ್ಲ ಇವರಿಗೆ ಉತ್ತೇಜನವಾಗಿ ಅರ್ಧ ತಿಳಿದ ಇವರಿಗೆ ಪೂರ್ಣಪ್ರಮಾಣದಲ್ಲಿ ಸಾಹಿತ್ಯಿಕವಾಗಿ,

ಸಾಂಸ್ಕೃತಿಕವಾಗಿ ಚೇತರಿಸಿಕೊಳ್ಳಲು ನಮ್ಮ ನಾಡಿನ ಸಾಹಿತ್ಯದ ಆಚಾರಗಳು ವಿಚಾರ, ಉಳಿದುಕೊಳ್ಳಲು ಕಲಿತವರು, ಉಳ್ಳವರು, ಸರಕಾರ ಪ್ರೋತ್ಸಾಹಿಸಿ ಇವರಿಗೆ ಎಲ್ಲಾ ಮೂಲಗಳಿಂದ ಹಾದಿ ಹಾಕಿಕೊಡಬೇಕು ಆಗ ಇವರು ನಮ್ಮ ದೇಶಿತನವನ್ನು ಉಳಿದುಷ್ಟರಲ್ಲೇ ಸುಧಾರಿಸಿ ಉನ್ನತ ಮಟ್ಟಕ್ಕೆ ಹೊಯ್ಯಲು ಮುಂದಾಗುತ್ತಾರೆ.

ಮೂರನೆಯ ಗುಂಪಿನ ವಿಚಾರವಾಗಿ ಇವರು ನಿರಕ್ಷರಸ್ಥರು ಓದು ಬರಹ ಇಲ್ಲದವರು ಇವರು ವ್ಯವಸಾಯ ಇತರೆ ಕುಲಕಸಬುಗಳನ್ನು ನಡೆಸಿಕೊಂಡು ಹಳ್ಳಿಗಳೇ ತಮ್ಮ ಪ್ರಪಂಚ ಎಂದು ಜೀವನ ನಡೆಸುತ್ತಿರುವವರು. ಇವರಿಗೆ ಆಡುಭಾಷೆ ಕನ್ನಡವಾಗಿದ್ದರೂ ಅದರ ಅಕ್ಷರ ರೂಪ ನೈಜತೆ ತಿಳಿಯದವರಾಗಿರುತ್ತಾರೆ. ಮೊದಲಿಗೆ ಮುಖ್ಯವಾಗಿ ಇವರಿಗೆ ಪ್ರಾಥಮಿಕ ವಿದ್ಯಾಭ್ಯಾಸ ಕಲಿಸಲು ಸರಕಾರ, ಈ ಹಿಂದೆ ಎರಡೂ ಪಂಗಡಗಳು ಶ್ರಮಿಸಬೇಕು ಆಗ ಇವರಿಗೂ ಪ್ರಪಂಚ ಜ್ಞಾನ ಉಂಟಾಗಿ ಇವರೂ ಕನ್ನಡವನ್ನು ಉಳಿಸಿ ಬೆಳೆಸಲು ಮುಂದಾಗುತ್ತಾರೆ.

ಪ್ರಸ್ತುತ ಕಾಲದಲ್ಲಿ ಪ್ರಚಾರ ಸಾಧನಗಳು ಅನೇಕ ಇದ್ದು ಇವುಗಳಿಂದ ಜನರಿಗೆ ಕನ್ನಡದ ಬಗ್ಗೆ ಮೂಲ ಜಾಗೃತಿ ಅತಿಅವಶ್ಯವಾಗಿ ಮೂಡಿಸಲು ಮುಂದಾಗಬೇಕು ಹಾಗೂ ಪರಭಾಷೆ ವ್ಯಾಮೋಹವನ್ನು ಕನ್ನಡಿಗರು ಊಟಕ್ಕೆ ಉಪ್ಪಿನಕಾಯಿಯಂತೆ ಬಳಸಬೇಕು. ಊಟವೆ ಅದೆಂದು ನಂಬಬಾರದು ಅದು ನಮ್ಮತನವನ್ನೇ ನಮ್ಮ ನಾಡಿನ ಮೂಲವನ್ನೇ ಕ್ರಮವಾಗಿ ಕೊಂದು ಹಾಕುತ್ತದೆ.

ಪಟ್ಟಣದಲ್ಲಿ ಸಿಗುವ ಎಲ್ಲಾ ವಸ್ತುಗಳು ಹಳ್ಳಿಗಳಲ್ಲಿ ಸಿಗುವಂತಾಗಬೇಕು. ನಗರವಾಸಿಗಳು ಹಳ್ಳಿಗಳಿಗೆ ಆಗಾಗ್ಗೆ ತೆರಳಿ ಕನ್ನಡ ವಿಚಾರಗಳನ್ನು ತಿಳಿಸಲು ಮುಂದಾಗಬೇಕು.

ಪ್ರಾಥಮಿಕ ವಿದ್ಯಾಭ್ಯಾಸ ವಯಸ್ಕ ಶಿಕ್ಷಣ, ಎಲ್ಲಾ ಗ್ರಾಮಗಳಿಗೆ ವಿದ್ಯುತ್ ಇತರೆ ಇಂದಿನ ಜಾಲತಾಣಗಳ ಸಂಪರ್ಕ, (ವೈ-ಫೈ) ಕನ್ನಡವು ಆಡಳಿತ ಭಾಷೆಯಾಗಿ ಎಲ್ಲಾ ಮನೆ ಮನೆಗಳಿಗೂ ತಲುಪುವಂತೆ ಮಾಡುವ ಪ್ರಚಾರ, ಪರಭಾಷಾವನ್ನು ಅದರದರ ಪರಿಮಿತಿಗೆ ತಕ್ಕಂತೆ ಬಳಿಸಲು ಮುಂದಾಗುವಂತೆ ಮಾಡುವುದು ನಾನಾ ಬಗೆಯ ಗ್ರಂಥಗಳ ರಚನೆಗೆ ಪ್ರಕಟನೆಗೆ ಪ್ರೋತ್ಸಾಹ ನೀಡಿ ಕನ್ನಡ ನಾಡು ನುಡಿಗಳ ಬಗ್ಗೆ ಇತರೆ ಭದ್ರತೆ ನೀಡಲು ಸರ್ಕಾರ ಕ್ರಮವಹಿಸಬೇಕು. ಬಂಡವಾಳಗಾರರು ಕಾರ್ಮಿಕರು ಅವರ ಮಕ್ಕಳ ಕಲಿಕೆಯ ಬಗ್ಗೆ ಸೂಕ್ತ ಜವಾಬ್ದಾರಿ ವಹಿಸುವುದು, ತಂತ್ರಜ್ಞಾನ ನಿಪುಣರಿಂದ, ತಂತ್ರಜ್ಞಾನ ವಿಚಾರಗಳ ಕುರಿತ ಪುಸ್ತಕಗಳನ್ನು ಕನ್ನಡದಲ್ಲಿ ಬರೆಸಿ ಹೊರತಂದು ಪ್ರಚಾರಗೊಳಿಸುವುದು, ಕಾರ್ಮಿಕರ ಬದುಕನ್ನು ಅವರ ಸಂಸ್ಕೃತಿಯನ್ನು ಉತ್ತೇಜನಗೊಳಿಸಲು, ನಾಟಕ, ಹರಿಕಥೆ, ಬೀದಿನಾಟಕಗಳನ್ನು ಕನ್ನಡದಲ್ಲೇ ರಚಿಸಿ ಉಚಿತವಾಗಿ ಪ್ರದರ್ಶಿಸಲು ಮುಂದಾಗಿ ಬೇಕಾದ

ಸೌಲಭ್ಯ ಸೌಕರ್ಯಗಳನ್ನು ಏರ್ಪಡಿಸುವುದು ಅವಶ್ಯ. ಜೊತೆಗೆ ಕಲಿತವರು, ಅರ್ಧಕಲಿತವರು, ಉಪೇಕ್ಷೆಗೆ ಬದಲು ಸೇವಾ ಮನೋಭಾವದಿಂದ ಈ ಮೇಲಿನ ಉದ್ದೇಶಗಳಿಗೆ ಸರ್ಕಾರಕ್ಕೆ ಬಂಡವಾಳಶಾಹಿಗೊಳೊಂದಿಗೆ ಸೇರಿ ಸೇವಾಮನೋಧರ್ಮವನ್ನು ಹೊಂದಿ ಮುನ್ನಡೆದರೆ ಕನ್ನಡ ನಿಜವಾಗಿ ಜನಪ್ರಿಯವಾಗುತ್ತದೆ ಎಂದು ಡಿ.ಎಲ್.ಎನ್. ತಮ್ಮ ಅಭಿಪ್ರಾಯಗಳನ್ನು ಈ ರೀತಿ ಹರುವಿದ್ದು ಕಂಡುಬಂದಿದೆ.

**ಕನ್ನಡ ಸಾಹಿತ್ಯದ ಸೊಬಗು**

೧೯೫೨ರಲ್ಲಿ ಮೊದಲ ಬಾರಿಗೆ ಕನ್ನಡ ನುಡಿಯ ಸಂಚಿಕೆ-೨, ಸಂಪುಟ-೧೬ರಲ್ಲಿ ಪ್ರಕಟಗೊಂಡ ಈ ವಿಚಾರ ಹೈದರಾಬಾದಿನಲ್ಲಿ ಕರ್ನಾಟಕ ಸಾಹಿತ್ಯ ಮಂದಿರದಲ್ಲಿ ಡಿ.ಎಲ್.ಎನ್. ಮಾಡಿದ ಭಾಷಣದ ಪ್ರತಿಯಾಗಿದೆ.

ಕನ್ನಡದ ಬಗೆಗಿನ ಪ್ರೀತಿಯನ್ನು ಬೆಳೆಸಿಕೊಂಡು ಸಾಗುವುದು ಪ್ರತಿ ಕನ್ನಡಿಗನ ಕರ್ತವ್ಯ ಈ ಕುರಿತು ಡಿ.ಎಲ್.ಎನ್. 'ಕನ್ನಡವೆಂದರೆ ನನಗೆ ಮೊದಲಿನಿಂದಲೂ ಆಶೆ. ವಿಜ್ಞಾನವನ್ನು ಓದಬೇಕೆಂದವನು ಹೇಗೋ ಕನ್ನಡಕ್ಕೆ ಬಂದೆ ಹಿಂದಿನವರು ಮಾಡಿದ ಸಾಹಿತ್ಯ ಶೋಧನೆಯನ್ನು ನೋಡಿದರೆ ಇಂದಿನವರು ಮಾಡುತ್ತಿರುವ ಸಾಹಿತ್ಯ ಕುರಿತ ಕಾರ್ಯ, ಶೋಧನೆ ಏನು ಅಲ್ಲಾ, ಹಿಂದಿನವರು ಮಾಡಿದ ಕೆಲಸಕ್ಕೆ ಇಂದಿನ ಜನ ವಿವರಣೆ ಕೊಡುವುದು ಅತಿ ಅವಶ್ಯವೆನಿಸಿದೆ'[೩೩] ಎಂದು ಕನ್ನಡದ ಮುನ್ನಡೆ ಕುರಿತು ಚರ್ಚಿಸಿದ ಡಿ.ಎಲ್.ಎನ್. ಕನ್ನಡದ ಸೊಬಗಿನ ಕಂಪಿನ ಕುರಿತು ಕೆಲವಾರು ವಿಚಾರಗಳನ್ನು ಈ ಲೇಖನದುದ್ದಕ್ಕೂ ಮಂಡಿಸಿದ್ದು ಎದ್ದುಕಂಡಿದೆ.

ಯಾವುದು ಲೋಕಜೀವನದಲ್ಲಿ ನೋವು ಅದು ಸಾಹಿತ್ಯದಲ್ಲಿ ಸೌಂದರ್ಯ, ಸುಖವನ್ನುಂಟುಮಾಡುತ್ತದೆ ಇಂತಹ ಸೌಂದರ್ಯ ನಮ್ಮ ಸಾಹಿತ್ಯ ಕೃತಿಗಳಲ್ಲಿ ಹತ್ತಾರು ರೂಪಗಳಲ್ಲಿ ಕಂಡುಬಂದತಾಗಿವೆ. ಇಂದ್ರಿಯ ಗೋಚರವಾಗುವ ಈ ಪ್ರಪಂಚದಲ್ಲಿ ಸೌಂದರ್ಯ ಬೇಕಾದಷ್ಟಿದೆ ಅದನ್ನು ಕವಿ ಮೂಲಕ ಕಟ್ಟಲು ಸಾಧ್ಯ ಅವನು ಅದರ ಅಂತರಾಳವನ್ನೂ ಹೊಕ್ಕು ಸಾಧಿಸುವವನಾಗಿದ್ದಾನೆ.

ಕವಿಗಳು, ಪ್ರಕೃತಿ ಸೌಂದರ್ಯವನ್ನು, ಕ್ಷೌದ್ರತೆಯನ್ನು ಶಾಂತತೆಯನ್ನು ಮಾತಿನ ಮೋಹಕತೆಯಿಂದ ಶಬ್ದ ಶೈಲಿಯಲ್ಲಿ ಕಟ್ಟಲು ಮಾತ್ರ ಸಾಧ್ಯ ಇದಕ್ಕೆ ಪ್ರತಿಯಾಗಿ ಪಂಪನಿಂದ ಇಂದಿನ ನಿಸಾರ್ ಅಹಮದ್‌ವರೆಗಿನ ಪ್ರಸ್ತುತ ಯುವ ಸಾಹಿತಿಗಳ ಕಾವ್ಯ ಕೃತಿಗಳಲ್ಲಿ ಎದ್ದು ಕಾಣುವ ನೈಜತೆಯಾಗಿದೆ. ಒಟ್ಟಾರೆ ಕನ್ನಡ ಸಾಹಿತ್ಯ, ರಸಾಸ್ವಾದದ, ಪಾಂಡಿತ್ಯದ ಮುಖ್ಯದಾರಿಯಾಗಿ. ಕನ್ನಡದ ರಸಾಸ್ವಾದನೆ ಮತ್ತು ಪಾಂಡಿತ್ಯಗಳ ಜೊತೆ ಜೊತೆಗೆ ಬೆಳೆದುಕೊಂಡು ಸಾಗುವುದಾಗಿವೆ.

**ತೇದಿಯುಳ್ಳ ಪ್ರಾಚೀನತಮ ಕನ್ನಡ ಪದ**

೧೯೭೭ ರಲ್ಲಿ 'ಸಾಧನೆ' ಪತ್ರಿಕೆಯ ಸಂಚಿಕೆ-೧ ಸಂಪುಟ-೩ರಲ್ಲಿ ಮೊದಲ ಬಾರಿಗೆ ಎಂ.ಚಿಂದಾನಂದಮೂರ್ತಿಯವರು ಸಂಪಾದಿಸಿ ಸಂಕಲಿಸಿದ ಈ ವಿಚಾರ ಮುಂದೆ, ಟಿ.ವಿ.ವೆಂಕಟಾಚಲಶಾಸ್ತ್ರೀ ಅವರು ಸಂಪಾದಿತ 'ಪ್ರೊಫೆಸರ್ ಡಿ.ಎಲ್.ನರಸಿಂಹಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು' ಕೃತಿಯ ೭ನೇ ಭಾಗವಾಗಿ ಮೂಡಿ ಬಂದದ್ದಾಗಿದೆ.

ಕರ್ನಾಟಕದಲ್ಲಿ ದೊರೆತಿರುವ ಅತ್ಯಂತ ಹಳೆಯ ಹಿಂದಿನ ದಾಖಲೆಗಳೆಂದರೆ, ಕ್ರಿ.ಪೂ.೩ನೇ ಶತಮಾನದ ಅಶೋಕನ ಶಾಸನಗಳು, ಇವು ಚಿತ್ರದುರ್ಗ ಜಿಲ್ಲೆಯಲ್ಲಿ ಮೂರು, ಕೊಪ್ಪಳದಲ್ಲಿ ಎರಡು ಮಸ್ಕಿಯಲ್ಲಿ ಒಂದು ಆರು ಶಾಸನಗಳು ಲಭ್ಯವಾಗಿವೆ ಎಂದು ಹೀಗೆ ಡಿ.ಎಲ್.ಎನ್. ಉಲ್ಲೇಖಿಸಿದ್ದಾರೆ. ಆದರೆ ಸಂಶೋಧನಾ ಅಧ್ಯಯನ ವಿಸ್ತರಣೆಗೊಂಡಂತೆ ಈ ಹುಡುಕಾಟ ವಿಸ್ತರಿಸಿ ಇಂದು ಒಟ್ಟಾರೆ ೧೪ ಶಾಸನಗಳು ೯ ಸ್ಥಳಗಳಲ್ಲಿ ಕಂಡುಬಂದ ಶಾಸನಗಳೆನಿಸಿವೆ. (ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗ ರಾಮೇಶ್ವರ, ಗವಿಮಠ, ಪಾಲ್ಕಿಗುಂಡ, ಸನ್ನತ್ತಿ, ಮಸ್ಕಿ, ನಿಟ್ಟೂರು, ಉದಯಗೊಳಂ.) ಇವುಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಶಾಸನಗಳಗಿಂತ ಬ್ರಹ್ಮಗಿರಿಯ ಶಾಸನವು ಹೆಚ್ಚು ಶುದ್ಧರೂಪದಲ್ಲಿ ಉಳಿದುಕೊಂಡು ಬಂದಿದೆ.

ಈ ಶಾಸನದಲ್ಲಿ ಅಶೋಕನು ತನ್ನ ಸಾಮ್ರಾಜ್ಯದ ಗಡಿಯಾಚೆಯ ಅನೇಕ ಆರ್ಯೇತರ ಜನರನ್ನು, ರಾಜರನ್ನು ಹೆಸರಿಸಿದ್ದಾನೆ. ಬ್ರಹ್ಮಗಿರಿಯ ಶಾಸನದ ಭಾಷೆ ಪಾಲಿ, ಅಲ್ಲಮಾದಿ ಪ್ರಾಕೃತ ಇವುಗಳಲ್ಲಿ ಸುವರ್ಣಗಿರಿ, ಇಸಿಲ ಎಂಬ ಎರಡು ಊರುಗಳ ಹೆಸರು ಬಂದಿವೆ ಇಲ್ಲಿನ ಉಲ್ಲೇಖಕ್ಕೆ ಕಾರಣ ಸುವರ್ಣಗಿರಿಯ ಅಧಿಕಾರಿಗಳ ಮೂಲಕ ಇಸಿಲದ ಅಧಿಕಾರಿಗಳಿಗೆ ಅಶೋಕನು ಸಂದೇಶವನ್ನು ಕಳುಹಿಸಿದ ಸಂದರ್ಭವೆಂದು ಊಹಿಸಲಾಗಿದೆ. ಈ 'ಸುವರ್ಣಗಿರಿ', 'ಇಸಿಲ' ಗಳಾವು? ಮಸ್ಕಿಯ ಹತ್ತಿರವಿರುವ ಕನಕಗಿರಿ ಎಂದು ಕೆಲವರು, ಅಲ್ಲಿಯೇ ಸಮೀಪದಲ್ಲಿ ಚಿನ್ನದ ಗಣಿಗಳಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಬಹುಮಟ್ಟಿಗೆ ಸುವರ್ಣಗಿರಿಯು ಇಸಿಲಕ್ಕೆ ದೂರವಲ್ಲದೆ, ದಖ್ಖನ ಪ್ರದೇಶವಾದ ಕರ್ಣಾಟಕದ ಒಂದು ಊರು. 'ಇಸಿಲ' ಬಹುಶಃ ಈಗಿನ ಸಿದ್ಧಾಪುರ ಬ್ರಹ್ಮಗಿರಿಗಳ ಪಕ್ಕದಲ್ಲಿರುವ ಊರು ಆಲೂರು ಇಂದು ನಾಮವಶೇಷವಾಗಿದೆ. ಆದರೆ 'ಇಸಿಲ' ಇದು ಯಾವ ಭಾಷೆಯ ಪದ ಎಂಬುದರ ಬಗ್ಗೆ ಯಾವ ವಿದ್ವಾಂಸರು ಖಚಿತ ನಿರ್ಧಾರ ಹೇಳಿರಲಿಲ್ಲ ಆದರೆ ಡಿ.ಎಲ್.ಎನ್. ಈ ಪದದ ವಿಚಾರವಾಗಿ ಹತ್ತಾರು ಆಕರಗಳ ಹಿನ್ನೆಲೆಯಲ್ಲಿ ನಿರೂಪಿಸಿದ್ದು ಈ ಲೇಖನದಲ್ಲಿ ಕಂಡುಬಂದಿದೆ.

ಇಸಿಲ ನಿಷ್ಪತ್ತಿ ಬಗೆಗೆ ಚರ್ಚಿಸುತ್ತಾ ಡಿ.ಎಲ್.ಎನ್. 'ಇಸಿಲ ಪದದಲ್ಲಿ ಎರಡು ಪದಗಳಿದ್ದು ಇಸು+ಇಲ್ ಎಂಬ ಪ್ರಾಕೃತ ಸಾಧಕ ಪ್ರತ್ಯಯ ರೂಪಗಳಾಗಿವೆ. ಈ ಪ್ರತ್ಯಯ ಹಳಗನ್ನಡ ಮತ್ತು ತಮಿಳುಗಳಲ್ಲಿ ಸಾಮಾನ್ಯ ರೂಪಗಳಾಗಿವೆ. ಕನ್ನಡ-ಇಸಿಲ್, ತಮಿಳ್-

ಎಯಿಲ್ ಎಂದರೆ, 'ದ ಆ್ಯಕ್ಟ್ ಆಫ್ ಸೋಡಿಂಗಂ ಆ್ಯನ್ ಆ್ಯರೋ' ಎಂದರ್ಥ ಇದರಿಂದಲೆ 'ಕೋಟೆ' ಎಂಬ ಅರ್ಥವೂ ಬಂದಿರಬೇಕು ಕೋಟೆಯಿಂದ ಬಾಣಗಳನ್ನು ಬಿಡುವುದಕ್ಕಾಗಿ ಅಂಬು ಗುಂಡಿಗಳನ್ನು ಮಾಡಿರುವುದನ್ನು ಗುರುತಿಸಬಹುದು'[೩೪] ಎಂದು ಹೇಳಿದ್ದಾರೆ.

ಇಂದು 'ಇಸಿಲ' ಎಂಬ ಬ್ರಹ್ಮಗಿರಿ ಶಾಸನದ ಊರು ನಶಿಸಿಹೋಗಿದೆ. ಆದರೆ ಆ ಹೆಸರುಳ್ಳ ಅನೇಕ ಊರುಗಳು ಕರ್ನಾಟಕದಲ್ಲಿ ಇಂದು ಇವೆ. (ಶಿವಮೊಗ್ಗ ಜಿಲ್ಲೆಯ ಎಸಲಾಪೂರ ಯೆಸ್ಲೂರು, ಇತರೆ) ಡಿ.ಎಲ್.ಎನ್. 'ಇಸಿಲ' ಪದದ ನಿಷ್ಪತ್ತಿ ವಿಚಾರವಾಗಿ ಕೆಲವು ನಿರ್ಣಯಗಳನ್ನು ಮಂಡಿಸಿದ್ದು ಈ ಕೆಳಗಿನಂತೆ ಕಾಣಬಹುದಾಗಿದೆ.

೧. 'ಕನ್ನಡ ಭಾಷೆಯ ಪ್ರಾಚೀನತೆಯ ಈ 'ಇಸಿಲ' ರೂಪದಿಂದ ಕ್ರಿ.ಶ. ೫ನೇ ಶತಮಾನದಿಂದ ಕ್ರಿ.ಪೂ. ೩ನೇ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ.

೨. ಪದಾರಂಭದ 'ಎ' ಕಾರವು ಕನ್ನಡದಲ್ಲಿ 'ಇ' ಕಾರವಾಗಿ ಪರಿವರ್ತಿತವಾಗಲು ಆ ಹೊತ್ತಿಗೆ ಪ್ರಾರಂಭವಾಗಿತ್ತು ಎನಿಸಿದೆ.

೩. ಎರಡನೆಯ ಉಚ್ಚಾರ ಅಂಶದಲ್ಲಿ 'ಯ' ಕಾರದ ಸ್ಥಾನದಲ್ಲಿ ಆಗಲೇ ಕನ್ನಡದಲ್ಲಿ 'ಸ' ಕಾರ ಕಾಣಿಸಿಕೊಂಡದ್ದಾಗಿತ್ತು.'[೩೫]

ಈ ರೂಪಗಳಿಂದ ಡಿ.ಎಲ್.ಎನ್. ತಮ್ಮ ಸಂಶೋಧನೆ ನೆಲೆಯಲ್ಲಿ ಕಂಡುಕೊಂಡ 'ಇಸಿಲ' ಎಂಬುದು ದ್ರಾವಿಡ ಪದ, ಅಚ್ಚಗನ್ನಡದ ಪದ ಎಂಬ ನಿರ್ಣಯವನ್ನು ತೀ.ನಂ.ಶ್ರೀ ಮುಂತಾದ ವಿದ್ವಾಂಸರು ಒಪ್ಪಿಕೊಂಡಿದ್ದು ಕನ್ನಡ ಭಾಷೆಯ ಪ್ರಾಚೀನತೆಯನ್ನು ನಿರ್ಧರಿಸಲು ಮಾನಂದಡವೆನಿಸಿದೆ.

ಕನ್ನಡ ಭಾಷೆಯ ಪ್ರಾಚೀನ ಪರಂಪರೆಯ ದ್ಯೋತಕವಾದ 'ಇಸಿಲ' ಶಬ್ದ ಅಚ್ಚಗನ್ನಡದ ಸ್ಥಳವಾಚಿ ಸೂಚಕವಾಗಿ ಮೂಡಿಬಂದಿದೆ. ಡಿ.ಎಲ್.ಎನ್. ಅವರಿಗೆ ಕ್ಷೌರದಂಗಡಿಯಲ್ಲಿ ಕ್ಷೌರಮಾಡಿಸಿಕೊಳ್ಳುವ ಸಂರ್ಭದಲ್ಲಿ 'ಇಸಿಲ' ಅಚ್ಚಗನ್ನಡ ಸ್ಥಳವಾಚಿ ರೂಪ ಎಂಬ ಸೂಚನೆ ಅವರಿಗೆ ಹೊಳೆದಿತ್ತಂತೆ ಈ ವಿಚಾರದಿಂದ ಈ ಶಬ್ದ ಇಂದಿಗೂ ಕನ್ನಡ ಭಾಷೆ ಚರಿತ್ರೆಯಲ್ಲಿ ತೇದಿಯುಳ್ಳ ಅತ್ಯಂತ ಪ್ರಾಚೀನತೆಯ ಕನ್ನಡ ಪದವಾಗಿ ಬಳಕೆಯಾಗಿದೆ ಎಂದು ಹೇಳುವುದು ಅತಿ ಅವಶ್ಯಕವೆನಿಸಿದೆ.

**೪೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ, ಬೀದರ್** (೧೧.೨.೧೯೬೦)

ಕನ್ನಡ ನುಡಿಯ ಸಂಚಿಕೆ-೩, ಸಂಪುಟ-೨೩ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿದ ಪ್ರೊ. ಡಿ.ಎಲ್.ನರಸಿಂಹಾಚಾರ್ ಅವರ ಅಪ್ರಕಟಿತ ಬರಹಗಳು ಭಾಷಣಗಳು ಎಂಬ ಕೃತಿಯಲ್ಲಿ ೬ನೆ ಲೇಖನವಾಗಿ ಮೂಡಿ ಬಂದುದಾಗಿದೆ.

೧೯೬೦ರಲ್ಲಿ ಅಂದಿನ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾದ ಬಿ.ಡಿ.ಜತ್ತಿಯವರ ಕಾಲದಲ್ಲಿ ನಡೆದ ಬೀದರ್‌ನ ೪೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಡಿ.ಎಲ್.ಎನ್. ಅವರು ತಮ್ಮ ಸರ್ವಾಧ್ಯಕ್ಷ ನುಡಿಗಳನ್ನಾಡಿದ್ದನ್ನು ಈ ಲೇಖನವಾಗಿ ಕಾಣಹುದಾಗಿದೆ.

ತಮಗೆ ದೊರೆತ ಅಧ್ಯಕ್ಷ ಪದವಿಯನ್ನು ಮೊದಲಿಗೆ ತನ್ನ ವಿದ್ಯಾಗುರುಗಳಿಗೆ ಅರ್ಪಿಸಿ ಸ್ಮರಿಸಿದ ಡಿ.ಎಲ್.ಎನ್. ಬೀದರ್ ನಗರದ ನೆರೆದ ಜನಸ್ತೋಮಕ್ಕೆ ಕೃತಜ್ಞತೆ ಸಲ್ಲಿಸಿದ್ದಾರೆ. ಮುಂದುವರೆದು ಬೀದರ್ ನಗರದ ಚರಿತ್ರೆ, ಅಲ್ಲಿನ ಸಾಹಿತ್ಯ ರೂಪ ಬೆಳೆದು ಬಂದ ಬಗೆಯನ್ನು ಪರಿಯಾಗಿ ವಿವರಿಸಿದ್ದು ಮುಂದುವರೆದು 'ಕನ್ನಡದ ಕೆಲಸಗಾರರಿಗೆ ಸ್ಫೂರ್ತಿ ಕೊಡುವುದು ಪ್ರತಿಯೊಬ್ಬರ ಕರ್ತವ್ಯವಾಗಿದ್ದು ಇದಕ್ಕೆ ಪೂರಕವಾಗಿ ಏಕರೂಪದ ಆಡಳಿತ ವ್ಯವಸ್ಥೆ ವಿವಿಧ ಪ್ರದೇಶದ ಕನ್ನಡಿಗರ ಪರಸ್ಪರ ಸೌಹಾರ್ದತೆ, ಎಲ್ಲಾ ಪ್ರದೇಶಗಳಿಗೆ ಅವಶ್ಯ ಗ್ರಾಂಥಿಕ ವ್ಯವಹಾರಿಕ ಭಾಷಾ ನಿರ್ಮಾಣ ಕನ್ನಡ ಭಾಷಾ ಸಮಸ್ಯೆಗಳ ಕುರಿತು ಕನ್ನಡ ನಾಡಿನ ಸ್ಥಾನಮಾನ ವಿಚಾರ ಇತರೆ ಪುಷ್ಟೀಕೃತ ವಿಚಾರಗಳಿಂದ ವೈಜ್ಞಾನಿಕ ರೀತಿಯಲ್ಲಿ ಕನ್ನಡ ನಾಡು, ನುಡಿಯ ಏಳ್ಗೆ ನಡೆಯಬೇಕೆಂದು'[೩೬] ಅಭಿಪ್ರಾಯಿಸಿದ್ದಾರೆ. ಮುಂದುವರೆದು ಅಂದಿನ ಕಾಲಘಟ್ಟದಲ್ಲಾದ ಹೊಸಗನ್ನಡ ಸಾಹಿತ್ಯ ಗಟ್ಟದಲ್ಲಾದ ಬದಲಾವಣೆಯ ರೂಪಗಳು, ಬೇಂದ್ರೆ, ಕುವೆಂಪು, ಗೋಕಾಕ, ಬೆಟಗೇರಿ ಕೃಷ್ಣಶರ್ಮ, ರಂ.ಶ್ರೀ ಮುಗಳಿ ಇತ್ಯಾದಿಗಳವರ ಮೂಲಕ ಕಾವ್ಯ ರೂಪ ಬೆಳೆದುಬಂದ ಬಗೆ, ಸಣ್ಣಕಥೆ ಕಾದಂಬರಿ, ನಾಟಕ, ಮೀಮಾಂಸೆ, ಹರಟೆ, ಪ್ರಬಂಧ ವಿಡಂಬನೆ ಇತ್ಯಾದಿ ಸಾಹಿತ್ಯ ರೂಪಗಳ ಕುರಿತು, ಅವುಗಳ ಸ್ಥಿತಿಗತಿಗಳ ಬಗ್ಗೆ ಸವಿಸ್ತಾರವಾದ ವಿವರವನ್ನು ಈ ಲೇಖನದುದ್ದಕ್ಕೂ ಹರುವಿದ್ದನ್ನು ಕಾಣಬಹುದಾಗಿದೆ.

ಮುಂದುವರೆದು ವಿದ್ವತ್ತಿನ ಬೆಳವಣಿಗೆಯ ಅಂಶವಾಗಿ ಅಂದಿನ ಕಾಲಘಟ್ಟಕ್ಕೆ ತಕ್ಕಂತೆ ಹೊಸಗನ್ನಡ ಸಾಹಿತ್ಯ ಬೆಳೆದಿರುವಷ್ಟು ವಿಸ್ತಾರವಾಗಿ ವಿದ್ವತ್ ಸಾಹಿತ್ಯ ಬೆಳೆದಿಲ್ಲವೆಂದು ಇದು ಬೆಳೆಯಬೇಕಾದರೆ ಆಳವಾದ ಓದಿನ ವಿಸ್ತಾರತೆ ಅತಿ ಅವಶ್ಯವೆಂದು ಮನವರಿಕೆ ಮಾಡಿದ್ದು ಎದ್ದುಕಂಡಿದೆ. ಸಾಹಿತ್ಯದ ರಸಾನುಭವದ ಸಾಂದ್ರತೆ ಎಲ್ಲಾ ವಿಮರ್ಶಕ ಸಹೃದಯ ಮನಸ್ಸಿನಲ್ಲಿದ್ದರೆ ಮಾತ್ರ ನಿಜವಾದ ವಿದ್ವತ್ತು ಬೆಳೆಯಲು ಸಾಧ್ಯ ಎಂದು ಅಭಿಪ್ರಾಯಿಸಿದ್ದಾರೆ.

ಜನಪದ ಸಾಹಿತ್ಯ, ಭಾಷೆಗಳ ಕುರಿತು ಪ್ರಸ್ತಾಪ ಮಾಡಿದ್ದ ಡಿ.ಎಲ್.ಎನ್. ಜನಪದ ಸಾಹಿತ್ಯ ಸಂಗ್ರಹ ರೂಪವಾಗಿದ್ದರೂ ಇದೊಂದು ಪ್ರಾದೇಶಿಕ ಭಾಷೆಯ ವೈಲಕ್ಷಣಗಳನ್ನು ಗಮನಿಸಿ ಅವುಗಳ ಸ್ವರೂಪವನ್ನು ವರ್ಣಿಸುವ ಮುಖ್ಯ ಅಂಗವಾಗಿದೆ ಎಂದಿದ್ದಾರೆ. ಇದಕ್ಕೆ ಪ್ರತಿಯಾಗಿ ಗೊರೂರು, ಆರ್.ಎಸ್. ಪಂಚಮುಖಿ, ಮತಿಘಟ್ಟ ಕೃಷ್ಣಮೂರ್ತಿ ಗಳಿತ್ಯಾದಿಗಳವರ ಜನಪದ ಸಾಹಿತ್ಯ ಸಂಕಲನಗಳನ್ನು ಉದಾಹರಿಸಿದ್ದು ಕಂಡು ಬಂದು ಲೇಖನದ ವಿಸ್ತಾರತೆಯನ್ನು ಮುನ್ನಡೆಸಿದ್ದಾಗಿದೆ.

ಪುರಾತತ್ವ ಸಂಶೋಧನೆಯ ಇಲಾಖೆ ವಿಚಾರವನ್ನು ಪ್ರಸ್ತಾಪಿಸಿದ ಡಿ.ಎಲ್.ಎನ್. ಕನ್ನಡ ವಿದ್ವತ್ತಿನ ಅಂದಿನ ಎಲ್ಲಾ ಶಾಖೆಗಳಿಗೂ ಬೇಕಾದ ಮೂಲ ಸಾಮಗ್ರಿಗಳನ್ನು ಕಾಲಕಾಲಕ್ಕೆ ಒದಗಿಸಿಕೊಡುವ ಕಾರ್ಯ ಪ್ರಾಚ್ಯ ಸಂಶೋಧನೆ ಇಲಾಖೆಯದ್ದಾಗಿದೆ ಎಂದು ಇಲ್ಲಿನ ಸಾಹಿತ್ಯದ ಹರಿವನ್ನು ಪ್ರಸ್ತಾಪಿಸಿದ್ದು ಕಂಡು ಬಂದಿದೆ.

ಕೊನೆಯದಾಗಿ ಸಾಹಿತ್ಯ ವಿಮರ್ಶೆಯ ಕೊರತೆಯ ವಿಚಾರವಾಗಿ ಪ್ರಸ್ತಾಪಿಸಿದ ಡಿ.ಎಲ್.ಎನ್. ಹೊಸಗನ್ನಡ ಸಾಹಿತ್ಯ ವಿಮರ್ಶೆ ಯಾವ ಹಾದಿಯಲ್ಲಿ ಸಾಗಬೇಕೆಂಬುದನ್ನು ತೋರಿಸಿಕೊಟ್ಟಿದ್ದಾರೆ. ಅಲ್ಲದೆ ಯಾವುದೇ ಜಾತಿ, ಮತ, ಧರ್ಮಗಳ ಬೇಧಭಾವಗಳಿಲ್ಲದೆ ಸಾಹಿತ್ಯ ಕಟ್ಟಲು ಎಲ್ಲರೂ ಒಗ್ಗಟ್ಟಾಗಬೇಕು ಎಂದು ಹೇಳಿ 'ಸರಸ್ವತಿಯ ರಾಜ್ಯದಲ್ಲಿ ಜಾತೀಯತೆ ಮತೀಯತೆಗಳಿಗೆ ಸ್ಥಾನವಿಲ್ಲ.' ಅಲ್ಲಮಪ್ರಭು, ನಿಜಗುಣ ಶಿವಯೋಗಿ, ಸಪ್ತಕಾವ್ಯದ ಗುರುಬಸವ ಈ ಮಹನೀಯರಲ್ಲಿದ್ದ ಉದಾರವೂ, ಸಹನಾಮಯವೂ, ಮಾನವ ಪ್ರೇಮವೂ ಆದ ದೃಷ್ಟಿ ಎಲ್ಲರಿಗೂ ಆದರ್ಶವಾಗಿರಲಿ, ಒಟ್ಟಿನಲ್ಲಿ ಕವಿ ವಿಮರ್ಶಕ ಜಾತೀಯತೆ ಈ ವಿಷಯಗಳಿಗೆ ಸಂಬಂಧಿಸಿದ ಮನಃಕಷಾಯಗಳು ತೊಲಗಿ ಶುದ್ಧ ವಾಯುಗುಣ ನೆಲೆಗೊಂಡು ಹೊರತು ಕನ್ನಡ ಸಾಹಿತ್ಯ ವಿಮರ್ಶೆ ಬೆಳೆಯಲಾರದು'[೩೭] ಎಂದು ಹೇಳಿ ಎಲ್ಲರೂ ಸಾಹಿತ್ಯವನ್ನು ಮುಕ್ತಮನಸ್ಸಿನಿಂದ ಒಪ್ಪಿ ಮುನ್ನಡೆಸಬೇಕಾದದ್ದು ಅತಿ ಅವಶ್ಯವೆಂದು ಅಭಿಪ್ರಾಯಿಸಿದ್ದು ಎಲ್ಲಾ ಕಾಲಕ್ಕೂ ಒಪ್ಪತಕ್ಕ ಅಂಶಗಳೆನಿಸಿವೆ.

**ಭಾಷಾವಿಹಾರ (ಒಂದು ವಿಮರ್ಶೆ)**

ಶ್ರೀ ದೇಸಾಯಿ ಪಾಂಡುರಂಗರಾಯರು ಕನ್ನಡ ನುಡಿಯ ನವೆಂಬರ್ ಸಂಚಿಕೆ–೫೧ರಲ್ಲಿ ಭಾಷಾವಿಹಾರ ವೆಂಬ ಲೇಖನ ಏಳು ಶಬ್ದಗಳ ಕುರಿತು ಚರ್ಚಿಸಿದ್ದನ್ನು ಎತ್ತಿಕೊಂಡು ಡಿ.ಎಲ್.ಎನ್. ಅವುಗಳ ನಿಷ್ಪತ್ತಿ ವಿಚಾರವನ್ನು ತಮ್ಮ ಪೀಠಿಕೆಗಳು ಲೇಖನಗಳು ಹಾಗೂ ಶಬ್ದ ವಿಹಾರ (ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು ೧೯೫೬) ಕೃತಿಯಲ್ಲಿ ಈ ವಿಚಾರ ಕುರಿತು ಪ್ರಸ್ತಾಪಿಸಿದ್ದು ಕಂಡುಬಂದಿದೆ.

ಅರ್ಧಶತಮಾನದ ಕಾಲ ನಮ್ಮ ಭಾಷೆಯ ಆಳ ಅಂತರವನ್ನು ವಿಸ್ತರಿಸಿದ ಕೀರ್ತಿ ಡಿ.ಎಲ್.ಎನ್. ಅವರದು ಇವರ ಸಂಶೋಧನಾ ಲೇಖನಗಳೆ ಇವರ ವಿಸ್ತಾರವಾದ ವಿದ್ವತ್ ಪೂರ್ಣ ಜ್ಞಾನದೇವಿಗೆಯಾಗಿ ಇಂದಿಗೂ ಬೆಳಕನ್ನು ನೀಡುತ್ತಾ ಸಾಗಿವೆ. ನಡುಗನ್ನಡ ಸಾಹಿತ್ಯದ ಸಂದರ್ಭದಲ್ಲಾದ ಭಾಷೆಯ ಕುರಿತು, ಅಲ್ಲಿನ ಪದಗಳ ಕುರಿತು ಮೂಲ ಬೆಳವಣಿಗೆ, ಅವುಗಳ ಅರ್ಥ ಸ್ಪಷ್ಟತೆ ಡಿ.ಎಲ್.ಎನ್. ಅವರ ವಿದ್ವತ್ತನ್ನು ಸಾಕ್ಷೀಕರಿಸಿದ್ದಾಗಿವೆ.

ಇಲ್ಲಿನ ಪ್ರಸ್ತುತ ಚರ್ಚೆ ಒಲ್ಲವಣಿಗೆ ಎಂಬ ಪದವಾದ್ದಾಗಿದೆ. ದೇಸಾಯಿಯವರು ಇದು ಶುದ್ಧ ಕನ್ನಡ ಪದವೆಂದು ತೀರ್ಮಾನಿಸಿ ಒಲ್ಲಿ+ಅಣಿಗೆ ಎಂಬೆರಡು ಶಬ್ದಗಳ

ಸೇರುವುದರಿಂದ 'ಒಲ್ಲವಣಿಗೆ' ಆಗಿದೆ ಎಂದು ವಿವೇಚಿಸಿದ್ದನ್ನು ಡಿ.ಎಲ್.ಎನ್. ತಿರಸ್ಕರಿಸಿ, ಇದರ ಪೂರ್ವಾಪರವನ್ನು ಹೆಕ್ಕಿ ನೋಡಿ ಈ ಲೇಖನವನ್ನು ರಚಿಸಿದ್ದಾರೆ.

ಈ ಕುರಿತು ಚರ್ಚಿಸಿದ ಡಿ.ಎಲ್.ಎನ್. ತೆಲುಗಿನ ಬಲ್ಲಿಯ ಒಲ್ಲೆ ಎಂಬೆರಡು ರೂಪಗಳಿದ್ದು ವಸ್ತ್ರ, ಬಟ್ಟೆ ಬೇರೆ ಎಂಬರ್ಥವನ್ನು ಹೊಂದಿವೆ, ಮಲಯಾಳಂ ಬಲ್ಲಿ ಶಬ್ದಕ್ಕೆ ಹೊದಿಕೆ ಎಂಬ ಅರ್ಥವಿದೆ, ತಮಿಳಿನಲ್ಲಿ ಈ ಪದವೇ ಇಲ್ಲದ್ದನ್ನು ಗುರುತಿಸಿದ ಡಿ.ಎಲ್.ಎನ್. ಕಿಟೆಲ್ಲರು ನೀಡಿದ 'ವಲ್ಲೆ' ಎಂಬ ಬೇರೊಂದು ಪದದ ಕುರಿತು ಚರ್ಚಿಸಿ ಅಲ್ಲಿನ ಪದ 'ವಸ್ತ್ರ' ಎಂಬ ಅರ್ಥವನ್ನು ನೀಡುತ್ತದೆ ಎಂದು ನಿರೂಪಿಸಿದ್ದಾರೆ. ಮುಂದುವರೆದು ಇದರ ಅರ್ಥ ವಿವರಣೆಯನ್ನು ವಿಸ್ತಾರವಾಗಿ ವಿಶ್ಲೇಷಣೆ ಮೂಲಕ ನಿರ್ಧಾರಕ್ಕೆ ಬಂದ ಡಿ.ಎಲ್.ಎನ್. ವಲ್ಲಿ+ಅವಣಿಕೆ–ಎಂಬುದಕ್ಕೆ ಒಲ್ಲಿಯ ಅಂದರೆ ಉತ್ತರಿಯದ, ಸೊಗಸು, ಅಲಂಕಾರ ಇತ್ಯಾದಿ ಅರ್ಥಗಳು ಮೂಡಿ ಬರುತ್ತವೆ ಎಂದು ಹೇಳಿದ್ದಾರೆ.

ಒಲ್ಲಣಿಗೆಯನುಡಿಸಿ ಒಲ್ಲಣಿಗೆಯಂ ಪಿಜೆವಂತೆ ಎಂಬ ಕನ್ನಡ ಕವಿಗಳ ಪ್ರಯೋಗಗಳನ್ನು ತೆಗೆದುಕೊಂಡು ಇದಕ್ಕೆ ಉತ್ತರವಾಗಿ ಸೊಗಸನ್ನು ಉಡಿಸಿ ಬಲ್ಲಿಯ ಸೊಗಸನ್ನು ಹಾಡುವಂತೆ ಎಂದು ಹಾರೈಸಿದ್ದಾರೆ. "ಅಣಿಗೆ' ಎಂಬ ಶುದ್ಧ ಕನ್ನಡ ಪದವನ್ನು ಸೇರಿಸಿ ಸಮಾಸ ಮಾಡಿಕೊಂಡರೆಂದು ತಿಳಿಯವುದಕ್ಕಿಂತ ಸಂಸ್ಕೃತದ ಇಡಿ ಸಮಾಸವೊಂದನ್ನು ಕನ್ನಡಕ್ಕೆ ತದ್ಭವ ಮಾಡಿಕೊಂಡರೆಂದು ತಿಳಿಯುವುದು ಅತಿ ಹೆಚ್ಚು ಸತ್ಯಾಂಶವಾಗಿದೆ'[೩೮] ಎಂದಿದ್ದಾರೆ.

ಕಿಟೆಲ್ ಅವರು ನೀಡಿದ 'ಪಟಿವಾ' ಎಂಬ ಪದದ ಜಾಡನ್ನು ಹಿಡಿದ ಡಿ.ಎಲ್.ಎನ್. ಇದರ ಸಮಾಸದ ಉತ್ತರ ಪದ ಪಟಿಕಾ> ಪವೆಗೆ ಆಗಿರಬೇಕು ಆದ್ರಪಟಿಕಾ, ಎಂಬುದರಿಂದ 'ಒಲ್ಲವಟಿಗೆ' ಎಂದಾಗಿ ಅದೇ ಕಾಲಕ್ರಮದಲ್ಲಿ ಸ್ವಲ್ಪ ಅರ್ಥವ್ಯತ್ಯಾಸದಿ ಒಲ್ಲಣಿಗೆಯಾಗಿ ಪರಿಣಮಿಸಿದೆ ಎಂದು ವಿವರಿಸಿ ಇದಕ್ಕೆ ಪೂರಕವಾಗಿ ಆದ್ರಪಟಿಕಾ>ಒಲ್ಲವಡಿಗೆ>ಒಲ್ಲಟೆಗೆ > ಒಲ್ಲಳಿಗೆ > ಒಲ್ಲಣಿಗೆ > ಒಲ್ಲವಣಿಗೆ ಆಗಿದ್ದು ಇದು ಶುದ್ಧ ಕನ್ನಡದ ರೂಪದಲ್ಲಿ ದೇಶ್ಯ ಪದ ಅಣಿಗೆಲೇ ಬೇರೆ ಇದೇ ಬೇರೆ, ಇಲ್ಲಿನದು ಪಟಿಕಾ ಪದದ ಸವೆದ ರೂಪವೆಂದು ಪ್ರತಿಪಾದಿಸಿದ್ದಾರೆ.

ಒಟ್ಟಾರೆಯಾಗಿ ದೇಸಾಯಿ ಅವರು ಪ್ರಾಸಂಗಿಕವಾಗಿ ಹೇಳಿರುವ ಅಭಿಪ್ರಾಯವನ್ನು ಡಿ.ಎಲ್.ಎನ್. ಆಳವಾದ ಪಾಂಡಿತ್ಯ ಪೂರ್ಣವಾದ ಚರ್ಚೆ ಮೂಲಕ ಅವರ ಅಭಿಪ್ರಾಯವನ್ನು ಸಾರಾಸಗಟಾಗಿ ವಿಮರ್ಶಿಸಿ ಅವರ ವಿಚಾರಗಳೆಲ್ಲಾ ಸಾಧುವಲ್ಲವೆಂದು ಸಮರ್ಥಿಸಿದ್ದಾರೆ. ಅಲ್ಲದೆ ಅಣಿಗೆ ವಿಚಾರವಾಗಿ ಇದು ಪಣಿಗೆ ಎಂಬ ಪ್ರಾಚೀನ ಪದದಿಂದ ಬಂದುದರ ರೂಪವಾಗಿದೆ. ಇದಕ್ಕೆ ಪಂಪಭಾರತದ ದ್ರೌಪದಿಯ ಮುಡಿ ಬಿಚ್ಚಿದ ಪ್ರಸಂಗವನ್ನು ಡಿ.ಎಲ್.ಎನ್. ಉದಾಹರಿಸಿ ಅಲ್ಲಿನ ವೈರಿಯ ಪಲ್ಲಣಿಗೆಯಿಂ ಬಾಚಿದ ನೆಂದು ಗುರಿತಿಸಿದ ಪ್ರಸಂಗದಲ್ಲಿ ಉಲ್ಲೇಖಿತಗೊಂಡ ಪದವನ್ನು ಗುರುತಿಸಿದ್ದಾರೆ. ಮುಂದುವರೆದು ಅಲಂಕಾರ,

ಕೃತ್ ಪ್ರತ್ಯಯ, ಕ್ರಿಯೆ, ಧಾತು, ಪ್ರಕರಣಗಳ ಮೂಲಕ ಹೆಚ್ಚಿನ ವಿಸ್ತಾರತೆಯನ್ನು ತೆರೆದು ತೋರಿದ ಡಿ.ಎಲ್.ಎನ್. ಭಾಷೆಯ ಮೂಲದ್ರವ್ಯವಾದ ಶಬ್ದದ ಕುರಿತು ಅದರ ಒಳ ವಿಚಾರಗಳ ಕುರಿತು ಸವಿಸ್ತಾರವಾದ ಪಾಂಡಿತ್ಯ ಪೂರ್ಣವಾದ ಚರ್ಚೆ ನಡೆಸಿದ್ದು ಅವರ ಕೌಶಲ್ಯತೆಗೆ ಹಿಡಿದ ಕನ್ನಡಿ ರೂಪವಾಗಿದೆ ಅವರ ಪಾಂಡಿತ್ಯದ ಪ್ರತಿಭೆ.

**ಕುಮುದೇಂದು ರಾಮಾಯಣದ ಪರಿಷ್ಕರಣ ವಿಚಾರ**

೧೯೩೯ರಲ್ಲಿ ರಚಿಸಿದ ಈ ವಿಚಾರ ಕುರಿತ ವಿಮರ್ಶೆಯನ್ನು ಡಿ.ಎಲ್.ಎನ್. ತಮ್ಮ ಪೀಠಿಕೆಗಳು ಲೇಖನಗಳು ಕೃತಿಯ ಗ್ರಂಥ ಸಂಪಾದನಾ ಭಾಗದ ೮ನೇ ವಿಷಯವಾಗಿ ಪ್ರಸ್ತಾಪಿಸಿದ್ದು ಕಂಡುಬಂದಿದೆ.

ಕೆ.ಜಿ.ಕುಂದಣಗಾರರು ೩ ಪ್ರತಿಗಳ ಸಹಾಯದಿಂದ ಪರಿಶೋಧಿಸಿದ ಜೈನ ಕವಿಗಳ ಕನ್ನಡ ಷಟ್ಪದಿ ಗ್ರಂಥಗಳಲ್ಲಿ ಕುಮುದೇಂದು ರಾಮಾಯಣವು ಜೈನ ರಾಮಾಯಣದ ಚರಿತ್ರೆಯಲ್ಲಿ ಅತಿ ಮುಖ್ಯದ ಕೃತಿ ಎನಿಸಿದೆ.

ಸಂಪಾದನೆ ಎಂಬುದು ಸುಮ್ಮನೆ ಅಚ್ಚು ಹಾಕಿಸುವ ಕೆಲಸವಲ್ಲ, ಅನೇಕ ಪ್ರತಿಗಳ ಸಹಾಯದಿಂದ ಕವಿಯ ಮೂಲ ಆಶಯಕ್ಕನುಗುಣವಾಗಿ ಮೂಲಪಾಠವನ್ನು ನಿರ್ಣಯಿಸುವುದು ಅತಿ ಮುಖ್ಯದ ಸಂಗತಿ ಎನಿಸಿದೆ.

ಸಂಪಾದಕರಾದ ಕುಂದಣಗಾರರು ಈ ಕೃತಿಯ ಗ್ರಂಥ ಪರಿಚಯ ಪಾಂಡಿತ್ಯದ ಅನುಭವದೊಂದಿಗೆ ಕೃತಿಯನ್ನು ಸಂಕಲಿಸಿದ್ದು ಇವರ ಪ್ರತಿಭೆಗೆ ಹಿಡಿದ ಕನ್ನಡಿ ಎನಿಸಿದೆ. ಈ ಕೃತಿಯಲ್ಲಿ ಷಟ್ಪದಿಗಳ ಕುರಿತ ಚರ್ಚೆ ಅಪಾರವಾಗಿ ಮೂಡಿ ಬಂದ್ದಾಗಿದೆ. ಕುಮುದೇಂದುವಿನ ಕಾಲಕ್ಕೆ ಎಂದರೆ ಸುಮಾರು ಕ್ರಿ.ಶ. ೧೨೭೫ ಅಥವಾ ಕ್ರಿ.ಶ. ೧೨೬೫ಕ್ಕೆ ಕನ್ನಡದಲ್ಲಿ ಕೆಲವು ಷಟ್ಪದಿಗಳು ರಚಿತವಾಗಿದ್ದವೆಂದು ಡಿ.ಎಲ್.ಎನ್. ಈ ಕುರಿತು ವಿಮರ್ಶಿಸುವಾಗ ಹಲವು ಅಭಿಪ್ರಾಯಗಳನ್ನು ಸ್ಪಷ್ಟೀಕರಿಸಿದ್ದಾರೆ. ರಾಘವಾಂಕ, ಕುಮಾರ ಪದ್ಮರಸ, ಪೋಲಾಳ್ವ ದಂಡನಾಥರು ಈ ಕುಮುದೇಂದುವಿನ ಹಿಂದಿನ ಕಾಲಘಟ್ಟಕ್ಕಾಗಲೆ ಶರ, ವಾರ್ಧಕ, ಕುಸುಮ, ಭಾಮಿನಿ ಷಟ್ಪದಿಗಳು ಬಳಕೆಗೆ ಬಂದಿದ್ದು ತಿಳಿದುಬಂದಿದೆ. ಆದರೆ ಪರಿವರ್ಧಿನಿ ಬಗ್ಗೆ ಯಾವುದೇ ಸುಳಿವು ಸಿಕ್ಕಿಲ್ಲದಾಗಿದೆ. ಮುಂದುವರೆದು ಕುಮುದೇಂದುವು ತನ್ನ ಕೃತಿಯಾದ ಈ ರಾಮಾಯಣದಲ್ಲಿ ಎಲ್ಲಾ ಷಟ್ಪದಿಗಳನ್ನು ಉಪಯೋಗಿಸಿದ್ದಾನೆಂದು ಕವಿಚರಿತೆಕಾರರು ಅಭಿಪ್ರಾಯಿಸಿದ್ದುಂಟು ಜೊತೆಗೆ ಹಳೆಯ ಅಂಶಗಣ ಪದ್ಧತಿಯ ರೂಪಾಂತರವನ್ನು ಹೊಂದಿರುವ ಸಂಧಿಕಾಲದಲ್ಲಿ ಈ ಕಾವ್ಯರಚನೆಗೊಂಡುದಾಗಿದೆ.

ಮುಂದುವರೆದು ಜ್ಞಾನಚಂದ್ರಾಭ್ಯುದ್ಯಯವನ್ನು ಬರೆದ ಕಲ್ಯಾಣಕೀರ್ತಿಯು ತನ್ನ ಪರಿವರ್ಧಿನೀ ಷಟ್ಪದಿಗಳಲ್ಲಿ ಕುಮುದೇಂದುವಿನ ಪರಿವರ್ಧಿನಿ ಲಕ್ಷಣವನ್ನು ಅನುಸರಿಸಿದ್ದಾನೆಂದು

ಶ್ರೀಚಂದ್ರಕಾಂತ ನಿಂಗರಾಜ ಪಾಟೀಲರು ವಿವರಿಸಿದ್ದನ್ನು ಡಿ.ಎಲ್.ಎನ್. ಎತ್ತಿತೋರಿಸಿದ್ದಾರೆ. ಈ ಗ್ರಂಥವನ್ನು ಪರಿಶೋಧನೆ ಮಾದರಿಯಲ್ಲಿ ಪರಿಷ್ಕರಿಸಿದ ಡಿ.ಎಲ್.ಎನ್. ಈ ಕೃತಿಯಲ್ಲಿ ಬಳಕೆಯಾದ 'ಖ' ಕಾರ 'ಕುಳ,' 'ಕ್ಷಳ,' 'ಲ' ಕಾರ ಅಕ್ಷರಗಳ ಪ್ರಯೋಗಗಳ ಕುರಿತು ಚರ್ಚಿಸಿದ್ದಾರೆ ಅಲ್ಲದೆ ಕ, ಖ, ಗ ಎಂಬ ಮೂರು ಪ್ರತಿಗಳ ಸಹಾಯದಿಂದ ಪಾಠಸಂಸ್ಕರಣೆ ನಡೆದಿದೆ ಎಂದು ಹೇಳಿದ್ದಾರೆ. ಇಲ್ಲಿ ಬಳಕೆಯಾದ ಏಳ ಛಂದಸ್ಸುಗಳ ವಿಚಾರ, ಬಿಟ್ಟು ಹೋಗಿರುವ ಸಾಲುಗಳ ವಿಚಾರವಾಗಿ ಸ್ಪಷ್ಟೀಕರಿಸಿದ ಡಿ.ಎಲ್.ಎನ್. "ನಡೆಯುವರೆಡಹದೆ ಕುಳಿತರೆಡಹುವರೆ' ಎಂಬ ಲೋಕೋಕ್ತಿ ಈ ಗ್ರಂಥಕ್ಕೆ ಅನ್ವಯಿಸುತ್ತದೆ. ಕನ್ನಡದ ವಿದ್ವತ್ತು ಅಪಾರವಾದದ್ದು ಎಲ್ಲಾ ವಿಷಯಗಳಲ್ಲಿ ಹೀಗೆಯೇ ಸರಿ ಎಂದು ನಿಶ್ಚಯವಾಗಿ ಹೇಳುವುದು ಒಬ್ಬ ವ್ಯಕ್ತಿಯಿಂದ ಸಾಧ್ಯವಾಗದ ಮಾತು ನಾನು ಸರ್ವಜ್ಞನಲ್ಲ ಕನ್ನಡ ಸಾಹಿತ್ಯದ ಅಭ್ಯಾಸಮಾಡುವ ಒಬ್ಬ ವಿದ್ಯಾರ್ಥಿ"[೩೯] ಎಂಬ ಕುಂದಣಗಾರರ ಮಾತು ಎಲ್ಲರಿಗೂ ಅನ್ವಯಿಸುತ್ತದೆ. ಎಂದು ಡಿ.ಎಲ್.ಎನ್. ಅರುವಿದ್ದು ಎಂತಹ ವಿದ್ವಾಂಸನ ಕಾರ್ಯಕ್ಷಮತೆ ಒಂದಿಲ್ಲೊಂದು ಲೋಪದಿಂದ ಕೂಡಿರುತ್ತದೆ. ಅದನ್ನು ಒಪ್ಪಿ ಸ್ವೀಕರಿಸಿ ತಿದ್ದಿನಡೆಯುತ್ತೇನೆಂಬ ಭಾವನೆ ಬಂದಾಗ ಮಾತ್ರ ಎಂತಹ ವಿಚಾರವೂ ಮುನ್ನೆಡೆಗೆ ಬರುವುದೆಂಬ ಅರ್ಥವನ್ನು ಇಲ್ಲಿ ಹೇಳಬಹುದೆನಿಸಿದೆ.

**ಬಸವಣ್ಣನವರ ಕೆಲವು ವಚನಗಳ ಪಾಠ**

೧೯೪೮ರಲ್ಲಿ ಶರಣಸಾಹಿತ್ಯ ಪತ್ರಿಕೆಯ ಸಂಚಿಕೆ–೧೧, ಸಂಪುಟ–೭ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡು ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೪೯ನೇ ಭಾಗವಾಗಿ ಮೂಡಿ ಬಂದುದ್ದಾಗಿದೆ.

ವಚನ ಸಾಹಿತ್ಯ ಕಾಲಘಟ್ಟವನ್ನು ಪ್ರಮುಖವಾಗಿ ೩ ಭಾಗವಾಗಿ ವಿಂಗಡಿಸಿ ನೋಡಿದ್ದ ಡಿ.ಎಲ್.ಎನ್. ಬಸವಪೂರ್ವಯುಗ, ಬಸವಯುಗ, ಬಸವ ನಂತರ ಯುಗವೆಂದು ದಾಖಲಿಸಿದ್ದಾರೆ. ವಚನ ಸಾಹಿತ್ಯವನ್ನು ಆಳವಾಗಿ ಅಭ್ಯಾಸಿಸಿದ್ದ ಡಿ.ಎಲ್.ಎನ್. ಬಸವಣ್ಣನನ್ನೇ ಕೇಂದ್ರವಾಗಿರಿಸಿಕೊಂಡು ಅಲ್ಲಿನ ಪ್ರಸ್ತುತ ವಿಷಯಕ್ಕೆ ತಕ್ಕಂತೆ ಕೆಲವು ವಚನಗಳ ಪಾಠ ಕುರಿತಾಗಿ ಚರ್ಚಿಸಿದ್ದು ಕಂಡುಬಂದಿದೆ.

ವಚನಶಾಸ್ತ್ರದಲ್ಲಿ ಹೇಳಿರುವ ಪ್ರಮುಖ ಸಿದ್ಧಾಂತಗಳಾದ ಷಟ್‌ಸ್ಥಲ ಸಿದ್ಧಾಂತ ನಿರೂಪಣೆ ಲಿಂಗಾಧಾರಣೆಯ ವಿಚಾರ, ವೀರಶೈವ ಮತವಿಚಾರ, ಸಮಾಜದ ಲೋಪಗಳನ್ನು ತಿದ್ದುವ ವಿಚಾರ, ಸಾಮನ್ಯ ಜನಜೀವನವನ್ನೂ ವಚನಗಳ ಮೂಲಕ ಎತ್ತಿತೋರಿಸುವ ವಿಚಾರಗಳಾದಿಯಾಗಿ ಬಸವಣ್ಣನು ನಡೆಸಿದ ಸಮಾಜವನ್ನು ಎಲ್ಲಾ ಮೂಲಗಳಿಂದ ತೌಲನಿಕವಾಗಿ ನೋಡುವ ದೃಷ್ಟಿ ಇಲ್ಲಿ ಪ್ರಮುಖವಾಗಿ ಕಂಡುಬರುವ ಅಂಶವೆನಿಸಿದೆ.

'ಬಸವಣ್ಣನವರ ವಚನಗಳ ಉದ್ದೇಶವನ್ನು ಭಾಷಾಶೈಲಿ ಪ್ರಬುದ್ಧತೆಗಳೊಂದಿಗೆ ಆಳವಾಗಿ ಅಧ್ಯಯನ ಮಾಡಿದ್ದ ಡಿ.ಎಲ್.ಎನ್. ಅವರು ಕೆಲವು ನಿರ್ದಿಷ್ಟ ವಿಚಾರಗಳನ್ನು ಅಭಿಪ್ರಾಯಿಸಿದ್ದಾರೆ, ಮೊದಲನೆಯದಾಗಿ ತಮ್ಮ ವಚನಗಳು ಜನಸಾಮಾನ್ಯರಿಗಾಗಿಯೇ ಹೇಳಿದರೂ ಅದರಲ್ಲಿ ಈಗಿನವರಾದ ನಮಗೂ ಸಹ ಅರ್ಥಮಾಡಿಕೊಳ್ಳಲು ಕಷ್ಟಕರವಾದ ಅನೇಕ ಸಂಗತಿಗಳು ಅಡಗಿದ್ದಾಗಿವೆ ಎಂದು ಹೇಳಿದ್ದ ಡಿ.ಎಲ್.ಎನ್. ಇದಕ್ಕೆ ಪೂರಕವಾಗಿ ಹಲವಾರು ಕಾರಣಗಳನ್ನು ಸಹ ನೀಡಿರುವುದುಂಟು. ಮೊದಲನೆಯದಾಗಿ ವಚನಗಳು ಬಸವಣ್ಣನವರ ಬಾಯಿಯಿಂದ ಬಂದಾಗ ಯಾವ ರೂಪದಲ್ಲಿದ್ದವೋ ಅವು ಅಲ್ಲಲ್ಲಿ ವ್ಯತ್ಯಾಸಗೊಂಡು ಕೆಟ್ಟು ಹೋಗಿರುವುದು ಮುಖ್ಯವಾದದ್ದು ಎಂಬ ಅಭಿಪ್ರಾಯವನ್ನು ಸಹ ಡಿ.ಎಲ್.ಎನ್. ವ್ಯಕ್ತಪಡಿಸಿದ್ದಾರೆ. ಏಕೆಂದರೆ, ಬಸವಣ್ಣನವರು ತಮ್ಮ ಹಸ್ತದಿಂದ ವಚನಗಳನ್ನು ಬರೆದಿಲ್ಲದ್ದರಿಂದ ಕಾಲಕಾಲಕ್ಕೆ ತಕ್ಕ ಹಾಗೆ ಅವರ ವಚನಗಳನ್ನು ಇತರರು ಸಂಕಲಿಸಿ ಬರೆದಿಟ್ಟರೆಂದು ಡಿ.ಎಲ್.ಎನ್. ಊಹಿಸಿದ್ದಾರೆ. ಅಲ್ಲದೆ ಈ ರೀತಿ ಪ್ರಕಟಗೊಂಡ ವಚನಗಳು ಸರಿಯಾಗಿಲ್ಲದೆ ಕೆಲವೆಡೆ ಬಸವಣ್ಣನವರ ಆಶಯಕ್ಕೆ ವಿರುದ್ಧವಾದ ಸ್ಖಾಲಿತ್ಯ ರೀತಿಯ ರೂಪಗಳೇ ಹೆಚ್ಚಾಗಿ ಮೂಡಿಬಂದಿವೆ ಎಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದು ಕಂಡುಬಂದಿದೆ. ಅಲ್ಲದೆ ಅಂದಿನ ಜನರಾಡುವ ಭಾಷೆಯನ್ನೇ ಬಸವಣ್ಣ ಬಳಸಿದ್ದನೆಂದು ದೇಶಿಯ ನುಡಿಗಟ್ಟುಗಳನ್ನು ಉದಾಹರಿಸುವ ಮೂಲಕ ತಿಳಿಸಿದ್ದಾರೆ. ಅಲ್ಲದೆ ಅಲ್ಲಿ ಬಳಕೆಗೊಂಡ ಪದಗಳಿಗೆ ಪರ್ಯಾಯವಾಗಿ ಬಂದ ಬೇರೆ ಪದಗಳ ರೂಪಗಳ ಕುರಿತಾಗಿ ಚರ್ಚಿಸಿದ ಡಿ.ಎಲ್.ಎನ್. ಅಂತಹ ಪರ್ಯಾಯ ಪದಗಳನ್ನು ಅರ್ಥಮಾಡಿಕೊಂಡು ನಿಜರೂಪ ಹುಡುಕುವುದು ಕಷ್ಟದ ಕೆಲಸವೆಂದು ಅಭಿಪ್ರಾಯಸಿದ್ದುಂಟು ಅಲ್ಲದೆ ಮುಂದುವರೆದು ಬಸವಣ್ಣನವರು ಜೀವನದ ಹಲವು ದೃಷ್ಟಾಂತಗಳನ್ನು ತಮ್ಮ ವಚನಗಳಲ್ಲಿ ತಿಳಿಸಿದ್ದನ್ನು ಹೇಳಿ ಅವು ಜೀವನದ ನಾನಾ ಕ್ಷೇತ್ರಗಳಿಂದ ಬಂದವೆಂದು'[೪೦] ಅಭಿಪ್ರಾಯಿಸಿದ್ದಾರೆ.

ಬಸವಣ್ಣನವರನ್ನು ಕೇಂದ್ರವಾಗಿರಿಸಿಕೊಂಡು ಎಲ್ಲಾ ರೀತಿಯಲ್ಲಿ ವಚನ ವಿಚಾರವನ್ನು ವಿಮರ್ಶಿಸಿರುವ ಡಿ.ಎಲ್.ಎನ್. ವಚನಗಳಲ್ಲಿ ತಲೆದೂರಿದ ತಪ್ಪುಗಳನ್ನು ಮುಂದಿನ ಪೀಳಿಗೆ ಸರಿಪಡಿಸಬೇಕೆಂಬ ಮಹತ್ವಾಕಾಂಕ್ಷಿ ಆಶಯವನ್ನು ಅಭಿವ್ಯಕ್ತಿಸಿದ್ದು ಕಂಡುಬಂದಿದೆ. ಈ ವಿಚಾರಗಳಿಂದ ಡಿ.ಎಲ್.ಎನ್. ಅವರಿಗಿದ್ದ ಮಧ್ಯಕಾಲೀನ ಸಾಹಿತ್ಯದ ಬಗೆಗಿನ ಒಲವು, ವಚನ ಸಾಹಿತ್ಯದ ಮೇಲಿನ ಕಾಳಜಿ ಎಷ್ಟಿತ್ತೆಂದು ತಿಳಿಯಲು ಅವರು ಅಭಿಪ್ರಾಯಿಸಿ 'ಬಸವಣ್ಣನವರ ವಚನ ವಜ್ರಗಳಿಗೆ ಕಾಲ ಕಾರಣವಾಗಿ ಅಂಟಿಕೊಂಡು ಬಂದಿರುವ ಅಪಪಾಠಗಳ ಕೊಳೆಯನ್ನು ತೊಳೆದು ಕಳೆಯೇರಿಸುವ ಕೆಲಸ ಎಷ್ಟು ಅವಶ್ಯವಾಗಿದೆ'[೪೧] ಎಂಬ ಮಾತು ಈ ಲೇಖನದುದ್ದಕ್ಕೂ ತಿಳಿದು ಬಂದ ಪ್ರಮುಖ ಅಂಶವೆನಿಸಿದೆ.

## ಸೋವಿಯಟ್ ರಷ್ಯಾದಲ್ಲಿ ಮಕ್ಕಳ ರಂಗಭೂಮಿ

ಜಯಕರ್ನಾಟಕ ಪತ್ರಿಕೆಯಲ್ಲಿ ೧೯೪೧ರ ಹೊತ್ತಿಗೆ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೯೦ನೇ ಭಾಗವಾಗಿ ಮೂಡಿ ಬಂದದ್ದಾಗಿದೆ.

ಸೋವಿಯಟ್ ರಷ್ಯಾವು ೧೯೧೭ರಲ್ಲಿ ಸ್ಥಾಪನೆಗೊಂಡ ನಂತರ ಮೂರನೇ ವರ್ಷದಲ್ಲಿ ಮಕ್ಕಳಿಗಾಗಿ ಹಾಕಿಕೊಂಡ ಹಲವಾರು ಪ್ರಯೋಜನಕಾರಿ ಯೋಜನೆಗಳ ಕುರಿತು ಚರ್ಚಿಸಿದ ಡಿ.ಎಲ್.ಎನ್. ಮಕ್ಕಳಿಗಾಗಿ ಏನಾದರೂ ಮಾಡಬೇಕೆಂಬ ರಷ್ಯಾದ ಛಲವನ್ನು ಶ್ಲಾಘಿಸಿದ್ದಾರೆ. ಅಲ್ಲದೆ ರಷ್ಯಾ ಸರಕಾರವು ಮಕ್ಕಳಿಗಾಗಿ ರೂಪಿಸಿದ ಹೊಸ ಹೊಸ ಯೋಜನೆಗಳ ಕುರಿತು ಪ್ರಸ್ತಾಪಿಸುತ್ತಾ 'ನಟಷ' ಎಂಬ ಹೆಸರಿನ ೧೪ ವರ್ಷದ ಹುಡುಗಿಯ ಪ್ರೇರಣೆ, ಪ್ರಭಾವದಿಂದ ಅಂದಿನ ಸರಕಾರ ಮಕ್ಕಳಿಗಾಗಿ ರಂಗಭೂಮಿ ಒಂದನ್ನು ಸ್ಥಾಪಿಸಿ ಆ ದೇಶದ ಮಕ್ಕಳ ಮನಸ್ಸನ್ನು ತಿದ್ದಲು ಎಲ್ಲಾ ಮೂಲಗಳಿಂದ ಮುಂದಾಯಿತು. ಇದಕ್ಕೆ ಪೂರಕವೆಂಬಂತೆ ೧೯೨೧ನೇ ವರ್ಷದಲ್ಲಿ ಅಂದಿನ ಸರಕಾರ ಮಾಸ್ಕೋದಲ್ಲಿ ಪ್ರಪ್ರಥಮವಾಗಿ ನಾಟಕ ಮಂದಿರ ಒಂದನ್ನು ಸ್ಥಾಪಿಸಿ ಕಲಿಕೆ ಮೂಲಕ ವಿದ್ಯಾಭ್ಯಾಸ ಎಂಬ ಘೋಷಣೆಯನ್ನು ರೂಪಿಸಿತ್ತು. ಇದರಿಂದ ಅಲ್ಲಿನ ಮಕ್ಕಳಿಗೆ ಪಠ್ಯದಿಂದಲೇ ಬಂದಿರುವ ಪ್ರಪಂಚ ಜ್ಞಾನ ರಂಗಭೂಮಿಯಿಂದಲೂ ದೊರೆಯುವಂತಾಯಿತು.

ಮುಂದೆ ಕ್ರೀಡೆ, ಶಿಕ್ಷಣದ ತತ್ವಗಳು, ಸಾಮಾಜಿಕ ರೂಪಗಳಲ್ಲಿ ಮಕ್ಕಳು ತೊಡಗಿಸಿಕೊಂಡಂತೆ ಈ ರೂಪದಿಂದ ದಿನದಿನಕ್ಕೂ ಬೆಳೆಯಲಾರಂಭಿಸಿ, ಪ್ರೊ. ಬ್ರಿರ್ಯಾಟ್‌ಸೇಫ, ಪ್ರೊ. ಇ.ಎ.ಆರ್‌ಕಿನ್‌ರವರುಗಳ ಮೂಲಕ ಮಕ್ಕಳ ಮನಃಶ್ಯಾಸ್ತ್ರ ಅಧ್ಯಯನಗಳ ಮೂಲಕ ಮಕ್ಕಳಲ್ಲಿನ ಪ್ರತಿಭೆ ಹೊರಹಾಕಲು ಬೇಕಾದ ಪುಷ್ಠಿಕೃತ ವಿಚಾರಗಳನ್ನು ರೂಪಿಸಿದವರಾಗಿದ್ದರು. ಇದರಿಂದ ಮಕ್ಕಳೇ ನಾಟಕದ ಉಸ್ತುವಾರಿ ಹೊತ್ತು ಪ್ರದರ್ಶನದ ಏರ್ಪಾಟಿನಿಂದ ಅಲ್ಲಿನ ಕುಂದು ಕೊರತೆಗಳೇನು? ಅವುಗಳನ್ನು ಉತ್ತಮಪಡಿಸುವುದು ಹೇಗೆ? ಎಂಬ ನಿರ್ಣಯಗಳಿಗೆ ಅವರೇ ಬದ್ಧರಾಗುವಂತೆ ರೂಪುಗೊಡುದ್ದನ್ನು ಡಿ.ಎಲ್.ಎನ್. ತಮ್ಮ ಲೇಖನದುದ್ದಕ್ಕೂ ಪರಿಯಾಗಿ ವಿವರಿಸಿದ್ದಾರೆ.

ಒಟ್ಟಾರೆಯಾಗಿ ಸೋವಿಯೆಟ್ ರಷ್ಯಾದಲ್ಲಿ ಮಕ್ಕಳ ರಂಗಭೂಮಿ ಒಂದು ಕ್ರಾಂತಿಕಾರಿ ಬೆಳವಣಿಗೆಯಾಗಿ ನಗರಗಳಲ್ಲದೆ ಹಳ್ಳಿ ಮಕ್ಕಳಿಗೂ ಇದರ ಪ್ರಯೋಜನ ವಿಸ್ತರಣೆಗೊಂಡು, ವರ್ಣಬೇಧ ನೀತಿ ಮರೆತು, ಜಾತಿ ವೈಷಮ್ಯ ಮರೆತು ಎಲ್ಲಾ ಮಕ್ಕಳು ಒಟ್ಟಾಗಿ ದೇಶಕಟ್ಟುವ ಮುಂದಿನ ಮುಖ್ಯ ಪ್ರಜೆಗಳೆನಿಸಿದ್ದವರಾಗಿ ರಂಗಭೂಮಿ ಅವಕಾಶ ಕಲ್ಪಿಸಿ ಐಕ್ಯತೆಗೆ ಅಂದಿನ ಸರಕಾರದ ಆಸಕ್ತಿವಹಿಸಿದ್ದನ್ನು ಡಿ.ಎಲ್.ಎನ್. ಪರಿಯಾಗಿ ಸ್ಮರಿಸಿ ಎಲ್ಲಾ ದೇಶಗಳಲ್ಲಿ ಈ ರೀತಿ ಮಕ್ಕಳಿಗೆ ಪ್ರೇರಣೆ ಪ್ರಭಾವ ಅವಶ್ಯವೆಂದು ಸಾರಿದ್ದಾರೆ.

**ಸಾಹಿತ್ಯ ಚರಿತ್ರೆಯ ಸ್ವರೂಪ**

೧೯೭೧ರಲ್ಲಿ ಡಿ.ಎಲ್.ಎನ್. ಅವರು ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯಲ್ಲಿ ಮೊದಲ ಬಾರಿಗೆ ಸಂಕಲಿತಗೊಂಡ ಈ ಲೇಖನ ಇದಾಗಿದೆ.

ಸಾಹಿತ್ಯ ಚರಿತ್ರೆಯ ರಚನೆಯು ಸಹೃದಯನಿಗೆ ಆನಂದ ಸ್ಫುರಿಸುವ ಒಂದು ರೂಪವಾಗಬೇಕು ಆಗ ಮಾತ್ರ ಅದಕ್ಕೆ ನಿಜವಾಗಿ ಜೀವಕಲೆ ಬಂದಂತಾಗುತ್ತದೆ. ಡಿ.ಎಲ್.ಎನ್. ಅವರು ಸಾಹಿತ್ಯ ಚರಿತ್ರೆಯ ಸ್ವರೂಪದ ವಿಷಯವಾಗಿ ಪ್ರಸ್ತಾಪಿಸಿದ ಈ ವಿಮರ್ಶಾ ಲೇಖನದಲ್ಲಿ ಮೊದಲಿಗೆ ಸಾಹಿತ್ಯವೆಂದರೇ, 'ಒಂದು ಭಾಷೆಯಲ್ಲಿ ಉತ್ಪನ್ನವಾಗಿರುವ ಗ್ರಂಥ ಸಮುದಾಯವೆಂದು'[೪೨] ಪ್ರತಿಪಾದಿಸಿದ್ದಾರೆ. ಇದಕ್ಕೆ ಪೂರಕವೆಂಬಂತೆ ಈ ವಿಧಾನವನ್ನು ಎರಡೂ ರೂಪವನ್ನಾಗಿಸಿ ಚರ್ಚಿಸುತ್ತಾ ಮೊದಲನೆಯದನ್ನು 'ಶಾಸ್ತ್ರ' ಎಂದು ಪ್ರತಿಪಾದಿಸಿ ಇದಕ್ಕೆ ಜ್ಞಾನ ಪ್ರಸಾರವೇ ಮುಖ್ಯ ಉದ್ದೇಶ ಎಂದಿದ್ದಾರೆ. ನಂತರದಲ್ಲಿ ಎರಡನೆಯದನ್ನು ಕಾವ್ಯ ಎಂದು ಪ್ರತಿಪಾದಿಸಿ ಇದಕ್ಕೆ ಹೃದಯ ವಿಕಸನವೇ ಮುಖ್ಯ ಗುರಿ ಎಂದು ಇದು ಹೃದಯದಲ್ಲಿನ ಭಾವ, ದ್ವೇಷಗಳನ್ನು ಉದ್ದೀಪನಗೊಳಿಸಿ ತನ್ಮೂಲಕ ಆನಂದವನ್ನು ಉಂಟು ಮಾಡುವುದು ಇದರ ಪರಿ ಎಂದಿದ್ದಾರೆ. ಒಟ್ಟಾಗಿ ಈ ಎರಡೂ, ಒಂದು ಜ್ಞಾನ ಸಾಹಿತ್ಯವಾದರೆ ಇನ್ನೊಂದು ಶಕ್ತಿ ಸಾಹಿತ್ಯ ಎಂದು ಉಲ್ಲೇಖಿಸಬಹುದಾಗಿದೆ.

ಯಾವುದೇ ಒಂದು ಭಾಷೆಯಲ್ಲಿ ಹುಟ್ಟಿರುವ ಸಾಹಿತ್ಯ ರಾಶಿಯ ಅಭ್ಯಾಸವನ್ನು ಆಮೂಲಾಗ್ರವಾಗಿ ಕೈಗೊಳ್ಳುವ ಒಂದು ಕ್ರಮವನ್ನು ವಹಿಸಬೇಕಾಗುತ್ತದೆ. ಆ ಕ್ರಮವು ಆ ಸಾಹಿತ್ಯ ಹೇಗೆ ಬೆಳೆದುಬಂದಿದೆ ಕಾಲಕಾಲಕ್ಕೆ ಅದರ ಮಾರ್ಪಾಡುಗಳೇನು? ಕಾಲಧರ್ಮಕಕ್ಕನುಗುಣವಾಗಿ ಅಲ್ಲಾದ ಮಾರ್ಪಾಡುಗಳಾವುವು ಅವುಗಳಿಗೆ ಕಾರಣಗಳೇನು? ಅವುಗಳಿಂದ ಸಾಹಿತ್ಯ ಕಲೆಗೆ ಆಗಿರುವ ಪ್ರಯೋಜನೆಗಳೇನು ಎಂಬಿತ್ಯಾದಿ ಅನೇಕ ವಿಷಯಗಳನ್ನು ಚರ್ಚಿಸುವುದು ಅತಿ ಅವಶ್ಯಕ ಮತ್ತು ಈ ಖಚಿತತೆಯಿಂದ ಸಾಹಿತ್ಯ ಚರಿತ್ರೆಯನ್ನು ರಚಿಸಲು ಸಾಧ್ಯ ಎಂದು ಲೇಖನದುದ್ದಕ್ಕೂ ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಅರಹುತ್ತಾ ಮುಂದುವರೆದು ಸಾಹಿತ್ಯ ಚರಿತ್ರೆಯಲ್ಲಿ ಸಾಮಾನ್ಯವಾಗಿ ಪರ್ಯಾಯಲೋಚಿಸಬೇಕಾದ ವಿಷಯಗಳಾಗಿ ಕವಿಗಳ ಜೀವನಚರಿತ್ರೆ ಅವರ ಮನಸ್ಸಿನ ಮೇಲಿನ ನಾನಾ ಪ್ರಭಾವಗಳು ಅವರ ಕೃತಿಗಳಿಗೆ ಪ್ರೇರಕವಾದ ಸಂದರ್ಭಗಳ ಪರಿಚರಿಯ ಅವರ ಕಾಲದ ಸಮಾಜದ ಪರಿಸ್ಥಿತಿ ಹೀಗೆ ಮೊದಲಾದ ಅಂಶಗಳ ವಿವರಣೆಯನ್ನು ಎಲ್ಲಾ ಮೂಲಗಳಿಂದ ಹೇಳಬೇಕಾಗಿದ್ದು ಅವಶ್ಯವೆನಿಸುವುದು ಅಲ್ಲದೆ ಕವಿಯಾದವನು ತಾನು ತಂದ ಹೊಸ ವಸ್ತುವನ್ನು ಕವಿಯನ್ನು ಪ್ರಪಂಚಕ್ಕೆ ತಂದಾಗ ಅವನ ವ್ಯಕ್ತಿಗತ ಮನೋಧರ್ಮ ಅವನ ಆದರ್ಶ ಆಕಾಂಕ್ಷೆಗಳು ಅವನ ನೋವು ನಲಿವುಗಳನ್ನು ಅದರಿಂದ ಅರ್ಥ ಮಾಡಿಕೊಳ್ಳುವುದು ಅವಶ್ಯವೆನಿಸಿದೆ. ಅಲ್ಲದೆ ಕವಿಯ ಕೃತಿಗಳನ್ನು ವಿಮರ್ಶೆಗೆ ಒಳಪಡಿಸಿ ಕಲೆಯ ದೃಷ್ಟಿಯಿಂದ

ಅವುಗಳ ಬೆಲೆಯನ್ನು ನಿರ್ಣಯಿಸುವುದೂ ಸಾಹಿತ್ಯ ಚರಿತ್ರೆಯ ಕೆಲಸವೆನಿಸಿದೆ. ಕವಿಗಳ ವ್ಯಕ್ತಿಗತವಾದ ಶಕ್ತಿ ವಿಶೇಷಗಳು ಸಾಹಿತ್ಯದ ಬೆಳವಣಿಗೆಗೆ ಒಂದು ಕಡೆ ಕಾರಣವಾಗಿದ್ದರೆ ಇನ್ನೊಂದು ಕಡೆ ಅವನ ಸುತ್ತಲಿನ ಸಮಾಜ ಜೀವನದಲ್ಲಿ ನಡೆಯುವ ವ್ಯತ್ಯಾಸಗಳು ಅವನಿಗೆ ಪ್ರೇರಕವಾಗಿ ಅವನಿಂದ ಸಾಹಿತ್ಯ ದೃಷ್ಟಿಯನ್ನು ಮಾಡಿಸಬಲ್ಲವಂತವಾಗಿವೆ. ಇವೆಲ್ಲವುಗಳಲ್ಲದೆ ಧರ್ಮ, ಧರ್ಮದಂತೆಯೇ ರಾಜಕೀಯವೂ ಸಾಹಿತ್ಯ ರಚನೆಗೆ ಮೂಲ ಕಾರಣವಾಗಿವೆ ಎಂಬ ವಿಧಾನವನ್ನು ಡಿ.ಎಲ್.ಎನ್. ಪರಿಯಾಗಿ ವಿವರಿಸಿದ್ದು ಎದ್ದುಕಂಡಿದೆ. ಜನರಲ್ಲೂ ಕವಿಗಳಲ್ಲಿ ಉತ್ತಮವಾದ ಅಭಿರುಚಿ ನೆಲೆಸಿದ್ದಾರೆ. ಅವರಿಂದ ರಚಿತವಾದ ಕಾವ್ಯಗಳು ಉತ್ಕೃಷ್ಟವಾಗಿರುತ್ತವೆ ಇದರಿಂದ ಸಾಹಿತ್ಯ ಚರಿತ್ರೆಯಲ್ಲಿ ಗಮನಾರ್ಹ ಮಾರ್ಪಾಡು ಆಗಿಯೇ ತೀರುತ್ತದೆ ಎಂಬ ನಿಲುವು ಪ್ರಧಾನವಾಗಿದೆ.

ಕಾಲಾಂತರಗಳಿಂದ ಮೂಡಿಬಂದ 'ದೇಶಿಚರಿತ್ರೆ,' 'ಸಾಹಿತ್ಯ ಚರಿತ್ರೆ'ಗಳಲ್ಲಿ ಪ್ರತಿಪಾದಿತವಾಗಿರುವ ಯುದ್ಧ ಚರಿತ್ರೆಗಳು, ನಡೆಸಿದ ಪಿತೂರಿಗಳು ಅಲ್ಲಿ ಮುಖ್ಯವಾದರೆ ಇಲ್ಲಿ ಆತ್ಮಕಥೆ ದೇಶದ ಆತ್ಮಕ ವಿಕಸನದ ಕಥೆಗಳಿತ್ಯಾದಿಯಾಗಿ ನಿರೂಪಿತಗೊಂಡವಾಗಿವೆ.

ಒಟ್ಟಾರೆಯಾಗಿ ಕಾಲಕಾಲಕ್ಕೆ ಸಾಹಿತ್ಯ ಚರಿತ್ರೆ ಪರಿಷ್ಕರಣೆ ಆದಾಗ ಮಾತ್ರ ಅಂದಿನಿಂದ ಸಾಮಾಜಿಕತೆಗೆ ತಕ್ಕಂತೆ ಸಾಹಿತ್ಯಕ್ಕೆ ಸಾಹಿತ್ಯಾಭ್ಯಾಸಿಗಳಿಗೆ ಒಂದು ಹೊಸ ರೂಪು ಬರುವುದು. ಆಗಮಾತ್ರ ಸಾಹಿತ್ಯ ಚರಿತ್ರೆ ಚಿರಸ್ಥಾಯಿಯಾಗಿ ಕಾಲದುದ್ದಕ್ಕೂ ಜೀವಂತವಾಗಿರಲು ಸಾಧ್ಯ.

**ಅರ್ಥನೇಮಿಯ ಒಂದು ಪದ್ಯ ಟಿಪ್ಪಣಿ**

೧೯೬೭ರಲ್ಲಿ ಪ್ರಬುದ್ಧ ಕರ್ನಾಟಕ ಪತ್ರಿಕೆಯಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೬ನೇ ಭಾಗವಾಗಿ ಮೂಡಿ ಬಂದದ್ದಾಗಿದೆ.

ಇಲ್ಲಿ ನೇಮಿಚಂದ್ರನು ತನ್ನ ನೇಮಿನಾಥ ಪುರಾಣದ ಐದನೆಯ ಆಶ್ವಾಸದಲ್ಲಿ ಅರಣ್ಯ ವರ್ಣನೆಯನ್ನು ಮಾಡುತ್ತಾ ಈ ಕೆಳಗಿನ ಪದ್ಯದಲ್ಲಿ ಉಲ್ಲೇಖಿಸಿರುವಂತೆ

**'ಅಹಿಯ ವಿಷವಹ್ನಿ ನೆಗೆದಹಿ**
**ಗ್ರಹಮಂ ಪೀದುರ್ಚುವತ್ಸಭಲ್ಲವ ಬಾಯಂ**
**ದಹಿಯಿಸಿ ಪಾಇ ಪಾಪೇ**
**ನ ಹನ್ಯತೇಯೆಂಬ ನುಡಿಯನೇಂ ನಡೆಯಿಸಿತೋ॥'**[೪೩]

ಇದರಲ್ಲಿನ ಸರಿಯಾದ ಪಾಠವನ್ನು ಗುರುತಿಸಿ ಅರ್ಥವಿವರಿಸುವ ಪರಿ ಈ ಲೇಖನದ್ದಾಗಿದೆ.

ಈ ಮೇಲೆ ಉದ್ಧೃತಗೊಂಡ ಪದ್ಯಪಾಠದ ಬಗ್ಗೆ ಡಿ.ಎಲ್.ಎನ್. ರಾಮಾನುಜಯ್ಯಂಗಾರ್ ಸಂಪಾದಿಸಿ ಪ್ರಕಟಿಸಿದ್ದ (೧೯೧೪) ನೇಮಿನಾಥ ಪುರಾಣದ ಕೃತಿಯ ಪದ್ಯ .ಬಿಎಸ್.ಸಣ್ಣಯ್ಯ (೧೯೬೧)) ನವರು ಪ್ರಕಟಿಸಿದ ಪದ್ಯಗಳನ್ನು ತೌಲನಿಕವಾಗಿ ನೋಡಿ ಎರಡೂ ಪಾಠಗಳಲ್ಲಿ ಮೂಡಿಬಂದ ಅಹಿಗ್ರಹಿ ಎಂಬುದಕ್ಕೆ ಬದಲಾಗಿ **'ಅಹಿಗೃಹ,'** ಎಂಬ ಸರಿಯಾದ ಪಾಠವನ್ನು ಉಲ್ಲೇಖಿಸಿ **ಹಾವಿನ ಮನೆ** ಎಂದು ಹೆಸರಿಸಿ ಮುಂದೆ ಪದ್ಯದ ಅರ್ಥವಿಸ್ತಾರವನ್ನು ನಡಸಿ ಕರಡಿಯು ತನ್ನ ಮೂತಿಯಿಂದ ಹುತ್ತದ ಮೇಲೆ ಇರುವ ರಂಧ್ರವನ್ನು ಅಗೆದು ಮೀಟಿ ಒಳಗೆ ಇರುವ ಇರುವೆ (ಗೆದ್ದಲು ಹುಳು) ಗಳನ್ನು ತಿನ್ನಲು ನಾಲಿಗೆಯನ್ನು ಚಾಚಿಕೊಂಡಿತ್ತೆಂಬ ಅರ್ಥವನ್ನು ಸಾರಿದ್ದಾರೆ.

**ಗದಾಯುದ್ಧದ ಒಂದು ಪದ್ಯದ ಅರ್ಥ ವಿಚಾರ**

ಕನ್ನಡ ನುಡಿಯ ಅಕ್ಟೋಬರ್ ಸಂಚಿಕೆಯಲ್ಲಿ ಮೊದಲ ಬಾರಿಗೆ ೧೯೬೭ರಲ್ಲಿ ಮೂಡಿಬಂದ ಈ ವಿಚಾರ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೭೦ನೇ ಭಾಗವಾಗಿ ಮೂಡಿಬಂದುದ್ದಾಗಿದೆ.

ಗದಾಯುದ್ಧದ ೭ನೇ ಆಶ್ವಾಸ ೨೬ನೇ ಪದ್ಯ ಭಾಗವಾದ

**'ಕಳಸಜನನಿಂತು ಕೊಲಿಸಿದ**
**ಖನನೆ ಗಡಂ ಧರ್ಮನಂದನಂ ಕ್ರೂರದಿನಂ**
**ಗಳ ಪೆಸರಂ ಮಱಯೀಸಿ ಮಂ।**
**ಗಳವಾರಂ ಕಡ್ಡವಾರಮೆಂಬಂತೆ ವಲಂ॥'**[೪೪]

ಎಂದು ಕುರುಕ್ಷೇತ್ರ ಯುದ್ಧದ ಸಂದರ್ಭದಲ್ಲಿ ತನ್ನ ಬಂದುಬಾಂಧವರನ್ನು ಗೆಳೆಯರನ್ನು ಕಳೆದುಕೊಂಡು ದುಃಖಿತನಾದ ದುರ್ಯೋಧನನು ತನಗಾದ ಅನ್ಯಾಯಗಳನ್ನು ನೆನಪಿಸಿಕೊಳ್ಳುತ್ತಾ ಇರುವಾಗ ಸಂಜಯನು ಪಾಂಡವರ ಪರಾಕ್ರಮವನ್ನು ಹೊಗಳುತ್ತಿರುವಾಗ ಫಣಿರಾಜ ಕೇತನಂ ಕೋಪಗೊಂಡು ಸ್ಥಿರಸತ್ಯ ಪ್ರತಿಯೆಂದು 'ಧರ್ಮ ರುಚಿಯೆಂದಾ ಧರ್ಮಪುತ್ರಂದಯಾ ಪರಂಯೆಂದೆಲ್ಲರ ಪೇಲ್ದು ಮಾತು ಹುಸಿಯಾಯಿತು' ಎಂದು ಧರ್ಮರಾಜನನ್ನು ತೆಗಳುತ್ತಿರುವಾಗ ಈ ಪದ್ಯ ಮೂಡಿ ಬಂದುದಾಗಿದೆ. ಇಲ್ಲಿ ಪ್ರಮುಖವಾಗಿ ಡಿ.ಎಲ್.ಎನ್. ಎತ್ತಿಕೊಂಡ ಚರ್ಚೆಯ ವಿಷಯ ಈ ಪದ್ಯದ ಕೊನೆಯ ಸಾಲಿನಲ್ಲಿ ಮೂಡಿ ಬಂದ 'ಕಡ್ಡವಾರ' ಎಂಬ ವಿಚಾರದ ಅರ್ಥಬಿಡಿಸಿ ಹೇಳಲು ಪ್ರಯತ್ನಿಸಿದ್ದು ಅವರು ಕುಶಲಾಗ್ರತೆಗೆ ಹಿಡಿದ ಗನ್ನಡಿ ಎನಿಸಿದೆ.

ಈ ಲೇಖನದುದ್ದಕ್ಕೂ ರೈಸ್, ಶ್ರೀನಿವಾಸ ಅಯ್ಯಂಗಾರ್, ಎಫ್.ಕೀಲ್‌ಹಾರನ್, ಡಾ.ಫ್ಲೀಟ್, ಎಲ್.ಡಿ.ಬಾರ್ನೈಟ್ ಅವರುಗಳ ಚರ್ಚೆಗಳನ್ನು ಸಂಕಲಿಸಿ 'ಕಡ್ಡವಾರ', 'ವಡ್ಡವಾರ'ರ

‘ಶನಿವಾರ,’ ‘ವೃದ್ಧವಾರ’ ಮಂಗಳವಾರವೆಂದು ಪ್ರತಿಪಾದಿಸಿದ್ದನ್ನು ಕಾಣಬಹುದಾಗಿದೆ. ಮೇಲಿನ ಪದ್ಯದ ಭಾಗದ ಒಟ್ಟಾರೆ ಉದ್ಧೃತ ಭಾಗವನ್ನು ಸಂಕ್ಷೇಪಿಸಿ ಅಶುಭವನ್ನು ಶುಭದ ಹೆಸರಿನಲ್ಲಿ ಮರೆಮಾಡಿ ಹೇಳುವ ಪರಿಯಾಗಿ ‘ವಡ್ಡವಾರ’ವೆಂದರೆ ‘ಮಂಗಳವಾರ’ವೆಂದು ಸಂಕಲಿಸಿ ಹೇಳಿದ್ದಾಗಿದೆ.

**ರೆ.ಎಫ್.ಕಿಟೆಲ್**

ಡಿ.ಎಲ್.ಎನ್. ಬೆಂಗಳೂರಿನ ಎ.ಐ.ಆರ್. ಅವರ ಕೃಪೆಯಿಂದ ಮಾಡಿದ ಭಾಷಣದ ಪ್ರತಿ ಇದಾಗಿದ್ದು ಮುಂದೆ ತಮ್ಮ ಪೀಠಿಕೆಗಳು ಲೇಖನಗಳು ಕೃತಿಯ ೮೪ನೇ ಭಾಗವಾಗಿ ಸಂಕಲಿತಗೊಂಡದ್ದಾಗಿದೆ.

ಭಾರತದಲ್ಲಿ ಹಲವಾರು ಪಾಶ್ಚಾತ್ಯ ವಿದ್ವಾಂಸರು ಕಾಲಾಂತರದಿಂದ ಏನಾದರೊಂದು ಕಾರಣದ ಮೂಲಕ ಬಂದು ಇಲ್ಲಿನ ನಾಡು, ನುಡಿ, ಅಚಾರ, ವಿಚಾರಗಳನ್ನು ನೋಡಿ ದಾಖಲಿಸಿ ಸಮಾಜಕ್ಕೆ ಬಿತ್ತರಿಸುವ ಪರಿಯನ್ನು ಮುಂದುವರೆಸಿದವರಲ್ಲಿ ಬಿ.ಎಲ್.ರೈಸ್ ಕರ್ನಲ್ ಮೆಕೆಂಜೆ, ರೆವೆರೆಂಡ್ ಎಫ್.ಕಿಟೆಲ್ ಇತ್ಯಾದಿ ಪ್ರಮುಖ ವಿದ್ವಾಂಸರುಗಳು ತಮ್ಮದೇ ಆದ ಛಾಪನ್ನು ನಮ್ಮ ನಾಡು ನುಡಿಯ ಮೇಲೆ ಬೀರಿದವರಾಗಿದ್ದಾರೆ. ಇಂತಹವರಲ್ಲಿ ಒಬ್ಬರಾದ ರೆವೆರೆಂಡ್ ಎಫ್.ಕಿಟೆಲ್‌ರವರ ಕುರಿತಾಗಿ ಡಿ.ಎಲ್.ಎನ್. ಕೆಲವು ವಿಚಾರಗಳನ್ನು ತಮ್ಮ ಲೇಖನದಲ್ಲಿ ದಾಖಲಿಸಿದ್ದನ್ನು ಎತ್ತಿ ನೋಡುವ ಪರಿ ಇಲ್ಲಿನ ಉದ್ದೇಶವನೆಸಿದೆ.

೧೮೫೭ನೇ ವರ್ಷದಲ್ಲಿ ಕಂಪನಿ ಸರಕಾರ ಹೋಗಿ, ಬ್ರಿಟೀಷ ಸರ್ಕಾರ ನೆಲೆಗೊಂಡ ಮೇಲೆ ಭಾರತಕ್ಕೆ ವ್ಯಾಪಾರ, ವಾಣಿಜ್ಯ ಕಾರ್ಯ ಮತಧರ್ಮ ಪ್ರಚಾರಕ್ಕಾಗಿ ಹಲವಾರು ವಿದ್ವಾಂಸರು ಪಾಶ್ಚಾತ್ಯ ದೇಶಗಳಿಂದ ಬಂದವರಾಗಿದ್ದಾರೆ. ಇವರಲ್ಲಿ ಧರ್ಮ ಪ್ರಚಾರಕರಾಗಿ ಬಂದ ಹತ್ತಾರು ಪಾದ್ರಿಗಳು ಆಯಾ ರಾಜ್ಯದ ಭಾಷೆಯನ್ನು ಕಲಿತು ಅಲ್ಲಿನ ಜನರ ಹಿಡಿತ ಸಾಧಿಸಿ ತಮ್ಮ ಮತಧರ್ಮವನ್ನು ಪ್ರಭಾವಿಸಲು ಮುಂದಾದವರಾಗಿದ್ದಾರೆ ಅಂತಹವರಲ್ಲಿ ಕನ್ನಡಕ್ಕೆ ಫಾದರ್ ‘ಬೆಶ್ಚಿ,’ ‘ಬಿಕ್ಷಪ್‌ಕಾಲ್ಡ್‌ವೆ’ ತಮಿಳು ಭಾಷೆಗೆ ಡಾ.ಗುಂಡರ್ಟ್ ಮಲಯಾಳಂ ಭಾಷೆಗೆ ಬ್ರೌನ್ ತೆಲುಗು ಭಾಷೆಗೆ, ರೀವ್ ಸ್ಯಾಂಡರ್‌ಸನ್, ಮೊಗ್ಲಿಂಗ್ ಫ್ಲೀಟ್, ರೈಸ್, ಕಿಟೆಲ್ ಕನ್ನಡ ಭಾಷೆಗೆ ದುಡಿದ ಮಹನೀಯರೆನಿಸಿದ್ದು ಪ್ರಸ್ತುತ ಕಿಟೆಲ್‌ರನ್ನು ವಸ್ತುವನ್ನಾಗಿಸಿಕೊಂಡು ನೋಡುವುದಾದರೆ ಕಿಟೆಲ್‌ರು ಹೊಸಗನ್ನಡ ಪಿತಾಮಹರಲ್ಲಿ ಒಬ್ಬರೆನಿಸಿದ್ದಾರೆ. ಇವರು ಪ್ರಾಟೆಸ್ಟೆಂಟ್ ಪಂಗಡಕ್ಕೆ ಸೇರಿದ ಜರ್ಮನ್‌ನ ವಾಯುವ್ಯ ಭಾಗದ ರೊಸ್ಟರ್ ಹಾಫೆಯಲ್ಲಿ ೧೮೩೨ನೇ ಏಪ್ರಿಲ್ ೭ರಂದು ಜನಿಸಿದವರಾಗಿದ್ದಾರೆ. ಇವರು ಅಲ್ಲಿನ ಔರಿಕ್ ನಗರದಲ್ಲಿ ಅಭ್ಯಾಸಿಸಿ, ಮುಂದೆ ೧೮೫೦ರ ಹೊತ್ತಿಗೆ ಸ್ವಿಜರ್ ಲ್ಯಾಂಡ್‌ನಲ್ಲಿ ಬಾಶೆಲ್ ಮಿಷನ್‌ನಲ್ಲಿ ಅಭ್ಯಾಸಿಸಿ ಮುಂದೆ ಮಂಗಳೂರಿಗೆ ಧರ್ಮಪ್ರಚಾರಕ್ಕೆ

ಬಂದು ನೆಲೆಸಿದರು. ೧೮೭೧ರ ಹೊತ್ತಿಗೆ ಕನ್ನಡವನ್ನು ಸಂಪೂರ್ಣವಾಗಿ ಕಲಿತು ಕನ್ನಡದ ಅನೇಕ ಪ್ರಾಚೀನ ಸಾಹಿತ್ಯ ಕೃತಿಗಳನ್ನು ಸಂಪಾದಿಸಿ (ಛಂದೋಬುಧಿ, ಶಬ್ದಮಣಿದರ್ಪಣಂ) ಮುಂದೆ ೧೮೯೬ರ ಹೊತ್ತಿಗೆ ಟುಬಿಂಗನ್ ವಿಶ್ವವಿದ್ಯಾಲಯದಿಂದ ಡಾಕ್ಟರ್ ಆಫ್ ಫಿಲಾಸಫಿ ಪಡೆದರು. ಮುಂದೆ ಜರ್ಮನ್‌ನಲ್ಲೇ ತಮ್ಮ ೭೨ನೆ ವಯಸ್ಸಿನಲ್ಲಿ ೧೯೦೩ ಡಿಸೆಂಬರ್ ೧೯ರಂದು ಕಣ್ಣು ಮುಚ್ಚಿದರು.

೧೮೭೨ರಲ್ಲಿ ಮುಂದೆ ಡಿ.ಎಲ್.ಎನ್. ಶಬ್ದಮಣಿದರ್ಪಣ ಕೃತಿಯನ್ನು ಕಿಟೆಲ್ ಸಂಪಾದಿಸಿ ಪ್ರಕಟಿಸಿದ್ದನ್ನು ಸ್ಮರಿಸಿ ಅಲ್ಲಿನ ವಿಚಾರಗಳನ್ನು ವೈಜ್ಞಾನಿಕವಾಗಿ ಪರಿಷ್ಕಾರ ರೂಪದಲ್ಲಿ ಚರ್ಚಿಸಿ ಅಧ್ಯಯನದ ವಿಸ್ತಾರತೆಗೆ ಕೈ ಹಾಕಿದವರಾಗಿದ್ದಾರೆ. ಮುಂದೆ ಕಿಟೆಲ್‌ರವರ ಇನ್ನೊಂದು ಬೃಹತ್ ಸಾಧನೆಯಾದ ಕನ್ನಡ ಇಂಗ್ಲೀಷ್ ನಿಘಂಟು ವಿಚಾರವಾಗಿ ಚರ್ಚಿಸಿ ಅಲ್ಲಿನ ಶಬ್ದಾರ್ಥ ವಿಚಾರಗಳ ಕುರಿತು ಚರ್ಚಿಸಿದ್ದು ಕಂಡುಬಂದಿದೆ. ಇಷ್ಟೆಲ್ಲಾ ಕನ್ನಡ ಸೇವೆ ಮಾಡಿದ ಕಿಟೆಲ್ ಅವರ ಕಾರ್ಯಕವನ್ನು ಪರಿಯಾಗಿ ಶ್ಲಾಘಿಸಿದ ಡಿ.ಎಲ್.ಎನ್.ರವರು ಇವರನ್ನು ಸ್ಮರಿಸುವುದು ಪವಿತ್ರವಸ್ತುವೊಂದನ್ನು ಧ್ಯಾನಿಸಿದಂತಹ ಪುಣ್ಯಕರವಾಗಿದ್ದು ಎಂದು ಅಭಿಪ್ರಾಯಿಸಿದ್ದು ಕಂಡುಬಂದಿದೆ.

**ಶ್ರೀಪ್ರಭುದೇವರ ಪುರಾಣ (ಎಳಂದೂರು ಹರೀಶ್ವರಕೃತ)**

೧೯೪೦ರಲ್ಲಿ ಪ್ರಬುದ್ಧ ಕರ್ಣಾಟಕ ಸಂಪುಟ–೧, ಸಂಚಿಕೆ–೨೨ರಲ್ಲಿ ಮೊದಲ ಬಾರಿಗೆ ಪ್ರಸ್ತಾಪವಾದ ಈ ಚರ್ಚೆಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೮೯ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಶ್ರೀ ಬುದ್ಧಯ್ಯ ಸ್ವಾಮಿ ಪುರಾಣಿಕ ಅವರು ೧೯೪೦ರ ವೇಳೆಗೆ ಅಲ್ಲಮಪ್ರಭು ದೇವರಿಗೆ ಸಂಬಂಧಿಸಿದ ಹಲವು ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ್ದರಲ್ಲಿ ಶ್ರೀ ಪ್ರಭುದೇವರ ಪುರಾಣವೂ ಒಂದಾಗಿದೆ. ಈ ಕುರಿತು ಡಿ.ಎಲ್.ಎನ್. ಅವರು ಕೃತಿಯ ಆಳಂತರವನ್ನು ಅನುಲಕ್ಷಿಸಿ ಕೃತಿಯಲ್ಲಿನ ಪ್ರಸ್ತಾವನೆ ಕಥಾ ಸಾರಾಂಶ, ಟೀಕೆ, ಶಬ್ದಕೋಶಗಳಿತ್ಯಾದಿಗಳನ್ನು ಅನುಲಕ್ಷಿಸಿ ಕೃತಿಯ ಕುರಿತು ಕೃತಿಕಾರನ ಕುರಿತು ಕೃತಿಕಾರನ ಕಾಲಮಾನದ ಕುರಿತು ಹಲವಾರು ವಿಚಾರಗಳನ್ನು ಚರ್ಚಿಸಿದ್ದು ಈ ಲೇಖನದಲ್ಲಿ ಮೂಡಿಬಂದ ಅಂಶಗಳಾಗಿವೆ.

ಮೂರು ಕೈ ಬರಹ ಹಸ್ತಪ್ರತಿಗಳಿಂದ ಸಂಕಲಿಸಿದ ಈ ಕೃತಿ ಕಠಿಣ ನಾಂದಿಪದ್ಯ ಟೀಕೆಗಳಿಂದ ಕೂಡಿದ್ದಾಗಿದ್ದು ಇದರ ಸಂಪಾದನೆ ಕಾರ್ಯಕ್ಕೆ ಡಿ.ಎಲ್.ಎನ್. ಪುರಾಣಿಕರಿಗೆ ಪ್ರಶಂಸಿಸಿದ ಅಂಶಗಳು ಇಲ್ಲಿ ಮೂಡಿಬಂದವಾಗಿವೆ.

ಶ್ರೀಪ್ರಭುದೇವರ ಚರಿತ್ರೆಗಳಲ್ಲಿ ಬೇರೆ ಬೇರೆ ರೂಪಗಳಿದ್ದು ಅವುಗಳಲ್ಲಿ ಹಂಪೆಯ ಹರೀಶ್ವರನು ಒಂದು ರೀತಿ ಹೇಳಿದರೆ, ಚಾಮರಸನು ಹೇಳಿರುವ ರೀತಿ ಒಂದಾಗಿದೆ.

ಆದರೆ ಈ ಕೃತಿಯು ಚಾಮರಸನ ಸಂಪ್ರದಾಯಕ್ಕೆ ಸೇರುವುದಾಗಿದೆ ಎಂದು ಡಿ.ಎಲ್.ಎನ್. ಕೃತಿಯಲ್ಲಿನ ಆಳವರಿತು ತಿಳಿಸಿದ್ದು ಕಂಡುಬಂದಿದೆ. ಚಾಮರಸನ ಪ್ರಭು ದೇವರ ಕಥೆಗಳೆಲ್ಲ ಎಳಂದೂರು ಹರೀಶ್ವರ ಕೃತ ಈ ಕೃತಿಯಲ್ಲಿ ಉಪಕಥೆಗಳಿದ್ದು (ಶಿವಭಕ್ತರ ಕಥೆಗಳು) ಇದರಿಂದ ಈ ಗ್ರಂಥ ಲೀಲೆಯಾಗದೆ ಪುರಾಣದ ರೂಪತಾಳಿದೆ ಎಂದು ತಿಳಿಸಿದ್ದಾರೆ.

ಪ್ರಸ್ತಾವನೆ ಭಾಗದಲ್ಲಿ ಪುರಾಣಿಕರು ಕವಿಯಕಾಲ, ಕವಿಯ ನಿಸ್ಪೃಹತೆಯ ರಸಗಳು ಕವಿಯ ಸ್ಫೂರ್ತಿ ಇವೇ ಮುಂತಾದ ವಿಷಯಗಳ ಕುರಿತು ವಿಸ್ತಾರವಾಗಿ ಚರ್ಚಿಸಿದ್ದನ್ನು ಎತ್ತಿಕೊಂಡ ಡಿ.ಎಲ್.ಎನ್. ಕವಿಚರಿತೆಕಾರರ ನಿರ್ಣಯಗಳಿಗೆ ಬದ್ಧರಾಗಿ ಈ ವಿಚಾರಗಳನ್ನು ವಿಸ್ತಾರವಾಗಿ ಚರ್ಚಿತರೂಪದಲ್ಲಿ ಮಂಡಿಸಿದ್ದಾರೆ. ಪುರಾಣಿಕರು ಉಲ್ಲೇಖಿಸಿದ (೧೬೦೬, ಕವಿಯ ಕಾಲ, ಕೃತಿರಚನೆ ಕಾಲ ೧೪೮೬) ಕವಿ, ಕೃತಿ, ಕಾಲನಿರ್ಣಯವನ್ನು ಒಪ್ಪದ ಡಿ.ಎಲ್.ಎನ್. ಹಲವಾರು ಮೂಲಗಳಿಂದ ಚರ್ಚಿಸಿ ಕ್ರಿ.ಶ. ೧೫೩೦ ಕವಿಯು ಕೃತಿಯನ್ನು ಬರೆದ ಕಾಲವೆಂದು ನಿರ್ಣಯಿಸಿ ಸ್ಪಷ್ಟ ಉತ್ತರ ನೀಡಿದ್ದು ಕಂಡುಬಂದಿದೆ.

ಒಟ್ಟಾರೆಯಾಗಿ ಕವಿ, ಕಾಲದ ವಿಷಯಗಳನ್ನು ಹೊರತುಪಡಿಸಿ ಉಳಿದಂತೆ ಪುರಾಣಿಕರ ಅಧ್ಯಯನದ ವಿಚಾರಗಳು ಯೋಗ್ಯವಾದವಾಗಿವೆ ಎಂದು ಕವಿಯ ಸ್ಫೂರ್ತಿ, ಅವನ ವೈಶಿಷ್ಟ್ಯ ಅವನ ಮೊದಲಾದ ವಿಮರ್ಶೆಗಳು ಟೀಕೆಗಳು ಗ್ರಂಥಕ್ಕೂ ಗೌರವ ತರುವಂತರಹ ಅಂಶಗಳಾಗಿವೆ ಎಂದು ಅಭಿಪ್ರಾಯಿಸಿದ್ದು ಪುರಾಣಿಕರ ಸಂಪಾದನಾ ಕಾರ್ಯಕ್ಕೆ ಮೆರುಗನ್ನು ಹೆಚ್ಚಿಸಿದ ಸಂಗತಿಗಳೆನಿಸಿವೆ.

**ಗುಣವರ್ಮಕೃತಮಪ್ಪ ಪುಷ್ಪದಂತಪುರಾಣ**

೧೯೩೪ರಲ್ಲಿ ಪ್ರಬುದ್ಧ ಕರ್ನಾಟಕದ ಸಂಪುಟ-೧, ಸಂಚಿಕೆ-೧೬ರಲ್ಲಿ ಮೊದಲ ಬಾರಿಗೆ ಮೂಡಿಬಂದ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೪೬ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಎ.ವೆಂಕಟರಾವ ಮತ್ತು ಶ್ರೀ ಮಾ.ಪಂಡಿತ ಎಚ್.ಶೇಷಯ್ಯಂಗಾರ್ ಅವರುಗಳು ಮದ್ರಾಸ್ ವಿಶ್ವವಿದ್ಯಾಲಯದ ಕನ್ನಡ ಗ್ರಂಥಮಾಲೆಯ ನಾಲ್ಕನೇ ಭಾಗವಾಗಿ ಮೊದಲ ಬಾರಿಗೆ ಪ್ರಕಟಗೊಂಡ ಈ ಕೃತಿ ಗುಣವರ್ಮಕೃತಮಪ್ಪ ಪುಷ್ಪದಂತ ಪುರಾಣವಾಗಿದೆ. ಈ ಕೃತಿಯ ವಿಮರ್ಶೆಯಾಗಿ ಡಿ.ಎಲ್.ಎನ್. ಕೆಲವು ವಿಚಾರಗಳನ್ನು ಮಂಡಿಸಿದ್ದು ಈ ಲೇಖನದ ಸಾರವಾಗಿದೆ.

ಇಲ್ಲಿ ಗುಣವರ್ಮನ ಕಾಲದ ವಿಷಯವಾಗಿ ಗ್ರಂಥಲೇಖಕನಾದ ಮದಿರಾಜನ ವಿಷಯವಾಗಿ ಇರುವ ಚರ್ಚೆ ವಿಶೇಷವೆನಿಸಿದೆ. ಎರಡನೇ ಗುಣವರ್ಮ ಕವಿ ಕಾವ್ಯವನ್ನು

ಬರೆದ ಕಾಲವನ್ನು ಸು.೧೨೩೫ ಎಂದು ಕವಿಚರಿತೆಕಾರರು, ಸುಮಾರು ೧೨೧೬ ಎಂದು ಜಿ.ವೆಂಕಟಸುಬ್ಬಯ್ಯನವರು ನೀಡಿದ ವಿಚಾರಗಳನ್ನು ಒಪ್ಪದ ಸಂಪಾದಕರು ಗುಣವರ್ಮನ ಕಾಲವನ್ನು ೧೨೨೦–೧೨೨೦ಎಂದು ಅಭಿಪ್ರಾಯಿಸಿದ್ದನ್ನು ಡಿ.ಎಲ್.ಎನ್. ಒಪ್ಪದೆ ಹಲವಾರು ಉದಾಹರಣೆಗಳ ಮೂಲಕ ಈ ವಿಚಾರವನ್ನು ಸಾಬೀತು ಪಡಿಸಿದ್ದು ಲೇಖನದುದ್ದಕ್ಕೂ ಕಾಣಬಹುದಾಗಿದೆ.

ಇದಕ್ಕೆ ಪೂರಕವಾಗಿ ಪುಷ್ಪದಂತ ಪುರಾಣವನ್ನು ಪ್ರತಿಮಾಡಿದವನು ನಲ್ಗುಂದದ ಮಾದಿರಾಜನೆಂದು ಬಾಂಬೆ ಬ್ರಾಂಚ್‌ರಾಯಲ್ ಏಷ್ಯಾಟಿಕ್ ಸೊಸೈಟಿಕ್ ಪತ್ರಿಕೆಯಲ್ಲಿ ಪ್ರಕಟವಾದ ವಿಚಾರದಿಂದ ಮಾದಿರಾಜ ಒಬ್ಬನೇ ಎಂಬ ವಿಚಾರವನ್ನು ಸಂಪಾದಕರು ನೀಡಿದನ್ನು ತಳ್ಳಿ ಹಾಕಿದ ಡಿ.ಎಲ್.ಎನ್. ಒಬ್ಬನು ಸಾಕ್ಯ ಕುಲದವನು ಇನ್ನೊಬ್ಬ ಸಾಮಾಸಿಗ ಕುಲದ ಅತ್ತಿಗೋತ್ರದವನೆಂದು ಉಲ್ಲೇಖಿಸಿ ಕವಿಚರಿತೆಕಾರರ ವಾದವನ್ನು ಎತ್ತಿಹಿಡಿದಿದ್ದಾರೆ.

ಈ ಗ್ರಂಥ ಮೂರು ಹಸ್ತಪ್ರತಿಗಳಿಂದ ಸಂಪಾದನೆ ಗೊಂಡಿದೆ ಎಂದು ಸಂಪಾದಕರ ವಿಚಾರವನ್ನು ಪರಿಷ್ಕರಿಸಿ ನಾಲ್ಕು ಪ್ರತಿಗಳ ಸಹಾಯದಿಂದ ಈ ಕೃತಿ ಸಂಪಾದನೆಗೊಂಡಿದೆ ಎಂದು ವಿವರಿಸಿದ್ದಾರೆ. ಇದರಲ್ಲಿ 'ಮದ್ರಾಸ್ ಪ್ರತಿ ಬಗ್ಗೆ ತಮಗೇನೂ ತಿಳಿಯದೆಂದೂ ಎರಡು ಪ್ರತಿಗಳು ಮೈಸೂರು ಓರಿಯಂಟಲ್ ಲೈಬ್ರರಿಗೆ ಸೇರಿದ್ದವು, ಇದರಲ್ಲಿ ಕೆ.ಎ. ೧೪೧ನೇ ನಂಬರಿನ ಕಾಗದದ ಪ್ರತಿ ಅಷ್ಟೇನೂ ಮುಖ್ಯವಲ್ಲವೆಂದು ಅದರಲ್ಲಿ ಅನೇಕ ತಪ್ಪುಗಳಿವೆ ಎಂದು ತಿಳಿಸಿದ್ದು ಕಂಡುಬಂದಿದೆ. ಇನ್ನೊಂದು ಪ್ರತಿ ಕೆ.೫೧ನೇ ಓಲೆಯ ಪ್ರತಿ ಇದು ಶುದ್ಧ ಪ್ರತಿಯಾಗಿದ್ದು ಮಿಕ್ಕ ಎಲ್ಲಾ ಪ್ರತಿಗಳಿಗಿಂತ ಹಳೆಯ ಪ್ರತಿ ಎಂದು ತಿಳಿಸಿದ್ದಾರೆ. ಇದರಲ್ಲಿ ಶಕವರ್ಷ ೧೩೫೮ ರಾಕ್ಷಸ ಸಂವತ್ಸರ ಚೈತ್ರ ಶುದ್ಧ–೩ ಬುಧವಾರವೆಂದು ಉಲ್ಲೇಖಿಸಿದ್ದನ್ನು ಪರಿಗಣಿಸಿ ಈ ಪ್ರತಿ ಹುಟ್ಟಿದ ಕಾಲ ಕ್ರಿ.ಶ. ೧೪೩೬ ಎಂದು'[೪೫] ಅಧಿಕೃತ ತೀರ್ಪು ನೀಡಿದವರಾಗಿದ್ದಾರೆ.

ಅಲ್ಲದೆ ಸಂಪಾದನೆ ವಿಚಾರವಾಗಿ ಚರ್ಚಿಸಿದ ಡಿ.ಎಲ್.ಎನ್. 'ಸಂಪಾದಕನಾದವನಿಗೆ ಎರಡು ಕಣ್ಣುಗಳಿಗಿಂತ ನಾಲ್ಕು ಕಣ್ಣು ಅವಶ್ಯಕ, ಸಂಪಾದನೆ ಕಾರ್ಯ ಸಮರ್ಪಕವಾಗಿ ಆದರ್ಶವಾಗಿ ಮಾಡುವುದು ಬಹು ಕ್ಲಿಷ್ಟ ವಿಚಾರ, ಆದರೂ ಆದಷ್ಟು ಮಟ್ಟಿಗೆ ನಡೆಯುತ್ತಿರುವ ಸಂಗತಿಯನ್ನು ಪರಿಹಾರಿಸಿದ ಡಿ.ಎಲ್.ಎನ್. ಆದಷ್ಟು ಮಟ್ಟಿಗೆ ಮೂಲಪ್ರತಿಗಳಿಂದ ಬರಬಹುದಾದಷ್ಟು ಹಾಲನ್ನು ಒಂದು ತೊಟ್ಟು ಉಳಿಯದ ಹಾಗೆ ಕರೆದುಕೊಂಡು ಅಳತೆ ಮಾಡದಂತೆ ವಿಮರ್ಶೆ ಎಂಬ ಸಕ್ಕರೆ ಇಟ್ಟು ನೊರೆಹಾಲನ್ನು ತಯಾರು ಮಾಡಬೇಕು ಆಗ ಪರಿಷ್ಕಾರ ಕಾರ್ಯ ಸೊಗಸಾಗಿ ಮೂಡಿಬರುತ್ತದೆ'[೪೬] ಎಂದಿದ್ದಾರೆ. ಈ ಕೃತಿಯ ಪರಿಷ್ಕರಣೆಯ ವಿಚಾರ ಕುರಿತು ಕೆಲವು ಸಲಹೆಗಳನ್ನು ಡಿ.ಎಲ್.ಎನ್. ಅವರು ನೀಡಿದ್ದು ಕಾಣಬಹುದಾಗಿದೆ.

೧. ಯಾವ ಯಾವ ಪದಗಳು ಎಲ್ಲೆಲ್ಲಿ ಇರಬೇಕೆಂಬ ಪರಿಷ್ಕರಣೆ ಸರಿಯಾಗಿ ನಡೆದಿಲ್ಲವಾದ್ದರಿಂದ 'ಱ' ಱ ಕುಳ ರೇಫೆಗಳ ಬಗ್ಗೆ ಚರ್ಚಿಸಿದ್ದಾರೆ. ಱ–ಕಾರ ವಿರಬೇಕಾದ ಸ್ಥಳಗಳು ೞ–ಕಾರ ಇರಬೇಕಾದ ಸ್ಥಳಗಳು, 'ಕುಳ'ವಿರಬೇಕಾದ ಪದಗಳು, ಪಾಠಾಂತರಗಳು, ಛಂದಸ್ಸಿನ ವಿಚಾರಗಳು, ಬಿಟ್ಟು ಹೋಗಿರುವ ಭಾಗಗಳು ಈ ರೀತಿಯಾಗಿ ಕ, ಗ, ಪ್ರತಿಗಳಲ್ಲಿನ ವ್ಯತ್ಯಾಸಗಳನ್ನು ಪರಿಶೀಲಿಸಿದ ಡಿ.ಎಲ್.ಎನ್. ಈ ಪಠ್ಯದಲ್ಲಿನ ಅನೇಕ ನ್ಯೂನ್ಯತೆಗಳನ್ನು ಗುರುತಿಸಿದ್ದಾರೆ.

ಈ ಪಠ್ಯವನ್ನು ಪರಿಶೀಲಿಸಿದ ಡಿ.ಎಲ್.ಎನ್. ಮುಂದೆ ಈ ಗ್ರಂಥ ಪರಿಷ್ಕರಣಾ ಮಾಡುವವರಿಗೆ ಕೆಲವು ಸಲಹೆಗಳನ್ನು ನೀಡಿದ್ದಾರೆ.

೧) 'ಕಾವ್ಯದಲ್ಲಿರುವ ಪಾತ್ರರಚನೆ, ಶೈಲಿ, ವರ್ಣನೆ ಮುಂತಾದವನ್ನು ಸವಿದು, ಅದರ ಸೊಗಸನ್ನು ತಿಳಿಸುವಂತಹ ಕಾವ್ಯ ವಿಮರ್ಶೆಯನ್ನು ಮುನ್ನುಡಿಯಲ್ಲಿ ಕೊಡಬಹುದು.

೨) ಪದಗಳನ್ನು ವಿಭಾಗ ಮಾಡುವಾಗ ಯಾವುದಾದರೊಂದು ಒಳ್ಳೆಯ ನಿಯಮವನ್ನು ಇಟ್ಟು ಕೊಳ್ಳಬಹುದು.

೩) ಈ ಪಠ್ಯದಲ್ಲಿ ಬಳಕೆಯಾದ ಅನಿರ್ದಿಷ್ಟ ವಾದ ಅರ್ಥವನ್ನು ಅಪೂರ್ವ ಪದಗಳ ಪಟ್ಟಿಯನ್ನು ಕೊಡಬಹುದಾಗಿದೆ.'[೪೭]

**ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣಂ**

೧೯೪೧ರ ಪ್ರಬುದ್ಧ ಕರ್ನಾಟಕ ಪತ್ರಿಕೆಯ ಸಂಚಿಕೆ–೨೩ ಸಂಪುಟ–೨ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ವಿಷಯ ಡಿ.ಎಲ್.ಎನ್. ತಮ್ಮ ಪೀಠಿಕೆಗಳು ಲೇಖನಗಳು ಕೃತಿಯಲ್ಲಿ ೪೭ನೇ ಭಾಗವಾಗಿ ಸಂಕಲಿಸಿದ್ದಾರೆ.

ಈ ಲೇಖನದ ವಿಷಯ ವಸ್ತುವು ಇಪ್ಪತ್ತೆರಡನೆಯ ತೀರ್ಥಂಕರನಾಥ ನೇಮಿನಾಥನ ಚರಿತ್ರೆಯನ್ನು ತಿಳಿಸುವುದಾಗಿದೆ.

ನೇಮಿನಾಥ ಪುರಾಣ ಅಥವಾ ಹರಿವಂಶ ಪುರಾಣವು ಕನ್ನಡಿಗರಿಗೆ ಬಹುಪ್ರಿಯವಾದ ವಸ್ತುವೆನಿಸಿದೆ. ಒಂದನೆಯ ಗುಣವರ್ಮ, ಕರ್ಣಪಾರ್ಯ, ನೇಮಿಚಂದ್ರ, ಬಂಧುವರ್ಮ ಇತರೆ ಕವಿಗಳು ಈ ಕಾವ್ಯ ಕೃತಿಯನ್ನು ನಿರೂಪಿಸಿದವರಾಗಿದ್ದು ಇದುವರೆಗೂ ಸಿಕ್ಕಿರುವ ಕನ್ನಡ ನೇಮಿಚರಿತ್ರೆಗಳಲ್ಲಿ ಕರ್ಣಪಾರ್ಯನ ಕಾವ್ಯ ಅತಿ ಪ್ರಾಚೀನವಾದದ್ದೆನಿಸಿದೆ. ನೇಮಿಚರಿತ್ರೆಯಲ್ಲಿ ಸಾಧಾರಣವಾಗಿ ಭಾಗವತಾಂತರ್ಗತವಾದ ಕೃಷ್ಣಚರಿತ್ರೆಯೂ, ಮಹಾಭಾರತ ಕಥೆಯೂ, ಜೈನಮತಕ್ಕನುಸಾರವಾದ ರೂಪಾಂತರವನ್ನು ಪಡೆದು ಬಂದುದಾಗಿದೆ. ಈ ರೂಪಾಂತರದ ಮೊದಲ ಪರಿಚಯವನ್ನು ಕನ್ನಡಿಗರಿಗೆ ಮಾಡಿದ್ದು ಈ ಪ್ರಸ್ತುತ ಗ್ರಂಥದ ಕಾರ್ಯವೆನಿಸಿದೆ.

ಮದ್ರಾಸ್ ವಿಶ್ವವಿದ್ಯಾಲಯವು ಮೊದಲ ಬಾರಿಗೆ ಪ್ರಕಟಿಸಿದ ಈ ಕೃತಿಯು ಎಚ್.ಶೇಷಯ್ಯಂಗಾರ್ ಅವರ ಸಂಪಾದಕತ್ವದ (ಕ.ಖ,ಗ,ಘ) ನಾಲ್ಕು ಪ್ರತಿಗಳಿಂದ ಈ ಕೃತಿ ಮೂಡಿಬಂದದ್ದಾಗಿದೆ. ಸಂಪಾದಕರ ಪರಿಶ್ರಮ ಪರಿಷ್ಕರಣಗಳಿಂದ ಸಮರ್ಪಕವಾಗಿ ಮೂಡಿಬಂದ ಈ ಕೃತಿಯು ಉತ್ತಮ ಮುನ್ನುಡಿ 'ಅ' ಕಾಣದ ಪದ್ಯ ಜೋಡಣೆ ಚಾವುಂಡರಾಯ, ನೇಮಿನಾಥ ಪುರಾಣಗಳ ಕಥಾಸಾರ, 'ಘ' ಪ್ರತಿಯ ಪಾಠಗಳು ತ್ರಿಷಷ್ಟಿಶಲಾಕಾಪುರುಷರು ಮತ್ತು ಅವರ ಪರಿಗ್ರಹಗಳು, ತೀರ್ಥಂಕರರ ಭವಾವಳಿಗಳಿಗಳು ಕಾವ್ಯಾಂತರ್ಗತವಾದ ವೃತ್ತ ಜಾತಿಗಳ ಸಂಖ್ಯೆ ಮುಂತಾದವುಗಳ ಕುರಿತು ಡಿ.ಎಲ್.ಎನ್. ಶ್ಲಾಘಿಸಿದ್ದುಂಟು ಮುನ್ನುಡಿಯಲ್ಲಿ ಕವಿಯ ವಿಷಯವಾಗಿ ಸಂಪಾದಕರ ವಾದವನ್ನು ಒಪ್ಪದ ಡಿ.ಎಲ್.ಎನ್. ಕರ್ಣಪಾರ್ಯನ ಕಾಲವು ೧೧೩೦ರಿಂದ ೧೧೩೫ ಎಂಬ ಕಾಲಮಾನ ಸಮಂಜಸವಲ್ಲವೆಂದು ಕವಿಚರಿತೆಕಾರರು, ವೆಂಕಟಸುಬ್ಬಯ್ಯನವರು ಸೂಚಿಸಿದ ೧೧೭೩–೧೧೩೪ರ ಕಾಲಮಾನವೇ ಸರಿ ಎಂದು ಉದಾಹರಣೆಗಳು ಮೂಲಕ ಪ್ರತಿಪಾದಿಸಿದ್ದು ಲೇಖನದುದ್ದಕ್ಕೂ ಕಂಡು ಬಂದಿದೆ.

ಅಲ್ಲದೇ, ಕೃತಿ ಉದ್ದಕ್ಕೂ ಹರಡಿದ ಭಿನ್ನಪಾಠಗಳು ಯಾವುವು, ಯಾವ ಪ್ರತಿಗೆ ಸೇರಿವೆ ಎಂಬುದನ್ನು ಸರಿಪಡಿಸಿ ಸೂಚಿಸಲು ಹೇಳಿದ್ದಾರೆ. ಮುಂದುವರೆದು ಕೃತಿಯಲ್ಲಿನ ಱ, ೞ 'ಕುಳ'ರೇಫಗಳು, ರೇಫವಿರಬೇಕಾದ ಪದಗಳು 'ಱ' ಕಾರ 'ೞ' ಕಾರ 'ಕುಳ' ಪಾಠಾಂತರಗಳ ಛಂದಸ್ಸು ಕುರಿತ ವಿಚಾರಗಳನ್ನು ಉದಾಹರಣೆ ಸರಿತ ಸವಿಸ್ತಾರವಾಗಿ ವಿವರಿಸಿ ಹೇಳಿದ ಡಿ.ಎಲ್.ಎನ್. ಈ ಪಠ್ಯ ಮುಂದಿನ ಪರಿಷ್ಕರಣೆಯಲ್ಲಿ ಸರಿಪಡಿಸಿಕೊಂಡರೆ ಸಂಪಾದಕರ ನಿರಂತರ ಅಭ್ಯಾಸದ ಫಲ ಸಾಹಿತ್ಯದ ಮೇಲಿನ ಪ್ರೀತಿಗೂ ಉತ್ತಮ ಕೊಡುಗೆ ನೀಡಿದಂತಾಗುತ್ತದೆ ಎಂದು ಅಭಿಪ್ರಾಯಿಸಿದ್ದು ಕಂಡುಬಂದಿದೆ.

**ಪುರಾಣಗಳ ಕಾಲ**

೧೯೪೦ರಲ್ಲಿ ಪ್ರಬುದ್ಧ ಕರ್ಣಾಟಕ ಪತ್ರಿಕೆಯ ವಸ್ತುಕೋಶ ಭಾಗದ ಸಂಚಿಕೆ–೨೧ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೮೧ನೇ ಭಾಗದಲ್ಲಿ ಮೂಡಿ ಬಂದದ್ದಾಗಿದೆ.

ಪುರಾಣಗಳು ನಮ್ಮ ನಾಡಿನ ಭಕ್ತಿಪೂರಕ ಚರಿತ್ರೆಗಳೆನಿಸಿವೆ ನಮ್ಮ ದೇಶದಲ್ಲಿ ಪ್ರಮುಖವಾಗಿ ೧೮ ಪುರಾಣಗಳಿವೆ ಎಂದು ಪ್ರತೀತಿ ಇದೆ. ಈ ೧೮ ಪುರಾಣಗಳಿಗೆ ಉಪಪುರಾಣಗಳಾಗಿ ಸಾವಿರಾರು ರೂಪಗಳು ನಾಡಿನೆಲ್ಲಡೆ ಹರಡಿಕೊಂಡಿದ್ದುಂಟು ಈ ವಿಚಾರವಾಗಿ ಡಿ.ಎಲ್.ಎನ್. ಅವರು ತಮ್ಮ ಈ ಲೇಖನದಲ್ಲಿ ಪುರಾಣಗಳ ವಿಚಾರವಾಗಿ ಕೆಲವು ವಿಚಾರಗಳನ್ನು ಇಲ್ಲಿ ಹರವಿದ್ದನ್ನು ಕಂಡು ಬಂದಿದೆ.

ಪುರಾಣ ಎಂಬ ಜಾತಿಗೆ ಸೇರಿದ ಗ್ರಂಥಗಳು ಬಹಳ ಪ್ರಾಚೀನ ಕಾಲದಿಂದಲೂ ಇದ್ದಿದನ್ನು ಕೆಲವು ಆಧಾರಗಳ ಮೂಲಕ ಡಿ.ಎಲ್.ಎನ್. ಸ್ಪಷ್ಟೀಕರಿಸಿದ್ದನ್ನು ಇಲ್ಲಿ ನೋಡಬಹುದಾಗಿದೆ.

೧) 'ಕ್ರಿ.ಪೂ. ೪ನೇ ಶತಮಾನದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಪುರಾಣಗಳನ್ನು ಇತಿಹಾಸದೊಂದಿಗೆ ಸೇರಿಸಿ ಹೇಳಿದ ಉಲ್ಲೇಖ ಕಂಡುಬಂದಿದೆ.

೨) ಕ್ರಿ.ಶ. ೩ನೇ ಶತಮಾನದ 'ಮಿಲಿಂದಪನ್ಹ' ಎಂಬ ಬೌದ್ಧ ಗ್ರಂಥದಲ್ಲಿ ಪುರಾಣಗಳಿದ್ದುವೆಂದು ಹೇಳಿದೆ.

೩) ಕ್ರಿ.ಶ. ೭ನೇ ಶತಮಾನದಲ್ಲಿದ್ದ ಬಾಣಭಟ್ಟನು 'ಪವನೋಕ್ತ ಪುರಾಣ' ಎಂಬೊಂದು ಪುರಾಣದ ಹೆಸರನ್ನು ಹೇಳಿದ್ದಾನೆ.

೪) ಕ್ರಿ.ಶ. ೧೦೨೦ ರಲ್ಲಿದ್ದ ಅಲ್ಬೇರೂನಿ ಎಂಬಾತನು ೧೮ ಪುರಾಣಗಳ ಹೆಸರನ್ನು ಉಲ್ಲೇಖಿಸಿದ್ದು ಕಂಡುಬಂದಿದೆ.'[೪೮]

ಈ ಕಾರಣಗಳಿಂದ ಡಿ.ಎಲ್.ಎನ್. 'ಪುರಾಣ' ಎಂಬುದು ಇತಿಹಾಸ ಪೂರ್ವಯುಗದಲ್ಲಿಯೂ ಇದ್ದಿತ್ತೆಂದು ನಿರ್ಣಯಿಸಬಹುದು ಹಾಗೆಯೇ ಮೊದಲು ಒಂದೇ ಪುರಾಣವಿದ್ದು ಕಾಲಕ್ರಮದಲ್ಲಿ ಹಲವು ಪುರಾಣಗಳು ಹುಟ್ಟಿರಬಹುದೆಂದು ಅಭಿಪ್ರಾಯಿಸಿದ್ದಾರೆ. ಹಾಗೆಯೇ ವಾಯುಪುರಾಣದಲ್ಲಿ ಗುಪ್ತರಾಜರ ವಿಷಯ, ಭವಿಷ್ಯ ಪುರಾಣದಲ್ಲಿ ಕೃಷ್ಣಭಕ್ತನಾದ ಸೂರದಾಸನ ಸ್ಮರಣೆ, ವರಹಾ, ಸ್ಕಂದ, ಕೂರ್ಮ ಪುರಾಣ, ಸತ್ಯನಾರಾಯಣ ಕಥೆ ಈಗೆ ಪುರಾಣ ಸಾಹಿತ್ಯ ಅನೇಕ ಪ್ರಕ್ಷಿಪ್ತ ಭಾಗಗಳಿರುವುವೆಂಬ ನಂಬಿಕೆ ಸಮಾಜದಲ್ಲಿ ಬಲವಾಗಿ ಮೂಡಿ ಬಂದಿದೆ ಎಂದು ಅವರ ಲೇಖನದಿಂದ ತಿಳಿಯಬಹುದಾದ ಮುಖ್ಯ ಅಂಶವೆನಿಸಿದೆ.

**ಲಿಂಗಾರ್ಚನೆ ಲಿಂಗಾಧಾರಣೆ**

೧೯೩೫ರಲ್ಲಿ ಜಯಕರ್ನಾಟಕ ಪತ್ರಿಕೆಯ ಮಾರ್ಚ್ ಸಂಚಿಕೆಯಲ್ಲಿ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೮೨ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಪುರಾತನ ಕಾಲದಿಂದಲೂ ನಮ್ಮ ಸಮಾಜದಲ್ಲಿ ಲಿಂಗಾರ್ಚನೆ, ಲಿಂಗಾಧಾರಣೆ ಪದ್ಧತಿಗಳು ಯಾವಾಗಿನಿಂದ ಮೂಡಿಬಂದವು ಎಂಬ ವಿಚಾರವನ್ನು ನಿಖರವಾಗಿ ಹೇಳಿಕ್ಕಾಗದು. ಆದರೆ ಸಿಂಧೂ ತೀರದ ಸಂಸ್ಕೃತಿಯ ವಿಚಾರಗಳು ಬೆಳಕಿಗೆ ಬಂದಾಗಿನಿಂದ ಅಲ್ಲಿನ ವಿಚಾರಗಳಲ್ಲಿ ಒಂದಾಗಿ ಲಿಂಗಪೂಜೆಗೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಡಿ.ಎಲ್.ಎನ್. ಲೇಖನದಲ್ಲಿ ನಿರೂಪಿಸಿದ್ದು ಕಂಡುಬಂದು, ಯೋನಿ ರೂಪವಾಗಿಯೂ,

ಲಿಂಗಾಕಾರವಾಗಿಯೂ ಇರುವ ಕೆಲವು ಪ್ರಾಚೀನ ವಸ್ತು ವಿಶೇಷಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಈ ಪ್ರಸ್ತಾಪ ನಿಜವಾಗಿದ್ದೆ ಆದರೆ ಕ್ರಿ.ಪೂ. ೨೦೦೦ ವರ್ಷಗಳ ಹಿಂದೆಯೇ ಲಿಂಗಪೂಜೆ ಇದ್ದಿತ್ತೆಂದು ಹೇಳಬಹುದಾಗಿದೆ. ಅಲ್ಲದೆ ಮಹಾಭಾರತದ ಶಾಸನಿಕ ಪರ್ವದಲ್ಲಿ ಲಿಂಗವನ್ನು ಪೂಜಿಸುವ ಕುರಿತು ಹೇಳಿದ್ದು ಇದಕ್ಕಿಂತ ಪೂರ್ವ ಈ ಪ್ರಸ್ತಾಪ ಎಲ್ಲಿಯೂ ಕಂಡುಬಂದಿಲ್ಲದ್ದಾಗಿದೆ.

ವೇದಕಾಲದಲ್ಲಿ ಆರ್ಯರು ರುದ್ರ, ಶಿವನನ್ನು ಲಿಂಗರೂಪದಲ್ಲಿ ಪೂಜಿಸುತ್ತಿದ್ದರೆಂದು ತಿಳಿಯುವುದು ಕಷ್ಟ ಆದರೆ, ಒಂದು ಬಗೆಯ ಲಿಂಗಪೂಜೆ ಪ್ರಾಚೀನ ಫೆನಿಷಿಯ, ಈಜಿಪ್ಟ್, ಫ್ರಿಜಿಯ ಮತ್ತು ಗ್ರೀಸ್ ದೇಶಗಳಲ್ಲಿ ಇದ್ದಿತ್ತೆಂದು 'ಹರ್ಟಲ್ ಪಾಲಿಷ್ಮಾ' ಎಂಬುವವರು ತಮ್ಮ ಕೃತಿಯಲ್ಲಿ ಉಲ್ಲೇಖಿಸಿರುವುದುಂಟು. ಆರ್ಯರು ಭಾರತಕ್ಕೆ ಬರುವ ಮುಂಚೆ ನಮ್ಮ ಪ್ರಾಚೀನ ಬುಡಕಟ್ಟುಗಳಲ್ಲಿ ಲಿಂಗಾರ್ಚನೆ ಪದ್ಧತಿ ಇದ್ದಿದ್ದು ಕಾಲಕ್ರಮೇಣ ಇದು ಬದಲಾಗಿ ಬಂದಿರಬಹುದು, ಆದರೆ ನಿಖರವಾಗಿ ವೇದ-ಉಪನಿಷತ್ತು-ಗೃಹ್ಯ ಸೂತ್ರಗಳಲ್ಲಾಗಲೀ ಲಿಂಗಪೂಜೆಯ ವಿಚಾರಗಳು ಮೂಡಿಬಂದಿಲ್ಲ ಎಂಬುದು ಡಿ.ಎಲ್.ಎನ್. ಅವರ ಅಭಿಪ್ರಾಯ.

ಕಾಲಕ್ರಮೇಣ ವಿಗ್ರಹಾರಾಧನೆಯು ನೆಲೆಗೊಂಡು ಬಂದಿದ್ದನು ಪತಂಜಲಿಯ ಕಾಲದಲ್ಲಿ 'ಶಿವಭಾಗವತರೆಂಬ' ಒಂದು ಶೈವಪಂಗಡದವರು 'ಕಬ್ಬಿಣದ ಈಟಿ'ಯಂತಹ ಒಂದು ಆಯುಧವನ್ನು ಪೂಜಿಸುತ್ತಿದ್ದ ತಿಳಿದು ಬಂದಿದೆ. ಹಾಗೆಯೇ ಕ್ರಿ.ಶ. ೨ನೇಯ ಶತಮಾನದಲ್ಲಿದ್ದ 'ವೇಮ ಕಾಡ್‌ಫೀಸಿಸ್' ಎಂದು ದೊರೆ ತನ್ನ ನಾಣ್ಯಗಳ ಮೇಲೆ ತ್ರಿಶೂಲ ಹಸ್ತವಾದ ಮನುಷ್ಯ ರೂಪ ಶಿವನ ವಿಗ್ರಹವನ್ನು ಚಿತ್ರಿಸಿದ್ದನೆಂದು ತಿಳಿದುಬಂದಿದೆ. ಆದುದರಿಂದ ಲಿಂಗಪೂಜೆಯ ವಿಚಾರವನ್ನು ಬಲಿಷ್ಠವಾಗಿ ನಿರೂಪಿಸುವ ಪದ್ಧತಿ ಡಿ.ಎಲ್.ಎನ್. ಮಾಡಿದ್ದಾರೆ. ಶೈವರ ಲಿಂಗ ಪೂಜೆಯು, ವೈಷ್ಣವರ ಸಾಲಿಗ್ರಾಮ ಪೂಜೆಯನ್ನು ಬಹುಮಟ್ಟಿಗೆ ಹೋಲಿಸುವುದು ಸಾಲಿಗ್ರಾಮವನ್ನು 'ವೈಷ್ಣವಲಿಂಗ' ಎಂದು ಕರೆಯುವ ಸಂಪ್ರದಾಯವಿದೆ.

ಲಿಂಗಾಧಾರಣೆ ಪದ್ಧತಿಯು ಲಿಂಗಾರ್ಚನೆಯಷ್ಟು ಪ್ರಾಚೀನವಾದದ್ದಲ್ಲವಾದರೂ ಬಸವಣ್ಣನಿಗಿಂತ ಪೂರ್ವದಲ್ಲೇ ಇದ್ದಿತ್ತೆಂದು ತೋರಿದೆ. ಈ ವಿಚಾರದ ಪ್ರಸ್ತಾಪವು ಮೊದಲಿಗೆ ಸಿದ್ಧಾಂತ ಶಿಖಾಮಣಿಯ ಆರನೇಯ ಪರಿಚ್ಛೇದದಲ್ಲಿ ಉಲ್ಲೇಖಗೊಂಡಿದ್ದು ಇದರಲ್ಲಿ ಲಿಂಗಗಳಿಗೆ ಆರು ವಿಧವಾದ ಹೆಸರುಗಳನ್ನು ಉಲ್ಲೇಖಿಸಿದೆ, ೧) ಸ್ಪಟಿಕಲಿಂಗ, ೨) ಶೈಲಜಲಿಂಗ, ೩) ಚಂದ್ರಕಾಂತಮಯಲಿಂಗ ೪) ಬಾಣಲಿಂಗ ೫) ಸೂರ್ಯಕಾಂತಲಿಂಗ ೬) ಇಷ್ಟಲಿಂಗವೆಂದು ತಿಳಿದು ಬಂದಿದೆ. ಈ ಆರರಲ್ಲಿ ಯಾವುದಾರೊಂದು ಲಿಂಗವನ್ನು ಪತ್ರೆ, ಪುಷ್ಪಾದಿಗಳಿಂದ ಪೂಜಿಸಿ ಮಂತ್ರ ಪೂರಿತವನ್ನಾಗಿ ಮಾಡಿ ಶೈವವಿಕಲೆಯನ್ನು ಅದರಲ್ಲಿ ಆಹ್ವಾನಿಸಿ ಗುರುಶಿಷ್ಯನ ಹಸ್ತವನ್ನು ಇದರಲ್ಲಿರಿಸಿ ಇದನ್ನು ಪ್ರಾಣದ ಹಾಗೆ ಧರಿಸುವುದರಿಂದ ಪ್ರಾಣಲಿಂಗವೆಂದು ಹೆಸರು ಬರುತ್ತದೆ. ಲಿಂಗಧಾರಣೆಯಲ್ಲಿ ಬಾಹ್ಯ,

ಅಭ್ಯಂತರವೆಂದು ಎರಡು ವಿಧಗಳಿವೆ. ಇಷ್ಟಲಿಂಗ ಸ್ಥೂಲವಾದ್ದಾದರೇ, ಪ್ರಾಣಲಿಂಗ ಸೂಕ್ಷ್ಮವೂ ಅಂತರ್ಭಾವ ನಾಮವೂ ಆದದ್ದಾಗಿದೆ. ಇದಕ್ಕಿಂತಲೂ ಸೂಕ್ಷ್ಮವೆನಿಸಿದ್ದು ಪರಾತ್ಪರಲಿಂಗ ಎಂದು ಡಿ.ಎಲ್.ಎನ್. ಲಿಂಗಾರ್ಚನೆ, ಲಿಂಗಾಧಾರಣೆ ವಿಚಾರವಾಗಿ ಪರಿಯಾಗಿ ವಿವರಿಸಿದ್ದು ಕಂಡುಬಂದಿದೆ.

'ಲಿಂಗಿ' ಎಂಬ ಪದವು ಲಿಂಗಾಧಾರಿಗಳನ್ನು ನಿರ್ದೇಶಿಸುತ್ತಿದ್ದು, ಮಹಾಭಾರತದ ೨೨ನೇ ಅಧ್ಯಾಯದಲ್ಲಿ 'ಲಿಂಗಿನಂ' ಎಂಬ ಉಲ್ಲೇಖ, ಜಿನಸೇನನ ಮಹಾಪುರಾಣದಲ್ಲಿನ ೪೧ನೇ ಅಧ್ಯಾಯದಲ್ಲಿನ 'ಕುಲಿಂಗಿನಃ' ಎಂಬ ಉಲ್ಲೇಖ ಪಂಪನ ಆದಿಪುರಾಣದಲ್ಲಿನ ಉಲ್ಲೇಖ 'ಕುಲಿಂಗಿಗಳ' ವೊಡ್ಡಾರಾಧನೆಯಲ್ಲಿನ ಉಲ್ಲೇಖ 'ಪೊಲ್ಲಲಿಂಗನಳಪೆರ್ಚಕ' ಎಂಬ ವಿಚಾರಗಳನ್ನು ನೋಡುವುದರಿಂದ 'ಲಿಂಗಿ' ಎಂಬ ಶಬ್ದಕ್ಕೆ 'ಲಿಂಗಾಧಾರಿ' ಎಂಬ ಅರ್ಥವಿರುವ ಹಾಗೆ ಕಂಡದ್ದು ಇದು ಸರಿ ಇದ್ದ ಪಕ್ಷದಲ್ಲಿ ಜೈನರು 'ಲಿಂಗಿ'ಗಳನ್ನು ಕಡೆಗಣಿಸಿ ನೋಡುತ್ತಿದ್ದರೆಂದು ಬಸವಣ್ಣನಿಗಿಂತ ಹಿಂದೆಯೇ ಲಿಂಗಾಧರಾಣೆ ಇತ್ತೆಂದು ಕಾಣಬಹುದಾಗಿದೆ. ಅಲ್ಲದೆ ಪರ್ಯಾಶನರ ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನ ಬರೆದಿರುವ ಶ್ರೀಪತಿ ಪಂಡಿತರು (ಸು.೧೧೬೦) ಲಿಂಗಾಧಾರಣೆ ವೇದಸಮ್ಮತವಾದದ್ದು ಎಂದು ತಮ್ಮ ಕೃತಿಯಲ್ಲಿ ಉಲ್ಲೇಖಿಸಿ ಪಾಶುಪತರು ಲಿಂಗಾಧಾರಿಗಳೆಂದು ಸ್ಪಷ್ಟವಾಗಿ ಹೇಳಿದ್ದನ್ನು ಡಿ.ಎಲ್.ಎನ್. ಉದಾಹರಣೆ ಸಹಿತ ಲೇಖನದಲ್ಲಿ ಸವಿಸ್ತಾರವಾಗಿ ವಿವರಿಸಿದ್ದುಂಟು. ಅಲ್ಲದೆ, ಈ ಮತದ ಮುಖ್ಯ ಶಾಖೆಯಾದ ಕಾಳಾಮುಖರಲ್ಲಿಯೂ ಲಿಂಗಾಧಾರಣೆ ಇದ್ದಿರಬೇಕು ಆಗೂ ಕಾಳಾಮುಖ ಗುರುಗಳಿಗೆ ಆರಾಧ್ಯರೆಂದು ಕರೆಯುವ ವಾಡಿಕೆ ಹಿಂದೆ ಇತ್ತೆಂದು ತೋರಿದೆ. ಬಸವಣ್ಣನವರು ಈ ಆರಾಧ್ಯ ಕುಲದಲ್ಲಿಯೇ ಜನಿಸಿ ಆ ಮತದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದ್ದಾರೆಂದು ತೋರಿದೆ. ಆದ್ದರಿಂದ ಲಿಂಗಾಧಾರಣೆ ಬಸವಣ್ಣನ ಹಿಂದಿನಿಂದಲೂ ಬಂದ ಸಂಪ್ರದಾಯವೆಂದು ಡಿ.ಎಲ್.ಎನ್. ತಮ್ಮ ವಿಸ್ತಾರವಾದ ಅಭ್ಯಾಸದಿಂದ ಎಳೆ ಎಳೆಯಾಗಿ ಬಿಚ್ಚಿ ತೋರಿಸಿದ್ದು ಈ ಲೇಖನದ ಉದ್ಧೃತಭಾಗವೆನಿಸೆದೆ.

### ೫.೩. ಛಂದೋಶೋಧಗಳು

ಕನ್ನಡ ವಿದ್ವತ್ ವಲಯದಲ್ಲಿ ಭಾಷಾಶಾಸ್ತ್ರಗಳ ಅಧ್ಯಯನ ನಡೆದಂತೆ, ಛಂದಸ್ಸಿನ. ಅಧ್ಯಯನಗಳು, ನಡೆದ್ದು ತುಂಬಾ ವಿರಳವೆನಿಸಿದೆ. ಇದಕ್ಕೆ ಕಾರಣವೆಂಬಂತೆ ಛಂದಸ್ಸಿನ, ಮಾತ್ರೆ, ಗಣ ಚರಣ, ಇವುಗಳ ಲೆಕ್ಕಾಚಾರದ ವಿಷಯ ಎಂದು ತಿಳಿದಿರುವುದು ಮತ್ತು ಕಾವ್ಯದ ಭಾಷೆ, ಶೈಲಿ, ಅರ್ಥಗಳೊಂದಿಗೆ ಛಂದಸ್ಸಿನ ಸಾವಯುವ ಸಂಬಂಧದ ಬಗ್ಗೆ ಸ್ಪಷ್ಟತೆ ಇಲ್ಲದಿರುವುದು ಹಾಗೂ ಇವುಗಳಿಂದ ಮುಕ್ತರಾದವರು ಮಾತ್ರ ಕಾವ್ಯಾಧ್ಯಯನಕ್ಕೆ ಛಂದಸ್ಸಿನ ಅಗತ್ಯತೆ ಹಾಗೂ ಆ ಕ್ಷೇತ್ರದ ಬೆಳೆವಣಿಗೆಗೆ ನ್ಯಾಯ ಒದಗಿಸಬಲ್ಲವರಾಗಿದ್ದಾರೆ, ಇದು ಪ್ರಸ್ತುತ ಕಾಲಘಟ್ಟಕ್ಕೆ ಹೊರತಾಗಿಲ್ಲದ ಮಾತಾಗಿದೆ.

ಹಳಗನ್ನಡ ಸಾಹಿತ್ಯ ಅಧ್ಯಯನ ಪ್ರಕಾರಗಳಲ್ಲೊಂದಾದ ಛಂದಸ್ಸಿನ ಶೋಧನೆ ಮತ್ತು ಬೆಳವಣಿಗೆಗಳಲ್ಲಿ ಬಹುವಾಗಿ ಆಸಕ್ತಿ ವಹಿಸಿದ್ದವರಲ್ಲಿ ಡಿ.ಎಲ್.ಎನ್. ಅವರು ಒಬ್ಬರಾಗಿದ್ದಾರೆ. ಕಾವ್ಯದ ಅರ್ಥದ ಅಭಿವ್ಯಕ್ತಿಗೆ ಛಂದೋಲಯ ಹೇಗೆ ನೇರವಾಗುತ್ತದೆ ಎಂಬುದರ ಬಗ್ಗೆ ಅವರು ಒತ್ತುಕೊಟ್ಟಿರುವುದು ಇದರಿಂದ ಕಾವ್ಯ ಮತ್ತು ಛಂದಸ್ಸುಗಳ ಸಂಬಂಧ ಹೆಚ್ಚು ನಿಕಟವಾಗಿರುವುದೆಂದು ಇವರ ಅಧ್ಯಯನ ಪ್ರಕಾರಗಳಿಂದ ಸ್ಪಷ್ಟವೆನಿಸಿದೆ ಇವರು ಛಂದಸ್ಸಿನ ಕುರಿತು ಪ್ರಸ್ತಾಪಿಸಿದ ಈ ನಾಲ್ಕು ಸಂಪ್ರಬಂಧಗಳು ವಿಧವಾಗಿ ಬಗೆಗೊಂಡು ಇವು ಪೀಠಿಕೆಗಳು ಲೇಖನಗಳು ಕೃತಿಯಲ್ಲಿ ಸಂಕಲಿತಗೊಂಡಿದ್ದು ಕಂಡುಬಂದಿದೆ.

ಪ್ರಾಚೀನ ಸಾಹಿತ್ಯ ಕೃತಿಗಳನ್ನು ಇಟ್ಟುಕೊಂಡು ವಿವಿಧ ನೆಲೆಯಲ್ಲಿ ಅಧ್ಯಯನ ನಡೆಸುವ ರೂಪಗಳಲ್ಲೊಂದಾದ ಛಂದಸ್ಸಿನ ಬಲವರ್ಧನೆಗಾಗಿ ನಿರಂತರವಾಗಿ ದುಡಿದ ವಿದ್ವಾಂಸರಲ್ಲೊಬ್ಬರು ಡಿ.ಎಲ್.ಎನ್. ಪ್ರಾಚೀನ ಶಾಸನ-ಕಾವ್ಯಗಳಲ್ಲಿ ಬಳಕೆಯಾಗಿರುವ ಹಲವು ಛಂದೋರೂಪಗಳನ್ನು ಪ್ರಥಮ ಬಾರಿಗೆ ಶೋಧಿಸಿದ ಹೆಗ್ಗಳಿಕೆ ಇವರಿಗೆ ಸಲ್ಲುವಂತದ್ದಾಗಿದೆ. ಛಂದಸ್ಸಿನ ಕುರಿತು ಇವರ ನಾಲ್ಕು ಮೌಲಿಕವಾದ ಲೇಖನಗಳು ಇಂದಿಗೂ ತಮ್ಮ ಪ್ರಾಮುಖ್ಯತೆಯನ್ನು ಉಳಿಸಿ, ಬೆಳಿಸಿಕೊಂಡು ಬಂದವುವಾಗಿವೆ.

**ತೋಮರ ರಗಳೆ**

ಈ ಕುರಿತು ಡಿ.ಎಲ್.ಎನ್. ಅವರು ಪ್ರಬುದ್ಧ ಕರ್ನಾಟಕ ಸಂಪುಟ ೩೪-ಸಂಚಿಕೆ-೧ರಲ್ಲಿ ಮೊದಲ ಬಾರಿಗೆ ಪ್ರಸ್ತಾಪಿಸಿದ್ದು ಕಂಡು ಬಂದಿದೆ ಮುಂದೆ ತಮ್ಮ ಸಂಕಲಿತ ಬೃಹತ್ ಸಂಶೋಧನಾ ಲೇಖನಗಳ ಗ್ರಂಥವಾದ ಪೀಠಿಕೆಗಳು ಲೇಖನಗಳು ಕೃತಿಯ ೪೧ನೇ ಭಾಗದಲ್ಲಿ ಈ ಲೇಖನ ಮೂಡಿಬಂದದ್ದಾಗಿದೆ.

ಡಿ.ಎಲ್.ಎನ್. ಅವರು ವಿವರಿಸುವಂತೆ 'ತೋಮರ ರಗಳೆ' ಎಂಬ ಹೆಸರಿನ ಒಂದು ರಗಳೆ, ಸೌತ್ ಇಂದೆಯನ್ ಇನ್‌ಸ್ಕ್ರಿಪ್ಟ್ ವ್ಯಾಲ್ಯುಮ್೧x೧ ಭಾಗI ಎಂಬ ಗ್ರಂಥದ ೧೧೭ನೇಯ ಶಾಸನದಲ್ಲಿ ಮೊದಲು ದೊರೆಯುತ್ತದೆ ಎಂದು ಉಲ್ಲೇಖಿಸಿದ್ದಾರೆ. ಕ್ರಿ.ಶ. ೧೦೫೫ರಲ್ಲಿ ರಚಿತವಾದ ಈ ಶಾಸನ. ಕೋಗಳಿನಾಡಿನ (ಇಂದಿನ ಬಾಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ) ಇಂದ್ರಕೀರ್ತಿ ಮುನೀಂದ್ರನೆಂಬ ಜೈನಯತಿಯ ಪ್ರಶಂಸೆಯ ವೃತ್ತಗಳಿಂದ ಆರಂಭವಾಗಿ 'ತೋಮರ ರಗಳೆ'ಯಿಂದ ಮುಗಿಯುತ್ತದೆ ಎಂದು ಉಲ್ಲೇಖಿಸಿ ಶಾಸನದ ೧೬-೩೪ನೇ ಸಾಲಿನಲ್ಲಿ ಈ ರಗಳೆ ಅಡಕವಾಗಿದೆ'[೪೯] ಎಂದು ಅಭಿಪ್ರಾಯಿಸಿದ್ದಾರೆ.

ಇದು ಲಲಿತ ರಗಳೆಯ ಲಕ್ಷಣಕ್ಕನುಸಾರವಾಗಿದ್ದು ಪ್ರತಿಪಾದದ ಮಾತ್ರೆಗಳ ನಾಲ್ಕು ಗಣಗಳೂ, ಎರಡೆರಡು ಪಾದಗಳಲ್ಲಿ ಆದಿ, ಅಂತ್ಯ ಪ್ರಾಸಗಳು ಇವೆ ಎಂದು ಹೇಳಿದ್ದಾರೆ. ಮುಂದುವರೆದು ಶಾಸನದಲ್ಲಿ ಲಲಿತ ರಗಳೆಯ ಬದಲಿಗೆ ತೋಮರ ರಗಳೆ ಎಂದು ಕರೆದ

ಉದ್ದೇಶವೇನಿರಬಹುದೆಂಬ ಪ್ರಶ್ನೆ ಹಾಕಿ ಆ ಕಾಲದಲ್ಲಿ ಲಲಿತರಗಳೆ ಎಂಬ ಪದ್ಯಜಾತಿಯ ಹೆಸರಲಿಕ್ಕಿಲ್ಲ ಎಂದು ಚಿಂತಿಸಿ ತೋಮರ ರಗಳೆಯ ಅಸ್ತಿತ್ವದ ಬಗ್ಗೆ ಚಿಂತಿಸಿದ್ದಾರೆ.

ಈ ರಗಳೆ ೫ ಮಾತ್ರೆಗಳ ೪ ಗಣಗಳಿರುವ ಎರಡೆರಡು ಪಾದಗಳಿಂದ ಕೂಡಿದ್ದು ಆದಿ ಮತ್ತು ಅಂತ್ಯ ಪ್ರಾಸಗಳಿಂದ ಕೂಡಿದ ಸ್ಥೂಲವಾದ ಲಲಿತ ರಗಳೆಯ ವಿನ್ಯಾಸದಲ್ಲಿದೆ ಎಂದು ಅಭಿಪ್ರಾಯಿಸಿದ್ದನ್ನು ಕುರಿತು ಚರ್ಚಿಸುತ್ತಾ ಛಂದೋಗ್ರಂಥಗಳಲ್ಲಿ ರಗಳೆ ಪ್ರಕಾರ, ೩,೪,೫ ಇತ್ಯಾದಿ ಮಾತ್ರಾ ಗಣಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಡಲಾಗಿದೆ 'ಶಾಸನೋಕ್ತ, ತೋಮರ ರಗಳೆ ೫ ಗಣಗಳಿಂದ ಕೂಡಿದ್ದು, 'ತೋಮರ' ಎಂಬ ಹೆಸರು ಲಭಿಸಿದ್ದರ ಹಿನ್ನೆಲೆಯನ್ನು ವಿರಹಾಂತನ ವೃತ್ತಿ ಜಾತಿ, ಸಮುಚ್ಚಯದಲ್ಲಿನ ಪಂಚಲಲಶದ ನಾಮಾಂತರಗಳಾದ ಅಸ್ತಿ, ಅಶ್ವಿನಿ, ತೋಮರ, ಕನಕ, ಕರಪಾಲ, ಕ್ಷುರಪ್ರಭಾಣ, ಬಾಣಾಸನ, ಧನಸ್, ಇತ್ಯಾದಿ ಆಯುಧ ಪ್ರಕಾರಗಳ ನಾಲ್ಕು ಹೆಸರುಗಳು ಪಂಚಮಾತ್ರ ಗಣ ನಿರ್ದೇಶನಕ್ಕೆ ಪ್ರಯೋಗಗೊಂಡಿರುವುದನ್ನು ತಿಳಿಸಿ 'ತೋಮರ' ಎಂಬುದಕ್ಕೆ ಪಂಚ ರಗಳೆ ಪ್ರಕಾರಕ್ಕೆ'[೫೦] ತೋಮರ ರಗಳೆ ಎಂದು ಕರೆದಿದ್ದಾರೆ 'ತೋಮರ' ಎಂಬುದು ಒಂದು ವಾದ್ಯ ಪ್ರಕಾರವೆಂಬುದರ ಕಡೆಗೆ ವಿದ್ವಾಂಸರ ಗಮನವನ್ನು ಸೆಳೆದವರಲ್ಲಿ ಡಿ.ಎಲ್.ಎನ್. ಮೊದಲಿಗರಾಗಿದ್ದಾರೆ.

**ದವಳವೆಂಬ ಹಾಡಿನ ಸ್ವರೂಪ**

ಪಂಜೆಮಂಗೇಶರಾಯ ನೆನಪಿಗಾಗಿ ೧೯೫೨ರಲ್ಲಿ ರಚಿತ ಈ ಲೇಖನ ಪೀಠಿಕೆಗಳು ಲೇಖನಗಳು ಎಂಬ ಸಂಶೋಧನಾ ವಿದ್ವತ್ ಗ್ರಂಥ ಭಾಗದ ೪೨ನೇ ರೂಪವಾಗಿ ಬಿತ್ತರಗೊಂಡದ್ದಾಗಿದೆ.

ಡಿ.ಎಲ್.ಎನ್. ಅವರು 'ದವಳ' ಎಂದರೆ ಮದುವೆ, ಮುಂತಾದ ಮಂಗಳ ಕಾರ್ಯಗಳ ಸಮಯದಲ್ಲಿ ಹೇಳುವ ಒಂದು ಬಗೆಯ ಹಾಡು ಎಂದು ಅಭಿಪ್ರಾಯಿಸಿ ಈ ಜಾತಿಯ ಹಾಡುಗಳು ೧೦ನೇ ಶತಮಾನದ ಕನ್ನಡ ಜನಮಾನಸದಲ್ಲಿ ಪ್ರಚಲಿತದಲ್ಲಿ ವೆಂದು ರನ್ನನ ಗದಾಯುದ್ಧ ಕಾವ್ಯದಲ್ಲಿ ಉಲ್ಲೇಖಿತಗೊಂಡ ಬಂದು ಪ್ರಸಂಗದೊಂದಿಗೆ ಈ ಲೇಖನವನ್ನು ಹೆಚ್ಚು ಪುಷ್ಠೀಕರಿಸಿ ವಿವರಿಸಲೂ ಪ್ರಯತ್ನಿಸಿದ್ದಾರೆ.

**'ಧವಳ ಗಜೇಂದ್ರಮುಂ ಧವಳ ಚಾಮರಮುಂ। ಧವಳಾತ ಪತ್ರಮುಂ**
**ಧವಳ ವಿಲೋಚನೋತ್ಪಲ ವಧೂಜನಮುಂ ಬೆರಸಷ್ಟ ಕ್ತಟಂ**
**ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪಕಾ'[೫೧]**

ಎಂದು ರನ್ನನ ಗದಾಯುದ್ಧ ಪ್ರಸಂಗನೀಯ ಪದ್ಯವನ್ನು ನಿದರ್ಶನವಾಗಿಕೊಟ್ಟು ಇದರ ಸ್ವರೂಪವನ್ನು ವಿವರಿಸಲು ಮುಂದಾಗಿದ್ದಾರೆ. ಮದ್ರಾಸ್ ಓರಿಯಂಟಲ್ ಲೈಬ್ರರಿಯಲ್ಲಿ ದೊರೆತ ದವಳದ ರೂಪಗಳನ್ನು ಸಂಗ್ರಹಿಸಿದ ಡಿ.ಎಲ್.ಎನ್. ಅಭ್ಯಾಸಕ್ಕೆ ಮುಂದಾದಾಗ

ಇವು ಯಾರಿಂದ? ಎಲ್ಲಿಂದ ರಚಿತವಾಗಿ ಬಂದುವೆಂಬುದಕ್ಕೆ ಯಾವ ಗ್ರಂಥಸ್ಥ ಅಧಾರವೂ ಇಲ್ಲದಂತಾಗಿದೆ ಎಂದಿದ್ದಾರೆ. ಅಲ್ಲಿನ ಹಾಡುಗಳು, ಪಾದಗಳು ತುಂಬಾ ನಷ್ಟವಾಗಿದ್ಧರಿಂದ ನಿಖರ ಆಧಾರ ದೊರೆತಿಲ್ಲ ಎಂದಿದ್ದಾರೆ ಈ ಸ್ವರೂಪವನ್ನು ಕನ್ನಡ ಜಾನಪದ ಸಾಹಿತ್ಯದಲ್ಲಿ ಹೆಂಗಳೆಯರು ಸೀಮಂತ, ಉಪನಯನ, ಸಂದರ್ಭಗಳಲ್ಲಿ ಈ ತೆರೆನಾಗಿ ಹಾಡುತ್ತಾರೆಂದು ಡಿ.ಎಲ್.ಎನ್. ವಿವರಿಸಿದ್ದಾರೆ.

೧ ೨

'ತನ್ನ ಕುಲದ । ಹಿರಿಯರನು

೩ ೪

ಮುನ್ನಿಸಿಕರೆ । ಯೀಸಿಮನೆಗೆ

೫ ೬

ಭಿನ್ನವಿಸಿದ । ನವರಿಗೆ

೭ ೮

ಅನ್ನಂತ । ಸ್ಥವನು,'[೫೨] ಎಂದು ಒಡೆದು ಹೇಳಿ ಇಲ್ಲಿನ ನಾಲ್ಕು ಪಾದಗಳಲ್ಲಿ ಆದಿಪ್ರಾಸವಿದೆ ಪಾದವೊಂದಕ್ಕೆ ಎರಡೆರಡರಂತೆ ಆರು ಮಾತ್ರೆಗಳ ಗಣವಿನ್ಯಾಸವಿದೆ. ತೆಲುಗು ಸಾಹಿತ್ಯದಲ್ಲಿಯೂ ಈ ಹಾಡಿನ ಉಲ್ಲೇಖವಿದೆ ಎಂದು ಹೇಳಿ ತೆಲುಗು ಧವಳದ ಜೊತೆಗೆ ಕನ್ನಡದ ಧವಳವನ್ನು ತೌಲನಿಕವಾಗಿ ವಿವೇಚಿಸಿದ್ದು ಕಂಡು ಬಂದಿದೆ.

ಮುಂದುವರೆದು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಮರು ಜೀವ ಪಡೆದ ಈ ಪ್ರಕಾರ ೫ ಮತ್ತು ಮಾತ್ರೆಗಳ ಗಣನ್ಯಾಸದಲ್ಲಿ ರೂಪಗೊಂಡು ಪು.ತಿ.ನ., ಬೇಂದ್ರೆ, ಕುವೆಂಪುರಂತಹ ಕವಿಗಳು ಕವಿತೆಗಳಲ್ಲಿ ಹರಿದಾಡುತ್ತಾ ಮರುಜೀವ ಪಡೆದು ಸಾಗಿದೆ ಎಂದು ಈ ಪ್ರಕಾರದ ದವಳದ ಜೀವಂತಿಕೆಯನ್ನು ವಿವರಿಸಿದ್ದಾರೆ

ಬಿ.ಎಂ.ಶ್ರೀ. ಅವರ ಅಶ್ವತ್ಥಾಮನ್ ನಾಟಕದಲ್ಲಿ ಬಳಕೆಗೊಂಡಿರುವ ಈ ಪ್ರಕಾರಕ್ಕೆ ಹೊಸಗನ್ನಡದಲ್ಲಿನ ಆರು ಮಾತ್ರೆಯ ಧವಳದ ಲಯ ಪ್ರಕಾರವನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

'ಚೆಲ್ವಿನ ನೆಲೆ
ಕಣ್ಣಳಬಲೆ
ಸುಖದೊರತೆಯ ಬನವಾಸೀ
ಬಳೆದಲೆ ದಾ ಕಾನ್
ಮಲೆಗಳನ್ ಆನ್ ಮಜೆನ್ ಬನವಾಸೀ'[೫೩]

ಎಂಬ ಈ ರೀತಿಯ ಪದ್ಯಜಾತಿಯು ರನ್ನನ ಕಾಲದಲ್ಲಿದ್ದು ನಂತರದ ದಿನಗಳಲ್ಲಿ ಮತ್ತೆ ಬೆಳಕಿಗೆ ಬಂದು ರೂಪಾಂತರಗೊಂಡಿದ್ದರೂ ತನ್ನ ಮೂಲ ಸ್ವಭಾವವನ್ನು ಸ್ವಲ್ಪಮಟ್ಟಿಗೆ ಉಳಿಸಿಕೊಂಡು ಪುನರುಜ್ಜೀವನಗೊಂಡಿದೆ ಎಂಬ ಮಾತು ಕನ್ನಡ ದೇಶಿ ಛಂದಸ್ಸಿನ ದೃಷ್ಟಿಯಿಂದ ಮಹತ್ತರವಾಗಿದೆ.

**ಮಾನಸೋಲ್ಲಾಸದಲ್ಲಿ ಛಂದಸ್ಸು**

ಡಿ.ಎಲ್.ಎನ್. ಅವರ ಪೀಠಿಕೆಗಳು ಲೇಖನಗಳು ಎಂಬ ಸಂಶೋಧನಾ ಲೇಖನಗಳ ಗುಚ್ಛದಲ್ಲಿ ೪೪ನೇ ವಿಷಯವಾಗಿ ಪ್ರಸ್ತಾಪಿತಗೊಂಡ, ಮಾನಸೋಲ್ಲಾಸದಲ್ಲಿ ಛಂದಸ್ಸು ಎಂಬ ರೂಪ ಒಂದು ವಿದ್ವತ್ ಪೂರ್ಣ ಛಂದಸ್ಸಿನ ಭಾಗಾಂಶ ಚರ್ಚೆ ಎಂದರೂ ತಪ್ಪಾಗದ್ದಾಗಿದೆ.

'ಕಲ್ಯಾಣಿ ಚಾಲುಕ್ಯರ ಮೂರನೆಯ ಸೋಮೇಶ್ವರನ 'ಮಾನಸೊಲ್ಲಾಸ' ಎಂಬುದು ಲೌಕಿಕಶಾಸ್ತ್ರ ಕೃತಿಯಾಗಿದೆ. ಕಾವ್ಯದ ದೃಷ್ಟಿಯಿಂದ ಹೇಗೂ ಛಂದಸ್ಸಿನ ಹಾಗೆ, ದೃಷ್ಟಿಯಿಂದಲೂ ಮುಖ್ಯವಾದದ್ದಾಗಿದೆ. ಇದರಲ್ಲಿ ೧೬ನೇ ಅಧ್ಯಾಯ ಛಂದಸ್ಸಿಗೆ ಮೀಸಲಾಗಿದ್ದು ಡಿ.ಎಲ್.ಎನ್. ಅವರು 'ಮಾನಸೋಲ್ಲಾಸದಲ್ಲಿ ಛಂದಸ್ಸು' ಎಂಬ ಶೀರ್ಷಿಕೆಯಡಿ ನಿರೂಪಿಸಿರುವ ಸಂಸ್ಕೃತ, ಪ್ರಾಕೃತ, ವೃತ್ತ ವಿವರಗಳಾದ ಚರ್ಚರೀ, ಏಲಾ, ಜಯಮಾಲಿಕಾ, ಮಾಲತೀ, ಲಲಿತಾ । ಭೋಗವತಿ ಈ ವೃತ್ತಗಳನ್ನು ದೀರ್ಘವಾಗಿ ಹೇಳಲಾಗಿದೆ. ಕನ್ನಡದ ಮಟ್ಟುಗಳಾದ ಕಂದ ತ್ರಿಪದಿ, ಷಟ್ಪದಿ ಇವುಗಳ ಸ್ವರೂಪವನ್ನು ಸ್ಥೂಲವಾಗಿ ಹೇಳಿದ್ದಾಗಿದೆ. ಡಿ.ಎಲ್.ಎನ್. ಈ ಕೃತಿಯಲ್ಲಿ ನಿರೂಪಿತವಾದ ಕೆಲ ಛಂದಸ್ಸಿನ ಸಾಮಾನ್ಯ ಅಂಶಗಳನ್ನು ಸಂಗ್ರಹವಾಗಿ ಹೇಳಲೆತ್ನಿಸಿದ್ದು ಎದ್ದು ಕಂಡಿದೆ. ಇದಕ್ಕೆ ಪೂರಕವೆಂಬಂತೆ ಅಧ್ಯಾಯಗಳಲ್ಲಿ ನಿರೂಪಿತಗೊಂಡ ಪದ್ಯಗಳನ್ನು ಅವಶ್ಯವಿದ್ದೆಡೆ. ಉದಾಹರಿಸಿ ತಾಳೆ ನೋಡಿದ್ದಾರೆ. ಇದರಿಂದ ಅಂಶಗಣಾನ್ವಿತವಾದ ಷಟ್ಪದಿಯ ಕೆಲವು ಪದ್ಯಗಳು ಇದುವರೆಗೆ ದೊರೆತಿದ್ದು ಉದಾಹರಣೆಗೆ ಚಂದ್ರರಾಜನ ಮದನ ತಿಲಕ, ಶಾಂತಿನಾಥನ ಸುಕುಮಾರ ಚರಿತೆ ಮುಂತಾದ ಕಾವ್ಯ ಮತ್ತು ಕೆಲ ಶಾಸನಗಳಲ್ಲಿ, ಈ ಪ್ರಕಾರ ದೊರೆತದ್ದುಂಟೆಂದು ಬಿಜಾಪುರದ ಚಡಚಣದಲ್ಲಿ ದೊರೆತ ೧೧ನೆಯ ಶತಮಾನದ ಶಾಸನದಲ್ಲಿ ರಚಿತವಾದ,'[೫೪] ಷಟ್ಪದಿಗಳ ಕುರಿತು ಡಿ.ಎಲ್.ಎನ್. ಉಲ್ಲೇಖಿಸಿದ್ದಾರೆ.

ಛಂದಸ್ಸಿನ ದೃಷ್ಟಿಯಿಂದ 'ಮಾನಸೋಲ್ಲಾಸವು' ಪ್ರಮುಖವಾದುದೆಂದು ಹತ್ತಾರು ಉದಾಹರಣೆಗಳ ಮೂಲಕ ತಮ್ಮ ಲೇಖನದಲ್ಲಿ ಸ್ಪಷ್ಟೀಕರಿಸಿದ, ಡಿ.ಎಲ್.ಎನ್. ಸಂಸ್ಕೃತ ಪ್ರಾಕೃತ, ವೃತ್ತ ಜಾತಿಗಳ ವಿಷಯವಾಗಿ ನೂತನ ವಿಷಯವೇನೂ ಇಲ್ಲವೆಂದು ಹೇಳಿ ಪ್ರಸಿದ್ಧವಾದ, ಕೆಲವು ಸಂಸ್ಕೃತ ವರ್ಣವೃತ್ತಗಳ ವಿಷಯವನ್ನು ಸ್ವಲ್ಪ ವಿಸ್ತಾರವಾಗಿ ನೋಡುವುದು ಅವಶ್ಯವೆಂದು ನಿರೂಪಿಸಿದ್ದಾರೆ. ಪ್ರಾಕೃತ ಛಂದೋರೂಪಗಳ ವಿಷಯ ತುಂಬಾ ಕಡಿಮೆ

ಇದ್ದು ಕರ್ಣಾಟಕ, ದೇಶೀಯ ಛಂದಸ್ಸುಗಳಲ್ಲಿ ಕಂದ, ತ್ರಿಪದಿ, ಷಟ್ಪದಿಗಳ ವಿಷಯವಾಗಿ ಮಾತ್ರ ಪ್ರಸ್ತಾಪಿಸಿದೆ ಎಂದು ಉಲ್ಲೇಖಿಸಿದ್ದು ಮಾನಸೋಲ್ಲಾಸದ ಪ್ರಖರತೆಯ ಬೆಳವಣಿಗೆಗೆ ಪೋಷಕ ಅಂಶವೆನಿಸಿದ್ದರೆ

**ಮೂರು ಷಟ್ಪದಿಗಳು**

ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೨೯ನೇ ಭಾಗದಲ್ಲಿ ಮೊದಲ ಬಾರಿಗೆ ರೂಪುಕಂಡ ಈ ಲೇಖನವು ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿದ್ದಾಗಿದೆ. ೧೧ನೆಯ ಶತಮಾನದಲ್ಲಿ ರಚನೆಯಾದ ವಿಜಯಪುರ ಜಿಲ್ಲೆಯ ಚಡಚಣದಲ್ಲಿ ದೊರೆತ ಶಾಸನದಲ್ಲಿ ಉಲ್ಲೇಖಗೊಂಡ ಮೂರು ಷಟ್ಪದಿಗಳಲ್ಲಿನ ಲಕ್ಷಣಗಳ ಕುರಿತು ಇಲ್ಲಿ ಪ್ರಸ್ತಾಪಿಸಿದ್ದಾಗಿದೆ.

೧) 'ರಾಜಿತ ಭುವನಕ್ಕೆ
ವಾಜಿಗಾಗರ ವಲ್ಲಿ
ರಾಜಧಾನಿಯಿ ವೆನಿಪಚ(ಟೆ) ತಾಣ।
ರಾಜ ಸೇವ್ಯ ಪ್ರಭು
ರಾಜ ಚಟ್ಟನ ಪುತ್ರ
ರಾಜಿತ ಕೀರ್ತಿ ವಿಳಾಸಂದಾಸ॥

೨) ಶ್ರೀ ಸೈಳ ಕೈಲಾಸ
ವಾಸಿಕುಂಭೇಸಂಗೆ
ಶ್ರೀ ಸೂರ್ಯ ಗ್ರಹಣ ನಿಮಿತ್ತ ಮಾಗೆ।
ದೋಷವರ್ಚಿತ ಪ್ರಭು
ದಾಸನುಂ ಜನಮೆಲ್ಲ
ವೀಸಂಗೆ ಹೇಯಮಜೆಸಲಿಕೆ ಬಂದೆ॥

೩) ಭಾಣರಾಪಿಯ ಪೊಲ
(ಕ್ಷ) ಣ ಸದ್ಧರ್ಮ ಪ್ರ
ವೀಣರಿಂ ಸಿವಮಹಾರ್ಚನೆಗಳಿಂದ
ಪೋಣಿಗೊಪ್ಪುವ ಚಟ್ಟೆ
ತಾಣದೊ.......ವ
ಬಾಣನಿರ್ಪಂತಿಜ್ಜಿಂ ಮುದ್ದುರಾಜ॥'[೫೫]

ಎಂದು ಇಲ್ಲಿ ಕೊಟ್ಟಿರುವ ಪದ್ಯಗಳು ಪಾಠ ಶಾಸನದಲ್ಲಿರುವಂತಿದೆ ಎಂದು ಡಿ.ಎಲ್.ಎನ್. ಅಭಿಪ್ರಾಯಿಸಿ ಛಂದಸ್ಸಿನ ದೃಷ್ಟಿಯಿಂದ ಇಲ್ಲಿ ಕೆಲ ವ್ಯತ್ಯಾಸಗಳನ್ನು ಮಾಡಿಕೊಳ್ಳುವುದು ಅವಶ್ಯವೆಂದು ಮೊದಲನೆಯ ಪದ್ಯದ ೩ನೆಯ ಪಾದ ಚ(ತ್ರ) ತಾಣ, ಎಂದಾಗಿದ್ದರೆ ಅಲ್ಲಿ ೩ ವಿಷ್ಣುಗಣಗಳು ಒಂದು ಗುರುವೂ ಬಂದು ಲಕ್ಷಣಕ್ಕೆ ಸರಿಯಾದತ್ತದೆ; ಕೊನೆಯ ಪದ್ಯ ಪಾದದಲ್ಲಿರುವ, 'ದಾಸ' ಕ್ಕೆ ದಾಸ (೦) ಎಂದು ತಿದ್ದಬಹುದು. ಎರಡನೆಯ ಪದ್ಯ ಸಂಪೂರ್ಣ ಲಕ್ಷಣ ಬದ್ಧವಾಗಿದೆ. ೪ನೆಯ ಪಾದದ 'ಬೆ‌ಂತಪ್ರಭು' ಎಂಬ ಗಣದ ಮೂರನೇಯ ಅಕ್ಷರವನ್ನು ಶಿಥಿಲವಾಗಿ ಉಚ್ಚರಿಸಬೇಕು ಮೂರನೇ ಪದ್ಯದ ಎರಡನೇಯ ಪಾದದ ಆದ್ಯಾಕ್ಷರ (ಷ) ವನ್ನು (ಕ್ಷೊ) ಎಂದು ನಿಯೋಜಿಸಬೇಕು. ಹಾಗಾದರೆ ಅಲ್ಲಿ ವಿಷ್ಣುಗಣ ಬಂದು ಆ ಪಾದದ ಛಂದಸ್ಸನ್ನು ನೆರವಾಗವುದಲ್ಲದೆ ಅರ್ಥವೂ ವಿಶದವಾಗುತ್ತದೆ. ಐದನೆಯ ಪದ್ಯದಲ್ಲಾದ 'ಗಲಗಲಿತ' (ತಾಣದೊ) (ಳಾಳು) ವ ಎಂದು ಆ ಪಾದವನ್ನು ಬರೆದರೆ ಅಲ್ಲಿ ಎರಡು ವಿಷ್ಣುಗಣಗಳು ಉಂಟಾಗಿ ಲಕ್ಷಣ ಸರಿಹೋಗುತ್ತದೆ. ಆರನೆಯ ಪಾದದ ಅಂತ್ಯದಲ್ಲಿ ಬಿಂದುವನ್ನು ಸೇರಿಸಿ ಮುದ್ದುರಾಜ' (೦) ಎಂದು ಓದಬಹುದಾಗಿದೆ.

ಈ ರೀತಿಯಾಗಿ ಮೇಲೆ ಕಾಣಿಸಿರುವ ತಿದ್ದುಪಡಿಗಳನ್ನು ಅಂಗೀಕರಿಸಿದರೆ ಈ ಮೂರು ಷಟ್ಪದಿಗಳು ಜಯಕೀರ್ತಿ ನಾಗವರ್ಮ ಕೊಟ್ಟಿರುವ ಪದ್ಯಜಾತಿಗಳ ಲಕ್ಷಣಕ್ಕೆ ಅನುಸಾರವಾಗುತ್ತವೆ. ಎಂದು ಉಲ್ಲೇಖಿಸಿ ಅಭಿಪ್ರಾಯಿಸಿದ್ದಾರೆ. ಡಿ.ಎಲ್.ಎನ್. ಈ ಅಭಿಪ್ರಾಯವು ಸುತ್ತಾರ್ಹವೆನಿಸಿದ್ದು ಒಟ್ಟಾರೆಯಾಗಿ ಡಿ.ಎಲ್.ಎನ್. ಅವರ ಪ್ರಾಚೀನ ಸಾಹಿತ್ಯದಲ್ಲಿನ ವಿದ್ವತ್ತು ಹಲವಾರು ಜಟಿಲ ಶಾಬ್ದಿಕ ಸಮಸ್ಯೆ ಕಾವ್ಯ ವಿಚಾರಗಳನ್ನು ತಲಸ್ಪರ್ಶಿಯಾಗಿ ಅಭ್ಯಸಿಸಲು ಎಲ್ಲೆ ಮೀರಿ ಕೆಲಸ ಮಾಡಿದೆ ೮ 'ಛಂದಸ್ಸಿನಲ್ಲಿ ಪ್ರಕಾಂಡ ಪಂಡಿತರಾಗಿದ್ದ ಡಿ.ಎಲ್.ಎನ್. ಎಲ್ಲಾ ಛಂದೋಪ್ರಕಾರಗಳ ವೈಯಾಕಾರಣಿಯಂತಿದ್ದರೆಂದರೆ ತಪ್ಪಾಗಲಾರದ್ದಾಗಿದೆ. ಇವರು ಛಂದಸ್ಸಿನ ಕುರಿತು ಒಂದು ಗ್ರಂಥ ಮಾಡಬೇಕೆಂಬ ಕನಸು ನನಸಾಗದೆ ವಿಧಿವಶರಾಗಿದ್ದು ಕನ್ನಡ ಛಂದಸ್ಸಿಗೆ ತುಂಬಲಾರದ ನಷ್ಟವೆಂದು. ಜಿ ಬ್ರಹ್ಮಪ್ಪ ನವರು ಒಂದೆಡೆ ಉಲ್ಲೇಖಿಸಿದ್ದುಂಟು.'[೫೬]

ಡಿ.ಎಲ್.ಎನ್. ಅವರು ಕನ್ನಡ ವ್ಯಾಕರಣ, ಛಂದಸ್ಸು, ಭಾಷಾಧ್ಯಯನ ಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆ, ಅಪಾರವಾದದ್ದಾಗಿದೆ ಅವರನ್ನು ಆ ಕ್ಷೇತ್ರದಲ್ಲಿ ಚಿರಸ್ಥಾಯಿಯಾಗಿ ನಿಲ್ಲುವಂತೆ ಮಾಡಿದೆ. ಛಂದಸ್ಸಿನ ಕುರಿತು ನಿರೂಪಿತಗೊಂಡ ಇವರ ಸಂಶೋಧನಾ ಲೇಖನಗಳನ್ನು ಕನ್ನಡ ಛಂದಶಾಸ್ತ್ರದ ಬಗ್ಗೆ ಆಮೂಲ್ಯವಾದ ವಿಚಾರಗಳನ್ನು. ತಿಳಿಸುವುದರ ಜೊತೆಗೆ ಮುಂದಿನವರು ಮಾಡಬೇಕಾದ ಸಂಶೋಧನೆಗಳಿಗೆ ವಿಸ್ತಾರವಾದ ಸೋಪಾನ ಹಾಕಿಕೊಟ್ಟಿದ್ದಾರೆ ಇಂತಹ ಇವರ ಈ ವಿದ್ವತ್ ಪ್ರತಿಭೆ ಇಂದಿಗೂ ಹಳಗನ್ನಡ ಅಚಾರ್ಯ ಪೀಠದಲ್ಲಿ ಇವರು ಚಿರಸ್ಥಾಯಿಯಾಗಿರುವಂತೆ ಮಾಡಿದೆ.

## ಕೊನೆಯ ಟಿಪ್ಪಣಿಗಳು

೧. ಹಳಗನ್ನಡ ಸಾಹಿತ್ಯ ಅಧ್ಯಯನ ಸಮೀಕ್ಷೆ (ಲೇ) ಎಚ್.ಎಸ್. ಶ್ರೀಮತಿ ಅಜಂತ ಪ್ರಕಾಶನ, ಹೊಸಪೇಟೆ, ೧೯೯೩, ಪು. ೫೦

೨. ಕನ್ನಡ ಸಾಹಿತ್ಯ ಚರಿತ್ರೆ (ಸಂ) ಎಸ್.ಎಂ.ವೃಷಬೇಂದ್ರಸ್ವಾಮಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧, ಪು. ೭೮

೩. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೦೫, ಪು. ೨೯೩

೪. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ. ರವೀಂದ್ರ, ಬೆಂಗಳೂರು, ೨೦೦೫, ಪು. ೧೨೦

೫. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೦೫, ಪು. ೩೧೨

೬. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ ಬೆಂಗಳೂರು ವಿಶ್ವವಿದ್ಯಾಲಯ ಪಿಎಚ್.ಡಿ. ಅಪ್ರಕಟಿತ ನಿಬಂಧ ವರ್ಷ, ೨೦೧೫, ಪು. ೧೨೮

೭. ಕನ್ನಡ ಕವಿಚರಿತೆ ಸಂಪುಟ–೧, (ಲೇ) ಆರ್.ನರಸಿಂಹಾಚಾರ್, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಪು. ೩೨೫

೮. ಕನ್ನಡ ಕವಿಚರಿತೆ ಸಂಪುಟ–೨, (ಲೇ) ಆರ್.ನರಸಿಂಹಾಚಾರ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪು. ೨೮೩

೯. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ, ಬೆಂಗಳೂರು ವಿಶ್ವವಿದ್ಯಾಲಯ ಪಿಎಚ್.ಡಿ. ಅಪ್ರಕಟಿತ ನಿಬಂಧ ವರ್ಷ, ೨೦೧೫, ಪು. ೧೩೨

೧೦. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು ೨೦೦೫, ಪು. ೪೯೪

೧೧. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು ೨೦೦೫, ಪು. ೫೦೦

೧೨. ಅದೇ, ಪು.ಸಂ. ೫೧೪

೧೩. ಅದೇ, ಪು.ಸಂ. ೫೦೭

೧೪. ಅದೇ, ಪು. ೫೨೮

೧೫. ಪ್ರೊ. ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು (ಸಂ) ಟಿ.ವಿ.ವೆಂಕಟಾಚಲಶಾಸ್ತ್ರಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ವರ್ಷ ೨೦೦೮, ಪು.೨೩

೧೬. ಅದೇ, ಪು.ಸಂ. ೧೪೯

೧೭. ಅದೇ, ಪು.ಸಂ. ೧೫೨

೧೮. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೦೫, ಪು. ೧೦೦೯

೧೯. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು ೨೦೦೫, ಪು. ೫೩೭

೨೦. ಅದೇ, ಪು.ಸಂ. ೬೨೯

೨೧. ಜ್ಞಾನೋಪಾಸಕ (ಸಂ), ಜಿ.ಶಂ.ಪರಮಶಿವಯ್ಯ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೯, ಪು. ೯೧

೨೨. ಅದೇ, ಪು.ಸಂ. ೬೪೦

೨೩. ಅದೇ, ಪು.ಸಂ. ೬೪೩

೨೪. ಅದೇ, ಪು.ಸಂ. ೬೪೯

೨೫. ಡಿ.ಎಲ್.ನರಸಿಂಹಾಚಾರ್ (ಲೇ) ಎಸ್.ವಿದ್ಯಾಶಂಕರ್, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೨, ಪು. ೧೨೭

೨೬. ಅದೇ, ಪು.ಸಂ. ೬೫೪

೨೭. ಅದೇ, ಪು.ಸಂ. ೬೫೪

೨೮. ಅದೇ, ಪು.ಸಂ.೬೫೬

೨೯. ಅದೇ, ಪು.ಸಂ. ೬೬೫

೩೦. ಡಿ.ಎಲ್.ನರಸಿಂಹಾಚಾರ್ (ಲೇ) ಎಸ್.ವಿದ್ಯಾಶಂಕರ್, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೯೨, ಪು. ೧೨೭

೩೧. ಪ್ರೊ.ಡಿ.ಎಲ್.ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಮತ್ತು ಭಾಷಣಗಳು, (ಸಂ) ಟಿ.ವೆ.ವೆಂಕಟಾಚಲಶಾಸ್ತ್ರಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೨೦೦೮, ಪು. ೫೫

೩೨. ಅದೇ, ಪು.ಸಂ. ೮೭

೩೩. ಅದೇ, ಪು.ಸಂ. ೧೦೭

೩೪. ಅದೇ, ಪು.ಸಂ. ೧೫೮

೩೫. ಅದೇ, ಪು.ಸಂ. ೧೫೯

೩೬. ಅದೇ, ಪು.ಸಂ. ೧೧೫

೩೭. ಅದೇ, ಪು.ಸಂ. ೧೪೩

೩೮. ಶಬ್ದವಿಹಾರ (ಲೇ) ಡಿ.ಎಲ್.ನರಸಿಂಹಾಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ ಮೈಸೂರು, ೨೦೦೫, ಪು. ೩೪

೩೯. ಅದೇ, ಪು.ಸಂ. ೭೪೯

೪೦. ಕನ್ನಡ ವಿದ್ವತ್ ಪರಂಪರೆ ಮತ್ತು ಡಿ.ಎಲ್.ಎನ್. ನರಸಿಂಹಾಚಾರ್ (ಲೇ) ಬಿ.ರವೀಂದ್ರ ಬೆಂಗಳೂರು ವಿಶ್ವವಿದ್ಯಾಲಯ, ಅಪ್ರಕಟಿತ ಪಿಎಚ್.ಡಿ. ನಿಬಂಧ, ೨೦೧೫, ಪು. ೧೩೪

೪೧. ಅದೇ, ಪು.ಸಂ. ೭೫೪

೪೨. ಅದೇ, ಪು.ಸಂ. ೯೩

೪೩. ಅದೇ, ಪು.ಸಂ. ೯೨೬

೪೪. ಅದೇ, ಪು.ಸಂ. ೯೨೯

೪೫. ಅದೇ, ಪು.ಸಂ. ೭೨೦

೪೬. ಅದೇ, ಪು.ಸಂ. ೭೨೧

೪೭. ಅದೇ, ಪು.ಸಂ. ೭೨೭

೪೮. ಅದೇ, ಪು.ಸಂ. ೯೮೨

೪೯. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್ ನರಸಿಂಹಾಚಾರ್, ಡಿ.ವಿಕೆ. ಮೂರ್ತಿ ಪ್ರಕಾಶನ, ಮೈಸೂರು. ೧೯೭೧-ಪು. ೬೭೭

೫೦. ಸಾಹಿತ್ಯ ಸಂಸ್ಕೃತಿಯ ಅನ್ವೇಷಣೆ (ಲೇ) ಸಿ.ನಾಗಭೂಷಣ, ಸಿ.ವಿ.ಜಿ. ಪ್ರಕಾಶನ. ಲೈಂದುಕಾವಲಿ-ಬೆಂಗಳೂರು-೨೦೦೭ ಪು. ೧೧೨

೫೧. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್.ನರಸಿಂಹಾಚಾರ್, ೧೯೭೧, ಪು. ೬೭೯

೫೨. ಅದೇ, ಪು.ಸಂ. ೬೭೯

೫೩. ಅದೇ, ಪು.ಸಂ. ೬೮೪

೫೪. ಅದೇ, ಪು.ಸಂ. ೬೮೫

೫೫. ಡಿ.ಎಲ್. ನರಸಿಂಹಚಾರ್ ಅವರ ಶತಮಾನ ಸ್ಮರಣೆ (ಸಂ) ಎಫ್.ಟಿ. ಹಳ್ಳಿಕೇರಿ. ೨೦೦೫ ಪು. ೩೪೧

೫೬. ಪೀಠಿಕೆಗಳು ಲೇಖನಗಳು (ಲೇ) ಡಿ.ಎಲ್ ನರಸಿಂಹಚಾರ್, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು. ೧೯೭೧, ಪು. ೯೭೧

## ಅಧ್ಯಾಯ – ಆರು

# ಪಂಪಭಾರತ ದೀಪಿಕೆ : ಒಂದು ವಿವೇಚನೆ

ಹತ್ತೊಂಬತ್ತನೆಯ ಶತಮಾನಕ್ಕೂ ಹಿಂದೆ ಕನ್ನಡ ಸಾಹಿತ್ಯ ಕೃತಿಗಳಿಗೆ ಅಲ್ಲಲ್ಲಿ ವ್ಯಾಖ್ಯಾನ ಗ್ರಂಥಗಳನ್ನು ಒಮ್ಮೊಮ್ಮೆ ಸಂಸ್ಕೃತದಲ್ಲಿ ಕೆಲವೊಮ್ಮೆ ಕನ್ನಡದಲ್ಲಿ ರಚಿಸುವ ಪ್ರವೃತ್ತಿ ಇದ್ದುದ್ದು ಕಂಡುಬರುತ್ತದೆ. ಈ ಪ್ರವೃತ್ತಿ ಮುಂದುವರೆಯಿತಾದರೂ, ಹಳಗನ್ನಡ ಸಾಹಿತ್ಯ ಕೃತಿಗಳಿಗೆ ಪೂರ್ಣಪ್ರಮಾಣದ ವ್ಯಾಖ್ಯಾನಗಳನ್ನು ನಾವು ಅನಂತರದಲ್ಲಿ ಕಾಣುವುದಿಲ್ಲ. ಆದರೆ, ಪಂಪಭಾರತದ ಪ್ರತಿ ಪದ್ಯ ಹಾಗೂ ಬಹುಮಟ್ಟಿನ ಗದ್ಯಕ್ಕೆ ಅನ್ವಯಕ್ರಮ ಹಾಗೂ ಪದಶಃಯ ಅರ್ಥವನ್ನೂ ನೀಡುವಲ್ಲಿ ಡಿ.ಎಲ್.ಎನ್. ಅವರ ಪಂಪಭಾರತ ದೀಪಿಕೆ (೧೯೭೧) ಯೊಂದೆ ಈ ಮಾತಿಗೆ ಹೊರತಾಗಿಲ್ಲದ್ದಾಗಿದೆ. ಈ ಕೃತಿಯಲ್ಲಿ ಹಲವೆಡೆ ಪಂಪನ ವರ್ಣನೆಗಳಿಗೆ ಪ್ರೇರಣೆ ನೀಡಿರಬಹುದಾದ ಸಂಸ್ಕೃತ ಕಾವ್ಯ ಗ್ರಂಥಗಳು ಅಥವಾ ಕಾವ್ಯ ಗ್ರಂಥ ಭಾಗಗಳ ಉಲ್ಲೇಖವಿದೆ. ಶಬ್ದಾರ್ಥ ಪ್ರಯೋಗಕ್ಕೆ ಪಂಪನ ನಂತರದ ಕವಿಗಳು ಹಾಗೂ ಶಾಸನಗಳಲ್ಲಿನ ಪ್ರಯೋಗಗಳನ್ನು ಅವಶ್ಯವಿದ್ದಲ್ಲಿ ಬಳಸಲಾಗಿದ್ದು ಕಂಡುಬಂದಿದೆ. ಕೃತಿ ಉದ್ದಕ್ಕೂ ಅಲ್ಲಲ್ಲಿ ಪಾಠ ನಿರ್ಧಾರದ ಪ್ರಯತ್ನಗಳುಕೂಡಾ ಕಂಡುಬಂದಿದ್ದಲ್ಲದೆ ಈ ಕುರಿತ ಹತ್ತಾರು ನಿರ್ಧಾರಗಳನ್ನು ರಂ.ಶ್ರೀ. ಮುಗಳಿ, ಟಿ.ವಿ.ವೆಂಕಟಾಚಲಶಾಸ್ತ್ರಿ, ಎಂ.ಎಂ.ಕಲಬುರ್ಗಿ, ಹೇಮಲತಾ ಪದಕಿಯವರಂತಹ ಇತರೆ ವಿದ್ವಾಂಸರು ಚರ್ಚಿಸಿದ್ದು ಈ ಕೃತಿಯ ಪ್ರೌಢಿಮೆಯನ್ನು ವಿಸ್ತರಿಸಿದ್ದಾಗಿದೆ. ಈ ಕೃತಿಯು ಹಳಗನ್ನಡ ಸಾಹಿತ್ಯ ಕೃತಿಯಿಂದ ಹೊಸಗನ್ನಡ ಗದ್ಯರೂಪಕ್ಕೆ ಮಾರ್ಪಡಿಸಿ ಅಭ್ಯಾಸಕ್ಕೆ ತಕ್ಕ ಪರಿಕರವನ್ನಾಗಿಸುವ ರೂಪವು ಮುಖ್ಯವಾಗಿ ಇಲ್ಲಿ ಕಂಡುಬಂದದ್ದಾಗಿದೆ.

ಈ ಕೃತಿಯಲ್ಲಿ ಮುಖ್ಯವಾಗಿ ೨ ರೂಪಗಳು ಮೂಡಿಬಂದದ್ದಾಗಿದ್ದು ಮೊದಲನೆಯದಾಗಿ ಕಥಾಸಾರವನ್ನು ನೀಡುವುದು. ಈ ಕಥಾಸಾರ ನೀಡುವಲ್ಲಿ ಒಟ್ಟಾರೆ ಕಥನವನ್ನು ಹೊಸಗನ್ನಡ ಗದ್ಯದಲ್ಲಿ ಸಂಗ್ರಹಿಸಿ ಹೇಳಬೇಕಾಗುತ್ತದೆ. ಆಗ ಅಭ್ಯಾಸಿಗರಿಗೆ ಕೃತಿಯ ನೇರ ಅಭ್ಯಾಸ ಸುಲಭವಾಗುತ್ತದೆಂದು ಗ್ರಹಿಸಬಹುದಾಗಿದೆ.

ಎರಡನೆಯ ವಿಚಾರವಾಗಿ, ಕೃತಿಯಲ್ಲಿನ ಪ್ರತಿಯೊಂದು ವಾಕ್ಯ ವೃಂದವನ್ನು ಪದ್ಯದಲ್ಲಿರಲಿ, ಗದ್ಯದಲ್ಲಿರಲಿ ಅದನ್ನು ಹೊಸಗನ್ನಡ ಗದ್ಯರೂಪಕ್ಕೆ ಅನುವಾದಿಸಿ ಕೊಡುವುದು ಪ್ರಮುಖ ಅಂಶವಾಗಿದೆ. ಈ ಉದ್ದೇಶದಿಂದ ಈ ಕೃತಿಯ ವಿಶಿಷ್ಟತೆ ಮಹತ್ವದ್ದಾಗಿ ಮೂಡಿಬಂದಿದೆ.

ಹಳಗನ್ನಡ ಸಾಹಿತ್ಯ ಕೃತಿಗಳಿಗೆ ವ್ಯಾಖ್ಯಾನವನ್ನು, ಟೀಕುಗಳನ್ನು ಬರೆಯುವ ಪ್ರವೃತ್ತಿ ಪ್ರಾಚೀನರಲ್ಲಿ ಇದ್ದುದ್ದಕ್ಕೆ ಪುರಾವೆಗಳು ದೊರೆತಿಲ್ಲ. ಶಿಕ್ಷಣದ ಕಲಿಕಾ ಉದ್ದೇಶದ ಭಾಗವಾಗಿದ್ದ ವ್ಯಾಕರಣ ಗ್ರಂಥಗಳಿಗೆ ಪೂರಕವಾಗಿರಲೆಂದು ಇಂತಹ ಟೀಕು, ವ್ಯಾಖ್ಯಾನಗಳನ್ನು ಸಿದ್ಧಪಡಿಸಿರುವುದುಂಟು. ಸಂಸ್ಕೃತದ ಮಾರ್ಗಕಾವ್ಯ ಕೃತಿಗಳಿಗೆ ಲಭ್ಯವಿರುವ ಟೀಕಾ ಸಾಹಿತ್ಯದ ಮಾದರಿಯೊಂದನ್ನು ಕನ್ನಡದಲ್ಲಿ ಬೆಳೆಸಲು ಡಿ.ಎಲ್.ಎನ್ ಅವರು ಉದ್ದೇಶಿಸಿ ಪಂಪಭಾರತಕ್ಕೆ 'ದೀಪಿಕೆ'ಯೊಂದನ್ನು ಸಿದ್ಧಪಡಿಸಿದ್ದಾರೆ.

ಡಿ.ಎಲ್.ಎನ್. ಅವರ ಅಧ್ಯಯಯನದ ನೆಲೆಗಳು ನಿಷ್ಕೃಷ್ಟತೆ ಹಾಗೂ ಬಹುಶ್ರುತತೆಯನ್ನು ಮುಖ್ಯ ಲಕ್ಷಣಗಳನ್ನಾಗಿ ಮೈಗೂಡಿಸಿಕೊಂಡಿದ್ದವು. ಆಧುನಿಕ ಸಂದರ್ಭದಲ್ಲಿ ಪ್ರಾಚೀನ ಸಾಹಿತ್ಯಾಧ್ಯಾಯನ ಹೇಗಿರಬೇಕೆಂಬ ಮಾದರಿಯೊಂದನ್ನು ಅಖಿಲಭಾರತದ ನೆಲೆಯಲ್ಲಿ ಸಿದ್ಧಗೊಳ್ಳುತ್ತಿದ್ದ ಕಾಲವಾಗಿತ್ತು. ಸಂಸ್ಕೃತ ಸಾಹಿತ್ಯ ಕೃತಿಗಳ ಅಧ್ಯಯನವನ್ನು ರೂಪಿಸುವ ನವೀನ ಯತ್ನಗಳು ಬೆಳೆಯುತ್ತಿದ್ದ ಕಾಲಘಟ್ಟವಾಗಿದ್ದು, ಪುಣೆಯ ಭಂಡಾರಕರ್ ಸಂಸ್ಥೆಯು ಮಹಾಭಾರತ ಪಾಠ ಪರಿಷ್ಕರಣದ ಬೃಹತ್ ಯೋಜನೆ ಈ ನವೀನ ಅಧ್ಯಯನ ವಿಧಾನಗಳಿಗೆ ಒಂದು ನಿದರ್ಶನವಾಗಿದ್ದರ ಈ ಸಾಂದರ್ಭಿಕ ಕಾಲಘಟ್ಟದಲ್ಲಿ ದೇಶಿಯ ಭಾಷೆಗಳ ಪ್ರಾಚೀನ ಸಾಹಿತ್ಯ ಕೃತಿಗಳ ಅಧ್ಯಯನವನ್ನು ಇಂತಹವುದೇ ದಿಕ್ಕಿನಲ್ಲಿ ಡಿ.ಎಲ್.ಎನ್.ರವರು ತಮ್ಮ ಅಧ್ಯಯನದ ಮೂಲಕ ನಡೆಸಿದ್ದರ ಫಲವಾಗಿ ಅವರ ಅಧ್ಯಯನದ ತಾತ್ವಿಕತೆ ಭಾರತೀಯ ನವೋದಯದ ಒಂದು ಪ್ರಮುಖ ಪ್ರವೃತ್ತಿಯಾಗಿ ಬೆಳೆದುಬಂದಿದ್ದರಿಂದ ಈ ಕೃತಿಯು ಮೂಡಿಬಂದದ್ದಾಗಿದೆ.

ಡಿ.ಎಲ್.ಎನ್‌ರವರು ತಮ್ಮ ಈ ಕೃತಿಯ ಅರಿಕೆಯಲ್ಲಿ ಟೀಕಾ ಸಾಹಿತ್ಯದ ಮಾದರಿಯೊಂದನ್ನು ಕನ್ನಡದಲ್ಲಿ ಬೆಳಸಲು ಹೀಗೆ ಹೇಳಿದ್ದಾರೆ. 'ಈ ಕಾವ್ಯವನ್ನು ಅಭ್ಯಾಸ ಮಾಡುವ ಪ್ರೌಢ, ವಿದ್ಯಾರ್ಥಿಗಳಿಗೂ ಅಭ್ಯಾಸಿಸುವ ಇತರರಿಗೂ ಈ ಟೀಕೆಯಿಂದ ಸಾಕಷ್ಟು ಸಹಾಯವಾಗುವುದೆಂದು ನಾನು ನಂಬಿದ್ದೇನೆ. ಸಾಕಷ್ಟು ವಿಸ್ತಾರವಾಗಿ ಪ್ರತಿಪದಾರ್ಥ ಸಹಿತವಾಗಿ ಈ ಟೀಕೆ ರಚಿತವಾಗಿದೆ. ವ್ಯಾಕರಣ, ಛಂದಸ್ಸು, ಪೂರ್ವಕಥಾವೃತ್ತಾಂತ, ಶಬ್ದಾರ್ಥ ನಿರ್ಣಯ, ಆಕರಗ್ರಂಥಗಳು ಮುಂತಾದ ಅನೇಕ ವಿಷಯಗಳು ಈ ಟೀಕೆಯಲ್ಲಿ ನಿರೂಪಿತವಾಗಿವೆ. ಹಲವೆಡೆ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದು, ನನಗೇ ಸರಿ ಎಂಬ ಹಠವೇನೂ ಇಲ್ಲ. ನನಗೆ ಸರಿಯೆಂದು ತೋರಿಬಂದ ಎಡೆಗಳಲ್ಲಿ ಪರಿಷತ್ತಿನ ಮುದ್ರಣದ

ಅಡಿಟಿಪ್ಪಣಿಗಳಲ್ಲಿ ಕಾಣಿಸಿರುವ ಪಾಠಾಂತರಗಳನ್ನು ಪರಿಗ್ರಹಿಸಿದ್ದೇನೆ, ಸ್ವೀಕೃತ ಪಾಠಗಳನ್ನು ಬಿಟ್ಟಿದ್ದೇನೆ, ಕೆಲವೆಡೆ ನನ್ನಿಂದ ನಿಯೋಜಿತವಾಗಿರುವ ಪಾಠಗಳನ್ನೂ (ಚೌಕ) ಕಂಸ ಚಿಹ್ನೆಗಳಲ್ಲಿ ಅಳವಡಿಸಿ ಪಾಠಸ್ವಾಮ್ಯಗಳನ್ನು ಕೆಲವೆಡೆ ಚರ್ಚೆ ಮಾಡಿದ್ದೇನೆ' ಎಂದು ಉಲ್ಲೇಖಿಸಿದ್ದಾರೆ. ಈ ಎಲ್ಲಾ ಉದ್ದೇಶ ಹಾಗೂ ವಿಧಾನಗಳನ್ನು ಕನ್ನಡದ ಕೃತಿಯೊಂದಕ್ಕೆ ಬಳಸಿದ ನಿದರ್ಶನ ಪಂಪಭಾರತಕ್ಕಿದೆ. ಡಿ.ಎಲ್.ಎನ್. ಅವರು ಈ ಕೃತಿಯಲ್ಲಿ ಬಿಡಿಸಿರುವ ಪಾಠಸಮಸ್ಯೆಗಳನ್ನು ಬಿಟ್ಟರೆ ಇಡಿ ಕೃತಿ ಪಂಪಭಾರತದ ಅಧ್ಯಯನಕ್ಕೆ ಒಂದು ಪ್ರಮುಖ ಆಕರವಾಗುತ್ತದೆ. ಅಧ್ಯಯನಕ್ಕೆ ಅವಶ್ಯವಾದ ಪರಿಕರಗಳನ್ನು ಸಿದ್ಧಪಡಿಸುವ ಮಾದರಿಗೆ ಪಂಪಭಾರತ ದೀಪಿಕೆಯು ಒಂದು ನಿದರ್ಶನವಾಗಿದೆ.

ತಮ್ಮ ಪ್ರಯತ್ನದ ಮಿತಿಗಳನ್ನು ಅವರು ಅರಿತಿದ್ದು ತಾವು ಊಹಿಸಿರುವ ಪ್ರಶ್ನಾರ್ಥಕ ಚಿಹ್ನೆಗಳನ್ನು ತೆಗೆದು ಹಾಕುವ ಕೆಲಸವು ವಿದ್ವಾಂಸರಿಗೆ ಸೇರಿದ್ದೆಂದು ಅವರು ಒಂದೆಡೆ ಉಲ್ಲೇಖಿಸಿದ್ದುಂಟು ಆದ್ದರಿಂದ ಸಂಶೋಧನಾ ಸಮಸ್ಯೆಗೂ ಒಂದು ಆಕರವಾಗಿ ದೀಪಿಕೆ ತನ್ನ ಸ್ಥಾನ ತುಂಬಿಕೊಂಡಿದೆ.

ಡಿ.ಎಲ್.ಎನ್.ಅವರು ಅಂದಿನ ದಿನಗಳಲ್ಲಿ ಪಂಪಭಾರತವೆಂಬ ಪ್ರಸಿದ್ಧ ಮಹಾಕಾವ್ಯಕ್ಕೆ ವ್ಯಾಖ್ಯಾನವೊಂದನ್ನು ಬರೆಯಬೇಕೆಂಬ ಬಹುದಿನಗಳ ಅಭಿಲಾಷೆ ಹಾಗೂ ಬಿ.ಎ., ಎಂ.ಎ., ತರಗತಿಗಳ ಪ್ರೌಢ ಕನ್ನಡ ವಿದ್ಯಾರ್ಥಿಗಳಿಗೆ ಈ ಕಾವ್ಯವನ್ನು ಭಾಗಶಃ ಆಗಾಗ ಪಾಠವನ್ನು ಹೇಳಿ ಇಡಿ ಗ್ರಂಥವನ್ನು ಚೆನ್ನಾಗಿ ಅಧ್ಯಯನ ಮಾಡಿಸಬೇಕೆಂಬ ದೃಷ್ಟಿಯಿಂದ ಈ ಕೃತಿ ರಚನೆಗೆ ಮುಂದಾಗಿದ್ದರು. ಇದಕ್ಕೆ ಪೂರಕವೆಂಬಂತೆ ಈ ಕೃತಿರಚನೆಯ ಕೆಲಸ ನೆರವೇರಿ ೧೯೭೧ರ ಕಾಲಘಟ್ಟಕ್ಕೆ ಲೋಕಾರ್ಪಣೆಗೊಳ್ಳುವಂತಾಯಿತು. ಇದಕ್ಕೆ ಮೂಲವಾಗಿ ಬಿ.ಎಲ್.ರೈಸ್‌ರಿಂದ ಸಂಪಾದಿತವಾದ ಪಂಪಭಾರತದ ಕೃತಿಯನ್ನು ಸಹಾಯಾರ್ಥವಾಗಿ ಬಳಸಿಕೊಂಡಿದ್ದರು ಬೆಳ್ಳಾವೆ ವೆಂಕಟನಾರಾಯಣಪ್ಪ ನವರಿಂದ ಸಂಪಾದಿತವಾಗಿ ಕರ್ನಾಟಕ ಸಾಹಿತ್ಯ ಪರಿಷತ್ತಿನಿಂದ ೧೯೩೧ರಲ್ಲಿ ಪ್ರಕಟವಾಗಿದ್ದ ಪಂಪಭಾರತದ ಪಠ್ಯವನ್ನು ಸಂಪೂರ್ಣವಾಗಿ ಡಿ.ಎಲ್.ಎನ್. ಬಳಸಿಕೊಂಡಿದ್ದು ಇಲ್ಲಿ ವಿಶೇಷವೆನಿಸಿದೆ. ಮೊದಲಿಗೆ ೧೯೭೧ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಈ ಕೃತಿಯು ೧೪ ಆಶ್ವಾಸಗಳಲ್ಲಿ ಸೂರೆಗೊಂಡದ್ದಾಗಿದೆ. ಕೃತಿಗೆ ತಕ್ಕಂತೆ ವಿಶಿಷ್ಠ ಪದಸೂಚಿಯು ಹೊಂದಿದಂತೆ ಒಟ್ಟು ೫೨೨ ಪುಟಗಳಲ್ಲಿ ಬಿತ್ತರಗೊಂಡ ಈ ಕೃತಿಯು ಈವರೆಗೆ ನಾಲ್ಕು ಮರುಮುದ್ರಣವನ್ನು ಕಂಡ ವಿದ್ವತ್‌ಪೂರಿತ ಕೃತಿ ಎನಿಸಿದೆ.

**• ಪಂಪಭಾರತ ದೀಪಿಕೆಯ ರೂಪ ಮತ್ತು ವಿನ್ಯಾಸ**

ಕನ್ನಡ ಸಾಹಿತ್ಯದ ಹರಿವಿನಲ್ಲಿ 'ಸೃಜನಶೀಲ ಸಾಹಿತ್ಯ ರಚನೆಯ ನಂತರದಲ್ಲಿ ವಿಮರ್ಶನಾ ಸಾಹಿತ್ಯ ಹುಟ್ಟಿದೆ. ಈ ವಿಮರ್ಶಾ ಸಾಹಿತ್ಯದಲ್ಲಿ ಪ್ರಮುಖವಾದದ್ದು ಟೀಕಾ

ಸಾಹಿತ್ಯ ಒಂದು ಕೃತಿಯ ಅರ್ಥ, ಭಾವ, ಉದ್ದೇಶ ಮತ್ತು ಸ್ವರೂಪಗಳನ್ನು ತಿಳಿಸುವುದಕ್ಕೆ ಟೀಕು ಎಂದು ಅರ್ಥೈಸಬಹುದಾಗಿದೆ. ಇದಕ್ಕೆ ಪರ್ಯಾಯವಾಗಿ ವ್ಯಾಖ್ಯಾನ, ಭಾಷೆ, ಟಿಪ್ಪಣಿ, ವಿವರಣೆ, ಸಾರರ್ಥ್ಯ ವಾಚ್ಯ ಎಂಬ ಇತ್ಯಾದಿ ಪದಗಳನ್ನು ಬಳಸಿಕೊಂಡು ಬಂದಿದ್ದೇವೆ.[೨] ಕನ್ನಡದಲ್ಲಿ ಟೀಕು, ವ್ಯಾಖ್ಯಾನ ಎಂಬ ಎರಡು ಪದಗಳು ಹೆಚ್ಚಾಗಿ ಬಳಕೆಗೊಂಡಿರುವುದನ್ನು ಕಾಣಬಹುದು. ಸೃಜನಸಾಹಿತ್ಯದ ಜೊತೆ ಜೊತೆಗೆ ಕನ್ನಡದಲ್ಲಿ ಟೀಕಾಸಾಹಿತ್ಯವು ವಿಪುಲವಾಗಿ ಬೆಳೆದುಬಂದಿದೆ. ಕನ್ನಡದಲ್ಲಿನ ಸಂಸ್ಕೃತ ಗ್ರಂಥಗಳಿಗೆ ಕನ್ನಡದಲ್ಲಿ ಟೀಕು, ಕನ್ನಡ ಕೃತಿಗಳಿಗೆ ಕನ್ನಡದಲ್ಲಿ ಟೀಕು ಎಂದು ಎರಡು ರೀತಿಯಾಗಿ ಬೆಳೆದು ಬಂದಿರುವುದನ್ನು ಗಮನಿಸಬಹುದು. ಆಧುನಿಕ ಪೂರ್ವದಲ್ಲಿಯೇ ಅಮರಕೋಶ, ಬಸವಣ್ಣನವರ ಟೀಕಿನ ವಚನಗಳು, ಶಬ್ದಮಣಿದರ್ಪಣ, ಭಾವಚಿಂತಾರತ್ನ, ನಾಗವರ್ಮನ ಅಭಿದಾನ ವಸ್ತುಕೋಶ, ಮೊದಲಾದ ಕೃತಿಗಳಿಗೆ ವ್ಯಾಖ್ಯಾನ ರೂಪದಲ್ಲಿ ಟೀಕುಗಳು ರಚನೆಗೊಂಡಿವೆ. ಈ ಪರಂಪರೆಯ ಮುಂದುವರಿಕೆಯಾಗಿ ಆಧುನಿಕ ಕಾಲದ ಅನೇಕ ವಿದ್ವಾಂಸರು, ಪಂಡಿತರು, ಹಳಗನ್ನಡ ಕಾವ್ಯ, ಪುರಾಣಗಳಿಗೆ ಟೀಕುಗಳನ್ನು ಬರೆದಿದ್ದಾರೆ. ಅಂತವುಗಳಲ್ಲಿ ಬಂದಾದ ಡಿ.ಎಲ್.ಎನ್. ಅವರ ಪಂಪಭಾರತ ದೀಪಿಕೆಗೆ ವಿಶೇಷದ ಮಹತ್ವ ಪ್ರಾಪ್ತವಾಗಿದೆ. ಒಂದರ್ಥದಲ್ಲಿ ವ್ಯಾಖ್ಯಾನ ಗ್ರಂಥಗಳ ಪ್ರಾಚೀನ ಪರಂಪರೆಯನ್ನು ಸಮರ್ಥ ರೀತಿಯಲ್ಲಿ ಮುಂದುವರೆಸಿದ ಕೀರ್ತಿಯು ಇವರದ್ದಾಗಿದೆ.

ಪಂಪನಿಂದ ರಚಿತವಾದ ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತ ಕೃತಿಯು ಭಾರತೀಯ ಪ್ರಮುಖ ಕೃತಿಗಳಲ್ಲೊಂದಾಗಿದ್ದಲ್ಲದೆ ಕನ್ನಡದಲ್ಲೇ ರಚನೆ ಕಂಡ ಕೃತಿಯಾಗಿದ್ದು ಕನ್ನಡಿಗರಿಗೆ ಹೆಮ್ಮೆಯ ವಿಷಯವಾಗಿದೆ. ೧೮೯೮ರಲ್ಲಿ ರೈಸ್‌ರಿಂದ ಪ್ರಥಮಬಾರಿಗೆ ಸಂಪಾದಿತವಾಗಿ ಪ್ರಕಟಗೊಂಡ ಈ ಕೃತಿಯು ನಂತರದಲ್ಲಿ ಟಿ.ಎಸ್.ವೆಂಕಣ್ಣಯ್ಯ ಹಾಗೂ ಕೆ.ನಂಜುಂಡ ಶಾಸ್ತ್ರಿಗಳ ನೆರವಿನಿಂದ ಬೆಳ್ಳಾವೆ ವೆಂಕಟನಾರಾಯಣಪ್ಪನರು ಪರಿಷ್ಕರಿಸಿ ಸಂಕಲಿಸಿದ ಪಠ್ಯ ಇದಾಗಿದೆ. ಕೃತಿ ಉದ್ದಕ್ಕೂ ಹರಡಿದ ಉಪೋದ್ಘಾತ, ವಿಸ್ತಾರವಾದ ಕಥಾಸಾರ, ಅರ್ಥಕೋಶ, ಇತರೆ ರೂಪುಗೊಳ್ಳುವಿಕೆಗಳಿಂದ ೧೯೩೧ರಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿನಿಂದ ಪ್ರಥಮಬಾರಿಗೆ ಮುದ್ರಣ ಕಂಡ ಕೃತಿಯಾಗಿದೆ. ಮುಂದೆ ೪೨ ವರ್ಷಗಳ ನಂತರ ಅಂದರೆ ೧೯೭೩ರ ಹೊತ್ತಿಗೆ ಮೈಸೂರು ವಿಶ್ವವಿದ್ಯಾಲಯವು ಈ ಕೃತಿಯನ್ನು ಮರುಮುದ್ರಣಗೊಳಿಸಿ ಕನ್ನಡಿಗರ ಮನೆ, ಮನೆ ತಲುಪುವಂತೆ ಮಾಡಿತು. ಇಂದಿಗೂ ಜನಮನ್ನಣೆ ಪಡೆದ ಈ ಕಾವ್ಯ ಹತ್ತಾರು ಮರು ಮುದ್ರಣಗಳನ್ನು ಕಾಣುತ್ತಾ ಸಾಗಿದೆ. ಈ ಕುರಿತು ಕೃತಿಗೆ ಪೂರಕವಾಗಿ ಅನನ್ಯತೆಯ ನಿದರ್ಶನವೆಂಬಂತೆ ಕನ್ನಡ ಸಾಹಿತ್ಯ ಲೋಕದಲ್ಲಿ ಬಿಡಿಯಾಗಿ ಹಾಗೂ ಹಿಡಿಯಾಗಿ ಹತ್ತಾರು ಚರ್ಚೆಗಳು, ವಿವಿಧ ಸಾಹಿತ್ಯ ಬರಹಗಳು, ಅಧ್ಯಯನಗಳು, ಸಂವಾದಗಳು, ನಿರಂತರವಾಗಿ ಇಂದಿಗೂ

ನಡೆಯುತ್ತಿರುವುದು ಮಹತ್ತರ ಸಂಗತಿ ಎನಿಸಿದ್ದು ಇಂತಹ ಬಹುಮುಖ್ಯ ಅಧ್ಯಯನ ನೆಲೆಗಳಲ್ಲೊಂದಾದದ್ದು ಡಿ.ಎಲ್.ಎನ್. ಅವರ ಪಂಪಭಾರತ ದೀಪಿಕೆ.

ಈ ಕೃತಿಯ ರಚನಾ ವಿನ್ಯಾಸದ ನೆಲೆಯಲ್ಲಿ ನೋಡುವುದಾದರೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ೧೯೩೧ರಲ್ಲಿ ಬಿ.ವೆಂಕಟನಾರಾಯಣಪ್ಪನವರ ಸಾರಥ್ಯದಲ್ಲಿ ಪರಿಷ್ಕೃತಗೊಂಡ ಪಂಪಭಾರತದ ಪಾಠವನ್ನು ಈ ಕೃತಿಯ ರಚನಾ ವಿನ್ಯಾಸದಲ್ಲಿ ಡಿ.ಎಲ್.ಎನ್.ರವರು ಅನುಸರಿಸಿದ್ದು ಉಚಿತವೆನಿಸಿದೆ. ಇಲ್ಲಿ ಮೂಡಿಬಂದ ಕಥೆಗಳಲ್ಲಿ ಅಡಿಟಿಪ್ಪಣಿಸಹಿತ ಪಾಠಾಂತರಗಳನ್ನು ಪರಿಗಣಿಸಲಾಗಿದೆ, ಸ್ವೀಕೃತವೆನಿಸಿದ ಪಾಠಗಳನ್ನು ಕೈಬಿಡಲಾಗಿದ್ದು ಕೆಲವೆಡೆ ಹೊಸ ಪಾಠಗಳನ್ನು ಕಂಸದಲ್ಲಿ ಅಳವಡಿಸಲಾಗಿದೆ. ಕೃತಿ ಉದ್ದಕ್ಕೂ ಅವಶ್ಯವೆನಿಸಿದ ಪಾಠ ಸಮಸ್ಯೆಗಳನ್ನು ಅಲ್ಲಲ್ಲಿ ಚರ್ಚಿಸಲಾಗಿದ್ದಲ್ಲದೆ, ಪ್ರತಿಪದವನ್ನು ಅರ್ಥಸಹಿತವಾಗಿ ವಿಸ್ತರಿಸಿ ಈ ಟೀಕೆಯನ್ನು ರಚಿಸಲಾಗಿದೆ. ಕೃತಿ ಉದ್ದಕ್ಕೂ ವ್ಯಾಕರಣ, ಛಂದಸ್ಸು ಪೂರ್ವಕಥಾವೃತ್ತಾಂತ, ಶಬ್ದಾರ್ಥನಿರ್ಣಯಗಳ ಜೊತೆಗೆ ಪೂರಕ ಆಕರ ಕೃತಿಗಳನ್ನು ಇಲ್ಲಿ ಉಲ್ಲೇಖಿಸಿದ್ದು ಕಂಡುಬಂದಿದೆ. ಪಾಠಪರಿಷ್ಕರಣೆ, ಪದ್ಯಗಳ ಅರ್ಥೈಸುವಿಕೆಯಲ್ಲಿ ಗದಾಯುದ್ಧ, ಕುಮಾರವ್ಯಾಸಭಾರತ, ಮುಂತಾದ ಪ್ರಾಚೀನ ಕಾವ್ಯಗ್ರಂಥಗಳನ್ನು ಸಂದರ್ಭಾನುಸಾರವಾಗಿ ಬಳಸಿಕೊಂಡು ಆಕೃತಗೊಂಡ ಈ ಕೃತಿಯ ಕೊನೆಯಲ್ಲಿ ಹೆಚ್ಚಿನ ಅರಿವಿನ ನೆರವಿಗಾಗಿ ವಿಶಿಷ್ಟ ಪದಸೂಚಿ, ಗ್ರಂಥಸೂಚಿ, ಸಂಕೇತಗಳ ವಿವರಗಳನ್ನೊಳಗೊಂಡುದ್ದಾಗಿದೆ.

• **ದೀಪಿಕೆಯಲ್ಲಿನ ಆಯ್ದ ಪಾಠಕ್ಲೇಶಗಳ ವಿವರಣೆ**

ಪಂಪಭಾರತದ ಅಭ್ಯಾಸಿಗರಿಗೆ ಚಿರಂತನವಾಗಿ ನೆರವಾಗುವ ಕೈಗನ್ನಡಿ ರೂಪದ ಕೃತಿಯು ಈ ಪಂಪಭಾರತ ದೀಪಿಕೆ ಈ ಕೃತಿಯನ್ನು ಆರಂಭದಿಂದ ಕೊನೆಯವರೆಗೂ ಅಭ್ಯಾಸಿಸಿದಾಗ ಡಿ.ಎಲ್.ಎನ್. ಅವರ ಅದ್ಭುತವಾದ ಸ್ಮರಣ ಶಕ್ತಿ ನಿಖರವಾದ ಪಾಂಡಿತ್ಯ ಶಬ್ದಾರ್ಥಗಳನ್ನು ವಿವೇಚಿಸುವ ಸರ್ವವಿಧವಾದ ಸಾಮರ್ಥ್ಯ ಹಾಗೂ ಕೃತಿ ಉದ್ದಕ್ಕೂ ಮೂಡಿಬಂದ ವಿವರಣಾ ನೈಪುಣ್ಯತೆಯು ಅಭ್ಯಾಸಿಗರಿಗೆ ಅಚ್ಚರಿಯನ್ನುಂಟು ಮಾಡುವಂತಾಗಿದೆ.

ಪಾಠಾಂತರಗಳನ್ನು ವಿವೇಚಿಸಿ ಸರಿಯಾದ ಪಾಠವನ್ನು ಗುರುತಿಸುವಲ್ಲಿ ಸಂದರ್ಭೋಚಿತವಾಗಿ ಸ್ವಂತ ಪಾಠವನ್ನು ಊಹಿಸುವಲ್ಲಿನ ಅವರ ಆಸಾಧಾರಣವಾದ ವಸ್ತುನಿಷ್ಟವಾದ ನಿಲುಮೆ ಅಗಮ್ಯವಾಗಿದೆ. ಪಾಠಾಂತರ, ಅನ್ವಯ, ಅರ್ಥ ಈ ವಿಷಯಗಳ ಕುರಿತು ಪ್ರಾಮಾಣಿಕವಾಗಿ ಎಷ್ಟು ಹೇಳಬೇಕೋ ಅಷ್ಟನ್ನೇ ಖಚಿತವಾಗಿ ಹೇಳಿದ್ದಾರೆ. ಅಲ್ಲದೆ ಅಷ್ಟೆ ಪ್ರಾಮಾಣಿಕವಾಗಿ ತಮಗೆ ತಿಳಿಯದ ಪದಗಳ ಅರ್ಥ, ಆ ವಿಚಾರಗಳನ್ನು ತಮಗೆ ತಿಳಿಯದು ಎಂದು ಸಂದರ್ಭೋಚಿತವಾಗಿ ಒಪ್ಪಿಕೊಂಡು ಮುಂದಿನ ವಿವರಣಾಕಾರರಿಗೆ ದಾರಿಯನ್ನು ತೆರೆದುಕೊಟ್ಟದ್ದು ಇವರ ಅಧ್ಯಯನದ ಪ್ರಾಮಾಣಿಕತೆಯನ್ನು ಎದ್ದು ಕಾಣುವಂತೆ ಮಾಡಿದೆ. ಈ ಕೃತಿಯು ಪ್ರಕಟವಾದ ಮೇಲೆ ಇದರಲ್ಲಿನ ಕೆಲ ವಿಚಾರಗಳ ಕುರಿತು

ಪ್ರಶಂಸೆಯೊಂದಿಗೆ ಕೆಲಮಟ್ಟಿಗೆ ಚರ್ಚೆಗಳು ನಡೆದಿದ್ದು ಅಭ್ಯಾಸ ಪೂರಕವಾಗಿ ತಿಳಿದುಬಂದಿದೆ. ವಿಶೇಷವಾಗಿ ಮೊದಲನೆಯ ಪದ್ಯದ ವಿಚಾರವಾಗಿ ಟಿ.ವಿ.ವೆಂಕಟಾಚಲಶಾಸ್ತ್ರಿಯವರು ತಮ್ಮ ಸಾಹಿತ್ಯ ಸನ್ನಿಧಿ ಕೃತಿಯಲ್ಲಿನ 'ಡಿ.ಎಲ್. ನರಸಿಂಹಾಚಾರ್' ಪಂಪಭಾರತ ದೀಪಿಕೆ ಶೀರ್ಷಿಕೆಯಡಿಯಲ್ಲಿ ಬಹುವಾಗಿ ಚರ್ಚಿಸಿದ್ದು ಕಂಡುಬಂದಿದೆ. ಇಷ್ಟೇ ಅಲ್ಲದೆ ಇತರೆ ವಿದ್ವಾಂಸರು ಈ ಕೃತಿಯಲ್ಲಿನ ಹತ್ತಾರು ವಿಚಾರಗಳ ಕುರಿತು ಬಿಡಿಯಾಗಿ ಅಥವಾ ಹಿಡಿಯಾಗಿ ಪದ್ಯಗಳಲ್ಲಿನ ಪಾಠಾಂತರ, ಅನ್ವಯ, ಅರ್ಥಗಳ ಬಗ್ಗೆ ಕಾಲಕಾಲಕ್ಕೂ ಇನ್ನೂ ಚರ್ಚೆಗಳನ್ನು ನಡೆಸಿಕೊಂಡು ಬಂದಿರುವುದು ಹತ್ತಾರು ನಿದರ್ಶನಗಳನ್ನು ನನ್ನ ಅಧ್ಯಯನದಲ್ಲಿ ಪೂರಕವಾಗಿ ಗಮನಿಸದ್ದಾಗಿದೆ.

ಕನ್ನಡ ಸಾಹಿತ್ಯ ಲೋಕದಲ್ಲಿ ಪ್ರಾಚೀನ ಕಾವ್ಯಗಳಿಗೆ ಶಾಸ್ತ್ರ ಶುದ್ಧವಾದ ಟೀಕೆಗಳು ಬಹಳ ಕಡಿಮೆ ಇವೆ. ಇಂತಹ ಅಲ್ಪ ಕೃತಿಗಳಲ್ಲೊಂದಾದುದು ಡಿ.ಎಲ್.ಎನ್. ರವರು ಬರೆದ 'ಪಂಪಭಾರತ ದೀಪಿಕೆ' ಯು ವಿಕ್ರಮಾರ್ಜುನ ವಿಜಯಕ್ಕೆ ಬರೆದ ವ್ಯಾಖ್ಯಾನದ ಗ್ರಂಥವಾಗಿದೆ. ಅವರ ಹಲವು ವರ್ಷಗಳ ಅಧ್ಯಯನ ಸಂಶೋಧನಾ ಪಾಂಡಿತ್ಯ ಪೂರ್ಣ ಫಲ ಈ ವ್ಯಾಖ್ಯಾನ ಗ್ರಂಥವಾಗಿದೆ. ಪಂಪಭಾರತ ದೀಪಿಕೆ ಅಥವಾ ವಿಕ್ರಮಾರ್ಜುನ ವಿಜಯವು ಸದ್ಯಕ್ಕೆ ಕನ್ನಡದಲ್ಲಿನ ಆದ್ಯ ಲೌಕಿಕ ಕೃತಿಯಾಗಿದೆ. ಡಿ.ಎಲ್.ಎನ್. ರವರು ಈ ಪ್ರಾಚನ ಕೃತಿಯನ್ನು ಮೇಲಿಂದ ಮೇಲೆ ಅಧ್ಯಯನ ಮಾಡಿ ಅಲ್ಲಿ ಇದಿರಾಗುವ ಮುದ್ರಿತ ಪಾಠದ ತೊಡಕುಗಳನ್ನು, ಸಮಸ್ಯೆಗಳನ್ನು ಪರಿಹರಿಸಿಕೊಂಡು ಶುದ್ಧ ಪಾಠಗಳನ್ನು ಈ ವ್ಯಾಖ್ಯಾನದಲ್ಲಿ ಕೊಟ್ಟಿರುವರು, ಇದು ಸಾಹಿತ್ಯಾಧ್ಯಾಯನಕಾರರಿಗೆ ಮಹದುಪಕಾರವಾಗಿದೆ. ಈ ಟೀಕೆಯೂ ಪ್ರತಿಪದಾರ್ಥ ಸಹಿತವಾಗಿದ್ದು ವ್ಯಾಕರಣ, ಛಂದಸ್ಸು, ಪೂರ್ವಕಥಾವೃತ್ತಾಂತ, ಶಬ್ದಾರ್ಥ ನಿರ್ಣಯ, ಆಕರ ಗ್ರಂಥಗಳು ಸೇರಿ ಮುಂತಾದ ಅನೇಕ ವಿಷಯಗಳು ಈ ಟೀಕೆಯಲ್ಲಿ ನಿರೂಪಿತವಾಗಿವೆ. ಅಲ್ಲದೆ ಡಿ.ಎಲ್.ಎನ್. ರವರೆ ಸ್ವತಃ ತಮಗೆ ಅರ್ಥವಾಗದ ಸಂದೇಹಾಸ್ಪದ ವಿಚಾರಗಳಿಗೆ ಅಲ್ಲಲ್ಲಿ ಪ್ರಶ್ನಾರ್ಥಕ ಚಿಹ್ನೆಗಳನ್ನು ತೋರಿದ್ದಾರೆ. ಅಲ್ಲದೇ ಪಂಪಭಾರತದಲ್ಲಿ ಅಂದಿನ ಕಾಲದ ಅಪರೂಪದ ವಿಚಾರಗಳನ್ನು ಸಂದರ್ಭಕ್ಕನುಗುಣವಾಗಿ ಚರ್ಚಿಸಿದೆ. ಇದನ್ನು ಡಿ.ಎಲ್.ಎನ್. ರವರು ವ್ಯಾಖ್ಯಾನಿಸುವಾಗ ಅವುಗಳ ಶಬ್ದಾರ್ಥ ನಿರ್ಣಯ ಮಾಡಿರುವ ರೀತಿ ಅವರ ಪಾಂಡಿತ್ಯ ಪ್ರತಿಭೆಗೆ ನಿದರ್ಶನವಾಗಿದೆ.

'ಪಂಪನಲ್ಲಿ ಒಂದು ವಿಶೇಷವಾದ ಪದ ಕಂಡು ಬಂದಾಗ ಆ ಪದದ ಪ್ರಯೋಗ ಬೇರೆ ಎಲ್ಲಿ ಬಳಕೆಗೊಂಡಿದೆ ಎಂಬುದನ್ನು ಡಿ.ಎಲ್.ಎನ್. ತಿಳಿಸಿದ್ದು ಕಂಡುಬಂದಿದೆ. ಉದಾ : 'ಕೀರ್ತಿಮುಖ ಮಂಗಳ ಪಾತ್ರ ಚೂಡಾಮಣಿ' ಎಂಬ ನರ್ತಕಿಯ ಅಲಂಕಾರಗಳನ್ನು ವರ್ಣಿಸುವಾಗ ವೃತ್ತ ವಿಲಾಸನು ಮೂಗಿನ ಮೂಗುತಿಯೆ ತೋರೆಹಾರದ್ರೆ ಕೀರ್ತಿ ಮುಖದ ತೋಳಬಂದಿಯ ಕಾಲಹಳಜನುಂಗುರದ ಎಂಬಲ್ಲಿ ಈ ಶಬ್ದವನ್ನು ಬಳಸಿದ್ದಾನೆ.

'ಬಳೆಗೋದುದು ಕೀರ್ತಿ ದಿಶಾಕರಿರಳ್‌ಭಂಗಳ ನಿಗ್ಗ ವಂಗಳೊಳ್' ಎಂಬ ಜನ್ನನ ಪ್ರಯೋಗವನ್ನು ಶಬ್ದ ಅರ್ಥದೃಷ್ಟಿಯಿಂದ ನೋಡಬಹುದಾಗಿದೆ.'[೩] ದೀಪಿಕೆಯ ಪುಟ ಸಂಖ್ಯೆ ೨೩೮ರಲ್ಲಿ ವಿಷಾದಿತವಾದ ವಿಷಯದನ್ವಯ ಮೂಲ ಪಂಪನ ಕೃತಿಯಲ್ಲಿ ಮೂಡಿಬಂಧ ದ್ಯೂತ ಪ್ರಸಂಗವನ್ನು ವಿವರಿಸುವ ಸಂದರ್ಭದಲ್ಲಿ ಇದು ಕರ್ಣ ಪಾರ್ಯನ ನೇಮಿನಾಥ ಪುರಾಣದಲ್ಲಿಯೂ, ಮಂಗರಸನ ನೇಮಿಜಿನೇಶನ ಸಂಗತಿಯಲ್ಲಿಯೂ ಮೂಡಿಬಂದಿದ್ದನ್ನೂ ತಿಳಿಸುತ್ತಾ ಇವರುಗಳು ಪಂಪನನ್ನು ಅನುಸರಿಸಿದ್ದನ್ನು ಡಿ.ಎಲ್.ಎನ್. ಎತ್ತಿ ಹೇಳಿದ್ದು ಅವರ ವಿಸ್ತಾರವಾದ ಓದಿಗೆ ನಿದರ್ಶನವೆನಿಸುತ್ತಿದೆ.

ಡಿ.ಎಲ್.ಎನ್. ಅವರ ಸೂಕ್ಷ್ಮಮತಿಯನ್ನು ತಿಳಿಯುವುದು ಅವರಷ್ಟೆ ಆಳವಾದ ಅಭ್ಯಾಸದಲ್ಲಿ ತೊಡಗಿಕೊಂಡವರಿಗೆ ಮಾತ್ರ ಗ್ರಹಿಸಲು ಸಾಧ್ಯವೆನಿಸಿದೆ. ಉದಾ: ಅವರ ಸೂಕ್ಷ್ಮಮತಿ ಎಷ್ಟರ ಪ್ರಮಾಣದಲ್ಲಿ ಹೊಳಹುಗೊಂಡಿತ್ತೆಂದರೆ ಪಂಪ ಭಾರತದಲ್ಲಿ ಬಂದಿರುವ ಅಪೂರ್ವ ಪದಗಳನ್ನು ಕಂಡ ಕ್ಷಣವೇ ಅದರ ಪೂರ್ವಪರತೆ ಬಗ್ಗೆ ತಾಳೆಹಾಕುತ್ತಿದ್ದುದು ಅವರ ತೀಕ್ಷ್ಣತೆಗೆ ಹಿಡಿದ ಕನ್ನಡಿ ಎನಿಸಿದೆ. ಉದಾ : 'ಆಶ್ವಾಸ ೧೨ ಪುಟ ೧೬೦ರಲ್ಲಿ ಕಾಣಸಿಗುವ 'ಸುಪ್ಪಾತ್' ಎನ್ನುವ ಪದದ ನಿಷ್ಪತ್ತಿ ವಿಚಾರವಾಗಿ ಡಿ.ಎಲ್.ಎನ್. ರವರು ಈ ರೀತಿ ವಿವರಿಸಿದ್ದಾರೆ. 'ಉಪ್ಪು' ಎಂಬ ತಮಿಳು, ತೆಲಗು, ಕನ್ನಡ, ಮಲೆಯಾಳಂ ತುಳು, ಶಬ್ದಕ್ಕೆ ಉತ್ತರ ದ್ರಾವಿಡದ ಆದಿ 'ಸ'ಕಾರ ದಕ್ಷಿಣ ದ್ರಾವಿಡದಲ್ಲೂ ಲೋಪವಾಗುವುದೆಂಬ ನಿಯಮದಂತೆ 'ಸುಪ್ಪು', 'ಉಪ್ಪು,' ಆಗುತ್ತದೆ. ಈ ಸುಪ್ಪು+ಅಲ್ ಎನ್ನುವುದು ಕನ್ನಡದಲ್ಲಿ ಇದೊಂದೆಡೆ ಉಳಿದುಕೊಂಡಿದೆ ಇದು ಬಹುಶಃ ಪ್ರಾಚೀನ ದ್ರಾವಿಡದ ಅವಶೇಷವೇ ಸರಿ ಎಂದು ವಿಶದಪಡಿಸಿದ್ದಾರೆ.'[೪]

'ಪಂಪಭಾರತ' ಕೃತಿಯಲ್ಲಿ ಬರುವ ಅನೇಕ ಪಾಠ ಸಮಸ್ಯೆಗಳನ್ನು ಡಿ.ಎಲ್.ಎನ್. ಅವರು ಅತ್ಯಂತ ಸಮರ್ಪಕವಾಗಿ ಬಿಡಿಸಿ ಸರಿಯಾದ ಪಾಠವನ್ನು ದೀಪಿಕೆಯ (ಚೌಕ) ಕಂಸಗಳಲ್ಲಿ ಕೊಟ್ಟಿದ್ದಾರೆ. ಉದಾ: 'ಆಶ್ವಾಸ ೧೪ರ ಪದ್ಯ ೧೫ರಲ್ಲಿ ಬರುವ 'ಸುಯ್ಯತಾಣದ' ಎನ್ನುವ ಪಾಠ ದೋಷಯುಕ್ತವಾಗಿರುವುದನ್ನು ಕಂಡುಕೊಂಡು ಡಿ.ಎಲ್.ಎನ್. ಸೂಯಿಯಾಣದ, ಎಂಬ ಊಹಾತ್ಮಕ ಪಾಠಕೊಟ್ಟು ಈ ಪಾಠದ ಬಗೆಗೆ ಅವರು ಕೊಟ್ಟಿರುವ ವಿವರಣೆ ಹೀಗಿದೆ. ಸೂಜೀಯಾನ>ಸೂಯಿಯಾಣ, ವಾತ್ಸಾಯನನ ಕಾಮಸೂತ್ರದಲ್ಲಿ ಚತು; ಷಷ್ಠಿ ಕಲೆಗಳನ್ನು ಹೆಸರಿಸುವಾಗ (ಅಧಿಕರಣ–೧, ಅಧ್ಯಾಯ೩, ಸೂತ್ರ ೧೬) ೨೫ನೇಯದಾಗಿ "ಸೂಚೀವಾನ ಕರ್ಮಾಣಿತಿ, ಸೂಚ್ಯಾಯತ್ಸಂಧಾನಕರಣಂ ತತ್ಸೂಬೇವಾನಂ, ತ್ರಿವಿಧಂ ನವನಮ್ ಊತಾಮ್ ವಿರಚನ್‌ಮ್ ತತ್ರಾದ್ಯಂ ಕಂಚುಕಾದೀನಾಮ್ ಇಯೆಂ ಪ್ರತೀತಾರ್ಥ್ಯೆವ" ಎಂದಿದೆ ಇದರಂತೆ ಸೂಜೀವಾನ್ ಎಂಬುದು ಶಬ್ದವಾಗುತ್ತದೆ. 'ಸಾಹಿಯಾಣ' ಎಂದು ಆದಿ ಪುರಾಣದ ಮುದ್ರಿತ ಪ್ರತಿಗಳಲ್ಲಿ ಇದೆ. (೪.೩೪) ಇದೇ ರೂಪ 'ಸುಕುಮಾರಚರಿತ'ದಲ್ಲೂ

ಉಂಟು (೧೦-೯೧), ಆದಿಪುರಾಣದ ಒಂದು ಹಸ್ತಪ್ರತಿಯಲ್ಲಿ ಸುಯಿಯಾಣ ಎಂದು ಕೇಶಿರಾಜ (ಸೂ-೩೦೯) ಭಟ್ಟಾಕಳಂಕನು ಕೀಲಾರಾದಿ ಆಕೃತಿ ಗಣದಲ್ಲಿ (ಸೂತ್ರ ೩೭೮) ಸುಯಾಣ ಶಬ್ದವನ್ನು ಕಾಣಿಸಿ ವ್ಯಾಖ್ಯಾನದಲ್ಲಿ ಸೂಯಾಣಂ ಸೂಪಸ್ಥಾನಂ, ಮಹಾನ್ ಸಮಿತಿಯಾವತ್ ಎಂದು ಬರೆದಿದ್ದಾನೆ. ಇದರಂತೆ ಸೂಯಾಣವೆಂದರೆ, 'ಅಡಿಗೆ ಮಾಡುವ ಎಡೆ,' ಪಾಠಶಾಲೆ, ಬಾಣಸಿನ ಮನೆ ಎಂದರ್ಥವಾಗುತ್ತದೆ. ಆದರೆ ಸೂಪಸ್ಥಾನ ಶಬ್ದವು ಸೂಯಟ್ಠಾಣ, ಸೂಯೆಠಾಣ ಎಂಬ ರೂಪಗಳನ್ನು ಪ್ರಾಕೃತದಲ್ಲಾಗಲಿ ಕನ್ನಡದಲ್ಲಾಗಲಿ ಕಾಣಲು ಆಗದು. ಕೇಶಿರಾಜನು 'ಸೂಚೀಯಾನ'ದ ತದ್ಭವ 'ಸೂಯಾ'ಣ ಎಂದು ಹೇಳಿದ್ದರೂ ಭಟ್ಟಾಕಳಂಕನ ಹೀಗೆ ಹೇಳಿರುವುದು ಸೂಜಿಗವಾಗಿದೆ. ಅವನ 'ಸೂಪಸ್ತಾನ'>'ಸೂಯಾ'ಣ ಎಂಬ ಅಭಿಪ್ರಾಯವನ್ನು ಬಿಡಬಹುದು. ಸುಯಿಯಾಣ, ಸೂಚಿಯಾಣ, ಸುಯಾಣ, ಸೂಯಾಣ ಎಂಬೀ ರೂಪಗಳು ಸಾಧುವೆಂದು ಪರಿಗ್ರಹಿಸಬಹುದು. ಇವುಗಳಿಗೆ ಸಂಸ್ಕೃತದ ಮೂಲ ಸೂಜೀಯಾನವೆಂದು ಸ್ಪಷ್ಟವಾಗಿದೆ. ವಾತ್ಸಾಯನನು ಕೊಟ್ಟಿರುವ ಸೂಜೀವಾನವೆಂಬುದು ಇನ್ನೊಂದು ರೂಪವಿರಬೇಕು ಇದಕ್ಕೆ ಹರಿದ ವಸ್ತ್ರಗಳನ್ನು ಸೇರಿಸಿ ಹೋಲಿಯಿಯುವುದು ಹಾಗೇ ಹೋಲಿದ ಬಟ್ಟೆ ಎಂಬರ್ಥವಿದೆ'[೫] ಎಂದು ವಿಸ್ತೃತವಾಗಿ ವಿವರಿಸಿದ್ದು ಕಂಡುಬಂದಿದೆ.

'ಪ್ರಾಚೀನ ಕನ್ನಡಕಾವ್ಯ ಒಂದಕ್ಕೆ ಪೂರ್ಣಪ್ರಮಾಣದ ವ್ಯಾಖ್ಯಾನವನ್ನು ಈ ರೀತಿಯಾಗಿ ಬರೆಯುವ ಪ್ರಯತ್ನ ಈಚೇಗೆ ಅನೇಕ ದಶಕಗಳಿಂದ ಕಂಡುಬಂದಿರಲಿಲ್ಲ. ಲಕ್ಷ್ಮೀಶ, ಷಡಕ್ಷರಿ, ಮೊದಲಾದ ಕವಿಗಳ ಸಂಚಿಕಾ ಗ್ರಂಥಗಳು ಕನ್ನಡಿಗರ ಅಭಿರುಚಿಯ ಬೇದದಿಂಲೋ ಪ್ರೋತ್ಸಾಹದ ಅಭಾವದಿಂದಲೋ ಪುನರ್ ಮುದ್ರಣಗೊಳ್ಳುವುದು ನಿಂತಿದೆ. ಪ್ರಾಚೀನ ಜೈನಕಾವ್ಯಗಳಿಗಂತೂ ಆಯೋಗವೇ ಇಲ್ಲವೇನೋ ಎಂಬಂತಾಗಿದೆ. ಗದ್ಯ ರೂಪಗಳು ಈಚೆಗೆ ವಿಪುಲವಾಗಿ ಕಂಡು ಬರುತ್ತಿದ್ದರೂ ಶಬ್ದಾರ್ಥಗಳ ನೆಲೆಗಟ್ಟಿನ ಮೇಲೆ ಆಶಯವನ್ನು ಖಚಿತಪಡಿಸಲು ಸಹಕಾರಿಯಾಗುವ ವಿವರಣೆ, ವಿಶ್ಲೇಷಣೆಗಳ ಮೂಲಕ ಕವಿಯೇ ಅಭಿಪ್ರಾಯವನ್ನು ವಿಷದಪಡಿಸುವ ವ್ಯಾಖ್ಯಾನಗಳು ಕಾಣಿಸುತ್ತಿಲ್ಲ. ಈ ಹಿನ್ನೆಲೆಯಲ್ಲಿ 'ಪಂಪಭಾರತ ದೀಪಿಕೆ'ಯು ಹಳಗನ್ನಡ ಕಾವ್ಯಗಳ ವ್ಯಾಖ್ಯಾನಗಳ ಹಿನ್ನೆಲೆಯಲ್ಲಿ ಒಂದು ಅನನ್ಯವಾದ ಸಾಧನೆ ಎನಿಸಿದೆ.'[೬]

'ಪಂಪಭಾರತ' ಕಾವ್ಯಕ್ಕೆ ಈಗಾಗಲೇ ರೂಪ ಕೊಟ್ಟಿರುವ ವಿಮರ್ಶೆ, ಕವನ, ಸಂಗ್ರಹ, ಗದ್ಯರೂಪ, ಪಾತ್ರಸನ್ನಿವೇಶಗಳ ಚಿತ್ರಣ, ಪಾಠಪರಿಶೀಲನೆ, ವ್ಯಾಕರಣ ರೂಪಗಳಿತ್ಯಾದಿಗಳಾಗಿದ್ದರು ಇವೆಲ್ಲವುಗಳಲ್ಲೊಂದಾಗಿ ಸೇರ್ಪಡೆಗೊಂಡು ಈ ಕೃತಿಯ ಮೇರುತನವನ್ನು ಎತ್ತಿಸಿರುವುದು 'ಪಂಪಭಾರತ ದೀಪಿಕೆ' ಎನಿಸಿದೆ.

ಈ ಕಾವ್ಯದ ವಿಸ್ತಾರತೆ ಹೆಚ್ಚಿಸಲು ಡಿ.ಎಲ್.ಎನ್ ಅವರು ಮೂಲ ಪಂಪಭಾರತದಲ್ಲಿ ಬರುವ ಸಂದರ್ಭಗಳನ್ನು ಅಲ್ಲಲ್ಲಿ ತೌಲನಿಕವಾಗಿ ವಿವೇಚಿಸುವ ಪ್ರಯತ್ನ ಮಾಡಿದ್ದನ್ನು

ದೀಪಿಕೆಯಲ್ಲಿ ಕಾಣಬಹುದಾಗಿದೆ. ಉದಾ: ಭೀಮಸೇನನು ರಣಾಂಗಣದಲ್ಲಿ ನಡೆಸುವ ಪೈಶಾಚಿಕ ವರ್ತನೆಯನ್ನು ಆಶ್ವಾಸ ೧೨, ಪದ್ಯ ೧೬೧, ರಲ್ಲಿ ವಿವರಿಸಿದಂತೆ 'ಮುಕುಟ ತಾಡಿತಕ' ಎಂಬೊಂದು ನಷ್ಟ ನಾಟಕದಲ್ಲಿ ಇರುವುದೆಂದು ಹೇಳಲಾಗಿರುವ ಪದ್ಯ ಒಂದನ್ನು ಹೋಲಿಕೆಗೆ ಕೊಟ್ಟಿರುವುದು,

'ಧ್ವಸ್ತಾ; ಕ್ಷುದ್ರಾ; ಧಾರ್ತರಾಷ್ಟ್ರ; ಸುಮಸ್ತಾ;

ಪೀತಂ ಶಕ್ತಂ ಸಾಧು ದುಶ್ಯಾಸನಸ್ಯ।

ಪೂರ್ಣಾ ಕೃಷ್ಣಾ ಕೇಶಬಂಧ ಪ್ರತಿಜ್ಞಾ

ತೀಷ್ಠೈತ್ಯೇಕಂ ಕೌರವಸ್ಯೂರುಭಂಗ ॥'[೭]

ಎಂದಿದೆ, ಪಂಪಭಾರತದಲ್ಲಿ ಕರ್ಣನ ಮಗ ವೃಷಸೇನನ ಮರಣ ಭಾಗವನ್ನು ವ್ಯಾಖ್ಯಾನಿಸುವಾಗ (ಆಶ್ವಾಸ ೧೨, ಪದ್ಯ ೬೨ರಿಂದ ೧೬೯) ವ್ಯಾಸಭಾರತದಲ್ಲಿರುವ ವೃಷಸೇನನ ವಧೆಯ ಪ್ರಸಂಗವನ್ನು ಬೇರೆ ರೀತಿಯಾಗಿ ಡಿ.ಎಲ್.ಎನ್. ಅವರು ವಿವರಿಸಿದ್ದಾರೆ. ವೃಷಸೇನನ ರಥಕಲ್ಪದ ಮಹಿಮೆಯಾಗಲಿ, ಅದರಿಂದ ಅವನು ರಥಸ್ತಂಭನವನ್ನು ಮಾಡಿದ್ದಾಗಲಿ, ಅರ್ಜುನ ಅಚ್ಚರಿ ಪಟ್ಟುದ್ದಾಗಲಿ, ಕೃಷ್ಣನ ಸಲಹೆಯನ್ನು ಕೇಳಿದ್ದಾಗಲಿ, ವಿನಾಯಕಾಸ್ತ್ರದಿಂದ ಅವನ ತಲೆಯನ್ನು ಕಡಿದ್ದಾಗಲಿ, ಅವನನ್ನು ಪರಸ್ತ್ರೀಯರು ಸ್ವರ್ಗಕ್ಕೆ ಹೋದಿದ್ದಾಗಲಿ ಯಾವುದು ವ್ಯಾಸಭಾರತದಲ್ಲಿಲ್ಲ, ಅಲ್ಲಿರುವುದು ಅರ್ಜುನನು ಕರ್ಣ, ದುರ್ಯೋಧನ, ಅಶ್ವತ್ಥಾಮಾದಿಗಳನ್ನು ಕೂಗಿ ಕರೆಯುತ್ತಾ ನಿಮ್ಮದುರಿಗೆ ವೃಷಸೇನನನ್ನು ಕೊಲ್ಲುತ್ತೇನೆಂದು ಹೇಳಿದ ಮಾತು

'ಸಸರ್ಜ ಬಾಣಾನ್ ವಿಶಿಖಾನ್ ಮಹಾತ್ಮಾ, ವಧಾಯ ರಾಜನ್

ಕರ್ಣ ಸುತಸ್ಯ ಸಂಖ್ಯೇ। ವಿವ್ಯಾದ ಜೈನಂದಶಭಿಃ ಪುಷತ್ಕೈ

ಮರ್ಮಸ್ವಶಂಕಂ ಪ್ರಹಸನ್ ಕಿರೀಟೀ ॥

ಚಿಚ್ಛೇದ ಚಾಸೇಷ್ವಸನಂ ಭುಜೌಚ, ಕ್ಷುರೈಶ್ಚತುರ್ಭಿರ್ನಿಸಿತೈಃ

ಶರೈಶ್ಚ। ಸ ಪಾರ್ಥ ಬಾಣಭಿ ಹತಃ

ಪಪಾತ, ರಿಯಾದ್ ವಿಬಾಹುಃ ವಿಶಿರಾ ಧರಾಯಾಂ॥'[೮]

ಮಾತ್ರ ಅಲ್ಲಿರುವುದಾಗಿದೆ.

೧೯೭೬-೭೭ರಲ್ಲಿ ಪ್ರಕಟಗೊಂಡ ಸಾಧನೆ ಪತ್ರಿಕೆಯ 'ದೀಪಿಕೆಯ ಬೆಳಕಲ್ಲಿ' ಎಂಬ ಲೇಖನವನ್ನು ರಂ.ಶ್ರೀ ಮುಗಳಿ ಅವರು ಸಂಕಲಿಸಿದ್ದು ಸಂಚಿಕೆ ೫-೬ರಲ್ಲಿ ಒಟ್ಟು ೪೯

ಪುಟಗಳಷ್ಟು ಈ ಕೃತಿಯ ಕುರಿತ ಹೊಸ ವಿಚಾರವನ್ನು ಬೆಳಕು ಚೆಲ್ಲಿದ್ದು ಕಂಡು ಬಂದಿದೆ. ಈ ವಿಚಾರವಾಗಿ ಹೇಳುವುದಾದರೆ, ಲೇಖಕರು ಕೆಲವು ಉದಾಹರಣೆಗಳೊಂದಿಗೆ ಎಲ್ಲೆಲ್ಲಿ ಕೃತಿಯ ಮೆರಗನ್ನು ಹೆಚ್ಚಿಸಬಹುದು ಎಂಬಂತಹ ವಿಚಾರದೊಂದಿಗೆ ಈ ದೀಪಿಕೆಗೆ ಹೆಚ್ಚಿನ ಬೆಳಕನ್ನು ನೀಡಿದ ಪಾಲುದಾರರಾಗಿದ್ದಾರೆ. ಸರಿಯಾದ ಪದಗಳನ್ನು ಅರ್ಥೈಸುವಿಕೆ, ವಾಕ್ಯ ಜೋಡಣೆಯ ವಿಚಾರಾದಿಗಳಾಗಿ ಮುಂತಾದ ಪದ್ಯದ ವಿವರಣೆಗಳನ್ನು ಸ್ವೀಕಾರಾರೋಗ್ಯವಾಗಿ ವಿವರಿಸಲಾಗಿದೆ.

ರಂ.ಶ್ರೀ.ಮುಗಳಿ ಅವರ ವಿವರಣೆಯಂತೆ 'ದೀಪಿಕೆಯಲ್ಲಿ ಉದ್ದಕ್ಕೂ ಸುಲಭವಾಗಿ ಅರ್ಥವಾಗದ ಕೆಲವು ಶಬ್ದ ಮತ್ತು ವಾಕ್ಪ್ರಚಾರಗಳ ಅರ್ಥಗಳನ್ನು ಸರಿದೂಗಿ ಗೊತ್ತುಮಾಡಲಾಗಿದೆ. ಅಲ್ಲಲ್ಲಿ ಅವುಗಳ ನಿಷ್ಪತ್ತಿಯನ್ನು ಜ್ಞಾತಿ ಶಬ್ದಗಳನ್ನು ಕೊಡಲಾಗಿದೆ. ಉದಾ ಅಳಕ (೧೦೨) ಅಸುಕರ (೧–೬೨) ತಕ್ಕೊರ್ಮೆ (೧–೭೧), ಮೂರಿ (–೮೬) ಅಟ್ಟಿ ಟುವ್ವೆದಂತಾಗು (೫–೧೦೦ವ) ರಪನಾ (೭–೩ ವ), ತಾವಡಿ (೭–೪೬), ಗುಣಣೆ (೮–೭೩), ಸುಪ್ಪಲ್ (೧೨–೧೬೦) ಇವನ್ನು ಗಮನಿಸಬೇಕು. 'ಅಳಕ' ಇದು ಸಂಸ್ಕೃತ ಅಲೇಖದ ತದ್ಭವ ಎಂಬುದನ್ನು ಪಂಪಭಾರತ ನಿಘಂಟಿನಲ್ಲಿ ಹೇಳಿದೆ. ಜೊತೆಗೆ ಬರೆಯುವ ಓಲೆ, ಹೇಗೆ ಎಂಬುದು ಸ್ಪಷ್ಟವಾಗಿರಲಿಲ್ಲ. ದೀಪಿಕೆಯಲ್ಲಿ ಕೊಟ್ಟಿರುವ ಬರೆಯದಿರುವ ಪತ್ರ, ಓಲೆಗರಿ, ಎಂಬ ಅರ್ಥದಿಂದ ಇದು ಸ್ಪಷ್ಟವಾಯಿತು. 'ತಕ್ಕೊರ್ಮೆ' ಎಂದರೆ ಯೋಗ್ಯತೆ ಎಂದು ಮಾತ್ರ ಪಂಪಭಾರತ, ನಿಘಂಟುವಿನಲ್ಲಿದೆ, ತಕ್ಕು+ಊರ್ಮೆ ಎಂಬುದಾಗಿ ಅದು ಸಮಸ್ತ ಪದವೆಂದೂ ಯೋಗ್ಯತಾ ಅತಿಶಯ ಎಂಬುದು ಅದರ ಅರ್ಥವೆಂದೂ ದೀಪಿಕೆಯಲ್ಲಿ ತೋರಿಸಿರುವುದು ತಕ್ಕುದಾಗಿದೆ. ಮೂರಿ ಇದು ಮೂರಿವಿಡು, ಎಂದು ಎಲ್ಲೆಡೆಗೆ ಕ್ರಿಯಾ ಸಮಾನ ರೂಪದಲ್ಲಿ ಬಂದಿದೆ. ಇದಕ್ಕೆ ಬಾಯೀ ಎಂಬ ಅರ್ಥವನ್ನು ಕೊಟ್ಟು ದೀಪಿಕೆಯಲ್ಲಿ ಸೂಚಿಸಲಾಗಿದೆ. ಸಮೂಹಾರ್ಥದಲ್ಲಿಯೂ 'ಮೂರಿ' ಶಬ್ದವಿದೆ ಎಂಬುದನ್ನು ೩–೬೪ ವ, ೯–೮೭ವ, ೧೦–೩೧ವ, ಈ ಸಂದರ್ಭಗಳಲ್ಲಿ ತೋರಿಸಿಕೊಡಲಾಗಿದೆ. ಪಂಪಭಾರತ ನಿಘಂಟಿನಲ್ಲಿ 'ಮೂರಿವಿಡು' ಇದಕ್ಕೆ 'ಪ್ರಸವಿಸು' ಎಂದು ಪ್ರಶ್ನೆ ಚಿಹ್ನೆಯೊಡನೆ ಅರ್ಥವನ್ನು ಸೂಚಿಸಲಾಗಿದೆ. ಸಂ.ಕ.ನಿಯಲ್ಲಿ ಮೂರಿ ಇದಕ್ಕೆ 'ಬಿರುಕು', 'ಸೀಳು' ಎಂದು ಅರ್ಥಕೊಟ್ಟು 'ಮೂರಿವಿಡು' ಅಂದರೆ 'ಸೀಳು', 'ಬಾಯಿಬಿಡು' ಎಂದು ಅರ್ಥೈಸಲಾಗಿದೆ. ದೀಪಿಕೆಯಲ್ಲಿ ಮೂರಿ ಎಂದರೆ 'ಬಾಯಿ' ಮೂರಿವಿಡು ಅಂದರೆ 'ಬಾಯಿ ಬಿಡು' ಬಿರಿ ಎಂದು ಕೊಟ್ಟಿರುವ ಅರ್ಥ ಸಮರ್ಪಕವೆಂದೂ ಮುಂದಿನ ಎಲ್ಲಾ ಸಂದರ್ಭಗಳಲ್ಲಿಯೂ ಅದೇ ಅನ್ವಯವಾಗವುದೆಂದು ತೋರುತ್ತದೆ. ಅದೇ ಅರ್ಥದ ಮತ್ತು ಮೂರಿಗೆ ಹತ್ತಿರವಿರುವ 'ಮೂತಿ'ಯನ್ನು ಇಲ್ಲಿ ಗಮನಿಸಬೇಕು. ನೆಲಂ ಮೂರಿವಿಟ್ಟಂತೆ ಎಂದೇ ಬಹುಶಃ ಎಲ್ಲಾ ಕಡೆಗೆ ಪ್ರಯೋಗವಿದೆ. ಮೂರಿ ಎಂಬುದಕ್ಕೆ ಸಮೂಹಾರ್ಥವೂ ಇದೆಯೆಂಬುದು

ಸಮರ್ಥನೀಯವಾಗುವುದಿಲ್ಲ ಎಂದು ಹೇಳಬಹುದು. ಹೀಗೆಯೇ ದೀಪಿಕೆಯ ವಿವರಣೆಯಲ್ಲಿ ಚರ್ಚಾಸ್ಪಾದವಾದ ಕೆಲ ಭಾಗಗಳನ್ನು ಗಮನಿಸುವುದಾದರೆ, ಮೊದಲನೆಯ ಪದ್ಯವೇ ಚರ್ಚೆಗೆ ಗುರಿಯಾಗಿದೆ. ಇಲ್ಲಿ ಬಳಕೆಯಾದ ಸುಪುಷ್ಪವೃಷ್ಟಿ, ಸುಪುಷ್ಪದೃಷ್ಟಿ ಈ ಎರಡೂ ಪದಗಳು ಕಾವ್ಯಕ್ಕೆ ಸರಿ ಹೋಗಲಾರವೆಂದು ಡಿ.ಎಲ್.ಎನ್.ರವರು ನೀಡಿದ 'ಸುಪುಷ್ಟಪಟ್ಟ' ಎಂಬ ಸರಿ ಹೊಂದಿದ ಪಾಠದಿಂದ ಅರ್ಥಕ್ಕೆ ಮೆರಗು ನೀಡಿದಂತಾಗಿದೆ. ಪಂಪಭಾರತದ ಉಪಲಬ್ಧ ಕೃತಿಗಳು ಕವಿಕಾಲದಿಂದ ತುಂಬಾ ದೂರವಾಗಿದ್ದು ಹೆಚ್ಚಿನ ಪ್ರಮಾಣದಲ್ಲಿ ದೊರೆತಿಲ್ಲ ದೊರೆತಿರುವಂತಹವುಗಳಲ್ಲಿ ಅನೇಕ ತಪ್ಪುಗಳಿದ್ದು ಹೀಗಾಗಿ ಮಾರ್ಗಕಾವ್ಯ ಪರಂಪರೆಯಲ್ಲಿನ ಶ್ರೇಷ್ಠವಾದ ಈ ಕಾವ್ಯದ ಪಾಠನಿರ್ಣಯವೂ ಇಂದಿಗೂ ಕೆಲ ವಿಷಯಗಳಲ್ಲಿ ಬಿಡಿಸಲಾಗದ ಕಗ್ಗಂಟಾಗಿದೆ. ಈವರೆಗೆ ದೊರೆತ ಪ್ರತಿಗಳಲ್ಲಿಯ ಪಾಠಾಂತರಗಳಲ್ಲಿ ಒಂದನ್ನು ಸ್ವೀಕರಿಸುವುದರಿಂದ ಮಾತ್ರ ಸರಿಯಾದ ಪಾಠವನ್ನು ಗೊತ್ತುಪಡಿಸುವೆವೆಂಬ ಭರವಸೆಯಿಲ್ಲ, ಊಹೆಯಿಂದ ಕಲ್ಪಿತ ಪಾಠಗಳನ್ನು ಗಮನಿಸಬೇಕಾಗುತ್ತದೆ. ಹೀಗೆ ಮಾಡುವಾಗ ಸಾಮಾನ್ಯವಾಗಿ ದೊರೆತ ಪ್ರತಿಗಳ ಪಾಠಗಳಲ್ಲಿ ಅಥವಾ ಪಾಠಾಂತರಗಳಲ್ಲಿ ಯಾವುದರಿಂದಲೂ ಆಯಾ ಸಂದರ್ಭದಲ್ಲಿ ತಕ್ಕಮಟ್ಟಿಗೆ ತೃಪ್ತಿಕರವಾದ ಯಾವ ಅರ್ಥವೂ ಹೊರಡುವುದಿಲ್ಲ ಎಂಬ ಪರಿಸ್ಥಿತಿ ಇರುವುದೋ, ಹೇಗೆ, ಎಂಬುದನ್ನು ಪರೀಕ್ಷಿಸಿಕೊಳ್ಳಬೇಕು ಉದಾ: ಮೊದಲನೆಯ ಪದ್ಯದಲ್ಲಿ ಮೂಲ ಪ್ರತಿಪಾಠಕ್ಕೂ, ಊಹಾತ್ಮಕ ಪ್ರತಿ ಪಾಠಕ್ಕೂ ಹೊಂದಿಕೆ ಆಗುತ್ತದೆಯೋ ಇಲ್ಲವೋ ಎಂದು ಕಂಡುಕೊಳ್ಳುವುದು ಮುಖ್ಯವಾಗಿದೆ. ಮೂಲಪ್ರತಿಯ ಪಾಠದಿಂದ ಅರ್ಥವು ಸರಿ ಹೊಂದುವಷ್ಟು ಊಹೆಯ ಪಾಠದಿಂದ ಅರ್ಥವು ಸರಿ ಹೊಂದಿಲ್ಲವೆಂದು ತೋರಿಬಂದರೆ ಇಡೀ ಪದ್ಯಕ್ಕೆ ವ್ಯತಿರೇಕಾಲಂಕಾರ ಕ್ರಮದಲ್ಲಿ ಅರ್ಥವಿರುವುದೆಂದು ಗೃಹೀತವಾಗುತ್ತದೆ. ದೇವನಾದ ನಾರಾಯಣನು ಬರಿ ಪುಷ್ಪವೃಷ್ಟಿಯನ್ನು ತಾಳಿದರೆ ಉದಾತ್ತ ನಾರಾಯಣನಾದ ಅರಿಕೇಸರಿಯು ಆತ್ಮೀಯರಿಂದ ಸುಪುಷ್ಪವೃಷ್ಟಿ ಅಂದರೆ ಸೂಚ್ಯಾರ್ಥದಲ್ಲಿ ಒಳ್ಳೆಯ ಪ್ರಶಂಸೆಯನ್ನು ತಾಳಿರುತ್ತಾನೆ, ಎಂಬ ಅರ್ಥವೂ ತಕ್ಕಮಟ್ಟಿಗೆ ತೃಪ್ತಿಕರವಾಗಿದೆ. ಅರಿಕೇಸರಿಯು ಸಾಮಂತರಾಜನಾಗಿದ್ದರೂ ತನ್ನ ಶೌರ್ಯ, ಸಾಹಸಗಳಿಂದ ಆ ಕಾಲದಲ್ಲಿ ಪ್ರಶಂಸೆಗೆ ಪಾತ್ರನಾಗಿದ್ದನು ಎಂಬುದು ತಿಳಿದ ವಿಷಯ. ಹೀಗಿರುವಾಗ ಯಾವುದೇ ಊಹೆಯ ಪಾಠವೂ ಅನಾವಶ್ಯಕವೆಂದು ತೋರುತ್ತದೆ. ಆದ್ದರಿಂದ ಸಾಂದರ್ಭಿಕವಾದ ಆಶಯವೂ ಸಹಜ ರೀತಿಯಲ್ಲಿ ವಿಶದವಾಗುವಂತಿದ್ದರೆ ಮಾತ್ರ ಅದಕ್ಕೆ ಅವಕಾಶ ಕೊಡಬಹುದು. ಸುಪುಷ್ಪದೃಷ್ಟಿಯಾಗಲಿ ಸುಪುಷ್ಪ ಪಟ್ಟವಾಗಲಿ ಮೂಲ ಪಾಠಕ್ಕಿಂತ ಹೆಚ್ಚಿನ ಅರ್ಥವೈದೃಶ್ಯಕ್ಕೆ ಸಹಾಯವಾಗುತ್ತದೆ ಎಂದು ತೋರುವುದಿಲ್ಲ. ಅರಿಕೇಸರಿ ತನಗೆ ಮೀಸಲಾಗಿದ್ದ ಸುಪುಷ್ಟಪಟ್ಟವೆಂಬ ಕಿರೀಟವನ್ನು ಧರಿಸಿದ್ದರೆ, ನಾರಾಯಣನು ಬರಿ ಪುಷ್ಪಪಟ್ಟವನ್ನು ತಾಳಿದ್ದನು ಎಂಬ ಅರ್ಥೈಸುವಿಕೆಯು ನಂತರ ಬಂದ ವಿವರಣೆಯಲ್ಲಿ ಪುಷ್ಪಪಟ್ಟವೆಂಬ ಶಬ್ದ ಶಿಲ್ಪಶಾಸ್ತ್ರಕ್ಕೆ ಸೇರಿದ್ದು ಎಂದು ತಿಳಿಯಬಹುದಾಗಿದೆ. ಇವುಗಳಲ್ಲಿ ಪಟ್ಟವೆಂಬುದು ಪತ್ರ, ಪಟ್ಟ, ರತ್ನಪಟ್ಟ,

ಪುಷ್ಪಪಟ್ಟ ಎಂದು ಮೂರು ಬಗೆಯಾಗಿದ್ದು ಪಟ್ಟಭಾಜ್ ವರ್ಗದ ರಾಜನು ಈ ಕಿರೀಟಗಳನ್ನು ಧರಿಸುವ ಅಧಿಕಾರವನ್ನು ಹೊಂದಿದ್ದನು ಎಂದು ಹೇಳಿದೆ. ಮುಂದೆ ಅರಿಕೇಸರಿ ಸಾಮಂತರಾಜನಾಗಿದ್ದರೂ ಪುಷ್ಪಪಟ್ಟಧಾರಣೆಯನ್ನು ಮಾಡಿಕೊಂಡು ಪಟ್ಟಾಭಿಷೇಕನಾಗುವ ಅಂತಸ್ಥಿಗೆ ಸೇರಿದ್ದನು. ಇತರರಂತೆ ಬರೀ ಸಾಮಂತನಾಗಿರಲಿಲ್ಲ ಎಂಬುದು ಸೂಚಿತವಾಗಿದೆ. ಆದರೆ ಇದಕ್ಕೆ ಖಚಿತವಾದ ಆಧಾರವಿಲ್ಲ ಪಂಪನು ಅರಿಕೇಸರಿಯನ್ನು ಎಷ್ಟು ಕೊಂಡಾಡಿದರೂ 'ಸಾಮಂತ ಚೂಡಾಮಣಿ' ಎಂದೇ ಕರೆಯುತ್ತಾನೆ. ಅಲ್ಲದೇ ಶಿಲ್ಪಶಾಸ್ತ್ರದಲ್ಲಿ ಬಂದಿರುವ ಪಾರಿಭಾಷಿಕ ಪದವೂ ಶಿಲ್ಪ ರಚನೆಯ ಸಂಬಂಧದಲ್ಲಿ ಮಾತ್ರ ಪ್ರಸ್ತುತವಾಗಬಹುದು. ಅದು ರಾಜವೇಶ ಪರಂಪರೆಯಲ್ಲಿ ರೂಢವಾಗಿತ್ತೇ ಎಂಬುದು ತಿಳಿದು ಬಂದಿಲ್ಲವಾದ್ದರಿಂದ ದೀಪಿಕೆಯಲ್ಲಿ ಮಾಡಲಾದ ಊಹೆಯ ಪಾಠವೂ ಊಹೆಯೆ ಅರ್ಥವು ನವೀನವಾದುದರಿಂದ ಗಮನಾರ್ಹವಾಗಿದ್ದರೂ ಮೇಲೆ ಕೊಟ್ಟಿರುವ ಕಾರಣಗಳಿಂದ ನಮಗೆ ಸ್ವೀಕಾರ್ಯವೆಂದು ತೋರುವುದಿಲ್ಲ ಎಂದಿದ್ದಾರೆ.[೯]

ಪದ್ಯ ೧-೨೯ರಲ್ಲಿ ಉಲ್ಲೇಖಗೊಂಡ ಸುರಭಿಯ ದೇವತೆ ಎಂಬ ಕಾಘಿನ ಮಾಣ್ದುದು ಎಂಬ ಅರ್ಥವನ್ನು ವಿವರಿಸುವ ಜಾಡು ಹಿಡಿದಾಗ 'ಸುರಭಿಯು' ದೇವತೆ ಎಂಬ ರಕ್ಷಣೆ, ಹೊಂದಿದ್ದರಿಂದ ಬದ್ಧೆಗನ ದಾನದಿಂದ ಹೊರಗುಳಿಯಿತು ಎಂದು ಅರ್ಥೈಸಬಹುದು. ಈ ಪದ್ಯಕ್ಕೆ ಸಂಬಂಧಿಸಿದ ಅಡಿಟಿಪ್ಪಣಿಯಲ್ಲಿ ಉಲ್ಲೇಖಗೊಂಡ 'ಘ' ಪ್ರತಿಯ ಪರ್ಯಾಯ ಪಾಠದಲ್ಲಿ ಕಾಘಿನೆ ಎಂಬುದರ ಎಡೆಯಲ್ಲಿರುವ 'ಗೋಸನೆ' ಎಂಬುದನ್ನು ದೀಪಿಕೆಯಲ್ಲಿ ಉಲ್ಲೇಖಗೊಂಡ ಪ್ರಕಾರ ಸ್ವೀಕರಿಸಿದ್ದಾರೆ 'ಕಾಮಧೇನು ದೇವತೆ' ಎಂದು ಪ್ರಚಲಿತದಲ್ಲಿದ್ದದ್ದು ನಿಂತು ಹೋಯಿತು ಎಂಬ ಅರ್ಥವೂ ಮೂಡಿ ಬರುತ್ತದೆ. ಆದರೆ ಬದ್ಧೆಗನ ದಾನದಲ್ಲಿ ಯಾವುದು ಯಾವ ಕಾರಣದಿಂದ ಹೊರಗುಳಿಯಿತು ಎಂಬುದನ್ನು ಉದ್ದಕ್ಕೆ ವರ್ಣಿಸುವುದು ಕವಿಯ ಉದ್ದೇಶವಾಗಿರುವುದರಿಂದ 'ಕಾಘಿನೆ' ಪಾಠವೂ ಸರಿಯಾದುದೆಂದು ತಿಳಿಯಬೇಕಾಗಿದೆ.

೪-೪೧ನೇ ಪದ್ಯದನ್ವಯವಾಗಿ ಕಾಣುವುದಾದರೆ ದೀಪಿಕೆ ಭಾಗದಲ್ಲಿ ಪ್ರತಿಪದದ ವಿವರಣೆ ಮಾತ್ರ ಕಂಡುಬಂದಿದ್ದು ಈ ಪ್ರಕಾರವಾಗಿ ಇಡೀ ಪದ್ಯದ ಅರ್ಥವೂ ಹೀಗೆ, ತನಗೆ ಉಂಟಾದ ಯೌವ್ವನದ ಆಕಾರ ಮೈಯಲ್ಲಿಯೆ ತಪ್ಪು ತಪ್ಪಾದ ನೋಟದಲ್ಲಿಯೇ ಮೈಯ ಕಂಪನವೂ ಸರಿಯಾದುದಲ್ಲ ನೋಟದಲ್ಲಿನ ಇಂಗಿತವು ಸರಿಯಾದುದಲ್ಲ, ಕಾಮನು ಹೂವಿನ ಬಾಣಗಳನ್ನು ಬತ್ತಳಿಕೆ ತುಂಬಿ ತನ್ನನ್ನು ಒಡೆಯಲಿ, ಗುಣಾರ್ಣವನನ್ನು ಆ ಸತಿ ತಪ್ಪು ನೋಡದಲ್ಲಿ ಅಪ್ಪಿಕೊಳ್ಳಲು ನೋಡಿದ್ದರಿಂದ ಅವಳ ಜಾಣತನವನ್ನೇ ಆ ಹೊಡೆತವೂ ಬಿಡದೆ ನಾಶ ಮಾಡಿತು, ಎಂಬ ಮಾತಿನ ವಿವರಣೆ ಒಟ್ಟಿನಲ್ಲಿ ಸರಿಯಾಗಿ ಮೂಡಿಬಂದಿದೆ, ಆದರೂ ದೀಪಿಕೆಕಾರರು ಹೇಳಿರುವಂತೆ ಅರ್ಥಾನ್ವಯಗಳಲ್ಲಿ ಇರಬೇಕಾದಷ್ಟು ವಿಶದದಲ್ಲಿ ಕಂಡುಬಂದಿಲ್ಲ. ಪೊಡರ್ಪುಪೊಡರ್ದು ಎಂಬ ಪಾಠಾಂತರದಿಂದ ಹೆಚ್ಚಿನ ಸಹಾಯ

ಪದ್ಯಕ್ಕೆ ಇಲ್ಲದಾಗಿದೆ. 'ತೀವಿ ತನ್ನ ನಿಸೆ' ಎಂಬಲ್ಲಿ 'ತೀವಿ' ಎಂಬುದಕ್ಕೆ ಕೊಟ್ಟಿರುವ ಶಿಋ (ಗ್ನ, ಫ) ಪಾಠಾಂತರವನ್ನು ಸ್ವೀಕರಿಸಿ ಪುನರುಕ್ತಿಯನ್ನು ತಪ್ಪಿಸಬಹುದು.

ಪದ್ಯ–೪.೪೪ ಈ ಪದ್ಯವೂ ಕಂದಪದ್ಯದಲ್ಲಿದ್ದು ಇದರ ಅರ್ಥ ಸ್ಪಷ್ಟವಾಗಿಲ್ಲದ್ದಾಗಿದೆ. ಇಲ್ಲಿ ಕೃಷ್ಣನು ಅತಿಥಿಯಾಗಿ ಅರ್ಜುನನಿಂದ ಸತ್ಕಾರ ಅನುಭವಿಸಿದ ಪರಿಯನ್ನು ವಿವರಿಸಲಾಗಿದೆ.

ಪದ್ಯ ೪–೭೩ ಈ ಪದ್ಯವು ಕಂದಪದ್ಯದಲ್ಲಿದ್ದು ದೀಪಿಕೆ ಭಾಗದ 'ಮೃಗಶಿಶು ನೇತ್ರೆಯ' ನಡುವೆದಳಯುಗುರ್ಗಳ್ ಕರಂ ಅಸಿದು ಎಂಬ ಪಾಠವನ್ನು ಒಪ್ಪಿಕೊಂಡು ಅರ್ಥೈಸಿದ್ದಲ್ಲಿ ೮–೭೨ ರಲ್ಲಿಯೇ 'ನಡು ಪೂರ್ವ ಬಾಸೆ' ಈ ಮೂರು ಅಸಿಯಮೆ ಎಂದು ಮಾಡಿದ ಬಣ್ಣನೆಗೆ ವಿರೋಧವಾಗಿದ್ದಾಗಿದೆ. ಆದ್ದರಿಂದ 'ಎಸೆದು' ಎಂಬ ಪಾಠಾಂತರವನ್ನು ಸ್ವೀಕರಿಸುವುದು ಮೇಲೆ ಅವು 'ಚೆಲುವಾಗಿ ತೋರಿ' (ತೋರ) ಎಂಬ ಸಾಮಾನ್ಯ ಅರ್ಥವು ಸಂದರ್ಭದಲ್ಲಿ ಸರಿಹೋಗುತ್ತದೆ.

ಪದ್ಯ ೪–೭೮ ಇಲ್ಲಿ ಕಣ್ಣಿನ ವರ್ಣನೆ ಮಾಡುತ್ತಾ ಇದರಲ್ಲಿ ಅರ್ಥದೃಷ್ಟಿಯಿಂದ ಹಲವು ಕೋಶಗಳೇನು ಇಲ್ಲವಾಗಿದ್ದು, ಮುಖ್ಯವಾಗಿ ಒಡನೊಡನೋಡವುಟ್ಟೆನಗೆ ಸಂತಸಮಂ ಮಹುಕಕ್ಕೆ ಮಾಣ್ದೊಡೀ ನಡೆಗಿಡೆ ಈ ಪದ್ಯ ಖಂಡದಲ್ಲಿ ಅನ್ವಯೆ ಅರ್ಥಕೋಶವಿದೆ. ಕೂಡಲೇ ಜೊತೆಯಲ್ಲಿಯೇ ನೋಡುಪಟ್ಟ ನನಗೆ ಸಂತೋಷವನ್ನು ಸಂತಾಪವನ್ನು ಬಿಟ್ಟರೆ ನಡೆನಿಂತು ಹೋಗಲಿ ಎಂದು ದೀಪಿಕೆಯಲ್ಲಿ ವಿವರಿಸುವ ಪ್ರಯತ್ನವಾಗಿದೆ. ಒಟ್ಟಾರೆಯಾಗಿ ಈ ಪದ್ಯದ ತಾತ್ಪರ್ಯ ಹೇಳುವುದಾದರೇ, ಅರ್ಜುನ ಮತ್ತು ಸುಭದ್ರೆಯರು ರೂಪು ಲಾವಣ್ಯಗಳನ್ನು ಮೈಯ ಅಂದ ಚೆಂದವನ್ನು ವರ್ಣಿಸುವ ಪರಿ ಸಾಂದರ್ಭಿಕ ಉತ್ಪ್ರೇಕ್ಷೆ ಈ ಪದ್ಯದಲ್ಲಿ ಅಡಕವಾದುದಾಗಿದೆ.

ಪದ್ಯ–೫–೨೧ರಲ್ಲಿ ವಸಂತಕಾಲದವರ್ಣಾಯೆನ್ನು ಮಾಡಲಾಗಿದ್ದು 'ಸೂಡು ಶಯ್ಯೆಗಳ ಬಿಯಕ್ಕೆ ಜೊಂಪದಲರ್ವಾಸುಗಳೊಳ್ ನೆಲೆಸಿತ್ತು,' ಇದನ್ನು ಬೆಚ್ಚನೆಯ ಹಾಸಿಗೆಗಳ ಬಯಕೆಯು ಗೊಂಚಲಾಗಿರುವ ಹೂವಿನ ಹಾಸಿಗೆಗಳಲ್ಲಿ ನೆಲೆಸಿತ್ತು ಎಂದು ವಿವರಿಸಲಾಗಿದ್ದು ಒಟ್ಟಾರೆ ಅರ್ಥವಾಗಿ ವಸಂತ ಕಾಲದಲ್ಲಿ ಹೂ ಮುಡಿವಿಕೆ ಶಯ್ಯೆಗಳ ವ್ಯಯಕ್ಕೆ ಅಂದರೆ ಪ್ರತಿಯಾಗಿ ಗೊಂಚಲು ಹೂ ಹಾಸಿಗೆಗಳಲ್ಲಿ ನೆಲೆಸಿತ್ತು. ಹೂ ಮುಡಿದು ಮನೆ ಹಾಸಿಗೆಗಳಲ್ಲಿ ಒರಗುವುದರ ಬದಲು ಉಪವನಗಳ ಗೊಂಚಲು ಹೂ ಹಾಸಿಗೆಗಳಲ್ಲಿ ಮಲಗುವುದಾಯಿತು ಎಂಬ ತಾತ್ಪರ್ಯವಿದ್ದು ಇದರಿಂದ ವಸಂತದ ಶೋಭೆ ಇನ್ನಷ್ಟು ಅಗ್ಗಲಿಸಿತು ಎಂಬ ಸೂಚನೆ ಇವರದ್ದಾಗಿದೆ.

ಪದ್ಯ–೫–೩೯ರಲ್ಲಿ 'ಬರುವ', 'ಬರವ' ಎಂಬುದಕ್ಕೆ ಕೊಟ್ಟ 'ಪಿರಿದಂ' ಪಾಠಾಂತರವನ್ನು ಒಪ್ಪಿಕೊಂಡರೆ ಅರ್ಥವೂ ಹೆಚ್ಚು ತಿಳಿಯಾಗುತ್ತದೆ. ಪದ್ಯ–೫–೪೦, ಈ ಪದ್ಯದ ತಾತ್ವರ್ಯ ಕುರಿತು ಪಿ.ಎಸ್.ಎಲ್.ರವರೆ ಪದ್ಯದ ಕೊನೆಗೆ ಪ್ರಶ್ನಾರ್ಥವಾಗಿ ಪ್ರಸ್ತಾಪಿಸಿದ್ದಾರೆ. ಇಲ್ಲಿ

ಪ್ರಸ್ತಾಪವಿರುವ 'ಕಾಡೊಹವು' ಎಂಬ ಪದದ ಸ್ಥಾನದಲ್ಲಿ ಕಾಡೊಡನೆ ಎಂಬ ಊಹೆಯ ಪಾಠವನ್ನು ಕೊಟ್ಟಿದ್ದಾರೆ. ಇದರ ಒಟ್ಟಾರೆ ಅರ್ಥ ಕಾಡಿನೊಡನೆ ವೇಳೆ ಚೆನ್ನಾಗಿ ಕೈಗೂಡಿತು. ಅಂದರೆ ಬೇಟೆಗೋಸ್ಕರ ಕಾಡಿನ ಪರಿಸರದೊಡನೆ ಯೋಗ್ಯ ಸಮಯವೂ ಕೂಡಿ ಬಂದಿದೆ ಎಂಬರ್ಥವಾಗುತ್ತದೆ. ಆದರೆ ಇಲ್ಲಿ ಕಷ್ಟವಿರುವುದು ಈ ಕಂದಪದ್ಯದ ಮುಂದಿನ ಭಾಗದಲ್ಲಿನ 'ನೆಲದೊಳಿರ್ವ ನೆಲ್ಲಿಯ ಕಾಯಿಂ ನೋಡ ನೆಲ ಮುಟ್ಟತ' ಅಂದರೇನು? ನೆಲದೊಳಗೆ ಬೆಳೆಯುವ ಯಾವ ನೆಲ್ಲಿಯ ಕಾಯಿ ಮರದ ತುಂಬ ಭಾರವಾಗಿ ನೆಲ ಮುಟ್ಟುವಂತಾಗಿದೆ. ಎಂದು ಅರ್ಥವಿದ್ದರೂ ಇರಬಹುದು, ಇದು ಬೇಟೆಗೆ ಯೋಗ್ಯದ ಪದವಲ್ಲ ಎಂಬ ಸೂಚನೆಯ ಮರುಮಾತಿನ ಸಂಕೇತವಿರಲೂಬಹುದು.

ಪದ್ಯ–೭–೩೫ ಈ ಪದ್ಯದ ಅನ್ವಯ ತಾತ್ಪರ್ಯಗಳು ಕೊಂಚ ಕೊರಕವಾಗಿವೆ ಎಂದು ದೀಪಿಕೆಯಿಂದ ತಿಳಿದುಬಂದಿದೆ. ಇಲ್ಲಿ ಮುಖ್ಯವಾಗಿ ಪುರು ಭಿಕ್ಷೆಯನ್ನು ಬೇಡಿಕೊಂಡ ಭಾನುಮತಿಯ ಹುಯಿಲನ್ನು ಕೇಳಿ ಯುದಿಷ್ಠರನು ತನ್ನೊಳಗೆ ಬಗೆದ ಬಗೆ ಇದರಲ್ಲಿ ಮೂಡಿ ಬಂದಿದೆ.

ಡಿ.ಎಲ್.ಎನ್. ಅವರು ಹಳಗನ್ನಡ ಭಾಷೆ ಸಾಹಿತ್ಯದಲ್ಲಿ ಎಲ್ಲಾ ಮೂಲಗಳಿಂದ ಆಳವೂ ವ್ಯಾಪಕವೂ ಆದ ಪಾಂಡಿತ್ಯವನ್ನು ಗಳಿಸಿದ್ದ ಹಿರಿಯ ವಿದ್ವಾಂಸರು ಸಂಸ್ಕೃತ, ಪ್ರಾಕೃತಗಳಲ್ಲದೆ ಕನ್ನಡ, ತೆಲುಗು, ತಮಿಳು, ಮೊದಲಾದ ಭಾಷೆಗಳಲ್ಲಿಯೂ ತುಲನಾತ್ಮಕ ಅಧ್ಯಯನ ನಡೆಸುವಂತಹ ಕೌಶಲ್ಯವಂತ ವಿದ್ವಾಂಸರಾಗಿದ್ದರು. ವಿಸ್ತಾರವಾದ ವ್ಯಾಸಂಗದ ಹವ್ಯಾಸದಿಂದ ವಾಕ್ಯರಚನೆಯನ್ನು ನಿರ್ವಹಿಸಿರುವುದರಿಂದ ಅದನ್ನು ಸಮರ್ಥವಾಗಿ ಅಧಿಕಾರಯುತವಾಗಿ ಬರವಣಿಗೆಗೆ ಇಳಿಸಿದ್ದಾರೆ. ಅವರ ಓದಿನ ರಸಜ್ಞತೆಯೂ ಸಹ ಮೇಲ್ಮಟ್ಟದ್ದಾಗಿ ಕವಿ ಹೃದಯವನ್ನು ಚೆನ್ನಾಗಿ ಗುರುತಿಸಬಲ್ಲವರಾಗಿದ್ದರಿಂದ ಅವರ ದೀಪಿಕೆಯು ಪಾಠ ಇನ್ನಷ್ಟು ಉನ್ನತಮಟ್ಟದಲ್ಲಿ ಪ್ರಜ್ವಲಿಸಿದ್ದಾಗಿದೆ.

ರಂ.ಶ್ರೀ.ಮುಗಳಿಯವರು 'ಸಾಧನೆ' ಸಂಚಿಕೆಯ–೨ ಭಾಗಗಳಲ್ಲಿ 'ದೀಪಿಕೆ ಬೆಳಕಲ್ಲಿ' ಎಂಬ ಲೇಖನವನ್ನು ಪ್ರಮುಖವಾಗಿ ಎರಡು ಉದ್ದೇಶಗಳನ್ನಿಟ್ಟುಕೊಂಡು ದೀಪಿಕೆಯ ಪಾಠವನ್ನು ಪ್ರಸ್ತಾಪಿಸಿದ್ದಾರೆ. 'ಮೊದಲನೆಯ ಉದ್ದೇಶವಾಗಿ ಪಂಪಭಾರತದ ಕೆಲ ಕಷ್ಟ ಪದ್ಯ ವಿಚಾರಗಳ ಕುರಿತು ಸ್ಪಷ್ಟೀಕರಣ ನೀಡಿದ್ದು ಕಂಡುಬಂದಿದೆ. ಎರಡನೆಯ ಉದ್ದೇಶವಾಗಿ ದೀಪಿಕೆಯಲ್ಲಿ ಆಯಾ ಸಂದರ್ಭಗಳಲ್ಲಿ ಕೆಲವು ಪದಗಳ ಅರ್ಥವನ್ನು ಖಚಿತವೆಂದು ಕೊಟ್ಟಿದ್ದು ಕೆಲವನ್ನು ಪ್ರಶ್ನಾರ್ಥಕ ಚಿಹ್ನೆಯೊಡನೆ ವಿವರಿಸಿದೆ.'[೧೦] ಅವುಗಳನ್ನು ಅವಶ್ಯವಿದ್ದಡೆಗಳೆಲ್ಲ ಕೃತಿಗೆ ಪೂರಕವೆಂಬಂತೆ ಪರಿಶೀಲಿಸಿ ಈ ಕೃತಿಯ ಅರ್ಥ ಗಾಂಭೀರ್ಯವನ್ನು ಒಟ್ಟಾರೆ ಹೆಚ್ಚಿಸಿದ್ದು ಪಂಪಭಾರತದ ದೀಪಿಕೆಗೆ ನಿಜವಾದ ದೀವಿಗೆ ಈ ಲೇಖನವಾಗಿದೆ.

ಮುಂದುವರೆದು ಈ ವಿಷಯಕ್ಕೆ ಪೂರಕವೆಂಬಂತೆ ದೀಪಿಕೆಯ ಬೆಳಕನ್ನು ಇನ್ನಷ್ಟು ಹೆಚ್ಚಿಸಲು ಸಹಾಯಕರಾದರು. ಟಿ.ವಿ.ವೆಂಕಟಾಚಲಶಾಸ್ತ್ರಿಯವರು ಇವರೇ ಈ ಕೆಳಕಂಡ ರೀತಿಯಲ್ಲಿ ದೀಪಿಕೆಯ ವ್ಯಾಖ್ಯಾನದ ವಿಶೇಷತೆಗಳನ್ನು ಹಾಗೂ ವೈಶಿಷ್ಟ್ಯಗಳನ್ನು ಬಿಡಿಸಿ ಹೇಳಿ ಕೃತಿಯ ಮಹತ್ವವನ್ನು ಹೆಚ್ಚಲೂ ಈ ಕೆಳಕಂಡ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ.

೧. 'ಶಬ್ದರೂಪಗಳಲ್ಲಿ 'ರ–ಱ, ಳ–ೞ'ಗಳ ರೂಪಗಳಲ್ಲಿ ಆಗಿರುವ ಗೊಂದಲಗಳನ್ನು ಸರಿಪಡಿಸಿದ್ದಾರೆ.

೨. ಸಂಧಿ ಸಮಾಸಗಳನ್ನು ಬಿಡಿಸಿ ಅರ್ಥ ಹೇಳಿ ವಿಶೇಷ ಶಬ್ದರೂಪಗಳಲ್ಲಿ ಪ್ರಕೃತಿ ಪ್ರತ್ಯಯಗಳನ್ನು ಬಿಡಿಸಿ ತೋರಿಸಿದ್ದಾರೆ.

೩. ಪರಿಚಿತ ತದ್ಭವಗಳ ಜೊತೆಗೆ, ಅಷ್ಟು ಪರಿಚಯವಿರದ ತದ್ಭವಗಳ ಸಂಸ್ಕೃತ ಪ್ರಾಕೃತ ಮೂಲಗಳನ್ನು ಗುರುತಿಸಿದ್ದಾರೆ.

೪. ಪಾಠ ಸಂದೇಹಗಳಿದ್ದ ಕಡೆ ಕವಿ ಪಾಠವನ್ನು ಗುರುತಿಸುವ ಪ್ರಯತ್ನ ಮಾಡಿದೆ, ಹೀಗೆ ಮಾಡುವಾಗ ಅಕ್ಷರ ಸ್ಖಾಲಿತ್ಯ, ಊಹಾತ್ಮಕ ಪರಿಷ್ಕರಣ, ಅಂತಃ ಸ್ವಭಾವ್ಯತೆ, ಬಾಹ್ಯಸಾಕ್ಷ್ಯ ಈ ಕೆಲವು ವಿಧಾನಗಳನ್ನು ಅನುಸರಿಸಿದ್ದಾರೆ.

೫. ಶಬ್ದಾರ್ಥಗಳ ಸಂದಿಗ್ಧತೆಯನ್ನು ಕಳೆಯುವುದಕ್ಕಾಗಿ, ಅವುಗಳ ಜಾತಿ ಶಬ್ದಗಳೊಡನೆ ತುಲನೆ, ಕೋಶ ವ್ಯಾಕರಣ ಸಿದ್ಧಪದದ ಸಾನಿಧ್ಯ ಇತ್ಯಾದಿಗಳ ಅನ್ವಯ ಮುಂತಾದ ಕ್ರಮಗಳನ್ನು ಅನುರಿಸಿದ್ದಾರೆ.

೬. ವಿಶಿಷ್ಟ ಶಬ್ದಗಳಿಗೆ ವ್ಯಾಕರಣ ವಿಶೇಷಗಳನ್ನು ವಿವರಿಸಿ ಅವುಗಳ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ.

೭. ಬಹುಕ್ಲಿಷ್ಟವಾದ ನಷ್ಟಪ್ರಿಯವಾದ, ವಿರಳ ಪ್ರಯೋಗದ ಶಬ್ದಗಳನ್ನು ಎತ್ತಿಕೊಂಡು ಸಂದರ್ಭಕ್ಕೆ ತಕ್ಕಂತೆ ವಿಸ್ತಾರವಾಗಿ ಇಲ್ಲವೇ ಸಂಕ್ಷಿಪ್ತವಾಗಿ ಭಾಷಿಕ ವಿಶ್ಲೇಷಣೆ ಮಾಡಿದ್ದಾರೆ.

೮. ಛಂದಸ್ಸಿನ ನ್ಯೂನತಿರೋಕಗಳನ್ನು ವಿಶೇಷತೆಗಳನ್ನು ಪ್ರತ್ಯೇಕವಾಗಿ ವಿವರಿಸಿ, ಅವಶ್ಯವಿದ್ದೆಡೆ ಸ್ಖಾಲಿತ್ಯಗಳನ್ನು ಗುರುತಿಸಿ ಸರಿಪಡಿಸಿದೆ. ವಿರಳ ವೃತ್ತಿಗಳಾಗಿದ್ದಲ್ಲಿ, ಅವುಗಳ ಹೆಸರು ಲಕ್ಷಣಗಳನ್ನು ಹೇಳಿದ್ದಾರೆ.

೯. ಸಾಂಕೇತಿಕ, ಪಾರಿಭಾಷಿಕ, ಸಂಖ್ಯಾತ್ಮಕ ಆದ ಶಬ್ದ ಆಶಯಗಳನ್ನು ಬಿಡಿಸಿ ಕೊಟ್ಟಿದೆ.

೧೦. ಅಲಂಕಾರ ವಿಶೇಷತೆಗಳನ್ನು ಲೌಕಿಕ ನ್ಯಾಯಗಳನ್ನು ಭಾಷಾ ರೂಢಿ ಮತ್ತು ಶೈಲಿಯ ವೈಚಿತ್ರ್ಯಗಳೊಂದಿಗೆ ಗುರುತಿಸಿದ್ದಾರೆ.

೧೧. ಪೂರ್ವ ಕಥಾವೃತ್ತಾಂತ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ, ಅಂಶಗಳನ್ನು ಅಗತ್ಯವಿದ್ದೆಡೆಗಳಲ್ಲಿ ವಿಸ್ತರಿಸಿ ರೂಪಿಸಿದ್ದಾರೆ.

೧೨. ಪೂರ್ವ ಕವಿಗಳಿಂದಾದ ಸ್ವೀಕರಣ, ಉತ್ತರಕಾಲೀನ ಕವಿಗಳ ಮೇಲೆ ಆದ ಪ್ರಭಾವವನ್ನು ವಿಶದಪಡಿಸಿ, ಅವುಗಳ ಸೃಷ್ಟೀಕರಣಕ್ಕಾಗಿ ನಿಖರ ಆಕಾರಗಳನ್ನು ತೋರಿಸಿದ್ದಾರೆ.

೧೩. ಯಥೋಚಿತವಾಗಿ ರಸಗ್ರಹಣದ ದೃಷ್ಟಿಯಿಂದ ವಿಮರ್ಶಾತ್ಮಕ ಟಿಪ್ಪಣಿಗಳನ್ನು ವ್ಯಾಖ್ಯಾನ ಭಾಗದ ಆದ್ಯರೀತಿಗಳಲ್ಲಿ ತೋರಿದ್ದಾರೆ.

೧೪. ಪಂಪನ ಕಾವ್ಯಗಳಲ್ಲಿಯೇ ಪ್ರಯೋಗಾಂತರಗಳಿದ್ದಲ್ಲಿ ಅವನ್ನು ಸೂಚಿಸಿ ಕವಿಯ ಶೈಲಿ ಮನೋಧರ್ಮಗಳನ್ನು ತಳಿಯುವಂತೆ ಮಾಡಿದ್ದಾರೆ.

೧೫. ಪಂಪಭಾರತ ಜೈನ ಕವಿಯ ವೈದಿಕ ಧೋರಣೆಯೇ ಭಾರತವಾಗಿದ್ದರೂ ಎಲ್ಲೆಲ್ಲಿ ಜೈನಧರ್ಮೀಯ ಅಂಶಗಳು ಗೋಚರಿಸುತ್ತವೆ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.'[೧೧]

ಈ ರೀತಿಯಾಗಿ ಟಿ.ವಿ.ವೆಂಕಟಾಚಲಶಾಸ್ತ್ರಿಯವರು ದೀಪಿಕೆಯ ವ್ಯಾಖ್ಯಾನದ ವಿಷಯ ಕುರಿತು ಇದರಲ್ಲಿನ ವಿಶೇಷತೆಗಳನ್ನೂ ಎತ್ತಿ ತೋರಿಸಿದ್ದಾರೆ.

ಡಿ.ಎಲ್.ಎನ್. ಅವರು ತಮ್ಮ ದೀಪಿಕೆಯ ಕೃತಿ ರಚನೆಯಲ್ಲಿ ಶ್ರದ್ಧೆ, ಪ್ರಾಮಾಣಿಕತೆ ದಕ್ಷತೆಗಳನ್ನು ಎಷ್ಟರಮಟ್ಟಿಗೆ ತೋರಿಸಿದ್ದಾರೆ ಎಂಬುದನ್ನು ಈ ಕೃತಿಯನ್ನು ಅಭ್ಯಸಿಸಿದ ಎಲ್ಲರ ಮನಸ್ಸಿಗೆ ಗೋಚರಿಸಿದ್ದಾಗಿದೆ.

ಈ ಕೃತಿ ರಚನೆಗಾಗಿ ಡಿ.ಎಲ್.ಎನ್. ಅವರು ತಮ್ಮ ಸಹಾಯಕ್ಕೆ ಬಳಸಿಕೊಂಡ ಎಲ್ಲಾ ಸಹಾಯಕ ಸಾಹಿತ್ಯವನ್ನು ನೋಡಿದರೆ ಇವರ ವಿದ್ವತ್ ಪ್ರಮಾಣ ಎಷ್ಟರಮಟ್ಟಿಗೆ ಇತ್ತು ಎಂಬುದನ್ನು ತಿಳಿಯಲಿ ಇಲ್ಲಿ ಮೂಡಿಬಂದಿರುವ ಕಾವ್ಯ, ಶಾಸ್ತ್ರ, ಶಾಸನ, ಕೃತಿಗಳು ಸಾಹಿತ್ಯಿಕ ಈ ಕೃತಿಯ ಮೆರುಗನ್ನು ಹೆಚ್ಚಿಸದ್ದಾಗಿದೆ.

ಡಿ.ಎಲ್.ಎನ್. ಅವರು ತಮ್ಮ ವ್ಯಾಸಂಗದ ಪರಿಧಿಯಲ್ಲಿ ಸುಳಿದ ಎಲ್ಲ ಪೂರಕ ಸಾಹಿತ್ಯವನ್ನು ಬಳಸಿದ್ದಾರೆ. ಈ ಪೂರಕ ಸಾಹಿತ್ಯದಲ್ಲಿ ಕಾವ್ಯ, ಶಾಸ್ತ್ರ, ಶಾಸನಗಳು ಅಡಕವಾಗಿದ್ದು ಇವು ದೀಪಿಕೆಯ ಗ್ರಂಥಸೂಚಿ, ವ್ಯಕ್ತಿನಾಮ ಸೂಚಿಯನ್ನು ಪರಿಶೀಲಿಸಿದರೆ ಅರ್ಥ ಗತವಾಗುವ ವಿಷಯಗಳಾಗಿವೆ. ಈ ಸೂಚಿಗಳಲ್ಲಿ ಶಾಸನಗಳ ವಿವರವಾದ ಉಲ್ಲೇಖಗಳು ಸೇರಿಲ್ಲದಿದ್ದರೂ ತಾತ್ಪೂರ್ತಿಕವಾಗಿ ಬಳಸಿಕೊಂಡಿದ್ದನ್ನು ಕಾಣಬಹುದಾಗಿದೆ. ಹಾಗೆಯೇ ಸಂಕೇತಗಳ ವಿವರಣೆಯಲ್ಲಿಯೂ ಅವರು ಬಳಸಿದ್ದ ಇನ್ನಷ್ಟು ಸಹಾಯಕ ಸಾಮಗ್ರಿಗಳು ಸೇರಿರುವುದನ್ನು ಕಾಣುತ್ತೇವೆ. ಸಂಸ್ಕೃತಿಯಲ್ಲಿ ವ್ಯಾಸ, ಕಾಳಿದಾಸ, ಬಾಣಭಟ್ಟ, ಭಟ್ಟ ನಾರಾಯಣ ಈ ಕೆಲವರನ್ನು, ಕನ್ನಡದಲ್ಲಿ ರನ್ನ, ಕರ್ಣಪಾರ್ಯ, ಕೇಶಿರಾಜ, ನಾಗಚಂದ್ರ,

ಜನ್ನ, ಈ ಕೆಲವರನ್ನು ಹೆಚ್ಚಾಗಿ ಅವರು ಸ್ಮರಿಸಿದ್ದು ಕಂಡುಬರುತ್ತದೆ. ಕನ್ನಡದಲ್ಲಿನ ಶಾಸನ ಪ್ರಯೋಗಗಳಿಗಾಗಿ ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳನ್ನೆಲ್ಲಾ ಅವಲೋಕಿಸಿದ್ದಾರೆ. ಇವರು ಕನ್ನಡ ನಿಘಂಟಿನ ರಚನಾ ಕಾರ್ಯನಿರ್ವಹಿಸಿದ್ದರಿಂದ ಇಲ್ಲಿನ ಕ್ರಮವೂ ದೀಪಿಕೆ ರಚನೆಗೆ ಬಹುಬಲವನ್ನು ನೀಡಿದ್ದಾಗಿದೆ.

ಪಂಪಭಾರತ ದೀಪಿಕೆಯೂ ಒಂದು ವ್ಯಾಖ್ಯಾನ ಗ್ರಂಥವಾಗಿ ಮೂಡಿ ಬಂದಿದೆ ಎಂದು, ಮೂಲ ಭಾರತವನ್ನು ಅರ್ಥೈಸಿಕೊಳ್ಳುವುದಕ್ಕೆ ಸಹಾಯಾರ್ಥವಾಗಿ ಆ ಕಾವ್ಯದ ಎಲ್ಲ ಪದ್ಯ, ಗದ್ಯಗಳ ಅರ್ಥ ಆಶಯಗಳು ನಮ್ಮ ತಿಳುವಳಿಕೆಗೆ ಬಂದಿವೆ. ಇನ್ನು ಯಾವ ಪಾಠ ಸಮಸ್ಯೆಯು ಅರ್ಥದ ತೊಡಕುಗಳಲಿಲ್ಲ ಎನ್ನುವ ಸ್ಥಿತಿಯು ಸಾಧ್ಯವಿಲ್ಲ, ಹಳೆಯ ಕಾಲದ ಪದ, ಭಾಷೆ, ಎಂಬ ಕಾರಣಕ್ಕೆ ಆ ಪದಗಳಲ್ಲಿ ಕೆಲವು ನಮಗೆ ಅವಿಧಿತವಾಗಿ ಉಳಿದು ಬಿಟ್ಟಿರುವ ಸಂಗತಿಗಳು ಸಾಕಷ್ಟಿವೆ. ಈ ಕುರಿತು ಡಿ.ಎಲ್.ಎನ್. ಅವರು ಕೃತಿಯ ಅರಿಕೆ ಭಾಗದಲ್ಲಿ ಸ್ಪಷ್ಟೀಕರಿಸಿದ್ದಾರೆ. ಹೊಸ ಉತ್ತರಗಳು ದೊರೆತಾಗ ಮತ್ತು ಸಮಸ್ಯೆ ತೊಡಕುಗಳು ಸಡಿಲಗೊಳ್ಳಲು ಸಾಧ್ಯವಿದೆ. ಅಲ್ಲದೇ ಕೆಲವಾರು ಪದ್ಯದ ಅರ್ಥಗಳು ನಿಗೂಢವಾಗಿ ಉಳಿದದ್ದು ಉಂಟು ಆದರೆ ಇವೆಲ್ಲವನ್ನು ಸಹಾನುಭೂತಿಯಿಂದ ನೋಡಿ ಸರಿಪಡಿಸಿಕೊಳ್ಳಬೇಕು ಎಂಬ ಡಿ.ಎಲ್.ಎನ್. ಅವರ ಅರಿಕೆಯ ನುಡಿಗಳು ಅವರ ಜಿಜ್ಞಾಸುವಿನ ಕುತೂಹಲ ಎಷ್ಟರ ಮಟ್ಟಿಗಿತ್ತು ಎಂಬುದನ್ನು ತೋರಿಸಿ ಕೊಡುವುದಾಗಿದೆ. ಈ ವಿಷಯವನ್ನಿಟ್ಟುಕೊಂಡು ಟಿ.ವಿ.ವೆಂಕಟಾಚಲಶಾಸ್ತ್ರಿ ಯವರು ಪಂಪಭಾರತ ದೀಪಿಕೆಯ ಕೆಲವು ಸಣ್ಣ ಪ್ರತ್ಯಾನ್ಯೂನ್ಯತೆಗಳನ್ನು ಗುರುತಿಸಿದ್ದವನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

**ಪ್ರಥಮಾಶ್ವಾಸ :**

೧. 'ಸುಪುಷ್ಪವೃಷ್ಟಿ (ಪ) ಸುಪುಷ್ಪದೃಷ್ಟಿ ದಿಸುಪೇಷ್ಪಪಷ್ಪ

ಈ ವಿಷಯ ಕುರಿತು ಈವರೆಗೂ ಏಕಾಭಿಪ್ರಾಯ ಸಾಧ್ಯವಾಗದಿದ್ದರಿಂದ ಪರಿಷತ್ತಿನ ಪಾಠಕ್ಕೆ ಸಮರ್ಥನೆ ಮಾಡಿಕೊಳ್ಳಲಾಗಿದೆ.

೨. ತಮಸ್ತಮ : ಪರಿಷತ್ತಿನ ಪಾಠ>ತಮಶ್ವಯ

ದೀಪಿಕೆಯ ಪಾಠ>ತಮಸ್ತುತಿ ಎಂದು ಇರಬಹುದು.

೮. ಪೊಕ್ಕಾ : ದೀಪಿಕೆ>ಪೊಕ್ಕು>ಒಳ್ಳೆಯ ಕಲ್ಪನೆ

೯. ವ್ಯಾಕ್ರ್ಯ : ದೀಪಿಕೆ–ಅದೇ–ವಾಕ್ರೀ ಶುದ್ಧರೂಪ

೧೧. ಬಿಚ್ಚವೀಸು>ದೀಪಿಕೆ>ಬಿಚ್ಚಳಿಸು; ಸರಿಯಾಗಿದೆ

೧೨. ಕೃತಿಭಂದಮುಂ : ದೀಪಿಕೆ>ಕೃತಿ ಬಂದಾಮೇ: ಒಳ್ಳೆಯ ಮಾರ್ಪಾಡು

೨೬ ಅಂತರ: ದೀಪಿಕೆ>ಅಂತನಂ>ಒಳ್ಳೆಯಬದಲಾವಣೆ

ಪರಿಷತ್ತಿನ ಪಾಠದೀಪಿಕೆಯ ಪಾಠ

೩೨. ಕಿಂಕೊಳೆ(ವೆ) ಅರ್ಥ ನಿಷ್ಪತ್ತಿಗಳು ಚಿಂತನೀಯೆ

೩೪. ನೆಗಪ್ದಿ–ನೆಗೆದ

೩೮ ದಾಳಪ್ರಿಯನೊಳ್–ಕಾಳಪ್ರಿಯೆದೊಳ್

೪೦. ಎಸಲ್ಲುಳ–ಎಸಟ್ಗಿಳ್ (ಶ.ದರ್ಪಣ>(ಪೂವಿನೆಸಳೊಳ್ ಕಳಂಸೂತ್ರ ೫೨)

೩೦. ಬೇಡಿರೇ– ಕೇಳಿರಿ (ಇಲ್ಲಿ ವ್ಯಾಕರಣೋಚಿತವಾದುದಿಲ್ಲ ಬೇಡುವುದಿಲ್ಲವೋ ಬೇಡಿಕೆ? ಈ ಅರ್ಥಗಳು ಇಲ್ಲಿ ನೋಡಬೇಕಾಗಿದೆ. ವ್ಯಾಕರಣ ವಿಮರ್ಶೆ ನೋಡಿ: (ಶಾಸ್ತ್ರೀಯ –೬–ಪು.೯)

೭೪. ಕಾದಿರಾಜಸುತರೊಳ್–ಕಾಶಿರಾಜ ಸುತರೊಳ್

೮೧. ನಮ್ಮ ಕುಲದೊಳ್ –ನಮ್ಮ ವಂಶದ

ಮಕ್ಕಳ್ ಪೆಱರ್–ಬೆರೆ ಮಕ್ಕಳೆ!

ದ್ವಿತಿಯಾಶ್ವಾಸ :

| **ಪರಿಷತ್ತಿನ ಪಾಠ** | | **ದೀಪಿಕೆಯ ಪಾಠ** |
|---|---|---|
| ೧. ಅಗಲುರ | – | ಅಗಲ್ದುರ (ಇಲ್ಲಿ ಪಂಪ ಎರಡನ್ನೂ ವಿಕಲ್ಪ ರೂಪದಲ್ಲಿ ಬೆಳೆಸಿದ್ದಾನೆ. |
| ೭೩. ಗೆಡೆವಚ್ಚಿರ್ವರ್ | – | ಜೋಡಿ ಮಿಗಿಲಾಗಿ ಇಬ್ಬರು ಇಲ್ಲಿ 'ಗೆಡೆವಚ್ಚಿರ್ವರ್' ಎಂಬ ಪಾಠ ಸ್ವೀಕೃತವಾಗಿ ಗೆಡೆವಚ್ಚು ಎಂಬುದಕ್ಕೆ ಸ್ನೇಹಬಿಡು ಎಂದು ಅರ್ಥಸಿದೆ ಇಲ್ಲಿಪಾಠಕೋಶವಿದೆ. ಗೆಡೆವೆಚ್ಚು ಸ್ನೇವನ್ನು ಬಿಡು ಎಂಬುದಾಗಿ ಅರ್ಥೈಸಿರುವುದು, ಪಾಠನಿಲುವಿನಲ್ಲಿ (ಪು.೨೭) ಆಗ ಗೆಡೆ+ಪಸು ಎಂಬ ಪದಚ್ಛೇದವನ್ನು ಒಪ್ಪಬೇಕು ಅದಕ್ಕೆ ಅನುಗುಣವಾಗಿ ಅಂಗೀಕೃತ ಪಾಠವನ್ನು ಪಂಪ ಭಾರತ ಪರಿಷ್ಕರಣಾಕರ್ತರು ಉಲ್ಲೇಖಿಸಿದ್ದು ಸ್ನೇಹಬಿಡು ಎಂಬ ಅರ್ಥವನ್ನು ನೀಡುವುದಾಗಿದೆ. |
| ೫೦. ನೊಳವಿಂಗೆ | | ನೊಳವಿಂಗೆ>ನೋಣಕ್ಕೆ |

| | |
|---|---|
| ಕುಪ್ಪೆವರಂ | ಕುಪ್ಪೆ>ಕಸದ ಕುಪ್ಪೆ, ತಿಪ್ಪೆ<br>ವರಂ>ಶ್ರೇಷ್ಠ<br>ಇಲ್ಲಿ ಕುಪ್ಪೆವರಂ ಎಂದೋ, ಕುಪ್ಪೆವರಂ ಎಂದೋ ಶಬ್ದ ಸಂಘಟನೆ ಕುಪ್ಪೆವರಂ ಎಂದಾದರೆ, ನೊಣದ ಆಟ ಏನಿದ್ದರೂ ಕುಪ್ಪೆವರೆಗೆ ಅಲ್ಲಿಂದಾಚೆಯಿಲ್ಲ ಎಂದಾಗುವುದು.'[೧೨] |

'ಡಿ.ಎಲ್.ಎನ್ ಅವರು ಕ.ಪ್ರತಿ. (ಬಿ.ಎಲ್.ರೈಸ್‌ರ ಅವರ ಮುದ್ರಿತ (ಪ್ರತಿಯಲ್ಲಿ) 'ಗೆಡೆವರ್ಚ್ಚಿರ್ವರ್' ಎಂಬುದಕ್ಕೆ ಸಮೀಪವಾದ ಪಾಠವನ್ನು ಮಾಡಿಕೊಂಡಿದ್ದಾರೆ. ಗೆಡವಚ್ಚಿರ್ವರ್ (ಪೆರ್ಚು>ಪೆಚ್ಚು) ಅಂಗೀಕೃತ ಪಾಠವಾಗಿ ಗೆಡೆವಚ್ಚಿರ್ವರ್ ಎಂಬುದನ್ನು ಗೆಡೆ+ಪಸು+ಇರ್ವರ್ ಎಂದು ಮಾಡಿಕೊಳ್ಳಲು ಸಾಧನವಿರುವಂತೆಯೇ ಗೆಡೆ+ಮೆಚ್ಚು+ಇರ್ವರ್ ಎಂದು ಮಾಡಿಕೊಳ್ಳಲು ಸಾಧ್ಯ. ಹಾಗೆ ಆದರೆ ತಮ್ಮ ನಡುವೆ ಏರ್ಪಟ್ಟ ಜೋಡಿಯನ್ನು ಮೆಚ್ಚಿಕೊಂಡು ಎಂದು ಅರ್ಥವಾಗುತ್ತದೆ. ಆದರೆ ೨-೮೭ರಲ್ಲಿಯ 'ಗೆಡೆವಚ್ಚುಗೊಂಡು' ಎಂಬ ಇನ್ನೊಂದು ಪ್ರಯೋಗವನ್ನು ನೋಡಿದರೆ ಗೆಡೆ+ಪಸು+ಕೊಳ್ ಹೀಗೆಯೇ ಪದಚ್ಛೇದವನ್ನು ಇಟ್ಟುಕೊಳ್ಳುವುದು ಸೂಕ್ತವೆನಿಸುತ್ತದೆ. ಇನ್ನೂ ಒಂದು ಸಾಧ್ಯತೆಯುಂಟು, ಪೆಚ್ಚು ಎಂದರೆ ಕತ್ತರಿಸು ಎಂದರ್ಥವಿದೆ ಆಗ 'ಸ್ನೇಹ ಕಡಿದ ಹೋಗಿ ಎಂಬರ್ಥ' ಹೊರಟು 'ಗೆಡೆ-ವಚ್ಚು', 'ಗೆಡೆವೆರ್ಚು' ಭಿನ್ನಧಾತು ಮೂಲದ ಎರಡು ನಾವು ಧಾತುಗಳಿಗೂ ಸಮನಾರ್ಥ ಸಾಧನವಾಗುತ್ತದೆ. ಇಲ್ಲಿ ನಿರ್ಣಯ ಯಾವರೀತಿಯದು ಎಂದು ಏಕಾಭಿಪ್ರಾಯಕ್ಕೆ ಬರುವಂತಿಲ್ಲದ್ದಾಗಿದೆ.'[೧೩]

ಹೀಗೆ ಪಂಪಭಾರತದ ಎಲ್ಲ ಪದ್ಯ-ಶಬ್ದಗಳಿಗೆ ಅರ್ಥವನ್ನು ಪಾಠಾಂತರಗಳನ್ನು ನೀಡಿರುವುದು ದೀಪಿಕೆಯೆಲ್ಲಲ್ಲದೆ ಇತರೆ ವಿದ್ವಾಂಸರ ಚರ್ಚಿತ ವಲಯದಲ್ಲಿ ಕಾಣಸಿಗುತ್ತದೆ. ಡಿ.ಎಲ್.ಎನ್ ರವರ ಅಗಮ್ಯವಾದ ಸ್ಮರಣ ಶಕ್ತಿ, ಖಚಿತವಾದ ಪಾಂಡಿತ್ಯ ಶಬ್ದಾರ್ಥವನ್ನು ಕಂಡುಹಿಡಿಯುವ ಸರ್ವ ಸಾಮರ್ಥ್ಯ ಮತ್ತು ವಿವರಣಾ ನೈಪುಣ್ಯ ಇವು ನಮಗೆ ಅಚ್ಚರಿಯನ್ನು ಸಾಹಿತ್ಯ ವಲಯಕ್ಕೆ ಹೊಸತನವನ್ನೂ ತಂದು ಕೊಟ್ಟ ಖುಷಿಯನ್ನುಂಟುಮಾಡಿವೆ. ಪಾಠಾಂತರಗಳನ್ನು ವಿಶ್ಲೇಷಿಸಿ ಸರಿಯಾದ ಪಾಠವನ್ನು ಊಹಿಸುವಲ್ಲಿ ಅವರು ಸಾಧಾರಣವಾದ ವಸ್ತುನಿಷ್ಟವಾದ ನಿಲುವನ್ನು ತಳೆದಿದ್ದಾರೆ. ಪಾಠಾಂತರ, ಇತರೆ ಕ್ಲಿಷ್ಟ ವಿಷಯಗಳು ತಮಗೂ ತಿಳಿಯದಿದ್ದರೆ ತಿಳಿಯದು ಎಂದು ಒಪ್ಪಿಕೊಂಡು ಮುಂದಿನ ಅಧ್ಯಯನಕಾರರಿಗೆ ದಾರಿಮಾಡಿ ಕೊಟ್ಟಿದ್ದಾರೆ.

ಈ ದೀಪಿಕೆಯ ಮಾದರಿಯನ್ನು ಅನುಲಕ್ಷಿಸಿ 'ಚಂದ್ರಗುಪ್ತಮಾಲೆ' ಅಡಿಯಲ್ಲಿ ಶ್ರವಣ ಬೆಳಗೊಳದಿಂದ ೧೯೯೧ರಲ್ಲಿ ತ.ಸು.ಶಾಮರಾಯ ಹಾಗೂ ಹಂಪ ನಾಗರಾಜಯ್ಯನವರೆ ಪಂಪನ ಇನ್ನೊಂದು ಕಾವ್ಯವಾದ ಆದಿಪುರಾಣಕ್ಕೆ ದೀಪಿಕೆಯನ್ನು ರಚಿಸಿದ್ದಾರೆ. ಇದಕ್ಕೆ

ಪ್ರೇರಣೆಯಾಗಿ ಡಿ.ಎಲ್.ಎನ್. ಅವರ ಪ.ಭಾ.ದೀಪಿಕೆಯು ತುಂಬಾ ಸಹಾಯಾರ್ಥವಾಗಿದೆ. ಪಂಪಭಾರತ ದೀಪಿಕೆ ಮತ್ತು ಆದಿಪುರಾಣ ದೀಪಿಕೆಗೆ ಮುಖ್ಯವಾದ ಕೆಲ ವ್ಯತ್ಯಾಸಗಳಿವೆ. ಅವುಗಳೆಂದರೆ ಪಂಪ ಕಾವ್ಯದ ಮೂಲ, ಕಾವ್ಯದ ಪಾಠವನ್ನು ಕೈಬಿಟ್ಟಿರುವುದು ಇಲ್ಲಿ ಪ್ರಮುಖ ಅಂಶವಾದರೆ ಆದಿಪುರಾಣ ದೀಪಿಕೆಯು ಮೂಲ ಕಾವ್ಯವನ್ನು ಆಧರಿಸಿಕೊಂಡು ಸೃಜಿತ ಕೃತಿಯಾಗಿದೆ. ಈಗಾಗಿ ಆದಿಪುರಾಣ ದೀಪಿಕೆಯ ಗಾತ್ರ ಸಹಜವಾಗಿ ಹಿರಿದಾಗಿದೆ.

ಕೊನೆಯದಾಗಿ ಹೇಳುವುದಾದರೆ, ಪಂಪಭಾರತ ದೀಪಿಕೆಯು ಪ್ರಕಟವಾದ ನಂತರದ ಕಾಲದಲ್ಲಿ ಮೂಲ ಪಂಪಭಾರತದಲ್ಲಿನ ಹಲವಾರು ಪದ್ಯಗಳು, ಶಬ್ದಗಳು ವಿದ್ವತ್ ವಲಯದ ತುಂಬಾ ಚರ್ಚಿತವಾಗಿದೆ. ಪಂಪಭಾರತದ ವಿವಿಧ ರೂಪಗಳು ಬೆಳಕು ಕಂಡಿವೆ. (ಎಲ್.ಬಸವರಾಜು ಅವರ ಸರಳ ಪಂಪಭಾರತ) ಡಿ.ಎಲ್.ಎನ್. ಅವರ ಅನೇಕ ಕಾವ್ಯಗಳಲ್ಲಿ ಬಳಕೆಯಾದ ಪದ ಪ್ರಯೋಗಗಳು ಅನ್ಯಭಾಷೆಯಲ್ಲಿ ಪರ್ಯಾಯವಾಗಿ ಬಳಸುತ್ತಿದ್ದ ಪದಗಳನ್ನು ಗುರುತಿಸಿ ಅವುಗಳ ಸ್ವಾಮ್ಯ ಭಿನ್ನತೆಗಳನ್ನು ಗುರುತಿಸಿದ್ದು "ಮತ್ತಲರಥ ಮನೆಂದು' ಎಂಬುದಕ್ಕೆ ಪ್ರತಿಯಾಗಿ 'ಮತ್ತ-ಲತ್ತರ (ಶ) ದುನೆಂದು' ಎಂಬ ಪಾಠವಿದ್ದರೆ ಪದ್ಯದ ಓಟ ಚೆಲುವಾಗುತ್ತದೆ. ರಾಜ ಎಂಬುದು 'ಅರಸ' ಆದಂತೆ ರಥ ಎಂಬುದು ಅರಂಭವಾಗುತ್ತದೆ. ಸಂಸ್ಕೃತದ 'ರ'ಕಾರ 'ಲ' ಕಾರಾದಿ ಶಬ್ದಗಳಿಗೆ ತಮಿಳಿನ ಆದಿಯಲ್ಲಿ 'ಅ'ಕಾರ, 'ಉ'ಕಾರ 'ಇ'ಕಾರಗಳು ಸೇರಿ ತದ್ಭವಗಳಾಗುತ್ತವೆ, ಲೋಕ>ಉಲಗಂ, ಲಕ್ಷಣ> ಇಲಕ್ಕಣಂ, ರೂಪ> ಉರುವಂ ಇತ್ಯಾದಿ, ಇದರಂತೆ ರಥ ತಮಿಳಿನಲ್ಲಿ 'ಅರದ'ವಾಗುತ್ತದೆ. ಅದೇ ಕನ್ನಡಕ್ಕೆ ತಮಿಳಿನ ಮೂಲಕ ಬಂದಿದೆ 'ಪೊನ್ನ'ಕರ್ಣಪಾರ್ಯರು ಈ ಶಬ್ದ ಪ್ರಯೋಗವನ್ನು ಮಾಡಿದ್ದಾರೆ ಎಂದು ಡಿ.ಎಲ್.ಎನ್. ದೀಪಿಕೆಯ ಪುಟ ೩೮೬ ರಲ್ಲಿ ಉಲ್ಲೇಖಿಸಿದ್ದು ಕಂಡು ಬಂದಿದೆ.'[೧೪] ಈ ಚರ್ಚೆ ಡಿ.ಎಲ್.ಎನ್. ಅವರ ಆಮೂಲಾಗ್ರವಾದ ಸ್ಮರಣ ಶಕ್ತಿಗೆ ಸಾಕ್ಷೀಕರಿಸಿದ್ದಾಗಿದೆ.

ಪಂಪಭಾರತ ದೀಪಿಕೆಯಲ್ಲಿ ಪಾಂಡಿತ್ಯಪೂರ್ಣ ಪರಿಶೋಧನೆಗೆ ನಿಲುಕಲಾಗದ ಎಷ್ಟೋ ಶೋಧಗಳಿವೆ. ಇದರಿಂದಾಗಿ ಮೂಲ ಪಂಪಭಾರತದ ಅರ್ಥ ಆಶಯಗಳು ಇನ್ನು ಸ್ಫುರಿತಗೊಂಡು ವಿವಿಧ ಮೂಲಗಳಿಂದ ಅಧ್ಯಯನಕ್ಕೊಳಪಡಿಸಬೇಕಾದ ಸಾಧ್ಯತೆಗಳಿವೆ. ಅಲ್ಲದೆ ಈವರೆಗೂ ಇದಕ್ಕೆ ಪೂರಕವಾಗಿ ಬಂದ ಹಲವಾರು ಕೃತಿ ಲೇಖನಗಳು ದೀಪಿಕೆಯ ಬೆಳಕನ್ನು ಹೆಚ್ಚಿಸಲು ಸಹಾಯಾರ್ಥವಾಗಿವೆ.

## ಕೊನೆಯ ಟಿಪ್ಪಣಿಗಳು

೧. ಪಂಪ ಭಾರತ ದೀಪಿಕೆ (ಲೇ) ಡಿ.ಎಲ್. ನರಸಿಂಹಾಚಾರ್, ೧೯೭೧ ಪು ೧೪

೨. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ (ಸಂ) ಎಫ್.ಟಿ.ಹಳ್ಳಿಕೇರಿ, ಪು. ೨೮೭

೩. ಪಂಪ ಭಾರತ ದೀಪಿಕೆ (ಲೇ) ಡಿ.ಎಲ್.ನರಸಿಂಹಾಚಾರ್, ೧೯೭೧, ಪು ೧೫

೪. ಪಂಪ ಭಾರತ ದೀಪಿಕೆ (ಲೇ) ಡಿ.ಎಲ್.ನರಸಿಂಹಾಚಾರ್, ೧೯೭೧, ಪು ೪೯೦

೫. ಡಿ.ಎಲ್.ನರಸಿಂಹಾಚಾರ್, ಎಸ್.ವಿದ್ಯಾಶಂಕರ, ಪು. ೭೫-೭೬

೬. ಕನ್ನಡ ವಿದ್ವತ್ ಪರಂಪರೆ ಹಾಗೂ ಡಿ.ಎಲ್.ನರಸಿಂಹಾಚಾರ್ (ಲೇ) ಎಂ.ರವೀಂದ್ರ, ೨೦೦೫ ಪು. ೨೬೧

೭. ಪಂಪ ಭಾರತ ದೀಪಿಕೆ (ಲೇ) ಡಿ.ಎಲ್. ನರಸಿಂಹಾಚಾರ್, ೧೯೭೧, ಪು ೪೪೭-೪೪೯

೮. ಅದೇ, ಪು. ೪೪೯

೯. ದೀಪಿಕೆಯ ಬೆಳಕಲ್ಲಿ (ಲೇ) ರಂ.ಶ್ರೀ.ಮುಗಳಿ, ಪು. ೫-೮

೧೦. ಅದೇ, ಪು. ೫-೮

೧೧. ಸಾಹಿತ್ಯ ಸನ್ನಿಧಿ (ಲೇ) ಟಿ.ವಿ.ವೆಂಕಟಾಚಲಶಾಸ್ತ್ರಿ, ಪು. ೧೩೪-೧೩೫

೧೨. ಕನ್ನಡ ಸಾಹಿತ್ಯ ಪರಂಪರೆ ಹಾಗೂ ಡಿ.ಎಲ್.ಎನ್. (ಸಂ) ಟಿ.ವಿ.ವೆಂಕಟಾಚಲ ಶಾಸ್ತ್ರಿ ಪು. ೩೬೩

೧೩. ಸಾಹಿತ್ಯ ಸನ್ನಿಧಿ (ಸಂ) ಟಿ.ವಿ.ವೆಂಕಟಾಚಲ ಶಾಸ್ತ್ರಿ ಪು. ೧೩೯

೧೪. ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ ಎಫ್.ಟಿ.ಹಳ್ಳಿಕೇರಿ (ಸಂ), ೨೦೦೫ ಪು. ೨೯೦

## ಅಧ್ಯಾಯ – ಏಳು

# ಭಾಷಿಕ ಶೋಧಗಳು

ಕನ್ನಡ ಸಾಹಿತ್ಯದ ಅವಿಸ್ತಾರವಾದ ಪರಿಧಿಯಲ್ಲಿ ವ್ಯಾಕರಣ, ಭಾಷೆ, ಸಂಶೋಧನೆಯ ಕ್ಷೇತ್ರ ಬಹುವಿಸ್ತಾರವಾದ ಅಂಶವುಳ್ಳದ್ದಾಗಿದ್ದು ಇದರಾಳದಲ್ಲಿ ಈವರೆಗೂ ನಮ್ಮ ತಿಳುವಳಿಕೆಗೂ ಬಾರದಿರುವ ಅಥವಾ ತೀರ್ಮಾನವಾಗದೆ ತೊಡಕಾಗಿ ಉಳಿದಿರುವ ಅಂತರ್ಗತವಾದ ಸಂಗತಿಗಳು ಹಾಗೂ ಸಮಸ್ಯೆಗಳ ಅಸಾಧಾರಣ ವಿವೇಚನೆ ನಡೆಯುತ್ತಲೆ ಸಾಗಿದೆ. ಇದರಿಂದ ಹೊಸ ಹೊಸ ಸಂಗತಿಗಳು ಬೆಳಕಿಗೆ ಬರುತ್ತಲೇ ಇವೆ. ಈ ಕ್ರಮವಾಗಿ ನಮ್ಮಲ್ಲಿನ ತಿಳುವಳಿಕೆಯ ಕ್ಷೇತ್ರ ವಿಸ್ತಾರಗೊಂಡು ಅಧ್ಯಯನ ಪರಿಧಿಯಲ್ಲಿ ಹೆಚ್ಚು ನಿರ್ಧಾರಗೊಳ್ಳುತ್ತ ಸಾಗುತ್ತಿರುವುದು ಒಂದು ವ್ಯವಸ್ಥಿತ ರೂಪವೆನಿಸಿದೆ.

ಕಿಟೆಲ್ ರೈಸ್‌ರಂತಹ ಪಾಶ್ಚಾತ್ಯ ವಿದ್ವಾಂಸರಿಂದ ಇಂದಿನ ಟಿ.ವಿ.ವೆಂಕಟಚಲಶಾಸ್ತ್ರಿ, ಎಂ.ಚಿದಾನಂದಮೂರ್ತಿಗಳವರೆಗೂ ನಡೆದು ಬಂದು ಸಾಹಿತ್ಯ ಶೋಧ ಭಾಷೆಯ ನೆಲೆಯಲ್ಲಿ ಕಾಲಕ್ಕನುಗುಣವಾಗಿ ವಿವೇಚಿಸುತ್ತಾ ಸಾಗಿದೆ ಇಂತಹ ಪರಿಧಿಯಲ್ಲಿ ಮೂಡಿಬಂದ ಶಬ್ದಗಾರುಡಿಗ, ಶಬ್ಧಸ್ಫಟಿಕವೆನಿಸಿದ ಡಿ.ಎಲ್.ನರಸಿಂಹಾಚಾರ್ ಅವರ ಶೈಲಿ ಹಳಗನ್ನಡಕ್ಕೆ ಹೆಚ್ಚು ಹೊತ್ತು ನೀಡಿದ್ದರು. ಹೊಸಗನ್ನಡಕ್ಕೆ ಹೋಲಿಸಿ ಪ್ರಸ್ತುತ ಅಧ್ಯಯನ ನೆಲೆಗೆ ತಕ್ಕಂತೆ ಪಾಂಡಿತ್ಯ ಇವರದಾಗಿತ್ತು.

ಶಬ್ದಸಾಹಿತ್ಯದ ಕುರಿತ ಆಗುಹೋಗುಗಳನ್ನು ತಿಳಿಯಬೇಕೆನ್ನುವರಿಗೆ ಡಿ.ಎಲ್.ಎನ್ ಅವರ ಶಬ್ದಾರ್ಥ ವಿವೇಚನೆಗೆ ಸಂಬಂಧಿಸಿದ ಲೇಖನಗಳು ಕುತೂಹಲಕಾರಿಯಾಗಿವೆ. ಈ ಕುರಿತು ಡಿ.ಎಲ್.ಎನ್. ಅವರು ಪಳಗಿದ ಈ ಕ್ಷೇತ್ರವನ್ನು ಒಟ್ಟಾಗಿರಿಸಿ ಭಾಷಿಕ ಶೋಧಗಳು ಎಂಬ ಶೀರ್ಷಿಕೆಯಡಿಯಲ್ಲಿ ಒಟ್ಟು ೨೨ ಲೇಖನಗಳನ್ನು ಇಲ್ಲಿ ಚರ್ಚಿಸಲಾಗಿದೆ. 'ಒಂದು ಶಬ್ಧವನ್ನು ಹಿಡಿದುಕೊಂಡು ಅದರ ರೆಂಬೆ, ಕೊಂಬೆ, ಕಾಂಡದ ಗುಂಟ ಇಳಿದು, ಹಲವು ಬೇರುಗಳಲ್ಲಿ ಹರಿದಾಡಿ ಮೂಲ ಬೇರನ್ನು ಮುಟ್ಟಿ ಹೇಳುವ ಅವರ ಸಾಹಸ ಇನ್ನೊಬ್ಬರಿಗೆ ಅಸಾಧ್ಯವೆಂಬ ಭಾವನೆಯನ್ನು ಹುಟ್ಟಿಸುತ್ತದೆ. ಒಂದೊಂದು ಶಬ್ದ ಯಾವ ಜಿಲ್ಲೆ, ಯಾವ ಊರು ಯಾವ ಸ್ಥಳದ ಶಾಸನದಲ್ಲಿದೆ, ಯಾವ ಕವಿ, ಕಾವ್ಯದ, ಯಾವ ಸಂದರ್ಭದಲ್ಲಿದೆ

ಎಂದು ನಾಲಗೆಯ ತುದಿಯಲ್ಲಿ ನೆನಪಿಸಿಕೊಳ್ಳುವ, ಅಗಲಿಹೋದ ಅವುಗಳ ಸಮಬಂಧಿ ಪದಗಳನ್ನು ಅನ್ಯಭಾಷೆಗಳಿಂದ ಬೆರಳ ತುದಿಯಲ್ಲಿ ಎತ್ತಿತರುವ ಡಿ.ಎಲ್.ಎನ್. ಅವರ ಕೂರ್ಮಸಾಹಸ ಒಂದು ಲೀಲೆ ಎಂದೇ ಹೇಳಬೇಕು.'[೧] ಆಧುನಿಕ ಪದ್ಧತಿಗಳನ್ನನುಸರಿಸಿ, ಶಬ್ದಗಳ ರೂಪನಿಷ್ಪೆಯನ್ನು ಮಾಡಿದ್ದ ಇವರು ಅಲ್ಲಿ ಕಂಡುಬಂದಿರುವ ಸ್ವಾರಸ್ಯಕರವಾದ ಮಹತ್ವಗಳನ್ನು ಗುರುತಿಸಿ ಸಂಶೋಧನಾ ನೆಲೆಯಲ್ಲಿ ಗುರುತಿಸಿದ್ದಾರೆ. ಈ ಗುರುತಿಸುವಿಕೆಗೆ ಸಾಕ್ಷಿಯಾಗಿ ಈ ಕೆಳಗಿನ ವಿಷಯಗಳು ಪ್ರಸ್ತಾಪವನ್ನು ಕ್ರೂಡೀಕರಿಸಲಾಗಿದೆ.

**ಪ್ರಾಕೃತ ಭಾಷೆಗಳ ಹೆಸರು**

ಪ್ರಬುದ್ಧ ಕರ್ಣಾಟಕ (ವಸ್ತುಕೋಶ) ಸಂ–೧, ಸಂಚಿಕೆ–೪ರಲ್ಲಿ ಮೊದಲಬಾರಿಗೆ ಬಿತ್ತರಗೊಂಡ ಈ ವಿಷಯ ಡಿ.ಎಲ್.ಎನ್. ಅವರು ಸಂಕಲಿಸಿದ ಸಂಶೋಧನಾ ವಿದ್ವತ್ ಗ್ರಂಥ ಪೀಠಿಕೆಗಳು ಲೇಖನಗಳು ಕೃತಿಯ ಸಂಕೀರ್ಣ ಭಾಗದ ೪೧ನೇ ವಿಷಯವಾಗಿ ಪ್ರಸ್ತಾಪಗೊಂಡಿದೆ.

ಶೀರ್ಷಿಕೆಗೆ ತಕ್ಕಂತೆ ಹಿಂದೆ ಭರತಖಂಡದಲ್ಲಿ ಎಷ್ಟೋ ಪ್ರಾಕೃತ ಭಾಷೆಗಳು ಪ್ರಚಲಿತದಲ್ಲಿದ್ದವೆಂದು, ತಿಳಿದಿದ್ದು ಪ್ರಮುಖವಾಗಿ ಮೂರು ಅಂಶಗಳಿಂದ ಈ ವಿಷಯವನ್ನು ಸ್ಪಷ್ಟೀಕರಣ ಮಾಡಿದೆ.

ಮೊದಲನೆಯ ವಿಷಯವಾಗಿ ಪ್ರಾಕೃತ ವ್ಯಾಕರಣಕ್ಕಿಂತ ಪುರಾತನವಾದ ಗ್ರಂಥ ಬೇರಾವುದು ಇಲ್ಲ, ಪ್ರಾಕೃತ ವ್ಯಾಕರಣಗಳೆ ಮುಖ್ಯವಾದವು ಎಂದು ಹೇಳಿದ ಹೇಮಚಂದ್ರನು, ಚೂಲಿಕಾ, ಪೈಶಾಚಿ ಅಪಭ್ರಂಶ ಮತ್ತು ಆರ್ಷ ಎಂಬ ನಾಲ್ಕನ್ನು ಹೇಳಿದ್ದಾನೆ, 'ತ್ರಿವಿಕ್ರಮ ಲಕ್ಷ್ಮೀಧರ ಮುಂತಾದವರು ಈ ಹೇಳಿಕೆಯನ್ನು ಸ್ವೀಕರಿಸಿದ್ದು ಈಚಿನ ಪ್ರಾಕೃತ ವ್ಯಾಕರಣಕಾರರಲ್ಲಿ ಹಲವರು, ಇವುಗಳ ಲಕ್ಷಣವನ್ನು ನಿರೂಪಿಸಿದ್ದಾರೆ. ಆರ್ಷ ಅಥವಾ ಅರ್ಧಮಾಗಧಿ ವಿಚಾರವನ್ನು ಕುರಿತು ಇಲ್ಲಿ ಮುಂದುವರೆಸಿದ ಮಾರ್ಕಂಡೇಯನೆಂಬ ವೈಯಾಕರಣಿ ೧೬ ಪ್ರಾಕೃತ ಭಾಷಾನಾಮಗಳನ್ನು'[೨] ಉಲ್ಲೇಖಿಸಿದ್ದು ಕಂಡುಬಂದಿದೆ ಎಂದಿದ್ದಾರೆ.

ಎರಡನೆಯ ವಿಚಾರವಾಗಿ ಸಾಂಸ್ಕೃತಿಕ ನಾಟಕಗಳಲ್ಲಿ ಕೆಲವು ದರ್ಜೆಯ ಪಾತ್ರಗಳು ಪ್ರಾಕೃತ ಭಾಷೆಯನ್ನಾಡಬೇಕು ಎಂಬ ನಿಯಮವಿದೆ ಎಂದಿದ್ದಾರೆ.

ಮೂರನೆಯ ಭಾಗವಾಗಿ ಅಲಂಕಾರ, ನಾಟ್ಯ, ಸಂಗೀತ ಗ್ರಂಥಗಳಲ್ಲಿ ಪ್ರಾಸಂಗಿಕವಾಗಿ ಕೆಲವು ವೇಳೆ ಪ್ರಾಕೃತ ಭಾಷಾ ವಿಷಯವನ್ನು ತಿಳಿಸುವ, ಸಂಪ್ರದಾಯ ಉಂಟು ಎಂದು ಹೇಳಿ ಇದಕ್ಕೆ ಪೂರಕವಾಗಿ, ಭರತಾಚಾರ್ಯನು ಬರೆದ ಗೀತಾಲಂಕಾರ ಎಂಬ ಸಂಗೀತ ಶಾಸ್ತ್ರದ ಭಾಷಾ ಲಕ್ಷಣದ ಕೊನೆಯ ಅಧ್ಯಾಯ ೧೪ರ ಭಾಷೆಯನ್ನು ಕುರಿತು ಉದಾಹರಿಸಿ ಪ್ರಾಕೃತ ಭಾಷೆಗಳ ಸಂಖ್ಯೆ ೪೨ ಎಂದು ತಿಳಿಸಿದ್ದಲ್ಲದೆ, ಇದರಲ್ಲಿನ ಪ್ರತಿ ಭಾಷಾಸ್ವರೂಪದ

ಕುರಿತು ಪ್ರಸ್ತಾಪಿಸಿದ್ದಾರೆ. ಈ ಎಲ್ಲಾ ವಿಷಯಗಳು ಪ್ರಸ್ತಾಪಕ್ಕನುಗುಣವಾಗಿ ಪ್ರಾಕೃತ ಭಾಷಾ ನಾಮಗಳಿಗಾಗಿ ಮಹಾರಾಷ್ಟ್ರೀರೆ ರಾಲೇವ್ಲೆಜ್ಞಾ ಸೋಮೆಕಿ ಜೋಲಕಿ ಗಳಾದಿಯಾಗಿ ೩೧ ಹೆಸರುಗಳನ್ನು ಉಲ್ಲೇಖಿಸಿದೆ. ಜೊತೆಗೆ ಪದ್ಯಗಳ ಉದಾಹರಣೆ ಪ್ರಕಾರವಾಗಿ ದೇಶಿ ಕಿರಾ ಈಸೊರಟಿಯ ಮೊಗಹ... ಎಂದು ೨೫ ಚಾರಣ ಭಾಷಾ ಪ್ರಯೋಗಗಳನ್ನು ನೀಡಿದೆ.

ಮುಂದುವರೆದು ಪ್ರಾಕೃತ ವ್ಯಾಕರಣಗಳಿಂದ ದೊರೆಯುವ ಹೆಸರುಗಳಿಗಾಗಿ ಸಾಗರ, ಉಪಸಾಗರ, ವ್ರಾಚಡ ಎಂದು ಮಾರ್ಕಂಡೇಯನು ಹೇಳಿದ ೨೭ ಬಗೆಯನ್ನು ಉದಾಹರಣೆಯಾಗಿ ವಿವರಿಸಿದ್ದು ತಿಳಿದುಬಂದಿದೆ. ಈ ವಿಚಾರವನ್ನು ಮೇಲು ನೋಟಕ್ಕೆ ಸರಳವಾಗಿ ಬರವಣಿಗೆ ಇಳಿಸಿದ್ದು ಕಂಡು ಬಂದಿದೆ. ಆದರೆ ಇದರಿಂದ ಡಿ.ಎಲ್.ಎನ್. ಅವರ ಅವಲೋಕನ ದೃಷ್ಟಿ ಎಷ್ಟು ಆಳವಾದದಾಗಿತ್ತು ಎಂಬ ವಿಚಾರ ಕಲ್ಪನೆಗೂ ಮೀರಿದಂತಿದೆ.

**ಪದಗಳ ಹುಟ್ಟು ಸಾವು**

೧೯೬೩ ರಲ್ಲಿ ಕೈಲಾಸ ಪತ್ರಿಕೆಯಲ್ಲಿ ಪ್ರಕಟವಾದ ಈ ವಿಷಯದ ಪ್ರಸ್ತಾಪ ಡಿ.ಎಲ್.ಎನ್ ಅವರು ಸಂಕಲಿಸಿದ ಪೀಠಿಕೆಗಳು, ಲೇಖನಗಳು ಕೃತಿಯ ಕನ್ನಡ ನಿರುಕ್ತಿ ವಿಚಾರಗಳು ೬ನೇ ಭಾಗವಾಗಿ ಮೂಡಿ ಬಂದಿದೆ

ಯಾವುದೇ ಒಂದು ಶಬ್ದಭಂಡಾರ ಶಾಶ್ವತವಾಗಿರುವುದಿಲ್ಲ ಅದರಲ್ಲಿನ ಶಬ್ದಗಳು ಅತ್ಯುನ್ನತ ಪ್ರಚಾರದಲ್ಲಿದ್ದು, ಶಬ್ದ ಕಾಲ ಗತಿಸಿದಂತೆ ತನ್ನ ಮೂಲ ಛಾಯೆಯನ್ನು ಕಳೆದುಕೊಂಡು ಇಲ್ಲವಾಗುತ್ತವೆ. ಕೆಲವು ಸಂದರ್ಭಗಳಲ್ಲಿ ಆ ಭಾಷೆಗಳಲ್ಲಿ ಇಲ್ಲದಿರುವ ಶಬ್ದಗಳು ಹೊಸದಾಗಿ ಬಂದು ಸೇರಿಕೊಳ್ಳುತ್ತವೆ. ಕೆಲ ಸಂದರ್ಭದಲ್ಲಿ ಭಾಷೆಗಳಲ್ಲಿ ಇರುವ ಶಬ್ದಗಳಿಂದಲೆ ಹೊಸ ಶಬ್ದ (ಪದಗಳು) ಹುಟ್ಟುತಲೆ ಇರುತ್ತವೆ. ಹೀಗೆ ಶಬ್ದಗಳ ಹುಟ್ಟು ಸಾವಿನ ವಿಚಾರ ಕುರಿತು ಚರ್ಚೆಯೇ ಈ ಲೇಖನದ್ದಾಗಿದೆ.

ಕಾಲಕ್ರಮದಲ್ಲಿ ಮನುಷ್ಯ ಹುಟ್ಟು ಬೆಳವಣಿಗೆ, ಯೌವ್ವನ, ಮುಪ್ಪು, ಸಾವುಗಳನ್ನು ಹೇಗೆ ಅನುಭವಿಸುತ್ತಾನೋ ಹಾಗೆಯೇ ಶಬ್ದಗಳು, ಜೀವನವೂ ಸಾಗುತ್ತದೆ. ಮನುಷ್ಯ ಜೀವನಕ್ಕೆ ಪ್ರಕೃತಿ ನಿಯಮ ಎಷ್ಟರಮಟ್ಟಿಗೆ, ಕಾರಣವೊ ಶಬ್ದಾರ್ಥಗಳ ಜೀವನಕ್ಕೂ ಅಷ್ಟೆ ಕಾರಣವೆನಿಸಿದೆ, ಮನುಷ್ಯ ಅಂತರ ಬಾಹ್ಯ ಸಂಕಷ್ಟಗಳಿಂದ ಹೇಗೆ ಸಾಯವನೋ ಹಾಗೆಯೇ ಶಬ್ದದ ವ್ಯವಹಾರ ಕ್ರಮ ಸ್ಥಗಿತ, ಮತ್ತು ಕೆಲವು ಗುಂಪಿನೊಂದಿಗೆ ಯಾತ್ರೆ ಉಳಿದು ಬಿಡುವುದರಿಂದ ಅವನತಿ, ಗತಿಸಬಹುದಾಗಿದೆ ಈಗಾಗಲೇ ಈ ಅವಸ್ಥೆಗೆ ನೂರಾರು ಭಾಷೆಗಳು ಪದಗಳು ಬಲಿಯಾಗಿದ್ದು ಉಂಟು ಹುಟ್ಟಿದ್ದು ಉಂಟು, ಉದಾಹರಣೆಗೆ ಜ್ಞ, ಜ್ಞ ಎಂದು ಊಂಕರಿಸುವ ಪ್ರಾಣಿಯ ಹೆಸರುಗಳನ್ನು ನೋಡಬಹುದು, ಇದಕ್ಕೆ ಕುದುರೆ

ತುರುಗ ಎಂಬೆರಡು ಕನ್ನಡ ಶಬ್ದಗಳಿವೆ, ಕುದುರೆ ಶಬ್ದ ಕೆಲವು ಪ್ರದೇಶಗಳಲ್ಲಿ ಮಾತ್ರ ಜೀವಂತವಾಗಿದೆ. ಈ ಉದಾಹರಣೆಯಿಂದ ಇನ್ನೊಂದು ಅಂಶವನ್ನು ಪ್ರಸ್ತಾಪಿಸುವುದಾದರೆ, ಒಂದು ವಸ್ತುವನ್ನಾಗಿಸಿ ಒಂದು ಭಾಗವನ್ನಾಗಿ ನಿರ್ದೇಶಿಸುವುದಕ್ಕೆ ಅನೇಕ ಶಬ್ದಗಳು ಒಂದು ಭಾಷೆಯಲ್ಲದಿದ್ದರೆ, ಅವುಗಳಲ್ಲಿ ಒಂದು ಮಾತ್ರ ಉಳಿದುಕೊಂಡು ಉಳಿದೆಲ್ಲವು ನಶ್ವರವಾಗುತ್ತವೆ ಪರಭಾಷೆ ಶಬ್ದ ಒಂದು ದೇಶ ಶಬ್ದ ಒಂದನ್ನು ಓದಿಸಬಹುದು. ಉದಾ : ಜಾನ್ (ಅಳಿವು) ಆಕಾಶ (ಉಳಿವು) ಇರುಳನ್ನು ನುಂಗಿದ ಹಾಗೆ ಬಿಟ್ಟಿದೆ ಕೆಲ ಶಬ್ದಗಳು ದೀರ್ಘವಾಗಿ ಎಲ್ಲಾ ಕಾಲಕ್ಕೂ ಬದಲಾಗದೇ ಉಳಿದುಕೊಂಡವು ಉಂಟು. ಕಣ್ಣು, ಕಿವಿ, ಕಾಲು, ಮೂಗು, ಕೋಳಿ, ನೀರು ಈ ಪದಗಳಲ್ಲಿ ಸ್ವಲ್ಪ ವ್ಯತ್ಯಾಸಗಳಾಗಿದ್ದುರೂ ಕನ್ನಡ ನುಡಿಯಲ್ಲಿ ಅಂದಿನಿಂದ ಇಂದಿನವರೆಗೆ ಇಂತಹ ಪದಗಳು ಇರುವುದನ್ನು ಕಾಣಬಹುದಾಗಿದೆ. ಈಗೆ ಇವು ಇರುವ ಕಾರಣ ಅನ್ಯ ಶಬ್ದಗಳು ಇವನ್ನು ಕದಿಲಿಸಲು, ಸಾಧ್ಯವಿಲ್ಲ, ಇವುಗಳಿಗೆ ಸಮನಾಗುವಂತಹ ಶಬ್ದಗಳ ಬಳಕೆಗೆ ಬರುವುದರಲ್ಲಿ ಕಷ್ಟ ನಿಧಾನ.

ಒಟ್ಟಾರೆ ಯಾವುದೇ ಒಂದು ಶಬ್ದ ಸಮುದಾಯದ ನೆಲೆಯಲ್ಲಿ ನಿಲ್ಲುವುದಿಲ್ಲ ಕಾಲ ಕಾಲಕ್ಕನುಗುಣವಾಗಿ ನಿರಂತರ ವ್ಯತ್ಯಾಸಗಳು ಆಗುತ್ತಲೇ ಇರುತ್ತವೆ ಈ ಕ್ರಿಯೆ ಯಾರಿಗೂ ಕಾಣಿಸುವುದಿಲ್ಲ ಮುಂದಗತಿಯಲ್ಲಿ ಈ ಪ್ರಕ್ರಿಯೆ ಸಾಗುತ್ತಲೆ ಇರುತ್ತದೆ ಇದರಿಂದ ಶಬ್ದಭಂಡಾರದ ಹಾನಿ ಘಟಿಸುತ್ತಲೇ ಇರುತ್ತದೆ.

ಸಾವಿರಾರು ವರ್ಷಗಳಿಂದ ಗ್ರಂಥಸ್ಥವಾಗಿರದೆ ಬೆಳೆದಿರುವ ಹತ್ತಾರು ಭಾಷೆಗಳುಂಟು ಇದಕ್ಕೆ ಬಾಯಿಮಾತಿನ ಅವಸ್ಥಾನವೇ ಬಂಡವಾಳವಾಗಿದೆ. ಈ ಭಾಷೆಗಳಲ್ಲಿ ಕಾಲದಿಂದ ಕಾಲಕ್ಕೆ ನುಡಿಬೆರಕೆ, ನುಡಿ ಜಗಿತದಂತಹ ಪಲ್ಲಟಗಳು ನಡೆದಿರುತ್ತವೆ ಆದರೆ ಅದು ಯಾವ ಕಾಲ? ಯಾವ ಪದಬಂಧ ಸೇರಿದೆ? ಯಾವ ಪದ ಬಿಟ್ಟುಹೋಗಿದೆ? ಎಂಬ ವಿಚಾರ ಮಾತ್ರ ತರ್ಕಕ್ಕೆ ನಿಲುಕದ ಅಂಶವೆನಿಸಿದೆ. ಆದರೆ ಇಂತಹ ಭಾಷೆಗಳ ಹಿಂದಿರುವ ಅವಸ್ಥೆಗಳನ್ನು ಇತರೆ ಶಬ್ದಗಳನ್ನು ತಿಳಿದುಕೊಳ್ಳಲು ಮಾತ್ರ ಸಾಮಗ್ರಿಗಳು ದೊರೆಯುತ್ತವೆ.

ಕೆಲಭಾಷೆಗಳು ಬಹಳ ಹಿಂದೆಯೇ ಗ್ರಂಥಸ್ವರೂಪ ಪಡೆದು ವಿಪುಲವಾದ ಸಾಹಿತ್ಯವನ್ನು, ಹೊಂದಿರುತ್ತವೆ. ಈ ಪ್ರಕಾರದಿಂದ ಯಾವ ಪದ ಬಿಟ್ಟು ಹೋಗಿದೆ, ಯಾವ ಪದ ಬಂದು ಸೇರಿದೆ, ಯಾವ ಪದ ನಿಂತು ಹೋಗಿದೆ, ಯಾವ ಕಾಲದಲ್ಲಿ ಏನು ಹುಟ್ಟಿಕೊಂಡಿವೆ, ಎಂಬ ಮುಂತಾದ ಅಂಶಗಳನ್ನು ತಿಳಿಯಲು ಸಾಕಷ್ಟು ರೂಪಗಳನ್ನು ಸೃಷ್ಟಿಸಿಟ್ಟುಕೊಂಡು ಸಾಗಿವೆ. ಈ ವಿಧಾನದಿಂದ ಇಂತಹ ಭಾಷೆಗಳ ಶಬ್ದಾರ್ಥ ವಿಚಾರವಾಗಿ ಐತಿಹಾಸಿಕ ದೃಷ್ಟಿಯಿಂದಲೂ ಪರಿಶೀಲಿಸಬಹುದಾಗಿದೆ. ಇಂತಹ ಭಾಷೆಗಳಲ್ಲಿ ಕನ್ನಡವು ಒಂದಾಗಿದ್ದು ಸುಮಾರು ೨೦೦೦ ಕ್ಕೂ ಅಧಿಕ ಕಾಲ ಪ್ರಾಚೀನತೆ ಹೊಂದಿದ್ದಾಗಿದೆ. ಕನ್ನಡ ಲಿಪಿಯ ಭಾಷೆಯ ಬಹುಭಾಗವನ್ನು ಇಂದಿಗೂ ಅಲ್ಲಲ್ಲಿ ಕಾಣಬಹುದಾಗಿದ್ದು ಇದರ ಸಹಾಯದಿಂದ

ಕನ್ನಡ ನುಡಿಯ ಶಬ್ದ ವಿಚಾರವನ್ನು ಚೆನ್ನಾಗಿ ಅರಿತುಕೊಳ್ಳಬಹುದಾಗಿದೆ. ಇದರಲ್ಲಿನ ನಷ್ಟವಾದ ಸಾವಿರಾರು ಪದಗಳಲ್ಲಿ (ಶಬ್ದಗಳಲ್ಲಿ) ನೆಲವೆತ್ತಿಯಡಕೆ ಎಂಬುದೊಂದು ವಿಷಯವಾಗಿ ಡಿ.ಎಲ್.ಎನ್. ಅವರು ಚರ್ಚಿಸಿದ ಕೆಲವು ವಿಷಯಗಳು ಇಲ್ಲಿ ಪ್ರಸ್ತಾಪಿತಗೊಂಡದ್ದಾಗಿವೆ.

'ನೆಲವೆತ್ತಿಯಡಕೆ'ಯ ವಿಚಾರವಾಗಿ ಚರ್ಚಿಸುತ್ತಾ ಡಿ.ಎಲ್.ಎನ್. ಅವರು ನಾಲ್ಕು ಉದಾಹರಣೆಗಳನ್ನು ಸಮೀಕರಿಸಿಕೊಂಡು ವಿಷಯವನ್ನು ಪ್ರಸ್ತಾಪಿಸಿದ್ದಾರೆ. ವಿಶೇಷವಾಗಿ ಇಲ್ಲಿ ಕಾಣಿಸಿದೆ ನೆಲವತ್ತಿಯಡಕೆ ಎಂದರೆ ಒಂದು ಬಗೆಯ ಅಡಕೆ ಎಂದು ಸ್ಪಷ್ಟವಾಗಿಯೇ ಇದೆ. ಡಿ.ಎಲ್.ಎನ್ ಸಂಶೋಧನಾ ಅಧ್ಯಯನ ಹಿನ್ನೆಲೆಯಲ್ಲಿ ಪ್ರಸ್ತಾಪಿಸಿದಂತೆ ಇದರ ಪ್ರಥಮ ಪ್ರಯೋಗವು ವಡ್ಡಾರಾಧನೆಯೆಂಬ ಪ್ರಾಚೀನ ಗ್ರಂಥವಾದ ಭದ್ರಬಾಹು ಭಟ್ಟಾರಕ ಕಥೆಯಲ್ಲಿ ನೆಲವೆತ್ತಿಯಡಕೆಯು ಪೊಟ್ಟಿಳಮಂ ಎಂದು ಪ್ರಸ್ತಾಪಗೊಂಡಿದ್ದನ್ನು ತಿಳಿಸಿದ್ದಾರೆ.

ಎರಡನೆಯ ಪ್ರಯೋಗವಾಗಿ, ಕ್ರಿ.ಶ. ಸುಮಾರು ೯೫೦ ರಲ್ಲಿನ ಶಾಂತಿನಾಥಪುರಾಣ ಪೊನ್ನಕವಿಯಿಂದ ರಚಿತವಾದ ಕಾವ್ಯ ಭಾಗದಲ್ಲಿ (೧೦–೯೫) ಹದಿನಾರನೆಯ ತೀರ್ಥಂಕರಾದ ಶಾಂತಿನಾಥನು ತನ್ನ ಕುಮಾರ ಕಾಲದಲ್ಲಿ ತಾಯ್ಬೂಲ, ಚರ್ವಣ ಮಾಡಿ ಆಸ್ಥಾನದ ನಡುವೆ ಕುಳಿತುಕೊಂಡಿರುವುದನ್ನು ಈ ಪದ್ಯದಲ್ಲಿ ಹೇಳಿದೆ, ಇಲ್ಲಿನ ಪದಪ್ರಯೋಗವಾಗಿ 'ನೆಲವತ್ತಿಯಾಡಕೆ' ಎಂದು ಪ್ರಸ್ತಾಪಿಸಲಾಗಿದೆ.

ಮೂರನೆಯ ಪ್ರಯೋಗವಾಗಿ ಕ್ರಿ.ಶ. ೧೩೫೨ರಲ್ಲಿ ರಚಿತವಾದ ಬಾಹುಬಲಿಯ ಧರ್ಮನಾಥ ಪುರಾಣದ ಅಶ್ವಾಸ ೬ರಲ್ಲಿ ಅ.ವೆಂ. ೩ ದೇ. ತಿ. ಡಿ.ಎಲ್.ಎನ್. ಪುಟ ೯೨೫ ಇಲ್ಲಿನ ಪದಪ್ರಯೋಗವಾಗಿ ನೆಲವತ್ತಿಯಾಡ್ಡಡಕು ಎಂದಿದೆ.

'ನಾಲ್ಕನೆಯ ಪ್ರಯೋಗವಾಗಿ ಕನ್ನಡ ಶಾಸನ ಸಾಹಿತ್ಯದಲ್ಲಿ ಅಂದರೆ ಶಿವಮೊಗ್ಗ ತಾಲೂಕಿನ ೧೦ನೇ ಶಾಸನ ಪಠ್ಯದಲ್ಲಿ ಉಲ್ಲೇಖಿಸಿದಂತೆ ನೆಲವತ್ತಿಯಡಕೆ ಎಂದರೆ, ನೆಲವೆತ್ತಿ ಎಂಬ ಊರೊಂದು ಈ ಪ್ರಾಂತ್ಯದಲ್ಲಿದ್ದು ಎಂದು ತಿಳಿದು ಬಂದಿದೆ. ಇದಕ್ಕೆ ಪೂರಕವೆಂಬಂತೆ ಶ್ರೀಮಾನ್ ಮಹಾಪ್ರದಾನ ಹಿರಿಯ ಹೆಗ್ಗಡೆ ನೂಕೈಯ್ಯನು ತನ್ನ ಸತ್ತಮೊಗ ಗುಜ್ಜಣನಿಗೆ ಸ್ವರ್ಗವಾಗಲೆಂದು ಎರಡು ಜಿನ ಮಂದಿರಗಳನ್ನು ಕಟ್ಟಿಸಿದ್ದನು, ಒಂದನ್ನು ನೆಲವೆತ್ತಿಯಲ್ಲಿ ಇನ್ನೊಂದ್ದನ್ನು ತಟ್ಟಿಯ ಕೆರೆಯಲ್ಲಿ ಎಂದು ಸಾರಾಂಶವಿದ್ದು ಇದರ ಭಾಗವಾಗಿ ಆ ನೆಲ್ಲವತ್ತಿಯ ತಟ್ಟಿಕೆಯೊಳಡ ಬಸದಿಂಱುಮಂ ಎಂದು ಉಲ್ಲೇಖಿಸಿದೆ ಇದನ್ನು ಸಂಧಿವಿಗ್ರಹ ದಾಮರಾಜ ಕ್ರಿ.ಶ. ೧೦೭೯ರಲ್ಲಿ ಹೇಳಿ ಕೆತ್ತಿಸಿದ್ದನೆಂದು'[3] ತಿಳಿದುಬಂದಿದೆ.

ನೆಲವೆತ್ತಿ, ನೆಲ್ಲವತ್ತಿ, ನೇಲವತ್ತಿ, ಮೆಲವರ್ತಿ ಎಂಬ ರೂಪಗಳಲ್ಲಿ ಆ ಊರಿನ ಹೆಸರು ಕಾಲಕ್ರಮೇಣ ರೂಪಗೊಂಡು ೧೦೮೦ರ ಏಳ್ಗೆಯಲ್ಲಿದ್ದ ಆ ಊರು ೧೦ನೇ ಶತಮಾನದ ಆರಂಭಕ್ಕಾಗಲೇ ಕಂಡುಬಂದು, ಮುಂದಿನ ದಿನಗಳಲ್ಲಿ ಈ ಎಲ್ಲಾ ಹೆಸರು ಉಲ್ಲೇಖಗೊಂಡಿದ್ದು ಕಂಡುಬಂದಿಲ್ಲದ್ದಾಗಿದೆ. ಆದರೆ, ತಟ್ಟಿಕೇರೆ ಎಂಬ ಊರು ಮಾತ್ರ

ಹಾಗೆ ಉಳಿದುಕೊಂಡಿದೆ, ನೆಲವತ್ತಿ ಎಂಬ ಊರು, ಆ ಹೆಸರು ಅಲ್ಲಿನ ಅಡಕೆ ಇಂದು ಮಾಯವಾಗಿದೆ. ಈ ರೂಪ ಇಂದಿಗೂ ಎಲ್ಲಾ ಭಾಷೆ ಸಾಹಿತ್ಯದಲ್ಲಿ ಗಮನಕ್ಕೆ ಬಾರದ ಹಾಗೆ ನಡೆಯುವ ಪದಗಳ, ಹುಟ್ಟು ಸಾವಿನ ಪ್ರತೀಕವೆನಿಸಿವೆ.

**ನಿಘಂಟು ರಚನೆ**

'ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ದಿನಾಂಕ ೩.೩.೧೯೫೬ರಂದು ಡಿ.ಎಲ್.ಎನ್ ಅವರು ಮಾಡಿದ ಭಾಷಣದ ಸಂಗ್ರಹ ರೂಪ ಇದಾಗಿದ್ದು, ಕನ್ನಡ ನುಡಿಯ ಸಂಪುಟ-೧೯, ಸಂಚಿಕೆ-೪ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡಿದೆ.'[೪] ಮುಂದೆ ೧೯೭೧ರಲ್ಲಿ ಸಾಹಿತ್ಯ ಲೋಕಕ್ಕೆ ಒದಗಿ ಬಂದ ಪೀಠಿಕೆಗಳು ಲೇಖನಗಳು ಕೃತಿಯ ಕನ್ನಡ ನಿರುಕ್ತ ಭಾಗದ ೭೪ನೇ ವಿಷಯವಾಗಿ ಪ್ರಸ್ತಾಪಗೊಂಡ ಲೇಖನವಾಗಿದೆ.

ಶಬ್ದಾರ್ಥ ನಿರ್ಣಯವನ್ನು ಕರಾರುವಕ್ಕಾಗಿ ತಿಳಿಸುವ ಗ್ರಂಥಕ್ಕೆ ನಿಘಂಟು ಹೆಸರಾಗಿದ್ದು ಇದಕ್ಕೆ ಪೂರಕವೆಂಬಂತೆ ನಾಡಿನ ಪ್ರತಿ ಪ್ರಜೆಗೂ ನಿಜವಾದ ಶಬ್ದಾರ್ಥ ಜ್ಞಾನವಿರಬೇಕಾದದ್ದು ಅವಶ್ಯವೆನಿಸಿದೆ. ಶಬ್ದಾರ್ಥ ನಿರ್ಣಯದ ವಿಷಯ ಅತ್ಯಂತ ಜವಾಬ್ದಾರಿಯುತವೂ ಕಷ್ಟ ನಿಧಾನವಾದ ಕೆಲಸವಾಗಿದ್ದು ಈ ಕೆಲಸಕ್ಕೆ ಕೈ ಹಾಕುವ, ವಿದ್ವಾಂಸರು ಭಾಷಾಶಾಸ್ತ್ರದಲ್ಲಿ ಪಾಂಡಿತ್ಯ ಪಡೆದವರಾಗಿರಬೇಕಾದದ್ದು ಅವಶ್ಯಕ ಎಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ. ಯಾವುದೇ ಒಂದು ಶಬ್ದಾರ್ಥವನ್ನು ಗುರುತು ಮಾಡುವುದಕ್ಕೆ ಮೊದಲು ಆ ಶಬ್ದ ಸ್ವರೂಪವನ್ನು ನಿರ್ಣಯಿಸುವುದು ಅತಿ ಅವಶ್ಯವಾಗಿದ್ದು ಇದಕ್ಕೆ ಪೂರಕವಾಗಿ ಸಂಧಿಸಮಾಸಗಳನ್ನು ಬಿಡಿಸಿ, ಪದಗಳನ್ನು ಮೇಲಕ್ಕೇರಿಸಬೇಕು ಹೀಗೆ ಮಾಡುವಾಗ ಅಜಾಗರೂಕತೆಯಿಂದ ಒಂದು ಹೊಸ ಶಬ್ದ ಅಥವಾ ಅಕ್ಷರ ಸಮೂಹವೂ ಹುಟ್ಟಿಕೊಳ್ಳಬಹುದಾಗಿದ್ದು ಈ ಪದವು ಸಾಹಿತ್ಯ ವಲಯದಲ್ಲಿ ಬಳಕೆಯಲ್ಲಿರಬಹುದಾದ ಅಥವಾ ಹುಟ್ಟಿಕೊಂಡ ಪದ ಎಲ್ಲಿಯೂ ಬಳಕೆಗೊಳ್ಳದೆ ಅಥವಾ ಬಿನ್ನಹವಾಗಿರಲೂಬಹುದು ಇಂತಹ ಪದಗಳಿಗೆ ಇಂಗ್ಲೀಷ್‌ನಲ್ಲಿ 'ಗೊಸ್ಟವರ್ಡ್' ಎಂದು ಹೆಸರಿದ್ದುಂಟು. ಒಂದು ಭಾಷೆಯಲ್ಲಿ ಎಲ್ಲ ಪದಗಳನ್ನು ಸೇರಿಸಬೇಕೋ ಬೇಡವೋ ಎಂಬ ಅಭಿಪ್ರಾಯ ವಿದ್ವಾಂಸರಲ್ಲಿದೆ ಕೆಲ ಅಶ್ಲೀಲ ಗ್ರಾಮ, ಆಡು ಮಾತಿನ ಭಾಷೆಗಳನ್ನು ಸೇರಿಸಬೇಕೋ? ಬೇಡವೊ, ಎಂಬ ಮಾತು ಡಿ.ಎಲ್.ಎನ್. ಅವರ ಕಾಲಕ್ಕಿದ್ದಿತ್ತು ಆದರೆ ಇಂದು ಎಲ್ಲ ಬಳಕೆಯ ಭಾಷೆಗಳು ಇಂದು ಒಂದಲ್ಲೊಂದು ರೀತಿಯಲ್ಲಿ ಉಪಯೋಗಕ್ಕೆ ಬರುತ್ತಿದ್ದು ಇದರ ಸಂಗ್ರಹಕಾರ್ಯ ವಿವಿಧ ನಿಘಂಟುತಜ್ಞರಿಂದ ನಡೆದಿದೆ. ಡಿ.ಎಲ್.ಎನ್ ಉದಾಹರಿಸಿದಂತೆ 'ನಾತ' ಎಂಬ ಪದ ಇಂದು ದುರ್ನಾತ ಎಂಬ ಬಳಕೆಯಿಂದ ಕೆಳಮಟ್ಟಕ್ಕೆ ಬಂದು ನಿಂತಿದೆ ಆದರೆ ನಮ್ಮ ಪ್ರಾಚೀನ ಕಾವ್ಯಗಳಲ್ಲಿ ಈ ಪದಕ್ಕೆ ತನ್ನದೇಯಾದ ಸ್ಥಾನವಿದೆ. ನಾತ ಎಂದರೆ ಒಡೆಯ, ಯಜಮಾನ, ಹಿತವಾದವಾಸನೆ ಎಂಬ ಅರ್ಥದಲ್ಲಿ 'ಪೊಸಮಲ್ಲಿಗೆಮೆಲ್ಲಗೆ ಕಂಪು ನಾವೆ'[೫] ಎಂದು ಪ್ರಯೋಗಿಸಲ್ಪಟ್ಟಿದೆ ಎಂದಿದ್ದಾರೆ.

ಯಾವುದೇ ನಿಘಂಟುಕಾರ ತನ್ನ ಕರ್ತವ್ಯವಾಗಿ ಒಂದು ಶಬ್ದದ ಅರ್ಥಕ್ಕೆ ಯಥಾರ್ಥವನ್ನು ಕೊಟ್ಟರೆ ಅಲ್ಲಿಗೆ ಅವನ ಕೆಲಸ ಮುಗಿಯುವುದಿಲ್ಲ. ಹೀಗೆ ಕೊಟ್ಟ ಯಥಾರ್ಥಕ್ಕೆ ತಕ್ಕ ರೂಪಗಳನ್ನು ತೋರಿಸಿಕೊಡಬೇಕು, ಯಾವ ಕವಿ ಕಾವ್ಯದಲ್ಲಿ ಆ ಯಥಾರ್ಥ ಪ್ರಯೋಗವಾಗಿದೆ ಎಂದು ತಿಳಿಸಬೇಕಾದದು ಅವಶ್ಯ. ಹಾಗೇಯೇ ಅವುಗಳು ಅನ್ಯಭಾಷಾ ಶಬ್ದಗಳೇ? ಅವುಗಳ ರೂಪಾಂತರವೇನು? ಎಂಬ ಮೂಲವರಿನ್ನಯುವ ಕೆಲಸ ನಿರ್ವಹಿಸಿದಾಗ ಮಾತ್ರ ಅವನ ನಿಘಂಟು ರಚನೆಯ ಜವಾಬ್ದಾರಿ ಸಾರ್ಥಕವೆನಿಸುತ್ತದೆ. ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಉಲ್ಲೇಖಿಸಿದಂತೆ ಶಬ್ದಪಾರಮಾರ್ಗಮಶಕ್ಯಂ ಎಂಬ ಉಕ್ತಿಯಂತೆ ಶಬ್ದ ಪ್ರಪಂಚದಲ್ಲಿ ನಡೆಯುವ ವಿಚಿತ್ರವಾದ ಪಾರಗಳಿಗೆ ಎಲ್ಲೆಯೇ ಇಲ್ಲ ಎಂಬ ಮಾತು ಅಕ್ಷರಶಃ ಸತ್ಯವೆನಿಸಿದೆ.

### ತಕ್ಕೊರ್ಮೆ–ಅರ್ಥ–ವಿಚಾರ ಮತ್ತು ನಿಷ್ಪತ್ತಿ

ದೇವಗಂಗೆ ಪತ್ರಿಕೆಯಲ್ಲಿ ೧೯೬೮ರ ಕಾಲಘಟ್ಟಕ್ಕೆ ಮೊದಲ ಬಾರಿಗೆ ಪ್ರಕಟವಾದ ಈ ಲೇಖನ ಡಿ.ಎಲ್.ಎನ್. ಸಂಕಲನದ ಸಂಶೋಧನಾ ಲೇಖನಗಳ ಗ್ರಂಥವಾಗಿದ ಪೀಠಿಕೆಗಳು ಲೇಖನಗಳು, ಕೃತಿಯ ಕನ್ನಡ ನಿರುಕ್ತ ಭಾಗದ ೭೧ನೇ ವಿಷಯವಾಗಿ ಪ್ರಸ್ತಾಪಗೊಂಡಿದೆ.

ಹಳಗನ್ನಡ ಪ್ರಯೋಗದಲ್ಲಿ ತಕ್ಕೊರ್ಮೆ–ತಕ್ಕೂರ್ಮೆ ಎಂಬ ಎರಡು ರೂಪಗಳಲ್ಲಿ ದೊರೆಯುವ ಒಂದು ಶಬ್ದಕ್ಕೆ ಹಲವು ಪ್ರಯೋಗಗಳು ದೊರೆಯುತ್ತವೆ ಇವು ಎರಡರಲ್ಲಿ ಯಾವುದು ಪರಿಶುದ್ಧ, ಯಾವುದು ಅಶುದ್ಧವೆಂಬ ರೂಪ ನಿರ್ಣಯಿಸುವ ಕಾರ್ಯ ಈ ಲೇಖನದ್ದಾಗಿದೆ.

ನಾಗಚಂದ್ರನ ಮಲ್ಲಿನಾಥ ಪುರಾಣದಲ್ಲಿ ಪದ್ಯ–೨ರಲ್ಲಿ ಪಂಪರಾಮಾಯಣದ ಆಶ್ವಾಸ ೬–೧೭೧ನೇ ಮತ್ತು ಆಶ್ವಾಸ ೧೦ರ ೨೧೨ನೇ ಪದ್ಯದಲ್ಲಿ, ಪಂಪಭಾರತದ ಆಶ್ವಾಸ ೧ರ ೯೬ನೇ ಪದ್ಯದಲ್ಲಿ, ದುರ್ಗಸಿಂಹನ ಪಂಚತಂತ್ರದ ಪುಟ ೧೧೪ರ ಅಚ್ಚಾದ ಪ್ರತಿಗಳಲೆಲ್ಲ ತಕ್ಕೊರ್ಮೆ ಎಂಬ ರೂಪವಿದೆ. ಅಚ್ಚಾದ ವಿಷಯವನ್ನು ಡಿ.ಎಲ್.ಎನ್. ಕೈಗೆತ್ತಿಕೊಂಡು ಕಾವ್ಯಗಳನ್ನು ಉದಾಹರಿಸುವ ಮೂಲಕ ಸಾಧಿತ ಪದಗಳ ಸ್ಪಷ್ಟತೆ ನೀಡಿದ್ದಾರೆ.

ತಕ್ಕೊರ್ಮೆ ಎಂಬುದನ್ನು 'ತಕ್ಕಕೂರ್ಮೆ' ಎಂದು ಬಿಡಿಸಿ ನೋಡಿದಾಗ 'ತಲ್' ಎಂಬುದು ಸಂಸ್ಕೃತದ ಸರ್ವನಾಮ ರೂಪ ತಾಳುತ್ತದೆ. ಇಂಥ ಶಬ್ದವೊಂದಕ್ಕೆ ಅಚ್ಚಗನ್ನಡದಲ್ಲಿ ಯಾವುದೇ ರೂಪ ಕಾಣದೆ ತಕ್ಕೊರ್ಮೆ ರೂಪವನ್ನು ಅಶುದ್ಧ ಎನ್ನಲಾಗಿದೆ. ಆದರೆ ಶಾಂತಿಪುರಾಣದ ಸಂಪಾದಕ ಎಂ.ಎ.ರಾಮಾನುಜಯ್ಯಂಗಾರ್ ಈ ಕುರಿತು ಯಾವುದೇ ಅರ್ಥವನ್ನು ನೀಡಿಲ್ಲ ಆದರೆ ಪಂಪರಾಮಾಯಣ ಮತ್ತು ಪಂಪಭಾರತದ, ಸಂಪಾದಕರುಗಳು ಈ ಕೃತಿಗಳ ಕೊನೆಯ ಕೋಶಗಳಲ್ಲಿ, ಇದರ ಅರ್ಥವನ್ನು ಯೋಗ್ಯತೆ ಎಂದು ಗುರುತಿಸಿದ್ದು

ಉಂಟು. ಆದ್ದರಿಂದ ತಕ್ಕರ ಎಂದರೆ 'ಯೋಗ್ಯತೆ,' 'ಅರ್ಹತೆ' ಎಂಬ ಇತ್ಯಾದಿ ಅರ್ಥಗಳನ್ನು ನೀಡಿದ್ದು ಇಂದಿಗೂ ಪ್ರಸಿದ್ದವಾಗಿಯೇ ಇವೆ. ಆದ್ದರಿಂದ[೬] ತಕ್ಕೂರ್ಮೆ ಎಂದರೆ ಯೋಗ್ಯತೆಯ ಅತಿಶಯ; ಅತಿಶಯವಾದ ಯೋಗ್ಯತೆ ಎಂಬರ್ಥವನ್ನಾಗಿಸಿ ತಕ್ಕೂರ್ಮೆ ಎಂಬುದನ್ನು ತಕ್ಕು+ಊರ್ಮೆ ಎಂದು ಬಿಡಿಸಿ ಹೇಳಿ ಪದ ಬಳಸಬೇಕಾದುದ್ದು ಅತಿ ಅವಶ್ಯ ಎಂದಿದ್ದಾರೆ.

**ಪಕ್ಷಿ<ಹಕ್ಕಿಗೆ ಸಮಾನ ಕನ್ನಡ ಶಬ್ದ**

ಕರ್ನಾಟಕ ೧೯೭೨ರ ಪ್ರಬುದ್ಧ ಸಂಚಿಕೆಯಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನವು ಮುಂದೆ ಡಿ.ಎಲ್.ಎನ್ ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ಸಂಕೀರ್ಣ ಭಾಗದ ೭೨ನೇ ವಿಷಯವಾಗಿ ಪ್ರಸ್ತಾಪಗೊಂಡದ್ದಾಗಿದೆ.

ನವಿಲು, ಗುಬ್ಬಿ, ಗಿಜುಗ,ಕೋಳಿ, ಗಿಳಿ ಮುಂತಾದ ವಿವಿಧ ಪಕ್ಷಿಗಳನ್ನು ನಿರ್ದೇಶನ ಮಾಡುವ ಬೇರೆ ಬೇರೆ ಶಬ್ದಗಳು ಕನ್ನಡದಲ್ಲಿ ಕಂಡುಬಂದರೂ ಸಾಮಾನ್ಯವಾಗಿ ಪಕ್ಷಿಜಾತಿಗಳಲ್ಲಿ ಅನುಸರಿಸುವ ಒಂದು ಶಬ್ದ ಪ್ರಯೋಗ ಈಗ ಬಳಕೆಯಲ್ಲಿರುವಂತೆ ಕಾಣುತ್ತಿಲ್ಲ. ಇವುಗಳಿಗೆಲ್ಲಾ ಸಂಸ್ಕೃತ ಶಬ್ದವಾದ ಪಕ್ಷಿಯಿಂದ ಬಂದಿರುವ ಹಕ್ಕಿ ಎಂಬ ಪದವನ್ನು ಈಗ ಬಳಸುತ್ತಿದ್ದೇವೆ. ಡಿ.ಎಲ್.ಎನ್. ಅವರು ತಮ್ಮ ಈ ಲೇಖನದುದ್ದಕ್ಕೂ ವಡ್ಡಾರಾಧನೆ (ಗುರುತ್ತ ಭಟ್ಟಾರಕನ ಕಥೆ) ಲೋಕೋಪಕಾರ (ಚಾವುಂಡರಾಯ) ಕವಿರಾಜಮಾರ್ಗದ ಕಾವ್ಯಭಾಗಗಳಲ್ಲಿ ಮೂಡಿಬಂದ ಈ ಕುರಿತ ಪದ ಪ್ರಯೋಗಗಳ ಜೊತೆಗೆ ಕೇಶಿರಾಜನ ಶಬ್ದಮಣಿದರ್ಪಣದ ೧೮೩ನೇ ಸೂತ್ರದಲ್ಲಿನ ಪದಪಲ್ಲಟಗಳ ವಿಚಾರ ಕುರಿತು ಚರ್ಚಿಸಿದ್ದು ಕಂಡುಬಂದಿದೆ.

ದ್ರಾವಿಡ ಭಾಷೆಗಳಿಂದ ತಮಿಳು, ಮಲೆಯಾಳಿ, ತೆಲುಗು ಭಾಷೆಗಳಲ್ಲಿ ಕ್ರಮವಾಗಿ 'ಪುಳ್ ಎಂಬ ಶಬ್ದಗಳು ಮೂಡಿಬಂದಿವೆ. ದ್ರಾವಿಡ ಭಾಷೆಗಳಲ್ಲಿ ಒಂದಾದ ಕನ್ನಡದಲ್ಲಿ ಈ ಕ್ರಮವಿದ್ದರೂ ಅಚ್ಚರಿ ಪಡಬೇಕಾಗಿಲ್ಲ. ಈ ಕುರಿತು ಎಮಿನೋ ಮತ್ತು ಬರೋ ಅವರು ರಚಿಸಿರುವ ದ್ರಾವಿಡ ಭಾಷಾಜ್ಞಾತಿಶಬ್ದಕೋಶದಲ್ಲಿ ೫೫೪೪ನೇಯ ವಿಷಯದ ಕೆಳಗೆ ಕನ್ನಡದ 'ಪುಳ್' ಎಂಬ ಶಬ್ದವನ್ನು ಸೇರಿಸಬೇಕಾದದ್ದು ಅತಿ ಅವಶ್ಯಕವೆಂದು ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ.'[೬] ಈ ಲೇಖನದುದ್ದಕ್ಕೂ ಹರಡಿದ ವಿಚಾರಗಳ ಪರಿಶೀಲನೆಯಿಂದ ಕನ್ನಡದಲ್ಲಿ ಪಕ್ಷ್ಯರ್ಥವಾದ 'ಪುಳ್' ಎಂಬ ದೇಶೀಯ ಶಬ್ದವಿದ್ದಿತೆಂದು ಅದು ಕಾಲಕ್ರಮೇಣ ಸಂಸ್ಕೃತ ಜನ್ಯ 'ಹಕ್ಕಿ' ರೂಪ ಬಂದು ತನ್ನ ಮೂಲರೂಪವನ್ನೆ ಕಳೆದುಕೊಂಡಿದೆ ಎಂದು ತಿಳಿದುಬಂದಿದೆ.

**ಭಗವತೀಯೇಱು**

೧೯೬೨ರ ಸಾಹಿತ್ಯ ನಂದನ ಮಾಸಪತ್ರಿಕೆಯಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನವು ಮುಂದೆ ಡಿ.ಎಲ್.ಎನ್. ಸಮಗ್ರವಾಗಿ ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ಕನ್ನಡ ನಿರುಕ್ತ ಭಾಗದ ೭೩ನೆ ವಿಚಾರವಾಗಿ ಮೂಡಿಬಂದದ್ದಾಗಿವೆ.

'ಪಂಪಭಾರತದ-೧೧ನೇಆಶ್ವಾಸ ೧೬ನೇ ಪದ್ಯವಾದ

ಭಗತಿಯೇಱುವೇವ್ವಿ ತೆಱದಿಂ ಕಥೆಯಾಯ್ತುವರೆ ಱು ನೀ ನಿದಂ

..........................................................................................

..........................................................................................

................ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ'[೮]

ಎಂಬ ಉಲ್ಲೇಖದಲ್ಲಿ ಭೀಷ್ಮನಿಗೆ ದುರ್ಯೋಧನನು ಸೈನ್ಯಾಧಿಪತಿಯ ಪದವಿಯನ್ನು ಕೊಟ್ಟು ವೀರಪಟ್ಟವನ್ನು ಕಟ್ಟಿ ತನ್ನ ಹಗೆಗಳನ್ನು ತನ್ನ ಮಂಚದ ಕಾಲಿಗೆ ಕಟ್ಟಿ ಬಿಟ್ಟೆನೆಂದು ಮನದಲ್ಲಿಯೇ ಹಿಗ್ಗಿ ಈ ವಿಷಯವನ್ನು ಕರ್ಣನಿಗೆ ತಿಳಿಸುವ ಪ್ರಸಂಗದಲ್ಲಿ ಕರ್ಣನಾಡಿದ ಮಾತುಗಳು ಈ ಪದ್ಯದ್ದಾಗಿವೆ. ಇಲ್ಲಿ ಕರ್ಣ ತನ್ನ ಅಸಮ್ಮತಿಯನ್ನು ಸೂಚಿಸಿ ಭೀಷ್ಮನನ್ನು ತೆಗಳಿ ನುಡಿಯಲು ಆರಂಭಿಸುತ್ತಾನೆ. ಈ ರೀತಿಯಾಗಿ ಪದ್ಯದ ಅರ್ಥವು ಸಾಕಷ್ಟು ಸ್ಪಷ್ಟವಿದ್ದರೂ 'ಭಗವತಿಯೇಱುವೇಬ್ವತೆ' ಱದಿಂ ಕಥೆ ಯಾಯ್ತಿವರೆಱು ಎಂದು ಪದ್ಯ ಭಾಗದ ಅಭಿಪ್ರಾಯವನ್ನು ಸ್ವಲ್ಪ ವಿಶದಪಡಿಸಿದ್ದು ಕಂಡು ಬಂದಿದೆ.

ಇಲ್ಲಿ ಕಂಡು ಬಂದ 'ಏಱುವೇಟ್ಟಿ,' 'ಏಱು' ಎಂಬೆರಡು ಶಬ್ದಗಳ ಅರ್ಥದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿಗೆ ಎಡೆ ಇದ್ದು 'ಏಱು' ಶಬ್ದಕೇಳಿ ಕೇಶಿರಾಜನು ಆರೋಹಣೇ ಸಮಗ್ರತೆಟಿ 'ಷತೇಚ' ಎಂದು ಮೂರು ಅರ್ಥಗಳನ್ನು ಕೊಟ್ಟಿದ್ದು ಕಂಡುಬಂದಿದೆ. ಏನೇ ಇರಲಿ 'ಭಗವತೀಯೇಱು' ಎಂದರೆ ಎಂದೋ ಆಗಿಹೋದ ಪುರಾತನ ಕಾಲದ ಕಾಳಗ ಎಂಬರ್ಥವು ಡಿ.ಎಲ್.ಎನ್. ಅವರ ಈ ಒಟ್ಟಾರೆ ಲೇಖನದ ಸಾರಾಂಶದಿಂದ ತಿಳಿದು ಬಂದ ಅಂಶವಾಗಿದೆ.

**ಕನ್ನಡದಲ್ಲಿ ಶಬ್ದರಚನೆ**

ಈ ವಿಚಾರವು ಮೊದಲು ೧೯೪೧ರಲ್ಲಿ ಸಂಭಾವನೆ ಗ್ರಂಥದಲ್ಲಿ ಬಿತ್ತರಗೊಂಡಿದೆ. ನಂತರದಲ್ಲಿ ೧೯೭೧ರ ಕಾಲಘಟ್ಟಕ್ಕೆ ಡಿ.ಎಲ್.ಎನ್. ಸಮಗ್ರವಾಗಿ ಸಂಗ್ರಹಿಸಿದ ಸಂಶೋಧನಾ ಸಂಪ್ರಬಂಧವಾದ ಪೀಠಿಕೆಗಳು ಲೇಖನಗಳು ಕೃತಿಯ ಕನ್ನಡ ನಿರುಕ್ತಿ ಭಾಗದ ೫೨ನೇ ಲೇಖನವಾಗಿ ಮೂಡಿಬಂದುದ್ದಾಗಿದೆ ಸುದೀರ್ಘ ೬೩ ಪುಟಗಳಲ್ಲಿ ಬಿತ್ತರಗೊಂಡ ಈ ಲೇಖನ ಪ್ರತ್ಯಯ ಧಾತು, ತಲ್ಲಿಂಗ, ಕೃದಂತಭಾವನಾಮ, ನಾಮಧಾತು, ತದ್ದಿತಧಾತು, ಸಮಾಸ ಶಬ್ದಗಳಾದಿಯಾಗಿ ಸಾದೃಶ್ಯದ ಮೂಲರಚನೆಯ ಇತರೆ ವಿಧಾನಗಳು, ಸ್ವೀಕರಣ ಹೊಸಧಾತುಗಳ ನಿರ್ಮಾಣ ವಿಚಾರವಾಗಿ ಕನ್ನಡದಲ್ಲಿ ಶಬ್ದರಚನೆಯಾಗಬೇಕಾದ ಎಲ್ಲಾ ಅಂಶಗಳನ್ನು ಕ್ರೋಡೀಕರಿಸಿ ಚರ್ಚಿಸಲಾಗಿದೆ.

ಈ ಲೇಖನವು ಡಿ.ಎಲ್.ಎನ್. ಅವರ ಆಳವಾದ ಸಾಹಿತ್ಯ ವ್ಯವಸಾಯದ ಪಾಂಡಿತ್ಯದ ಪರಿಧಿಯನ್ನು ಎತ್ತಿ ಹೇಳಿದೆ. ಕನ್ನಡ ನುಡಿಯ ಶಬ್ದ ಭಂಡಾರದಲ್ಲಿ ದೇಶ್ಯಶಬ್ದಗಳು ಸಂಸ್ಕೃತ, ಪ್ರಾಕೃತದಿಂದ ಬಂದು ಸೇರಿದ ಶಬ್ದಗಳು ಗ್ರೀಕ್, ಪಾರ್ಸಿ, ಲ್ಯಾಟಿನ್, ಅರಬ್ಬಿ, ಪೋರ್ಚ್‌ಗೀಸ್‌ನಿಂದ ಬಂದ ಶಬ್ದಗಳು ಎರವಲು ಶಬ್ದಗಳಾಗಿ ಕನ್ನಡಕ್ಕೆ ಬಂದಿರುವುದು ಅಪಾರ. ಈ ಅಪಾರ ಸಂಖ್ಯೆಯ ಚಿತ್ರಣವನ್ನು ಹೇಳಿದ್ದಲ್ಲದೇ, ದ್ರಾವಿಡ ಶಬ್ದಗಳಲ್ಲಿರುವ ಹಾಗೆಯೇ ಕನ್ನಡದಲ್ಲಿ ಅಂತ್ಯ ಪ್ರತ್ಯಯಗಳ ಪ್ರಯೋಗದಿಂದ ನೂತನ ಶಬ್ದನಿರ್ಮಾಣ ಸಾಧ್ಯವೆಂದು ಡಿ.ಎಲ್.ಎನ್. ಸಾಧಿಸಿದ್ದಾರೆ.

ಡಿ.ಎಲ್.ಎನ್. ಅವರು ಈ ಲೇಖನದಲ್ಲಿ ಕನ್ನಡದ ಶಬ್ದಶೀಲದ ಸ್ವರೂಪವನ್ನು ವಿಸ್ತಾರವಾಗಿ ವಿವೇಚಿಸಿದ್ದು ಕಂಡುಬಂದಿದೆ. ಇತರೆ ದ್ರಾವಿಡ ಭಾಷೆಗಳಲ್ಲಿರುವಂತೆ ಕನ್ನಡದಲ್ಲಿ ಅಂತ್ಯ ಪ್ರಯತ್ನಗಳ ಪ್ರಯೋಗದಿಂದ ಹೊಸ ಶಬ್ದರಚನೆಯ ಸಾಧ್ಯತೆಗಳ ಬಗ್ಗೆ ಹೇಳಿದ್ದಾರೆ. ಡಿ.ಎಲ್.ಎನ್. ಅವರ ಈ ಎಲ್ಲಾ ವಿಚಾರಗಳನ್ನು ಡಿ.ಎನ್.ಶಂಕರಭಟ್ಟ ಅವರು ಇಂದು ಮಂಡಿಸುತ್ತಿರುವ ಎಲ್ಲಾ ಹೊಸ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಮತ್ತೆ ಪರಿಶೀಲಿಸಬೇಕಾಗಿದೆ.

ಡಿ.ಎಲ್.ಎನ್ ಹೇಳಿದಂತೆ 'ತನ್ನದನ್ನೂ ಕಾಪಾಡಿಕೊಂಡು ಅನ್ಯ ಶಬ್ದಭಂಡಾರವನ್ನು ಅವಶ್ಯಕತೆಗೆ ಅನುಗುಣವಾಗಿ ಉಪಯೋಗಿಸಿಕೊಳ್ಳುತ್ತಾ ಧೀರ ಗಮನದಿಂದ ಕನ್ನಡ ಮುಂದೆ ಸಾಗಬೇಕು. ಸ್ವಂತ ಶಿಲ್ಪಶಕ್ತಿಯಿಂದಲೂ ಬಹುಭಾಷಾ ಶಬ್ದ ಸ್ವೀಕರಣಗಳಿಂದಲೂ ಇಂಗ್ಲಿಶ್ ಹೇಗೆ ಪರಿಪೂರ್ಣವೂ, ಉಜ್ವಲವೂ ಆದ ಭಾಷೆಯಾಗಿ ಪರಿಣಮಿಸಿದೆಯೇ ಹಾಗೆಯೇ ಕನ್ನಡವೂ ಆಗಬೇಕು. ಹೀಗೆ ಮಾಡುವುದು ಎಲ್ಲ ಕನ್ನಡಿಗರ ಮೇಲಿರುವ ಹೊಣೆಗಾರಿಕೆ ಎನಿಸಿದೆ. ಹೀಗೆ ಮಾಡಿ ಕನ್ನಡಿಗರ ಬುದ್ಧಿ, ಶ್ರದ್ಧೆ ಪ್ರತಿಭೆಗಳ ಐಸಿರಿಯ ಬೆಳೆ ಬೆಳೆದರೆ ಅವರ ನುಡಿಯೂ ಬೆಳೆದು ಕಾಂತಿಯುಕ್ತವಾಗುತ್ತದೆ' ಎಂದು ಕನ್ನಡ ಭಾಷೆಯ ಬೆಳವಣಿಗೆ ಬಗ್ಗೆ ಹರ್ಷ ನುಡಿಗೈದಿದ್ದು ಸಮಂಜಸವೆನಿಸಿದೆ.

ಒಟ್ಟಾರೆಯಾಗಿ ಡಿ.ಎಲ್.ಎನ್. ಅವರ ವ್ಯಾಕರಣ ಅಧ್ಯಾಯದಲ್ಲಿ ಕಾಣುವ ಮಹತ್ವದ ಅಂಶವೆಂದರೆ ತೌಲನಿಕದೃಷ್ಟಿಗೆ, ಬಹುಜ್ಞತೆಯ ಗುಣವಾಗಿರುವ ಅವರ ಪದಬಳಕೆಯ ವಿಚಾರಗಳು ವಿಶಿಷ್ಟ ದೃಷ್ಟಿಗೆ ಸೂಚಕಗಳಾಗಿವೆ. ಅವರ ಈ 'ಕನ್ನಡದಲ್ಲಿ ಶಬ್ದರಚನೆ' ಲೇಖನವು ಕನ್ನಡ ವ್ಯಾಕರಣದ ಹೊಸ ಸಾಧ್ಯತೆಗಳನ್ನು ಕುರಿತು ವಿಚಾರ ಮಾಡುವ ಇಂದಿನ ಮುಂದಿನ ಅಧ್ಯಯನಕಾರರಿಗೆ ಮಾರ್ಗದರ್ಶಕವಾಗಿ ಪರಿಣಮಿಸಿದೆ.

### ಕನ್ನಡಕ್ಕೆ ಹೊಸ ನಿಘಂಟು

ಕನ್ನಡಕ್ಕೆ ಹೊಸ ನಿಘಂಟು ಈ ವಿಚಾರವು ಮೊದಲಿಗೆ ಸಂಭಾವನೆ ಗ್ರಂಥದಲ್ಲಿ ೧೯೪೭ರ ಅವರಿಗೆ ಪ್ರಕಟಗೊಂಡಿದ್ದು ಮುಂದೆ ಡಿ.ಎಲ್.ಎನ್. ಅವರು ಸಂಕಲಿತ ಪೀಠಿಕೆಗಳು

ಲೇಖನಗಳು ಸಂಶೋಧನಾ ಲೇಖನಗಳ ಗುಚ್ಛದ ನಿರುಕ್ತ ಭಾಗದ ೫೨ನೇ ಲೇಖನವಾಗಿ ಪ್ರಸ್ತಾಪಿತಗೊಂಡದ್ದಾಗಿದೆ.

ಕನ್ನಡ ಕಾವ್ಯಗಳ ಅಭ್ಯಾಸ ಪ್ರಿಯರಿಗೆ ವಿವಿಧ ಬಗೆಯಾದ ಸಹಾಯ ಹಿಂದಿನಿಂದಲೂ ಮೂಡಿಬಂದಿದೆ. ವ್ಯಾಕರಣ ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯಸ್ವರೂಪದ ನಿರೂಪಣೆ ಮುಂತಾದವಾಗಿ ಶಿಕ್ಷಣಶಾಸ್ತ್ರದಲ್ಲಿ ನಮ್ಮ ಪೂರ್ವಜರು ಹಿಂದಿನಿಂದಲೂ ಆಸಕ್ತಿವಹಿಸಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಅದರಲ್ಲಿ ಪ್ರಸ್ತುತವಾದದ್ದು ನಿಘಂಟುಶಾಸ್ತ್ರ ಕೇಶಿರಾಜನ ಪಠ್ಯವನ್ನು ಕಣ್ಣಾಲೆಗಳಲ್ಲಿರಿಸಿಕೊಂಡು ಸತತ ೧೫ ವರ್ಷಗಳ ಕಾಲ ಅಭ್ಯಾಸ ನಡೆಸಿ ಕನ್ನಡಕ್ಕೆ ಮೊದಲು ನಿಘಂಟು ನೀಡಿದವರು ಕಿಟೆಲ್ ಅವರು, 'ಇವರು ನಿಘಂಟು ರಚಿಸಿ ೯೦ಕ್ಕೂ ಅಧಿಕ ವರ್ಷ ಸಂಧಿಸಿದರೂ ಇದಕ್ಕೂ ಮಿಗಿಲಾದ ಇನ್ನೊಂದು ನಿಘಂಟು ಇನ್ನೂ ಬಂದಿಲ್ಲ. ಇಂದಿನ ತಂತ್ರಜ್ಞಾನ ಯುಗದಲ್ಲಿ ಹತ್ತಾರು ನಿಘಂಟುಗಳು ಬಂದರೂ ಈ ನಿಘಂಟಿಗೆ ಸಮವೆನಿಸುವಂತಾಗಿಲ್ಲ ಕಾರಣ ಅಂದಿನ ಕಿಟೆಲ್‌ರ ಶ್ರಮ ಯಾವುದೇ ಆಧಾರಗಳಿಲ್ಲದೆ ಪದಗಳ ಮೂಲ ಹುಡುಕುವ ಕ್ರಮ ಅವರದ್ದಾಗಿತ್ತು.'[೧೦]

ಡಿ.ಎಲ್.ಎನ್. ಅವರು ನಿಘಂಟು ತಜ್ಞರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನ ಸಂಪಾದಕರಾಗಿ ಕಾರ್ಯನಿರ್ವಹಿಸಿ ಕನ್ನಡ ಸಾಹಿತ್ಯದ ಬಹುಪಾಲು ಪದಗಳ ಅರ್ಥವಿಚಾರಗಳನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿದವರಾಗಿದ್ದಾರೆ.

ಶಬ್ದಮೂಲದ ನಿಷ್ಪತ್ತಿ ವಿಚಾರವಾಗಿ ಡಿ.ಎಲ್.ಎನ್. ಶಬ್ದದ ಮೂಲವನ್ನು ಕೆದಕಿ, ಬೆದಕಿ, ಸಿಕ್ಕುಬಿಡಿಸಿ ತೌಲನೀಕರಿಸಿ, ಪರಿಶೀಲಿಸಿ ಅವುಗಳ ಮೌಲ್ಯವನ್ನು ನಿರ್ಧರಿಸಿದವರಾಗಿದ್ದಾರೆ. ಶಬ್ದಗಳ ಅರ್ಥ ಸೂಕ್ಷ್ಮತೆಯನ್ನು ಗ್ರಹಿಸುವಲ್ಲಿ ಡಿ.ಎಲ್.ಎನ್. ಅವರು ತೋರಿದ ವಿವೇಕ ಪ್ರಶಂಸನೀಯವಾದುದೇ ಸರಿ. ಅಲ್ಲೆಲ್ಲ ಅವರದ್ದೇ ಆದ ವಿಶಿಷ್ಟ ರೀತಿಯಿದೆ. ಶಬ್ದಾರ್ಥ ವಿವೇಚನೆಗೆ ಸಂಬಂಧಿಸಿದ ಅವರ ಲೇಖನಗಳು ಆಕೃತಿಯಲ್ಲಿ ಕಿರಿದಾದರೂ ಆಲೋಚನಾ ಸಂಪತ್ತಿನಲ್ಲಿ ಅತ್ಯಂತ ಹಿರಿದಾದವುಗಳಾಗಿ ಶಬ್ದಗಳನ್ನು ಕುರಿತು ವಿಚಾರ ಮಾಡುವವರಿಗೆ ಒಳ್ಳೆಯ ಮಾರ್ಗದರ್ಶಕವೆನಿಸಿವೆ. ರೂಪ ಮತ್ತು ಅರ್ಥಗಳನ್ನು ನಿರ್ಣಯಿಸುವಾಗ ಭಾಷಾಶಾಸ್ತ್ರದ ಮುಖ್ಯಸೂತ್ರಗಳನ್ನು ಹೇಗೆ ಅನ್ವಯಿಸಬೇಕೆಂಬುದು ಅವರ ಬರಹಗಳಿಂದಲೇ ಕಲಿಯಬೇಕು. ಹೀಗೆ ಶಬ್ದಾರ್ಥ ವಿವೇಚನೆಗೆ ಅವರ ಕಾಣಿಕೆ ಮೌಲಿಕವಾಗಿದೆ.

ಕನ್ನಡ ಕಾವ್ಯಗಳಲ್ಲಿ ಅಧ್ಯಯನ ಮಾಡುವವರಿಗೆ ಕೋಶಗಳು ತುಂಬಾ ನೆರವಾಗುತ್ತವೆ. ಪ್ರಾಚೀನ ಕಾವ್ಯಗಳನ್ನು ಹಿಡಿಯಾಗಿ ಓದಿದವರಿಗೆ ಕನ್ನಡಕ್ಕೆ ಹೊಸ ನಿಘಂಟು ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಎಂಬ ಭಾವನೆ ಬಾರದಿರದು. ಕಿಟೆಲ್‌ಕೋಶದ ಮಿತಿಯನ್ನು ಹೇಳಿದ ಡಿ.ಎಲ್.ಎನ್. ಕಿಟೆಲ್ ಕೋಶ ತನ್ನ ಕಾಲದವರೆಗೆ ಪ್ರಕಟವಾಗಿದ್ದ ಎಲ್ಲಾ ಕಾವ್ಯಪ್ರಯೋಗಗಳನ್ನು ದಾಖಲಿಸಿಲ್ಲ. ಈ ಕಾರಣದಿಂದ ಅವರ ಕೋಶ ಕನ್ನಡ ಶಬ್ದಭಂಡಾರವನ್ನೆಲ್ಲಾ ತೆರೆದು

ತೋರಿಸಲು ಅಸಮರ್ಥವಾಗಿದೆ. ಅವರು ಮಾಡಿದ ಕೆಲಸವನ್ನು ಮುಂದುವರೆಸುವುದು ಕನ್ನಡಿಗರ ಮೇಲೆ ಬಿದ್ದಿರುವ ಹೊಣೆಯಾಗಿದೆ. ಪದಗಳ ಮೂಲವನ್ನು ಚರಿತ್ರೆಯನ್ನು ಬೆದಕಿ ಕಂಡುಹಿಡಿಯುವ ಪ್ರಯತ್ನ ನಡೆಯಬೇಕಾದದ್ದು ಅತಿ ಅವಶ್ಯ ಎಂದಿದ್ದಾರೆ. ಇದಕ್ಕೆ ಪೂರಕವಾಗಿ ಶಬ್ದಾರ್ಥಜ್ಞಾನ, ಶಾಸ್ತ್ರಪರಿಚಯ ಅವಶ್ಯವಾಗಿಬೇಕು. ಆದ್ದರಿಂದ ಡಿ.ಎಲ್.ಎನ್. ಅವರು ಇದೇ ಕ್ರಮವನ್ನು ಹಿಡಿದು ಕನ್ನಡಕ್ಕೆ ಹೊಸ ನಿಘಂಟು ಎಂಬ ಲೇಖನವನ್ನು ಕೆಲವು ಉದಾರಹರಣೆಗಳನ್ನು ನೀಡುವ ಮೂಲಕ ಸೃಜಿಸಿದ್ದು ಉತ್ತಮವೆನಿಸಿದೆ.

**ಈ ಲೇಖನದಲ್ಲಿ ಉದಾಹರಿಸಿದ ಕೆಲ ವಿಚಾರಗಳು ಈ ರೀತಿಯಾಗಿವೆ,**

೧. 'ಮೇಗಾಳಿ,' 'ಕಿಗ್ಗಾಳಿ' ಇದರ ಅರ್ಥ ವಿಚಾರವಾಗಿ ಬೇಟೆಯಾಡುವಾಗ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿ ಎಂದೂ ಪ್ರಾಣಿಯ ಕಡೆಯಿಂದ ಆ ಮೃಗದ ಕಡೆಗೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದು ಹೆಸರಿಸಿದೆ.

೨. ಹುಡುಕುನೀರು– ಪುಡುಕುನಿರ್, ಕುದಿನೀರ್, ಬಿಸಿನೀರ್ ಎಂದು ಅರ್ಥೈಸಿದೆ.

೩. ಓಹರಿಸಾಹರಿ–'ತಂಡೋಪತಂಡವಾಗಿ' ಎಂಬ ಅರ್ಥವನ್ನು ನೀಡುವ ಪದ ಕೃಷ್ಣದೇವರಾಯನ ಆಮುಕ್ತ ಮೌಲ್ಯದ ಹಾಗೂ ಕನ್ನಡದ ಸುರಂಗ ಕವಿಯ ಕವಿಕಾಮ ದೇವರ ಕಥೆಯಲ್ಲಿ ಉಲ್ಲೇಖಗೊಂಡದ್ದಾಗಿದೆ.

೪. ಒಲ್ಲಣಿಗೆ–ಆದ್ರವಸ್ತ್ರ(ಇದರ ಉಲ್ಲೇಖಗಳು ವಡ್ಡಾರಾಧನೆ ಪಂಪಭಾರತಗಳಲ್ಲಿ ಮೂಡಿಬಂದವಾಗಿವೆ.

ಹೀಗೆ ಪದಗಳ ಅರ್ಥವಿಚಾರಗಳನ್ನು ಭೇದಿಸುತ್ತಾ ಒಂದೆಡೆ ಕಾವ್ಯ ಸೌಂದರ್ಯದ ಬಗ್ಗೆ ಬೆಳಗಿದರೆ. ಇನ್ನೊಂದೆಡೆ ಆಯಾಶಾಸ್ತ್ರದ ಶಬ್ದ ಪ್ರವಾಹ ತೀಕ್ಷ್ಣವಾಗಿರುತ್ತದೆ. ಇಂತಹ ಪಾಂಡಿತ್ಯ ಪ್ರಾಚೀನ ಸಾಹಿತ್ಯದಲ್ಲಿನ ಪದಗಳಿಗೆ ಅರ್ಥವಾಗಿ ಶಬ್ದಭಂಡಾರದ ಖಜಾನೆ ಒಡೆಯಲುಬೇಕಾದ ತಕ್ಕ ಬಹುಭಾಷೆ ಪಾಂಡಿತ್ಯ ನಿಘಂಟುಕಾರನಿಗಿರುವುದು ಅವಶ್ಯವೆನಿಸಿದೆ ಹಾಗೂ ಅವನು ಬಹುಭಾಷೆ ಪಂಡಿತನಾಗಿರುವುದು ಅತಿ ಅವಶ್ಯಕವಾದ ಅಂಶವೆನಿಸಿದೆ.

ಆದ್ದರಿಂದ ಕನ್ನಡಕ್ಕೆ ಒಂದು ಹೊಸ ನಿಘಂಟು ಎಂಬ ಡಿ.ಎಲ್.ಎನ್. ಅವರ ಅಭಿಪ್ರಾಯದ ಕನಸು ಇನ್ನೂ ಉನ್ನತಮಟ್ಟದಲ್ಲಿ ಕಾಲಕ್ಕನುಗುಣವಾಗಿ ಮುಂದುವರೆಯಬೇಕೆಂಬುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

**'ಪೊರಸು' ಒಂದು ವಿಚಾರ**

ಅಚ್ಚಗನ್ನಡದ ಪೊರಸು ಶಬ್ದವು ಪ್ರಾಚೀನ ಕವಿಗಳ ಪ್ರಯೋಗಗಳನ್ನು ಅವಲಂಬಿಸಿ ನೋಡಿದರೆ ವಿಸ್ತಾರತೆಗೆ ತೆರೆದುಕೊಳ್ಳುತ್ತದೆ. ಈ ವಿಚಾರವಾಗಿ ಡಿ.ಎಲ್.ಎನ್ ಅವರು

ಪ್ರಾಚೀನ ಗ್ರಂಥಗಳನ್ನು ಸಂಸ್ಕರಿಸಿ ಪ್ರಕಟಿಸುವಾಗ ಯಾವ ರೂಪವು ನಮಗೆ ಅತ್ಯಂತ ಕಠಿಣವೆನಿಸುತ್ತದೆಯೋ ಅದೇ ಮೂಲ ಪಾಠವಿರಬಹುದೆಂದು ಊಹಿಸಿರುವುದುಂಟು.

ಪ್ರಸ್ತುತ 'ಪೊರಸು' ಪದ ಪ್ರಯೋಗದ ವಿಚಾರವಾಗಿ ಡಿ.ಎಲ್.ಎನ್. ವಿವಿಧ ಕಾವ್ಯಗಳಲ್ಲಿ ಉಲ್ಲೇಖಿಸಿದಂತೆ ಆಕ ೯ವ್ಯ ಪ್ರಯೋಗಗಳನ್ನು ಉದಾಹರಿಸಿ ಆಧಾರ ಸಹಿತ ನಿರೂಪಿಸಿದ್ದು ಕಂಡುಬಂದಿದೆ. ಪೊರಸು ಎಂದರೆ ಪಾರಿವಾಳ ಇದೊಂದು ಅಪಶಕುನದ ಹಕ್ಕಿ ಎಂದು ಆಕಾಲದ ಜನತೆಯು ಅಭಿಪ್ರಾಯ ವ್ಯಕ್ತಪಡಿಸಿದ್ದು ಇಲ್ಲಿನ ಪ್ರಯೋಗಗಳಿಂದ ತಿಳಿದುಬಂದಿದೆ.

ರೆ.ಎಫ್.ಕಿಟೆಲ್ ಅವರು ರಚಿಸಿದ ಕನ್ನಡ-ಕನ್ನಡ ನಿಘಂಟುನಲ್ಲಿ ಈ ಪದದ ಉಲ್ಲೇಖವಿದ್ದುದ್ದನ್ನು ಡಿ.ಎಲ್.ಎನ್ ಅವರು ಕೈಗೆತ್ತಿಕೊಂಡು ವಿವಿಧ ಪ್ರಾಚೀನ ಕನ್ನಡ ಕಾವ್ಯಗಳಲ್ಲಿನ ಪ್ರಯೋಗಗಳನ್ನು ಉದಾಹರಿಸಿ ಅರ್ಥ ನಿರೂಪಿಸಿದ್ದಾರೆ.

ಕಿಟೆಲ್ ಅವರು ಹೊರಸು ಶಬ್ದವನ್ನು ಕೊಟ್ಟ ಅದಕ್ಕೆ ಅರ್ಥವಾಗಿ ಎಕ್ಕೆಂಡ್ ಆಫ್ ಪಿಗ್ಲೋನ್ ಎಂದು ಹೇಳಿದ್ದಾರೆ. ಅದಕ್ಕೆ ಪ್ರತಿಯಾಗಿ ಪುಱವ, ಪಱವ, ಪುಱು ಎಂಬ ತಮಿಳಿನ ಪದಗಳನ್ನು ಸೂಚಿಸಿದ್ದಾರೆ. ಈ ಅರ್ಥ ಸೂಚಿಸಿಲು ಹಲಾಯುಧನ ಅಬಿಧಾನ ರತ್ನಮೂಲ ಎಂಬ ಸಂಸ್ಕೃತ ನಿಘಂಟಿಗೆ ಇರುವ ಕನ್ನಡದ ವ್ಯಾಖ್ಯಾನವನ್ನು ಆಧಾರವಾಗಿಟ್ಟುಕೊಂಡು ಉದಾಹರಿಸಿದ್ದಾರೆ. ಆ ಪಧ್ಯದಲ್ಲಿ ಕಪೋತಾ ಎಂದು ಉದಾಹರಿಸಿ ಕೆಳಗಡೆ ಟೀಕೆಯಲ್ಲಿ ಹೊಱಸು ಎಂದು ವಿವರಿಸಿದ್ದನ್ನು ಕನ್ನಡದ ಪಾರಿವಾಳ ಎಂಬ ಅರ್ಥಕ್ಕೆ ಸಂವಾದಿಯಾಗಿಸಿ ನೋಡಬಹುದಾಗಿದೆ.

ಇದೇ ಅರ್ಥವಾಗಿ ಕನ್ನಡ ಕಾವ್ಯಗಳಲ್ಲಿ ದೊರೆತ ಪ್ರಯೋಗಗಳನ್ನು ಈ ರೀತಿಯಾಗಿ ಕಾಣಬಹುದಾಗಿದೆ.

೧. ವಡ್ಡಾರಾಧನೆಯ : ವಿದ್ದೋಚ್ಚೋರನ ಕಥೆಯ ಕೊನೆಯಲ್ಲಿ 'ಪೊಱಸು' ಎಂಬ ಪದ ಉಲ್ಲೇಖಗೊಂಡಿದೆ.

೨. ಮಲ್ಲಿಕಾರ್ಜುನನ : ಸೂಕ್ತಿಸುಧಾರ್ಣವ ಕೃತಿಯ ಚಂದ್ರೋದಯ ವರ್ಣನಾ ಪ್ರಕರಣದಲ್ಲಿ 'ಬೆಳ್ಪೊಱಸು' ಎಂದು ಪ್ರಸ್ತಾಪಿಸಿದ್ದು ಕಂಡು ಬಂದಿದೆ ಇದಕ್ಕೆ ಪೂರಕವಾಗಿ ಬಿಳಿಪಾರಿವಾಳ ಎಂದು ಉಲ್ಲೇಖಿಸಬಹುದಾಗಿದೆ.

೩. ಪಂಪಭಾರತದ : ೬ನೇ ಭಾಗದ ೨೦ನೇ ಪದ್ಯದಲ್ಲಿ ಪೊರ(ಱ)ಸಱು ಎಂದು ಪ್ರಸ್ತಾಪಿಸಿದ್ದು ಕಂಡುಬಂದಿದೆ. ಪ್ರಾಸಂಗಿಕವಾಗಿ ಈ ಪದ್ಯದಲ್ಲಿನ ಒಟ್ಟಾರೆ ಅರ್ಥವಾಗಿ ಪಾಂಡವರ ಕಷ್ಟಕ್ಕೆ ದುಶ್ಯಾಸನ ಒಂದೆಡೆ ಕಾರಣನಾದರೆ ಶಕುನಿ ಎಂಬ ಬಿಳಿಪಾರಿವಾಳ ಕಾರಣನಾಗಿದ್ದಾನೆಂದು ಅರ್ಥೈಸಿದ್ದು ತಿಳಿದು ಬಂದಿದೆ.

೪. ದುರ್ಗಸಿಂಹನ ಪಂಚತಂತ್ರ ಕೃತಿಯಲ್ಲಿ ಮೂಡಿಬಂದಿರುವ 'ಕಚದಮನ' ಕಥೆಯಲ್ಲಿನ 'ಶ್ವೇತ ಕರ್ಪೂರತನಂತಿರ್ದು' ಎಂದು ಉಲ್ಲೇಖಿಸಿದ್ದನ್ನು ಉದಾಹರಿಸಿ ಇದಕ್ಕೆ ಬಿಳಿಪಾರಿವಾಳ ಎಂದು ಸಂಬೋಧಿಸಬಹುದಾಗಿದೆ ಎಂದಿದ್ದಾರೆ ಡಿ.ಎಲ್.ಎನ್.

ಈ ರೀತಿಯಾಗಿ ಪೊನ್ನನ ಶಾಂತಿಪುರಾಣ, ರನ್ನನ ಗಾದಯುದ್ಧ, ನಯಸೇನನ ಧರ್ಮಾಮೃತ, ರುದ್ರಭಟ್ಟನ ಜಗನ್ನಾಥ ವಿಜಯ, ಮುಂತಾದ ಕನ್ನಡ ಕಾವ್ಯಗಳಲ್ಲಿನ ಪ್ರಸಂಗಗಳಲ್ಲಿ ಉಲ್ಲೇಖಗೊಂಡ 'ಪೊಜಸು' ಎಂಬ ಪದಕ್ಕೆ ಪಾರಿವಾಳವೆಂಬ ಅರ್ಥವನ್ನು ಸಂದರ್ಭಸಹಿತ ವಿಷದಪಡಿಸಿದ ವಿಚಾರ ಲೇಖನದುದ್ದಕ್ಕೂ ಕಂಡುಬಂದಿದೆ.

ಒಂದು ಕಾಲದಲ್ಲಿ ಪಾರಿವಾಳವು ಸಂದೇಶ ರವಾನೆಯ ಪಕ್ಷಿಯಾದರೂ ನಾಲ್ಕನೇ ಶತಮಾನದಿಂದ ೧೩ನೇ ಶತಮಾನದ ಒಳಗಿನ ಈ ಕಾವ್ಯಗಳಲ್ಲಿ ಅದೊಂದು ಅಪಶಕುನದ ಹಕ್ಕಿ ಎಂದು ಬಿಂಬಿಸಲಾಗಿದೆ. ಕಾಲಕ್ರಮೇಣ ಈ ಬಿರುದು ಕಾಗೆ-ಗೂಬೆಗಳಿಗೂ ಬಂದಿರಬಹುದಾಗಿದೆ.

**ಬಾದುಬೆ**

ಕನ್ನಡು ನುಡಿಯ, ಸಂಪುಟ ೧೫ರಲ್ಲಿ ಮೊದಲಿಗೆ ಪ್ರಕಟಗೊಂಡು ನಂತರ ಡಿ.ಎಲ್.ಎನ್. ರವರು ಸಂಕಲಿತ ಪೀಠಿಕೆಗಳು ಲೇಖನಗಳು ಸಂಶೋಧನಾ ಲೇಖನಗಳ ಗುಚ್ಛದಲ್ಲಿ ೫೫ನೇ ಭಾಗವಾಗಿ ಬಿತ್ತರಗೊಂಡ ಈ ಲೇಖನ ಡಿ.ಎಲ್.ಎನ್. ಅವರ ವೈಚಾರಿಕ ಪ್ರಜ್ಞೆಯನ್ನು ಎತ್ತಿತೋರಿಸಿದ್ದಾಗಿದೆ.

ಬಾದುವೆ, ಬಾಂದುಂಬೆ, ಬಾದುಬ್ಬೆ ಎಂದು ವಿವಿಧ ಶಾಸನಗಳಲ್ಲಿ ಬಳಕೆಯಲ್ಲಿದ್ದು 'ಬಾದುಂಬೆ ಈ ಪದ ಕ್ರಿ.ಶ. ೧೮೭೭ರ ವಿವಿಧ ಶಾಸನಗಳಲ್ಲಿ ಬಾದುಂಬೆಯಾಗಿ ಕ್ರಿ.ಶ. ೧೮೭೦ರ ಒಂದನೇ ಅಮೋಘವರ್ಷನ ಖಾಜಿಪೇಟೆ ಶಾಸನದ ೨೪ನೇ ಪಂಕ್ತಿಯಲ್ಲಿ ಬಾದುಂಬೆಯಾಗಿ ಕ್ರಿ.ಶ. ೧೦೧೯-೨೦ನೇ ಆಸುಪಾಸಿನಲ್ಲಿ ಕುಂದಮರಸನ ಬಳ್ಳಿಗಾಂವೆಯ ಶಾಸನದ ೪೧ನೇ ಪಂಕ್ತಿಯಲ್ಲಿ ಬಾದುಬ್ಬೆಯಾಗಿ ಕ್ರಿ.ಶ. ೧೧೯೫ರಲ್ಲಿ ರಚಿತವಾದ ಕುರುಗೋಡಿನ ಶಾಸನದಲ್ಲಿ ಉಲ್ಲೇಖಗೊಂಡ ಪದಗಳು ಆಧಾರಗಗಳಾಗಿ'[೧೧] ಅಲ್ಲಲ್ಲಿ ಈ ಶಬ್ದದ ಪ್ರಯೋಗವು ಉಲ್ಲೇಖಗೊಂಡಿದೆ.

ಒಟ್ಟಾರೆ ಲೇಖನದಲ್ಲಿ ಪ್ರಯೋಗಗೊಂಡ ವಿಚಾರಗಳನ್ನು ಅನುಲಕ್ಷಿಸಿ "ಬಾದುಬೇ" ಎಂಬುದು ದೇವತೆಯ ಹೆಸರಿರಬೇಕೆಂದು ಹೇಳಿದೆ. ಅಲ್ಲದೆ ಶ್ರೀ ದೇಸಾಯಿಯವರ ಹೇಳಿಕೆಯಂತೆ ಬಾದಾಮಿಯ ಇನ್ನೊಂದು ಹೆಸರು 'ಬನದಬ್ಬೆಯೇ', 'ಬಾದುಬೆ', 'ಬಾದಾಮಿ' ಎಂಬ ರೂಪವಾಗಿರಬೇಕೆಂದು ಉಲ್ಲೇಖಿಸಿದ್ದು ಕಂಡುಬಂದಿದೆ.

**ತ್ರಾಸು**

ಮೊದಲ ಬಾರಿಗೆ ಕನ್ನಡ ನುಡಿಯ ಸಂಪುಟ-೧೫ರಲ್ಲಿ ಉಲ್ಲೇಖಿತಗೊಂಡ ಈ ಲೇಖನ ಡಿ.ಎಲ್.ಎನ್ ಅವರು ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೫೬ನೇ ಭಾಗವಾಗಿ ನಿರೂಪಿತಗೊಂಡದ್ದಾಗಿದೆ.

ಈ ಶಬ್ದದ ವಿಚಾರವಾಗಿ ಡಿ.ಎಲ್.ಎನ್. ಅವರಿಗಿಂತಲೂ ಮೊದಲು ಶ್ರೀ ದೇಸಾಯಿಯವರು ಶಿವಮೊಗ್ಗ ತಾಲೂಕಿನ ೬೪ನೇಯ ಶಾಸನದಲ್ಲಿ ಈ ಪದದ ಉಲ್ಲೇಖವಿರುವುದನ್ನು ಗುರುತಿಸಿದ್ದಾರೆ. ಅಲ್ಲದೇ ಈ ಶಾಸನದ ಕಾಲ ಕ್ರಿ.ಶ. ೧೧೧೨ ಎಂದು ಅಂದಾಜಿಸಿದ್ದಾರೆ. ತರಾಜೂ ಎಂಬ ಫಾರಸಿ, ಭಾಷೆಯ ಶಬ್ದ ತ್ರಾಸು ಎಂದು ಬಗೆಗೊಂಡು ಬಂದಿದೆ ಎಂದು ಉಲ್ಲೇಖಿಸಿದ್ದನ್ನು ಡಿ.ಎಲ್.ಎನ್. ಮೇಲುಕು ಹಾಕಿದ್ದಾರೆ.

ಇದಕ್ಕೆ ಪ್ರತಿಯಾಗಿ ಡಿ.ಎಲ್.ಎನ್. ಅವರು ನಯಸೇನನ ಧರ್ಮಾಮೃತ ಹಾಗೂ ಹರಿಹರನ ರಗಳೆಗಳಲ್ಲಿ ಈ ಪದದ ಪ್ರಯೋಗವನ್ನು ಗುರುತಿಸಿ ತ್ರಾಸು ಎಂಬುದಕ್ಕೆ ತಕ್ಕಡಿ ಎಂದು ಗುರುತಿಸಿದ್ದು ಕಂಡುಬಂದಿದೆ.

ಇಂದಿನ ಪದ ಪ್ರಯೋಗವಾಗಿ ತ್ರಾಸು ಎಂಬುದು ಆಯಾಸ, ಬಳಲಿಕೆ, ಕಷ್ಟ ಸಹಿಸಲಾಗದ್ದು ಸಂಕಟ ಎಂಬ ವಿವಿಧ ಬಗೆಯಲ್ಲಿ ಉಲ್ಲೇಖಗೊಂಡಿರುವುದು ಕಂಡುಬಂದಿದೆ.

**ಅಗ್ರಹಾರ ಒಂದು ಸೂಚನೆ**

೧೯೪೬ರ ಕನ್ನಡ-ನುಡಿ ಪತ್ರಿಕೆಯಲ್ಲಿ ಮೊದಲ ಬಾರಿಗೆ ಉಲ್ಲೇಖಗೊಂಡ ಈ ಲೇಖನವು ಮುಂದೆ ಡಿ.ಎಲ್.ಎನ್ ರಚಿಸಿದ ಪೀಠಿಕೆಗಳು ಲೇಖನಗಳು ಎಂಬ ವಿದ್ವತ್ ಸಂಶೋಧನಾ ಕೃತಿಯಲ್ಲಿ ೫೭ನೇ ಭಾಗವಾಗಿ ಮೂಡಿಬಂದುದ್ದಾಗಿದೆ.

ಕನ್ನಡ ನುಡಿಯ ೧೯೪೬ರ ಶ್ರೀ ಶಂಬಾಜೋಶಿ ಅವರ ಅಗ್ರಹಾರ ಎಂಬ ಪದದ ಅರ್ಥ ವಿವೇಚನೆಯನ್ನು ಪ್ರಸ್ತಾಪಿಸಿಕೊಂಡು ಡಿ.ಎಲ್.ಎನ್. ಈ ಲೇಖನವನ್ನು ಸ್ಪರ್ಶಿಸಿದ್ದಾರೆ.

ಅಗ್ರಹಾರ ಎಂಬ ಶಬ್ದವು ಚನ್ನರಾಯಪಟ್ಟಣದ ೨೫೯ನೇ ೧೪೧೪ರ ಶಾಸನ(ಅಘಾರ) ೪೯ನೇ ಮೂಡಣ ಚಾಲುಕ್ಯರ ಶಾಸನ (ಅಗ್ರಹಾರ) ಇತರೆ ಪ್ರಾಚೀನ ಶಾಸನಗಳಲ್ಲಿ ಉಲ್ಲೇಖಗೊಂಡ ವಿಚಾರವನ್ನು, ಈ ಪದದ ಕುರಿತು ಅನೇಕ ಚಿಂತಕರು ಚರ್ಚಿಸಿದ್ದನ್ನು ಡಿ.ಎಲ್.ಎನ್. ಪ್ರಸ್ತಾಪಿಸಿದ್ದು ಗಮನಿಸಬೇಕಾದ ಅಂಶವೆನಿಸಿದೆ. ಪ್ರಾಚೀನ ಗ್ರಂಥಗಳಲ್ಲಿನ ಕಾಣದ ಅನೇಕ ರೂಪಗಳು ನಮಗೆ ಶಾಸನಗಳಲ್ಲಿ ದೊರೆಯುತ್ತವೆ ಎಂಬ ಮಾತಿಗೆ ಈ ಉದಾಹರಣೆ ಹೊರತಾಗಿಲ್ಲದ್ದಾಗಿದೆ.

ಪ್ರಾಕೃತದಲ್ಲಿ 'ಅಗ್ರಹಾರ' ಎಂಬ ಪೂರ್ವರೂಪವು 'ಅಘಾರ' ಎಂಬ ಹ್ರಸ್ವ ರೂಪವೂ ಕಂಡುಬಂದು ಅಗ್ರಹಾರ ಎಂಬ ಪದ ಅಗ್ರ+ಆಹಾರ ಎಂಬೆರಡು ಶಬ್ದಗಳಿಂದ ಕೂಡಿದ ಒಂದು ಸಮಸ್ತ ಪದವೆಂದೂ, ಅಹಾರ ಎಂಬುದು ವಿಷಯ ವಾಚಕವೆಂದು ಆಹಾರದ ಸವೆದ ರೂಪ'ಹಾರ'ವೆಂದು ಆ ಸಮಸ್ತ ರೂಪವೇ ಅಗ್ರಹಾರ ಎಂಬ ರೂಪ ತಾಳಿದೆ. ಎಂದು ಶಂಬಾ ಜೋಷಿಯವರು ನಿರೂಪಿಸಿದ ವಿಧಾನವನ್ನು ತಿಳಿಯಬಹುದಾಗಿದೆ. ಇದಕ್ಕೆ ಪ್ರತಿರೂಪವಾಗಿ ಡಿ.ಎಲ್.ಎನ್. ಅವರು ಈ ವಾದ ಸೂಕ್ತವಾಗಿಲ್ಲದ್ದಾಗಿದೆ ಅಗ್ರಹಾರದ ಈ ಸಮಾಸ ಪದವನ್ನು ಅಗ್ರ+ಹಾರ ಎಂದು ಬಿಡಿಸುವುದು ಉಚಿತ ಎಂದಿದ್ದಾರೆ.

'ಅಗ್ರಹಾರ'ವೆಂದರೇ ಬ್ರಾಹ್ಮಣ ಕೊಟ್ಟ ಕೊಡುಗೆಗಳನ್ನು ಅವರು ವಾಸಿಸುವ ಸ್ಥಾನಗಳನ್ನು ಅಗ+ಹಾರ=ಅಗ್ರಹಾರಗಳೆಂದು ವಾದಿಸಿದ್ದಾರೆ. ಈ ವಿಚಾರ ಇಂದಿಗೂ ಸಮಾಸ ಎಂದು ಕಂಡುಬಂದಿದೆ.

**ಕಾಳಸೆ–ಕಾಳಸ–ಕಾಳಾಸ–ಕಳಾಸ**

ಕನ್ನಡ ನುಡಿಯ ೧೯೪೭ರಲ್ಲಿ ಸಂಚಿಕೆಯಲ್ಲಿ ಮೊದಲ ಬಾರಿಗೆ ವಿಸ್ತೃತಗೊಂಡ ಈ ವಿಚಾರವು ಮುಂದೆ ಡಿ.ಎಲ್.ಎನ್. ಸಂಕಲಿತ ಕೃತಿಯ ೫೮ನೇ ಭಾಗದಲ್ಲಿ ಉಲ್ಲೇಖ ಗೊಂಡುದ್ದಾಗಿದೆ.

ಇಲ್ಲಿ ಪಂಪನ ಆದಿಪುರಾಣ (ಆಶ್ವಾಸ ೧೦–ಪದ್ಯ ೯೫) (ಪಂಪಭಾರತ) (ಆಶ್ವಾಸ–೪–ಪದ್ಯ೧೦೫) ನೇಮಿಚಂದ್ರನ ಲೀಲಾವತಿ ಪ್ರಬಂಧಂ (ಆಶ್ವಾಸ–೧೩ ಪದ್ಯ–೧೭) ರುದ್ರಭಟ್ಟನ ಜಗನ್ನಾಥ ವಿಜಯ (ಆಶ್ವಾಸ–೫ ಪದ್ಯ–೩) ಕುಮಾರವ್ಯಾಸನ ಗದುಗಿನ ಭಾರತ (ಆಶ್ವಾಸ–೮–ಪದ್ಯ ೨೯)ಗಳಲ್ಲಿ ಕ್ರಮವಾಗಿ ಉಲ್ಲೇಖಗೊಂಡ ಕಾಳಸೆ, ಕಾಳಸ, ಕಾಳಾಂಸ ಕಳಾಸ ಎಂದು ಮೂಡಿ ಬಂದ ಪದಗಳನ್ನು ವಿವಿಧ ಪ್ರಯೋಗಗಳ ಮೂಲಕ ಹೆಕ್ಕಿ ತೆಗೆದು ಕಲೆಹಾಕಿ ಕೊನೆಗೆ ಕಾಳಸೆ ಎಂದರೆ ಜೋಡಣೆ ಎಂಬ ಅರ್ಥವನ್ನು ನಿಶ್ಚಯಿಸಿದ್ದು ಕಂಡುಬಂದಿದೆ.

ಇನ್ನೂ ಈ ಶಬ್ದದ ನಿಷ್ಪತ್ತಿ ವಿಚಾರವಾಗಿ ಇದು ದೇಶ್ಯವೋ, ಅನ್ಯದೇಶ್ಯವೋ ಎಂದು ಹೇಳುವುದು ಕಷ್ಟ ಬಹುಶಃ ಇದು ಸಂಸ್ಕೃತ ಪ್ರಾಕೃತದಿಂದಲೋ ಕನ್ನಡಕ್ಕೆ ಎರವಲಾಗಿ ಬಂದ ಪದವೆಂಬ ವಿಚಾರವನ್ನು ಗಣನೆಗೆ ತೆಗೆದುಕೊಳ್ಳಬಹುದಾಗಿದೆ.

**ಡಂಗಹಾಕು ಎಂದರೇನು?**

೧೯೫೨ರಲ್ಲಿ ಜೀವನ ಪತ್ರಿಕೆಯಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಡಿ.ಎಲ್.ಎನ್. ಸಂಕಲಿಸಿದ ಪೀಠಿಕೆಗಳು ಲೇಖನಗಳು ಕೃತಿಯ ೫೯ನೇ ಭಾಗವಾಗಿ ಮೂಡಿಬಂದದ್ದಾಗಿದೆ.

ಯಾವುದೇ ಒಬ್ಬವ್ಯಕ್ತಿ ಸಾಲಪಡೆದು ಅದನ್ನು ತೀರಿಸದ ಸ್ಥಿತಿಯಲ್ಲಿ ಸಾಲಕೊಟ್ಟವನು ನಿನ್ಮನೇ ಮುಂದೆ ಡಂಗ ಹಾಕ್ಬಿಡ್ತೀನಿ ಎಂಬ ಜನಬಳಕೆಯ ಮಾತು ಎಲ್ಲರಿಗೂ ಚಿರಪರಿಚಿತವಾದುದ್ದಾಗಿದೆ. ಈ ಮಾತು ಸಾಲಕ್ಕೊಂದಲ್ಲದೆ ಇತರೆ ವಿಚಾರಗಳಿಗೂ ಅನ್ವಯಿಸುವಂತಹದ್ದಾಗಿದೆ. ಯಾವುದೇ ಒಬ್ಬ ವ್ಯಕ್ತಿ ವಿನಿಮಯಕ್ಕೆ ತಡವಾದಾಗ ಉಚಿತ ಸಂದರ್ಭದಲ್ಲಿ ಕೆಲಸ ನಿರ್ವಹಣೆ ಆಗದಿದ್ದಾಗ ಈ ಮಾತು ಹುಟ್ಟುವುದು ಸಹಜವಾಗಿದೆ. ಡಂಗ ಹಾಕುವವನ ದೃಷ್ಟಿ ತನ್ನತನವನ್ನೇ ಒತ್ತೆ ಇಟ್ಟು ಯಾವ ಮಟ್ಟಕ್ಕಾದರೂ ಸಿದ್ದನಾಗುವಂತೆ ಮಾಡುತ್ತದೆ. ಅದು ಮನೆ ಮುಂದೆ ಸತ್ಯಾಗ್ರಹದ ಸ್ವರೂಪವಿರಬಹುದು. ಜನರಿಂದ ಜನರಿಗೆ ವಿಚಾರ ವಿನಿಮಯ ಮಾಡಿಕೊಂಡು ಕಟ್ಟೆ ಪಂಚಾಯ್ತಿ ಮಟ್ಟದಿಂದ ವಿಷಯ ಬಗೆಹರಿಸಿಕೊಳ್ಳುವುದು ಇರಬಹುದು. ಇದು ಡಂಗ ಹಾಕುವವನ ದೃಷ್ಟಿ ಮತ್ತು ವಿಧಾನ. ಕಿಟೆಲ್ಲರ ಶಬ್ದಕೋಶದಲ್ಲಿದ್ದರದ ಈ ಶಬ್ದಾರ್ಥ ಪದನಿಷ್ಪತ್ತಿ ವಿಚಾರವನ್ನು ಡಿ.ಎಲ್.ಎನ್. ಅವರು ಪ್ರಸ್ತುತಪಡಿಸಿದ್ದಾರೆ.

ಮಹಾಭಾರತದಲ್ಲಿನ ಈ ಪದ ಬಳಕೆಯ ವಿಚಾರವಾಗಿ ಚರ್ಚಿಸುತ್ತಾ ಡಿ.ಎಲ್.ಎನ್. ಅವರು ಪಾಂಡವರ ಪಕ್ಷವನ್ನು ವಹಿಸಿದ್ದ ಕೃಷ್ಣನು ಸಂಧಿಯ ಪ್ರಸ್ತಾವಕ್ಕಾಗಿ ಕೌರವನ ಬಳಿಗೆ ಹೋಗಿ ಅವನಿಂದ ಸತ್ಕೃತನಾಗಿ ಅವನ ಆರ್ಯ ಪರಾಕ್ರಮಗಳನ್ನು ಹೊಗಳಿ ಏನೋ ಮನಸ್ತಾಪದಿಂದ ಅಗಲಿದ್ದು ಪಾಂಡವರೊಡನೆ ಮತ್ತೇ ಸೇರುವುದು ಒಳ್ಳೆಯದೆಂದು ಸ್ನೇಹವಾಗಿ ಮಾತಾಡುತ್ತಾ,

'ಪೊಂಗುಗ ಮಲೆಪರ ಮತಿಗಳ
ಡಂಗಂ(ಕ)ಣ್ಮಲೆವ ಮಂಡಲಂಗಳ್ ಪ್ರತ್ಯಂ।
ತಂಗಳೆಲೊಳೆಪೆ ಪಾಂಡವ
ರಂಗೆಟೆಗೊಳೆ ನಿನಗೆ ಕುರುಕುಲಾಂಬರಭಾನೂ'[೧೨]

ಎಂದು ಮುಂದುವರೆದು ಹೇಳಿದನೆಂದು ಪಂಪನ ಮಾತು. (ಪಂಪಭಾರತ-೩೯) ಈ ಪದ್ಯದಲ್ಲಿನ ದೋಷಗಳನ್ನು ಪರಿಹರಿಸುವುದಾದರೇ, ಮಲೆಗಳ ಎಂಬುದಕ್ಕೆ ತಲೊಳ್ ಎಂಬ ಪಾಠಾಂತರದಿಂದ ಅದಕ್ಕೆ ಪ್ರಯೋಜನವಿಲ್ಲವಾದ್ದರಿಂದ ಅದನ್ನು ಗಮನಿಸದೆ ಬಿಡಬಹುದು. 'ಡಂಗಂ(ಕ)ಣ್ಮಲೆವ' ಎಂಬುದಕ್ಕೆ 'ಡಂಗಂತಣ್ಮಲೆವ' ಎಂದು ಎರಡು ಪ್ರತಿಗಳಲ್ಲಿ 'ಡಂಗಂವಣ್ಮಲೆವ' ಎಂದು ಒಂದು ಪ್ರತಿಯಲ್ಲಿ 'ಡಂಗಂಗಂಗಳ್ಮಲೆವ' ಎಂದು ಇನ್ನೊಂದು ಪ್ರತಿಯಲ್ಲೂ ಪಾಠಭೇದಗಳಿವೆ ಎಂದು ತಿಳಿಸಿದ್ದಾರೆ. 'ಮಂಡಲಂಗಳ್ ಪ್ರತ್ಯಂತಂಗಳ್' ಎಂಬ ಪದಗಳ ಪರಂಪರೆಯನ್ನು ಗಮನಿಸಿದರೆ ಅವುಗಳ ಹಿಂದೆಯೊಗಳ್ ಅಂತ್ಯವಾದ ಶಬ್ದವಿರಬೇಕೆಂದು ಸಂಶೋಧಿಸಿದ್ದಾರೆ. ಆದ್ದರಿಂದ ಮೇಲಿನ ಪಾಠಗಳಲ್ಲಿ ಕೊನೆಯದಾದ 'ಡಂಗಂ', 'ಗಳ್ಮವ' ಎಂಬ ಸಂಪಾದಕ ನಿಯೋಜಿತ ಪಾಠವೂ ಅತ್ತ ಸರಿದು ಹೋಗುತ್ತದೆ. ಎಂದು ತಿಳಿಸುತ್ತಾ ಮೇಲಿನ ಪದ್ಯದ ಸರಿಯಾದ ಪಾಠವನ್ನು ಈ ಕೆಳಗಿನಂತೆ ಸಂಕಲಿಸಿದೆ.

'ಪೊಂಗುವ ಮಲೆಪರ ಮಲೆಗಳ
ಡಂಗಂಗಳ ಮಲೆವ ಮಂಡಲುಗಳ ಪ್ರತ್ಯಂ
ತಗಳೆನಲೊಳೆವ ಪಾಂಡವ
ರಂಗೆಡೆಗೊಳೆ ನಿನಗೆ ಕುರುಕುಲಾಂಬರ ಭಾನೂ'[೧೩]

ಒಟ್ಟಾರೆ ಈ ಪದದ ವಚನಾರ್ಥವನ್ನು ತಿಳಿಯಬಹುದಾದರೆ, ಅಯ್ಯಾ ಕೌರವ ನೀನು ಪಾಂಡವರ ಸ್ನೇಹವನ್ನು ಸಂಪಾದಿಸಿದರೆ ಸೊಕ್ಕಿ ನಿನಗೆ ಎದುರು ಬೀಳುವ ಮಲೆರಾಜರ ಮಲೆಗಳ ಡಂಗಗೇಣಲಿ ಉದ್ದೇಶನಾದಿ ವರ್ತಿಸುವ ಮಂಡಲಗಳಾಗಲಿ ಯಾವುದೂ ಇರುವುದಿಲ್ಲಾ ಎಂದು ಪದ್ಯದ ಅರ್ಥವನ್ನು ತಿಳಿಯಬಹುದಾಗಿದೆ.

ಇನ್ನೂ ವಿಸ್ತೃತವಾಗಿ ಈ ಪದದ ಅರ್ಥವನ್ನು ಚರ್ಚಿಸುತ್ತಾ ಹೋದಾಗ ಕಾವಲುಕಟ್ಟೆಯನ್ನು ಏರ್ಪಡಿಸು ಸಾಮಾನ್ಯವಾಗಿ ಕಾದು ಕುಳಿತಿರು ಎಂಬ ಜನಭಾಷೆಯ ಅರ್ಥವಾಗಿದೆ. ಇದರ ಅರ್ಥ ನಿಷ್ಪತ್ತಿಯ ವಿಚಾರವಾಗಿ ಡಿ.ಎಲ್.ಎನ್. ಅವರು ವಿವಿಧ ಮೂಲಗಳಿಂದ ವಿಚಾರಗಳನ್ನು ಸಂಗ್ರಹಿಸಿದ್ದು ಅವುಗಳನ್ನು ಈ ಸರಣಿಯಂತೆ ಕಾಣಬಹುದುದಾಗಿದೆ. ಪೇಶಾವರ ಮ್ಯೂಸಿಯಂನಲ್ಲಿರುವ ಕ್ರಿ.ಶ. ೧೪೬೧ರಲ್ಲಿ ಲಿಖಿತವಾದ ಶ್ರೀ ವಾಹ್ನಡಕನ ಸಂಸ್ಕೃತ ಶಾಸನದಲ್ಲಿ (ಎಪಿಗ್ರಾಫಿಯಾ ಇಂಡಿಕಾ ಪು. ೮೦) ಡಂಗ ಎಂಬ ಪದ ದೊರೆತ ವಿಚಾರವನ್ನು ಉಲ್ಲೇಖಿಸಿದ್ದಾರೆ. ಈ ಶಾಸನವನ್ನು ಸಂಪಾದಿಸಿದ ಡಾ.ಸ್ಟೆಕೋನೋ ಅವರು ಮಾಡಿರುವ ಒಂದು ಇಂಗ್ಲಿಷ ಭಾಷಾಂತರದಿಂದ ಈ ವಾಕ್ಯವನ್ನು ಅನುವಾದಿಸಿ ದ್ರಂಗವು ಪರ್ವತ ಶ್ರೇಣಿಗಳ ಘಾಟಿಮಾರ್ಗಗಳಲ್ಲಿ ಸುಂಕದ ವಸೂಲಿಗಾಗಿಯೂ ಫಲವತ್ತಾದ ಪ್ರದೇಶಗಳ ರಕ್ಷಣೆಗಾಗಿಯೂ ನಿಯಮಿತವಾದ ಠಾಣೆ ಮತ್ತು ರಕದ (ಸುಂಕದ)ಕಟ್ಟೆ ಎಂದು ಉಲ್ಲೇಖಿಸಿದ್ದನ್ನು ಹೇಳಿದ್ದಾರೆ. ಕಲ್ಹಣನ ರಾಜತರಂಗಿಣಿಯಲ್ಲಿ ಹಲವು ಬಾರಿ ಪ್ರಯೋಗವಾಗಿರುವ ಈ ಶಬ್ದಕ್ಕೆ ಆ ಗ್ರಂಥವನ್ನು ಇಂಗ್ಲಿಶಿಗೆ ಪರಿವರ್ತಿಸಿರುವ ಆರ್.ಎನ್. ಪಂಡಿತ್ ಅವರ Prontier post, observation post, watch station, ಎಂದು ಅರ್ಥ ಕಾಣಿಸಿದ್ದಾರೆ. ದ್ರಾಂಗಿಕ ಎಂಬ ಶಬ್ದಕ್ಕೆ wardeu of the wetch station wmmandant of the watch staton ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಈ ವಿಚಾರವು ರಿವರ್ ಆಫ್ ಕಿಂಗ್ (VII–೧೪೦–VIII–೧೫೭೭ ಎಫ್.ಎಫ್)ನಲ್ಲಿ ದಾಖಲಿಸಿದೆ. ಬೇರೆ ಬೇರೆ ರಾಜರ ಹಿಡುವಳಿಗೆ ಒಳಪಟ್ಟ ನಾಡುಗಳ ನಡುವೆ ಸೀಮಾಪ್ರದೇಶಗಳಲ್ಲಿರುವ ಘಾಟ್ ರಸ್ತೆಗಳ ಉನ್ನತ ಸ್ಥಳಗಳಲ್ಲಿ ಇಂಥ ದ್ರಂಗಗಳು ಇದ್ದವು ಈ ದ್ರಂಗ ಶಬ್ದ ಕನ್ನಡಕ್ಕೆ ಬರುವಾಗ ಡಂಗ ಎಂದು ರೂಪಾಂತರ ಹೊಂದಿದ್ದಾಗಿದೆ.

ಹಿಂದೆ ಉದ್ಧರಿಸಿರುವ ಪಂಪನ ಪದ್ಯಗಳಲ್ಲಿ ಕಾಣುವ 'ಡಂಗ'ಕ್ಕೆ 'ದ್ರಂಗ' ದ ಈ ಅರ್ಥ ಚೆನ್ನಾಗಿ ಒಪ್ಪುತ್ತದೆ. ದುರ್ಯೋಧನನಿಗೆ ಪಾಂಡವರವೊಡನೆ ಸ್ನೇಹವುಂಟಾದರೆ ಅವರ ಪರಾಕ್ರಮದಿಂದ ಅವನ ರಾಜ್ಯವಿಸ್ತಾರವಾಗುತ್ತದೆ ಎಂಬರ್ಥ, 'ಬೆಟ್ಟಗಳಲ್ಲಿ ಡಂಗಗಳಿರುತ್ತದೆಯೆ?,' ಎಂಬ ಪ್ರಶ್ನೆಯಿಂದ ಸೂಚಿತವಾಗಿದೆ; ನೆರೆಹೊರೆಯ ಪರ್ವತ ರಾಜರ ಡಂಗಗಳಲ್ಲಿ ಕೌರವನಿಗೆ ಅಧೀನವಾಗಿ ಅವನನ್ನು ಕರಗ್ರಾಹಿಯನ್ನಾಗಿ ಮಾಡಿ ರಾಜ ಎನ್ನಿಸುತ್ತಿವೆ. ಹೀಗೆಯೇ ಗುಣಾರ್ಣವನ ಪರಾಕ್ರಮಕ್ಕೆ ಸೋತು ಡಂಗಗಳು ಬಂದವು ಎಂಬಲ್ಲಿಯೂ ಪಾಂಡವರ ರಾಜ್ಯ ವಿಶಾಲವಾಗುವ ಅಂಶ ಹೇಳಿದೆ, 'ಡಂಗಹಾಕು' ಎಂಬ ಜನ ಪ್ರಚುರವಾಗಿರುವ ಮಾತಿನಲ್ಲಿ ಇದೇ ಅರ್ಥ ಸಂಗತವಾಗಿದೆ. 'ಡಂಗ'ದಲ್ಲಿರುವವರು ಹೇಗೆ ಹಗಲಿರುಳು ಶತ್ರುಗಳು ಒಳನುಗ್ಗದಂತೆ ವ್ಯಾಪಾರಿಗಳು ಸುಂಕಕೊಡದೆ ತಪ್ಪಿಸಿಕೊಳ್ಳದಂತೆ ಕಾಯುತ್ತಾರೆ ಹಾಗೆಯೇ ವಸೂಲಿಗಾರ ತನಗೆ ಬರಬೇಕಾದದ್ದು ಬರುವವರೆಗೆ ಕುಳಿತುಕೊಳ್ಳುವುದು ಅವಶ್ಯವೆನಿಸಿದೆ. ಆ ಶಬ್ದಕ್ಕಿದ್ದ ಸುಂಕದಕಟ್ಟೆ ಎಂಬ ಮೂಲಾರ್ಥ ಕಾಲಕ್ರಮದಲ್ಲಿ ಮಾಯವಾಗಿ ಕಾದುಕುಳಿತಿರುವುದು ಎಂಬಷ್ಟು ಮಾತ್ರ ಇಂದಿನ 'ಡಂಗಹಾಕು' ಎಂಬ ಪಡೆ ಮಾತಿನಲ್ಲಿ ಇನ್ನೂ ಜನಮನ್ನಣೆ ಮಾತಾಗಿ ಉಳಿದುಕೊಂಡು ನಿಂತಿದೆ.

### ರಪಣ>ರವಣ ಎಂಬುದರ ಅರ್ಥ ಮತ್ತು ನಿಷ್ಪತ್ತಿ

೧೯೫೭ರಲ್ಲಿ ಮೂಡಿಬಂದ ಅಭಿನಂದನೆ ಕೃತಿಯಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ಲೇಖನ ಮುಂದೆ ಪೀಠಿಕೆಗಳು ಲೇಖನಗಳು ಕೃತಿಯ ೬೦ನೇ ಭಾಗವಾಗಿ ವಿಸ್ತೃತಗೊಂಡಿದೆ.

ಈ ವಿಚಾರವಾಗಿ ಅರ್ಥ ಮತ್ತು ನಿಷ್ಪತ್ತಿ ಕುರಿತು ಡಿ.ಎಲ್.ಎನ್. ಅವರು ವಿವಿಧ ಕವಿ ಪ್ರಯೋಗಗಳ ಸಂಗ್ರಹವನ್ನೂ ಬಹು ಪ್ರಧಾನವಾಗಿ ವಿವರಿಸಿದ್ದು ಕಂಡುಬಂದಿದ್ದು ಈ ಕುರಿತು ಪರಿಶೀಲಿಸಿ ಶಬ್ದಾರ್ಥ ವಿವೇಚನೆಯಲ್ಲಿ ಪದಪ್ರಯೋಗಗಳ ಸಂಗ್ರಹ ಬಹು ಪ್ರಧಾನವಾದದ್ದಾಗಿದ್ದು ಪ್ರಾಚೀನ ಮತ್ತು ಅರ್ವಾಚಿನ ರೂಪಗಳಿಗೂ ಅರ್ಥವ್ಯತ್ಯಾಸಗಳಿಗೂ ವಿವಿಧ ಪ್ರಯೋಗಗಳೇ ನಮಗೆ ಕೈದೀವಿಗಳೆನಿಸಿವೆ. ಪ್ರಸ್ತುತ ಡಿ.ಎಲ್.ಎನ್. ರವರು ಪಂಪ, ಕುಮಾರವ್ಯಾಸರ ಪ್ರಯೋಗಗಳನ್ನು ಉಲ್ಲೇಖಿಸಿ ರಪಣ>ರವಣ ಪದಗಳಿಗೆ ಸಮರ್ಥ, ಸಂಪತ್ತು ಎಂಬರ್ಥವಿದೆಯೆಂದು ತಿಳಿಸಿದ್ದಾರೆ. ಪಂಪಭಾರತದಲ್ಲಿ ರಪಣ ಪದಪ್ರಯೋಗ ಮೊದಲಿಗೆ ಕಂಡುಬಂದಿರುವುದನ್ನು ತೋರಿಸಿಕೊಟ್ಟಿದ್ದಾರೆ. ಅದರಲ್ಲಿ ಪಂಪಭಾರತದ ದ್ಯೂತ ಪ್ರಸಂಗವೊಂದರಲ್ಲಿಯೇ ಅದರ ಹಲವು ಪ್ರಯೋಗಗಳು ಸೇರುತ್ತವೆ ಎಂದು ಕಾವ್ಯವನ್ನು ಉದಾಹರಿಸಿದ್ದು ಕಂಡುಬಂದಿದೆ.

ಕಿಟೆಲ್ಲರು ರಪಣ ಪದವು ಒಬ್ಬ ವ್ಯಕ್ತಿಗೆ ಸೇರಿದ ಎಲ್ಲ ಬಗೆಯ ಬೆಲೆಬಾಳುವ ವಸ್ತುಗಳ ಸಮೂಹ, ಸಾರಧನ, ವಿತ್ತ ಎಂಬುದು ಮುಖ್ಯ ಅರ್ಥವಾಗಿರುವುದನ್ನು

ತೋರಿಸಿಕೊಟ್ಟಿದ್ದಾರೆ. ಸಾರ, ಸಾಮರ್ಥ್ಯ, ತಿರುಳು ಆ ಪದದ ಗೌರವ ಎಂಬುದಾಗಿ ತಿಳಿಸಿದ್ದಾರೆ. ಇದರ ಜಾಡುಹಿಡಿದ ಡಿ.ಎಲ್.ಎನ್. ಅವರು ರೂಪನಿಷ್ಪತ್ತಿ ವಿಚಾರವಾಗಿ 'ರೈ+ಪನಾ>ರಯ್ದನಾ>ರಪನಾ>ರವನಾ ಸಂಸ್ಕೃತ ಕನ್ನಡ ಶಬ್ದಗಳೆರಡರ ಹೊಂದಾಣಿಕೆಯ ರೂಪವು ರಪನಾ ದ 'ಯ' ಮಳ ಶಬ್ದವೆಂದು ಹೇಳಿದ್ದಾರೆ. ವೈದಿಕ ಸಂಸ್ಕೃತದಲ್ಲಿ ಪ್ರಚುರವಾಗಿದ್ದು 'ರೈ' ಶಬ್ದ ಅರ್ವಾಚೀನ ಸಂಸ್ಕೃತದ ಕಾಲದಲ್ಲಿ ತನ್ನ ಅರ್ಥ ಸ್ಫುಟತೆಯನ್ನು ನೀಗಿ ಕೊಂಡಿದ್ದರಿಂದ ಅದರ ನೆರವಿಗೆ ಸಮನಾರ್ಥಕವಾದ ಪದ 'ಪಣ' ಶಬ್ದವು 'ರಪಣ' ಶಬ್ದೋತ್ಪತ್ತಿಗೆ ಕಾರಣವಾಗಿದೆ ಎಂದಿದ್ದಾರೆ. ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ಎಲ್ಲಿಯೂ ದೊರೆಯದ ಕನ್ನಡಕ್ಕೆ ವಿಶಿಷ್ಟವಾಗಿರುವ ಪದವಾಗಿದೆ ರಪಣ. ರಪಣ ಬಹುಶಃ ಪಂಪನ ಪೂರ್ವದಲ್ಲಿ ಕನ್ನಡಕ್ಕೆ ಪರಿಚಿತ ಪದವಾಗಿದ್ದೆನಿಸಿದೆ. ಆದರೆ ಒಂದು ಮಾತು ಆ ಪದವನ್ನು ಅವರೇ ಸೃಷ್ಟಿಸಿಕೊಂಡರು ಎಂದು ಹೇಳಲಾಗುವುದಿಲ್ಲ ಜೈನ ಸಂಸ್ಕೃತದಿಂದಲೂ ಎರವಲಾಗಿ ಬಂದಂತಹ ಪದ ಇದಾಗಿರಬಹುದೆಂದು ನಿಲುವು ತಾಳಿದ್ದಾರೆ.'[೧೪]

ಒಟ್ಟಾರೆಯಾಗಿ ರಪಣಾ ಪದದ ಇಂದಿನ ಬಳಕೆ ಕನ್ನಡದ ಸೊತ್ತಿನಫಲ, ಆಸ್ತಿಫಲ ಎಂಬುದಾಗಿ ಊಹಿಸಿ ಬಳಸಬಹುದಾಗಿದೆ.

**ಮದನಾವತಾರ**

ವಿಶೇಷವಾದ ಶಬ್ದಗಳ ರೂಪ, ನಿರ್ಧಾರವನ್ನು ಮಾಡುವುದು ತುಂಬಾ ಕಷ್ಟದ ಕೆಲಸ ಅದರಲ್ಲಿಯೂ ಆ ಪದದ ಅರ್ಥವನ್ನು ಇತ್ಯಾರ್ಥ ಮಾಡುವುದಂತೂ ತುಂಬಾ ಕ್ಲಿಷ್ಟಕರವಾದ ಕಾರ್ಯವೇ ಸರಿ ಇಂತಹ ಪ್ರಯತ್ನಗೈದ ಡಿ.ಎಲ್.ಎನ್. ರವರು ಕನ್ನಡ ನಿಘಂಟು ಸಾರಸ್ವತ ಲೋಕದ ಬ್ರಹ್ಮನೇ ಸರಿ ಎನಿಸಿದ್ದಾರೆ.

ಮದನಾವತಾರ ಎಂಬ ಪದದ ವಿಚಾರ ಕುರಿತು ಮೊದಲಿಗೆ ಪ್ರಬುದ್ಧ ಕರ್ನಾಟಕ ಸಂಚಿಕೆ ೩೮ರಲ್ಲಿ ಪ್ರಸ್ತಾಪಗೊಂಡಿತ್ತು. ತದನಂತರ ಡಿ.ಎಲ್.ಎನ್. ಅವರು ತಾವು ಸಂಕಲಿಸಿದ ಪೀಠಿಕೆಗಳು ಲೇಖನಗಳು ಸಂಶೋಧನಾ ಲೇಖನಗಳ ಗುಚ್ಛದಲ್ಲಿ ಕೃತಿಯ ೬೧ನೇ ವಿಚಾರವಾಗಿ ಪ್ರಸ್ತಾಪಿಸಿದ್ದು ಕಂಡುಬಂದಿದೆ.

ಮದನಾವತಾರ ಈ ಪದವು ಮೊದಲ ಬಾರಿಗೆ ರನ್ನನ ಅಜಿತನಾಥ ಪುರಾಣದಲ್ಲಿ ಉಲ್ಲೇಖಗೊಂಡಿದ್ದು ಕಂಡುಬಂದಿದೆ.

'ಮದನನವತಾರಮಾ ಕನ
ಕದಂಡ ಚಾಮರಮನುನ್ಮ ದೇಭಮನ್ನೃತ್ತುಂ
ಗದ ಭಕ್ತಾವೆಯಂ ಪಡೆ
ದುದಾತ್ತ ಕವಿತಿಲಕ ನೆನಿಸಿದಂ ಕವಿರನ್ನಂ'[೧೫]

ಈ ಮೇಲೆ ಕಾಣಿಸಿದ ರನ್ನನ ಪ್ರಯೋಗದ ನಂತರ ಅಂದರೆ ಕ್ರಿ.ಶ. ೯೬೩ರಲ್ಲಿನ ಗಂಗರಾಜನಾಗಿದ್ದ ನೊಳಂಕುಳಾಂತಕ ಮಾರಸಿಂಹನ ಕೂಡಲೂರು ತಾಮ್ರಶಾಸನದಲ್ಲಿ ಈ ಶಬ್ದದ ಪ್ರಯೋಗವು ಕಂಡುಬಂದಿದೆ.

'ಸಸ್ನೇಹಾತ್ಸಕಲಮಹೀಶಕೃಷ್ಣ ಭಣಪಾದ್

ಭೂನಾಥಃ ಖಲು ಮದನಾವತಾರ ಸಂಜ್ಞಂ

ಛತ್ರಂ ತನ್ನರಪತಿಭಿರ್ನ ಕೈಶ್ಚಿದಾಪ್ತಂ

ಸಂಪ್ರಾಪ್ತೋ ಮರುಳ ಇತಿ ಪ್ರಸಿದ್ಧನಾಮಾ'[೧೬]

ಇಷ್ಟೆ ಹೊರತಾಗಿ ಈ ಕುರಿತು ಯಾವುದೇ ಕಾವ್ಯಗಳಲ್ಲಾಗಲಿ ನಿಘಂಟುಗಳಲ್ಲಾಗಲಿ ಈ ವಿಚಾರದ ಪ್ರಸ್ತಾಪ ಕಂಡುಬಂದಿಲ್ಲದ್ದಾಗಿದೆ.

ಈ ಉಲ್ಲೇಖಗಳಲ್ಲಿನ ವಿಚಾರವಾಗಿ ಅರ್ಥದ ಸಂದರ್ಭವನ್ನು ಗಮನಿಸಿದಾಗ ಇದೊಂದು 'ಛತ್ರಿಯ' ಹೆಸರೆಂದು ತಿಳಿಯಬಹುದಾಗಿದೆ. ಈ ಕುರಿತು ಡಿ.ಎಲ್.ಎನ್. ಅವರು ಅರ್ಥ ನಿರ್ಣಯ ನೀಡಿ ಕರ್ನಾಟಕದ ದೊರೆಗಳು ತಮ್ಮ ಆಸ್ಥಾನದ ಕವಿಗಳಿಗೆ ಗೌರವ ಸೂಚಕವಾಗಿ ಅದನ್ನು ಕೊಡುತ್ತಿದ್ದರೆಂದು ಹೇಳಿದ್ದಾರೆ. ಈ ವಿಚಾರದ ಇನ್ನಷ್ಟು ಪ್ರಸ್ತಾಪ ನಡೆಸಿ ಉಲ್ಲೇಖಿತ ಈ ಛತ್ರಿಯ ಸ್ವರೂಪವನ್ನು ತಿಳಿಯಲು ಮುಮ್ಮಡಿ ಸೋಮೇಶ್ವರನ ಮಾನಸೋಲ್ಲಾಸದ ಛತ್ರಭೋಗವೆಂಬ ಅಧ್ಯಾಯದಲ್ಲಿ ಕೆಲವು ಕೊಡೆಗಳ ಸ್ವರೂಪವನ್ನು ವಿವರಿಸುವುದರ ಬಗೆಗೂ ಗಮನ ಸೆಳೆದಿದ್ದಾರೆ. ನಾನಾ ವರ್ಣದ ಬಗೆ ಬಗೆಯಾದ ಕೊಡೆಗಳ ಸ್ವರೂಪಗಳಲ್ಲಿ ಮದನಾವತಾರವೂ ಒಂದಾಗಿರಬಹುದೆಂಬ ನಿಲುವನ್ನು ವ್ಯಕ್ತಪಡಿಸಿದ್ದರಿಂದ, ಇದೊಂದು ಛತ್ರಿಯ ಹೆಸರೆಂದು ಖಚಿತವಾಗಿ ಹೇಳಬಹುದಾಗಿದೆ.

**ಕಾರೋಹಣದ ಪಳಿ**

ಪ್ರಬುದ್ಧ ಕರ್ಣಾಟಕದ ೪೨-೩ನೇ ಸಂಚಿಕೆಯಲ್ಲಿ ಮೊದಲ ಬಾರಿಗೆ ಪ್ರಸ್ತಾಪಗೊಂಡು ನಂತರ ೧೯೭೧ರ ವೇಳೆಗೆ ಸಂಕಲಿತಗೊಂಡ ಡಿ.ಎಲ್.ಎನ್. ಅವರ ಪೀಠಿಕೆಗಳು ಲೇಖನಗಳು ಕೃತಿಯ ೬೨ನೇ ಭಾಗವಾಗಿ ಈ ವಿಷಯದ ಪ್ರಸ್ತಾಪ ವಿಶದಗೊಂಡಿದ್ದನ್ನು ಕಾಣಬಹುದಾಗಿದೆ.

'ಕಾರೋಹಣ ಪುಟಿ' ಎಂದರೆ 'ಕಾರೋಹಣ' ಎಂಬ ಊರಿನಲ್ಲಿ ತಯಾರಾದ ವಸ್ತ್ರವೆಂದು ಡಿ.ಎಲ್.ಎನ್. ವಿವೇಚಿಸಿದ್ದಾರೆ. ಇದಕ್ಕೆ ಪೂರಕವೆಂಬಂತೆ ಪಂಪನ ಶಾಂತಿನಾಥನ ಕಾವ್ಯಗಳಲ್ಲಿ ಉಲ್ಲೇಖಗೊಂಡ ಈ ಪದಗಳ ಜಾಡನ್ನು ಹಿಡಿದು ಅವರ ಕಾವ್ಯ ಭಾಗಗಳಲ್ಲಿ ಪ್ರಸ್ತಾಪಗೊಂಡ ವಿಚಾರವನ್ನು ಈ ಲೇಖನದುದ್ದಕ್ಕೂ ವಿವೇಚಿಸಿದ್ದು ಕಂಡುಬಂದಿದೆ.

**ಬರಡಗೆ**

ಪ್ರಬುದ್ಧ ಕರ್ಣಾಟಕದ ೧೨-೧ನೇ ಸಂಚಿಕೆಯಲ್ಲಿ ಮೊದಲ ಬಾರಿಗೆ ಪ್ರಸ್ತಾಪಗೊಂಡ ಈ ವಿಷಯವು ನಂತರದಲ್ಲಿ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೬೩ನೇ ಭಾಗವಾಗಿ ಪ್ರಸ್ತಾಪಗೊಂಡದ್ದಾಗಿದೆ.

ಈ ವಿಚಾರವಾಗಿ ಡಿ.ಎಲ್.ಎನ್. ಅವರು ನೇಮಿಚಂದ್ರನ ಲೀಲಾವತಿಪ್ರಬಂಧಂ ೧೦೧ನೇ ಪದ್ಯ, ಜನ್ನನ ಅನಂತನಾಥ ಪುರಾಣದ ೩೦ನೇ ಪದ್ಯಗಳನ್ನು ಉದಾಹರಿಸಿ ಇಲ್ಲಿ ಮೂಡಿ ಬಂದಿರುವ ಬರದೆಗೆ-ಬರಗಡೆ ಪ್ರಯೋಗಗಳನ್ನು ಪ್ರಸ್ತಾಪಿಸಿದ್ದಾರೆ. ನಂತರದಲ್ಲಿ ಕೇಶಿರಾಜನು ಪ್ರಸ್ತಾಪಿಸಿದ ತಟೆ ವಿಚಾರವನ್ನು ಪ್ರಸ್ತಾಪಿಸಿ ಮೂಲ ಅಚ್ಚಗನ್ನಡದ ಪದ 'ತಪೆ'ಯಾಗಿದ್ದು ಇದನ್ನು ತಮಿಳಿನಲ್ಲಿ 'ತಟ್,' 'ತಟೆ' ಮಲೆಯಾಳದ 'ತಬ' ಕನ್ನಡದ 'ದಡಿ,' 'ದರಿ' ಮೊದಲಾದ ಇತರೆ ಕೆಲವು ದ್ರಾವಿಡ ಭಾಷೆಗಳ ಜ್ಞಾತಿ ಶಬ್ದಗಳಿಂದ ಪೋಷಕವಾದ ಪದವಾಗಿ ಇದು 'ಬರಡಗೆ' ರೂಪ ಪಡೆದಿರಬಹುದೆಂದು ವಿಷಯ ನಿರೂಪಿಸಿದ್ದಾರೆ.

ಕಿಟೆಲ್ಲರು ಕನ್ನಡ ಕೋಶದಲ್ಲಿ ಉಲ್ಲೇಖಿಸಿದ ತಬ, ತಳಿ, ವಿಚಾರವನ್ನು ಪ್ರಸ್ತಾಪಿಸಿ 'ತಳಿ' ಹಳಗನ್ನಡ 'ತಟೆ' ರೂಪಾಂತರವೆಂದೂ ಉಲ್ಲೇಖಿಸಿ ಇದರ ಅರ್ಥವಾಗಿ ತಳಿಗೊಂಬೆ, ಪದವನ್ನು ವಿಚಾರಕ್ಕೆ ತಂದು ಇದರ ಅರ್ಥವಾಗಿ ಮರದ ದಿಮ್ಮಿಗಳಿಂದ ಕಟ್ಟಿದ ಕೋಟೆ ಎಂದು ವಿಷಾದಿಸಿದ್ದಾರೆ.

**ಪಟಿಂಗಾಸು**

ಪ್ರಬುದ್ಧ ಕರ್ಣಾಟಕ ೪೨ನೇ ಸಂಚಿಕೆಯ ೨ನೇ ಭಾಗದಲ್ಲಿ ಮೊದಲ ಬಾರಿಗೆ ವಿಶದಗೊಂಡ ಈ ವಿಷಯವು ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯಲ್ಲಿ ೬೪ನೇ ಭಾಗವಾಗಿ ಮೂಡಿಬಂದುದಾಗಿದೆ.

ಡಿ.ಎಲ್.ಎನ್. ಅವರು ಪಂಪಭಾರತ (೩-೮೧)ರನ್ನನ ಅಜಿತ ಪುರಾಣ (೬-೭೦) ನೇಮಿಚಂದ್ರನ ಲೀಲಾವತಿ ಪ್ರಬಂಧಂ (೪-೮೨)ದ ಪದ್ಯಗಳಲ್ಲಿ ಉಲ್ಲೇಖಗೊಂಡ ಪದಂಗಾಸಿದ 'ಪೊನ್ನಪುಂಜ,' 'ಪವಿಂಗಾಸಿನ ಪೊನ್ನಗಂಟೆ,' 'ಪಟಿಂಗಾಸಿನ ಪೊಂಗಳ್' ವಿಚಾರಗಳಲ್ಲಿನ ಪಟಿಂಗಾಸು ವಿವರವನ್ನು ಆಳವಾದ ಚರ್ಚೆಯೊಂದಿಗೆ ಈ ಪದಗಳಲ್ಲಿನ ಪಾಠಭೇಧ ಲೋಪಗಳನ್ನು ಗುರುತಿಸಿ 'ರನ್ನನ', 'ಪಟಿಂಗಾಸಿನ ಪೊನ್ನಗಂಟೆ' ವಿಚಾರವನ್ನು ಒಪ್ಪಿದ್ದಾರೆ. ಪವಿಂಗಾಸು ಎಂದರೇ ನಾಣ್ಯಕ್ಕೆ ಉಪಯೋಗಿಸುತ್ತಿದ್ದ ಚಿನ್ನ ಎಂಬರ್ಥವನ್ನು ವಿವರಿಸಿ ಈ ಪದಕ್ಕೆ ಶಬ್ದಾರ್ಥವನ್ನು ನೀಡಿದ್ದು ಡಿ.ಎಲ್.ಎನ್. ಅವರ ವಿದ್ವತ್ತಿನ ಪ್ರತೀಕವೆನಿಸಿದೆ.

**ಈಜುಲ್ ಎಂದರೇನು?**

ಪ್ರಬುದ್ಧ ಕರ್ಣಾಟಕದ ೪೪ನೇ ಸಂಚಿಕೆಯ ೩ನೇ ಭಾಗದಲ್ಲಿ ಮೊದಲ ಬಾರಿಗೆ ಪ್ರಸ್ತಾಪಗೊಂಡ ಈ ವಿಷಯ ಮುಂದೆ ಡಿ.ಎಲ್.ಎನ್. ಸಂಕಲಿತ ಪೀಠಿಕೆಗಳು ಲೇಖನಗಳು ಕೃತಿಯ ೬೭ನೇ ಭಾಗದಲ್ಲಿ ಸಂಕಲಿತಗೊಂಡುದ್ದಾಗಿದೆ.

ಪದ ಸಂಶೋಧನಾ ವಿಚಾರದಲ್ಲಿ ಆಳವಾದ ಜ್ಞಾನ ಹೊಂದಿದ್ದ ಡಿ.ಎಲ್.ಎನ್. ಅವರು ಯಾವುದೇ ಶಬ್ದಾರ್ಥವನ್ನಾಗಲಿ ಅದರಾಳ ಅಂತರಾಳವನ್ನು ಪರಿಕ್ಷೀಸಿಯೇ ನಿರ್ಣಯ ತೆಗೆದುಕೊಳ್ಳುತ್ತಿದ್ದರೆಂದು ಅವರ ಅಧ್ಯಯನ ರೂಪಗಳಿಂದ ತಿಳಿದು ಬಂದಿದೆ. ಇದಕ್ಕೆ ಹೊರತಾಗಿಲ್ಲದಂತೆ ಮೂಡಿಬಂದ ಈ ಅಂಕಿತ ಶಬ್ದದ ವಿಚಾರವು ಒಂದು.

ಈ ವಿಚಾರ ಕುರಿತು ಡಿ.ಎಲ್.ಎನ್. ಅವರು ತಮ್ಮ ವಿಸ್ತಾರವಾದ ಲೇಖನದಲ್ಲಿ ಪೊನ್ನನ ಶಾಂತಿಪುರಾಣದ ಪದ್ಯ (೧೦೭) ಅರ್ಥ ನೇಮಿಪುರಾಣದ ಪದ್ಯ (೯೪) ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದ ಪದ್ಯ (೧೩೪) ಪಾಂಚಾಳಗಂಗನ ಕುಮಾರರಾಮನ ಸಾಂಗತ್ಯದ ಪದ್ಯಗಳಲ್ಲಿ ಹಾಗೂ ತಮಿಳು ಭಾಷೆಯಲ್ಲಿನ ಈರಿ–ತ್ತತ ಈರಲ್ ಶಬ್ದ ವಿಚಾರಗಳಿತ್ಯಾದಿಯಾಗಿ ಚರ್ಚಿಸುತ್ತಾ ಈಜಿಲ್ ಎಂಬುದರ ನಿಷ್ಪತ್ತಿ ಕುರಿತು ಹೇಳುವಾಗ ಈಜು>ಜೆ+ಇಲ್=ಈಜೆಲ್ ಎಂಬುದಾಗಿ 'ಈಜು' ಎಂದರೆ ಹೆರಿಗೆ ಮಲೆಹಾಕುವುದು 'ಇಲ್' ಎಂದರೆ ಮನೆ, ಈಜಿಲ್ ಎಂದರೆ 'ಹೆರಿಗೆ ಮನೆ' ಎಂಬರ್ಥವನ್ನು ಡಿ.ಎಲ್.ಎನ್. ಅವರು ವಿಧವಾಗಿ ನಿರೂಪಿಸಿದ್ದು ಕಂಡುಬಂದಿದೆ.

**'ಗುಯ್ಯಲ್' ಇದರ ಅರ್ಥ ಮತ್ತು ನಿಷ್ಪತ್ತಿ**

ಪ್ರಬುದ್ಧ ಕರ್ಣಾಟಕದ ೪೫ನೇ ಸಂಚಿಕೆಯ ೪ನೇ ಭಾಗದಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ವಿಚಾರ ಮುಂದೆ ೧೯೭೧ರ ಹೊತ್ತಿಗೆ ಬೆಳಕಿಗೆ ಬಂದ ಡಿ.ಎಲ್.ಎನ್. ಅವರ ಪೀಠಿಕೆಗಳು ಲೇಖನಗಳು ಕೃತಿಯ ೬೫ನೇ ಭಾಗದಲ್ಲಿ ಬಿತ್ತರಗೊಂಡದ್ದಾಗಿದೆ.

ಡಿ.ಎಲ್.ಎನ್. ಅವರು 'ನಾಗವರ್ಮನ ಕಾವ್ಯವಲೋಕನದ' ೨೮೯ನೇ ಪದ್ಯದಲ್ಲಿನ ಗುಯ್ಯಲ್ಗೆ ಪದವನ್ನು ಪದ್ಯಸಹಿತ ಉಲ್ಲೇಖಿಸಿ ಈ ಪದ್ಯದಲ್ಲಿ ಮೂಡಿಬಂದ ಈ ಪದದ ಅರ್ಥವಾಗಿ ಇದೊಂದು 'ನೀರಿನ ಆಸರೆ' ಎಂದು ವಿಶದಪಡಿಸಿದ್ದಾರೆ.

ನಂತರದಲ್ಲಿ ಚಿತ್ರದುರ್ಗದ ಮೊಳಕಾಲ್ಮೂರಿನ ೪೦ನೇ ಶಾಸನ (ಕ್ರಿ.ಶ. ೯೮೮)

೧. ಎಪ್ಪ=ತ್ತಜಿ ಬಳಿಯ ಎಡೆಯೂರು 'ಗುಯ್ಯಲೊಂದು' ಆಗುಯ್ಯ ತನ್ನ ಪ್ರತಿಷ್ಠೆ ಮಾಡಿದಳುಂಕೇಶ್ವರ ದೇವರ್ಗಂನಂತ ಊರಿನ ಇನ್ನೊಂದು ಶಾಸನ (ಕ್ರಿ.ಶ.೧೧೦೦)

೨. ಬಡಗ ಹುಣಿಸಗಯ್ಯಲು, ಕಡವೆಯ ಗುಯ್ಯಲು

೩. ರಾಯಚೂರು ಜಿಲ್ಲೆಯ (ಇಂದಿನ ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ಮುನಿರಾಬಾದಿನ ೧೩ನೇಯ ಶಾಸನ ಕ್ರಿ.ಶ. ೧೦೮೮)

‘ಊಲಿಂ ಮಾಡ ಗುಯ್ಯುತ ತೋಟಂ...

.........................................................

............... ಕಾಲು ತೆಂಕಲುದ್ದಿಯ ಕಾಲು”

೪. ತುಮಕೂರು ಜಿಲ್ಲೆಯ ಶಿರ ತಾಲೂಕಿನ ೩೨ನೇ ಶಾಸನ (ಕ್ರಿ.ಶ. ೧೨೬೮)

ತಂಮಡಿಯ ಹಳ್ಳಿಯ ಎರೆಯ ಗುಯ್ಯಂ ತನ್ನ ಎರಡು ಭಾಗವು

೫. ಜಟ್ಟ ಕವಿಯ ‘ರಟ್ಟುಮತ’ದಲ್ಲಿರುವ ಪದ್ಯ (ಸು. ೧೩೦೦)

‘ಗುಯ್ಯಲನೆಮ್ಮಿ ತೋಡುತಿರೆ ನೀರನುಗುಜ್ತಿರೆ ಮೀಲೆಕಾಲಿಮಂ

...................................................................................

...................................................................................

......................................... ಮಜೆ ಸತ್ಯಮೆಂಬುದಂ’[೧೬]

ಈತರನಾಗಿ ಮೇಲೆ ಕಾಣಿಸಿರುವ ಉದಾಹರಣೆಗಳೊಂದಿಗೆ ಡಿ.ಎಲ್.ಎನ್. ‘ಗುಯ್ಯಲ್’ ಶಬ್ದದ ಸಾಮಾನ್ಯ ಅರ್ಥವನ್ನು ಕಾಣಲು ಅಧ್ಯಯನದ ವಿಸ್ತೃತತೆಯನ್ನು ಬಳೆಸಿದ್ದು ಕಂಡುಬಂದಿದೆ. ಈ ಎಲ್ಲಾ ಮೂಲಗಳಿಂದ ತಿಳಿದುಬರುವ ಅಂಶವೆಂದರೆ ಈ ಪದ ಬಳಕೆಯಾದ ಪ್ರದೇಶಗಳಲ್ಲಿ ಕರ್ನಾಟಕ, ಆಂಧ್ರ ಪ್ರದೇಶದ ಗಡಿಭಾಗಗಳು ಪ್ರಮುಖವಾಗಿದ್ದು ತೆಲುಗಿನ ಸಾಮಾನ್ಯ ಪ್ರಭಾವ ಈ ಪ್ರದೇಶಗಳಿಗೆ ಇದೆ. ಆದ್ದರಿಂದ ತೆಲುಗಿನ ಗುಯ್ಯ<ಕ್ಕೆ ಕ್ರಮವಾಗಿ ಕನ್ನಡದಲ್ಲಿ ತೆಗ್ಗು, ನೀರನ್ನು ಹರಿಸುವ ಜಾಡು, ತೊಟದ ನೀರ ತೊರೆ ಎಂದು ಅರ್ಥೈಸಬಹುದಾಗಿದ್ದು, ಮುಂದಿ ಆಲ್ ಪದ ಕನ್ನಡದ್ದೆ ಆಗಿದ್ದು ಭಾವಾರ್ಥದಲ್ಲಿ ಕ್ರಿಯಾರ್ಥಧಾತುಗಳಿಗೆ ಸಾಧಾರಣವಾಗಿ ಸೇರುವ ಈ ಪದ ಸಾಮಾನ್ಯವಾಗಿ ‘ಗುಯ್ಯ’ಗೆ ಸೇರಿ ‘ಗುಯ್ಯಲ್’ ಎಂದಾಗಿದೆ. ಎಂದು ಡಿ.ಎಲ್.ಎನ್. ವಿಸ್ತೃತ ಅಧ್ಯಯನದ ಮೂಲಕ ಅರ್ಥೈಸಿದ್ದು ಕಂಡುಬಂದಿದೆ.

ಒಟ್ಟಾರೆಯಾಗಿ ‘ಗುಯ್ಯಲ್’ ಎಂಬ ಪದ ತೆಲುಗಿನ ಕಡೆಗೆ ನಮ್ಮ ಗಮನ ಸೆಳೆಯುವಂತೆ ಮಾಡಿದ್ದಾಗಿದೆ. ಇದು ತೆಲುಗು-ಕನ್ನಡ ಗಡಿನಾಡ ಶಬ್ದವೆಂದೂ ಕನ್ನಡಕ್ಕೆ ತೆಲುಗಿನಿಂದ ಎರವಲಾಗಿ ಬಂದದ್ದಾಗಿದೆ. ‘ನಿರೋರಸುವ ಗುಣಿ’ ಇದರ ಒಟ್ಟಾರೆ ಅರ್ಥವೆಂದು ಒಪ್ಪತಕ್ಕದ್ದಾಗಿದೆ.

## ‘ಮೇಕು’ ಇದರ ಅರ್ಥ ನಿಷ್ಪತ್ತಿ ವಿಚಾರ

ಮೊದಲ ಬಾರಿಗೆ ಪ್ರಬುದ್ಧ ಕರ್ಣಾಟಕದ ೪೫ನೇ ಸಂಚಿಕೆಯ ೧ನೇ ಭಾಗದಲ್ಲಿ ಮೂಡಿಬಂದ ವಿಚಾರ ನಂತರದಲ್ಲಿ ಡಿ.ಎಲ್.ಎನ್. ಅವರು ಸಂಕಲಿಸಿದ ಪೀಠಿಕೆಗಳು-ಲೇಖನಗಳು ಕೃತಿಯ ೬೬ನೇ ಭಾಗವಾಗಿ ಮೂಡಿಬಂದುದಾಗಿದೆ.

ಶಾಂತಿನಾಥನ ಸುಕುಮಾರ ಚರಿತೆ (ಕ್ರಿ.ಶ. ೧೦೬೮)ಯ ೩-೨೯, ಅಧ್ಯಾಯದಲ್ಲಿ ಉಲ್ಲೇಖಗೊಂಡ ‘ಮೇಕದೆ’ ಎಂಬ ಶಬ್ದವು ಮೇಕು ಧಾತುವಿನ ಒಂದು ನಿರೂಪವಾಗಿ ಮೂಡಿಬಂದುದಾಗಿದೆ. ಮುಂದೆ ನೇಮಿಚಂದ್ರ, ದುರ್ಗಸಿಂಹನ ಕಾವ್ಯಗಳಲ್ಲಿ ಮೇಕು ಪದದ ಅರ್ಥ ಉಲ್ಲೇಖಗೊಂಡದ್ದನ್ನು ಡಿ.ಎಲ್.ಎನ್. ಉಲ್ಲೇಖಿಸಿದ್ದಾರೆ.

ದ್ರಾವಿಡ ಭಾಷೆಗಳಾದ ತಮಿಳು, ಮಲಯಾಳಿ, ತುಳು ಕೋಶಗಳಲ್ಲಿ ಎಲ್ಲಿಯೂ ಈ ಪದದ ಅರ್ಥ ಕಂಡುಬರುವುದಿಲ್ಲವಾದರು ತೆಲುಗಿನಲ್ಲಾದರೆ ‘ಮೇಂಗು’ ಎಂಬ ಶಬ್ದದೊರೆಯುತ್ತದೆ. ಇದರ ಇತರ ರೂಪಗಳಾದ ಮೇಂಗು, ಮೇವು ಎಂಬ ಅರ್ಥಗಳು ಮೂಡಿ ಬಂದವಾಗಿವೆ. ಇದರ ಅರ್ಥವಾಗಿ ಬಳಿ ಲೇಪಿಸು ಎಂಬ ಅರ್ಥ ಹೊಂದಿಕೊಳ್ಳು ವಂತದ್ದಾಗುತ್ತದೆ. ಇದಕ್ಕೆ ಪ್ರತಿಯಾಗಿ ಶಾಂತಿನಾಥನ ಪ್ರಯೋಗ ಹೊಂದಿಕೊಳ್ಳುವಂತದ್ದಾಗಿದೆ. ಮೆಕದೇ ಎಂದರೇ ‘ಲೇಪಿಸು,’ ‘ಬಳಿದುಕೊಳ್ಳು’ ಎಂದು ಕಾವ್ಯದಲ್ಲಿನ ಉಲ್ಲೇಖದಂತೆ ಪ್ರತಿಪಾದಿಸಬಹುದಾಗಿದೆ.

ಡಿ.ಎಲ್.ಎನ್. ಅವರ ವ್ಯಾಕರಣದ ಬಹುಜ್ಞತೆ ತೌಲನಿಕ ದೃಷ್ಟಿಯು ಮುಖ್ಯ ಗುಣವಾಗಿ ಅವರ ಬರಹಗಳು ಕಂಡುಬಂದವಾಗಿವೆ.

ಅರ್ಧಶತಮಾನದ ಕನ್ನಡ ಭಾಷೆಯ ಆಳ ಅಗಲವನ್ನು ವಿಸ್ತರಿಸಿ ಕನ್ನಡ ಅಧ್ಯಯನಕ್ಕೆ ನೆರವಾಗುವ ಆಚಾರ್ಯ ಗ್ರಂಥಗಳನ್ನು ತೂಕವುಳ್ಳ ವಿಚಾರಗಳನ್ನು ವಿವೇಚಿಸಿ ಕನ್ನಡ ಭಾಷಿಕ ಶೋಧಗಳಿಗೆ ಭದ್ರಬುನಾದಿ ಹಾಕಿದವರಾಗಿದ್ದಾರೆ. ಹೊಸ ವಾಗ್ವಾದಗಳನ್ನು ಹುಟ್ಟುಹಾಕಿದ ಅವರ ಬರಹಗಳು ಅಪಾರ ವಿದ್ವತ್ತಿನ ಸಾಕ್ಷೀಭೂತವೆನಿಸಿ, ಕನ್ನಡ ಭಾಷಿಕಶೋಧ ವಿಚಾರವನ್ನು ಪ್ರಸ್ತಾಪಿಸಿದ್ದು ಸಾಹಿತ್ಯದ ಉನ್ನತೀಕರಣವೇ ಸರಿ ಎನಿಸಿದೆ.

## ಕೊನೆಯ ಟಿಪ್ಪಣಿಗಳು

೧. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ–೧, ಪು. ೬೧೩

೨. ಡಿ.ಎಲ್.ನರಸಿಂಹಾಚಾರ್, ಪೀಠಿಕೆಗಳು ಲೇಖನಗಳು, ೨೦೦೫, ಪು. ೯೭೯

೩. ಅದೇ, ಪು.ಸಂ. ೯೨೫

೪. ಅದೇ, ಪು.ಸಂ. ೯೪೮

೫. ಅದೇ, ಪು.ಸಂ. ೯೪೯

೬. ಅದೇ, ಪು.ಸಂ. ೯೪೨

೭. ಅದೇ, ಪು.ಸಂ. ೪೪

೮. ಅದೇ, ಪು.ಸಂ. ೯೩೮

೯. ಡಿ.ಎಲ್.ನರಸಿಂಹಾಚಾರ, ಎಸ್.ವಿದ್ಯಾಶಂಕರ, ಪು. ೬೨೫

೧೦. ಹಳ್ಳಿಕೇರಿ ಎಫ್.ಟಿ., ೨೦೦೫, ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ, ಪು. ೩೩೫

೧೧. ಡಿ.ಎಲ್. ನರಸಿಂಹಾಚಾರ, ಪೀಠಿಕೆಗಳು ಲೇಖನಗಳು, ೨೦೦೫, ಪು. ೮೩೯

೧೨. ಅದೇ, ಪು.ಸಂ. ೮೭೫

೧೩. ಅದೇ, ಪು.ಸಂ. ೮೯೬

೧೪. ರವೀಂದ್ರ ಎಂ., ೨೦೧೫, ಕನ್ನಡ ವಿದ್ವತ್ ಪರಂಪರೆ ಮತ್ತು ಡಿ.ಎಲ್.ನರಸಿಂಹಾಚಾರ್ ಅಪ್ರಕಟಿತ ಪಿಎಚ್.ಡಿ. ನಿಬಂಧ, ಬೆಂಗಳೂರು ವಿಶ್ವವಿದ್ಯಾನಿಲಯ ಪು. ೨೧೮

೧೫. ಡಿ.ಎಲ್. ನರಸಿಂಹಾಚಾರ ಪೀಠಿಕೆಗಳು ಲೇಖನಗಳು, ೨೦೦೫, ಪು. ೮೮೭

೧೬. ಅದೇ, ಪು.ಸಂ. ೮೮೭

೧೭. ಅದೇ, ಪು.ಸಂ. ೯೦೧

## ಅಧ್ಯಾಯ - ಎಂಟು

# ಇತರೆ ಸಾಹಿತ್ಯ

### ೮.೧. ಮುನ್ನುಡಿಗಳು

ವಿದ್ವತ್ತಿನ ನಿಧಿ ಎಂದೇ ಪ್ರಖ್ಯಾತರಾದ ಡಿ.ಎಲ್.ಎನ್. ಹಳಗನ್ನಡ ಸಾಹಿತ್ಯದ ಪ್ರಮುಖ ವಿದ್ವಾಂಸರಲ್ಲೊಬ್ಬರಾಗಿದ್ದಾರೆ. ಹಳಗನ್ನಡ ಸಾಹಿತ್ಯ ಮತ್ತು ಅದನ್ನು ಕೇಂದ್ರೀಕರಿಸಿಕೊಂಡು ನಿರ್ವಚನಗೊಂಡು ಬಂದ ಗ್ರಂಥವಿಮರ್ಶೆ, ಸಂಪಾದನೆ ಕವಿಕಾಲ ಕಾವ್ಯ ವಿಚಾರ ನಿಘಂಟು ಇತ್ಯಾದಿ ವಿಚಾರಗಳ ಕ್ಷೇತ್ರದಲ್ಲಿ ಪ್ರಧಾನವುಳ್ಳ ವಿದ್ವಾಂಸರಾಗಿದ್ದವರು. ಪ್ರಸ್ತುತ ಈ ಅಧ್ಯಯನದಲ್ಲಿ ಬಹುಮುಖ್ಯವಾಗಿ ಡಿ.ಎಲ್.ಎನ್.ಅವರ ಚಿಂತನೆಯ ಮುಖ್ಯ ವಿಚಾರಗಳಲ್ಲೊಂದಾದ ಮುನ್ನುಡಿಗಳ ಕುರಿತು ಚರ್ಚಿಸಲಾಗಿದೆ.

ಡಿಎಲ್.ಎನ್. ತಮ್ಮ ಕಾಲಘಟ್ಟದ ಶಿಷ್ಯ ಮತ್ತು ಮಿತ್ರವರ್ಯರು ಬರೆದ ೧೦ ಕೃತಿಗಳಿಗೆ ಮುನ್ನುಡಿಗಳನ್ನು ಬರೆದಿರುವರು. ಈ ಕೃತಿಗಳ ಒಂದೊಂದು ಮುನ್ನುಡಿಯೂ ತನ್ನದೇ ಆದ ವೈಶಿಷ್ಟ್ಯಗಳಿಂದ ಕೂಡಿರುವುದು ವಿಶೇಷವೆನಿಸಿದೆ. ಈ ಮುನ್ನುಡಿಗಳು ಉತ್ತಮ ವಿಚಾರಗಳೊಂದಿಗೆ ವಿಸ್ತೃತಗೊಂಡವಾಗಿವೆ. ಇವರ ಮುನ್ನುಡಿಗಳು ಪ್ರಮುಖವಾಗಿ ಎರಡು ಪ್ರಧಾನ ಸಂಗತಿಗಳಿಂದ ಬಿತ್ತರಗೊಂಡುವಾದವುಗಳಾಗಿದ್ದು ಒಂದು ಕೃತಿಯನ್ನು ವಸ್ತುನಿಷ್ಠವಾಗಿ ಅವಲೋಕಿಸುತ್ತ ಅದರ ಗುಣದೋಷಗಳೊಂದಿಗೆ ಅದರ ಚರ್ಚೆಯನ್ನು ಗಂಭೀರ ಸಂಂಶೋಧನೆಯತ್ತ ಕೊಂಡಯ್ಯುವುದಾಗಿದೆ. ಎರಡನೆಯದಾಗಿ ತೌಲನಿಕ ವಿವೇಚನೆಯೊಂದಿಗೆ ಬಹುಶಿಸ್ತೀಯ ಆಯಾಮಗಳನ್ನು ನೀಡುವುದಾಗಿವೆ. ಈ ನೆಲೆಯಲ್ಲಿ ಈ ೧೦ ಮುನ್ನುಡಿಗಳು ಮೂಡಿ ಬಂದವುಗಳಾಗಿವೆ

### ಕನ್ನಡದಲ್ಲಿ ವಿಡಂಬನೆ ಸಾಹಿತ್ಯ

ಡಿ.ಎಲ್.ಎನ್. ಅವರ ಮೊದಲ ಮುನ್ನುಡಿ ಎಚ್.ಎಸ್.ಕೃಷ್ಣಸ್ವಾಮಿಯವರ ಕನ್ನಡದಲ್ಲಿ ವಿಡಂಬನ ಸಾಹಿತ್ಯ, (೧೯೪೭)ದ ಕೃತಿಗೆ ಬರೆದದ್ದು ಎಂದು ಗುರುತಿಸಲಾಗಿದೆ. ಇದು ತುಂಬಾ ಔಪಚಾರಿಕ ಮುನ್ನುಡಿಯಾಗಿದ್ದಾಗಿದ್ದು, ವಿಡಂಬನೆ ಎಂಬುದು ಮೊದಲು

ಚಂಪೂಕಾವ್ಯಗಳಲ್ಲಿ ಮೂಡಿ ಬಂದದ್ದಾಗಿ ಇದರಲ್ಲಿ ನಿರೂಪಿಸಿದೆ. ಇದರ ಸ್ವರೂಪವು ಸಹಜವಾದ ಸಂಗತಿಯನ್ನು ನೋವಾಗದ ರೀತಿಯಲ್ಲಿ ಅಪಹಾಸ್ಯಕ್ಕೆ ಗುರಿ ಮಾಡಿ ತಿದ್ದುವುದಾಗಿದೆ.

**ಸಿದ್ಧರಾಮಕೃತ ಬಸವಸ್ತೋತ್ರ ಗೀತೆ**

ಶಿವಬಸವ ಸ್ವಾಮಿಗಳು ರಚಿಸಿದ(೧೯೫೪) ಈ ಕೃತಿಯ ಮುನ್ನುಡಿಯು ಸ್ವಲ್ಪ ಭಿನ್ನವಾಗಿದೆ ಹಾಗೂ ಕೃತಿಯಲ್ಲಿನ ನ್ಯೂನ್ಯತೆಗಳನ್ನು ಎತ್ತಿತೋರಿಸಿರುವ ಸಂಪಾದಕರು ಬಸವಸ್ತೋತ್ರಗೀತೆಗಳ ಛಂದಸ್ಸನ್ನು ಕುರಿತು ಪ್ರಸ್ತಾಪಿಸುವಾಗ 'ಆಟಗೀತೆ' ಎಂದು ಕರೆದಿರುವುದನ್ನು ಡಿ.ಎಲ್.ಎನ್. ಒಪ್ಪದೆ ಇದರ ಬಗ್ಗೆ ಇನ್ನೂ ಚರ್ಚೆ ಅವಶ್ಯವೆಂದು ಹೇಳಿ ಹೊಸ ಅಭಿಪ್ರಾಯಗಳನ್ನು ಮುನ್ನುಡಿಯುದ್ದಕ್ಕೂ ಪ್ರಸ್ತಾಪಿಸಿ ಕೃತಿಯ ಅರ್ಥಪೂರ್ಣತೆಗೆ ಶ್ರಮವಹಿಸಿದ್ದು ಕುತೂಹಲಕಾರಿ ಅಂಶವೆನಿಸಿದೆ.

**ಸಾಹಿತ್ಯದ ಹಿನ್ನೆಲೆ**

೧೯೫೭ರಲ್ಲಿ ಕೆ.ವೆಂಕಟಾಚಾರ್ಯರು ರಚಿಸಿದ ಈ ಕೃತಿಯನ್ನು ಆಳವಾಗಿ ಅಭ್ಯಾಸಿಸಿದ ಡಿ.ಎಲ್.ಎನ್. ಈ ಕುರಿತು ವಿಸ್ತಾರವಾದ ಮುನ್ನುಡಿಯನ್ನು ಬರೆದಿದ್ದಾರೆ. ಇದರಡಿಯಲ್ಲಿ ಅವರ ಸಂಶೋಧಕನ ಗುಣಾನುಗುಣಗಳನ್ನು ಪ್ರಸ್ತಾಪಿಸಿದ್ದಲ್ಲದೆ 'ಇಂದಿನ ಕಾವ್ಯ ಕಾದಂಬರಿ, ಕತೆಗಳಂತಹ ಹೊಸತನದ ಓದಿಗೆ ಬೆನ್ನು ಬಿದ್ದ ಓದುಗರು ಹಳಗನ್ನಡ ಸಾಹಿತ್ಯಾಧ್ಯಾಯನವನ್ನು ಉಪೇಕ್ಷಿಸುತ್ತಿದ್ದಾರೆ ಎಂದು ವಿಷಾದ ವ್ಯಕ್ತಪಡಿಸಿದ್ದಾರೆ.'[೧] ಶಬ್ಧ ನಿಷ್ಪತ್ತಿಯಲ್ಲಿ ತೊಡಗಿಸಿಕೊಳ್ಳುವ ಒಬ್ಬ ಕವಿಯು ಅಥವಾ ಒಂದು ಸಾಹಿತ್ಯ ನಿರ್ಮಿತಿಯನ್ನು ಜನ, ಓದಿ ಸ್ವತಃ ಮುಟ್ಟಿ, ಜನ ವಿವೇಚಿಸಿ ನೋಡುವ ಬೌದ್ಧಿಕ ಸಾಹಸಗಳು ಅಗತ್ಯ ಎನ್ನುವ ಮಾತನ್ನು ಒತ್ತಿ ಹೇಳಿದ್ದು ಕಂಡುಬಂದಿದೆ. ಕೃತಿಯ ಸೀಮಿತ ಓದು, ವಿಮರ್ಶೆ, ಅಧ್ಯಯನ ಒಂದು ರೀತಿ ಮುದ ನೀಡಬಹುದು, ಆದರೆ ಕವಿಯ ಭೇದಭಾವ ಪ್ರತಿಭೆಯನ್ನು ದಕ್ಕಿಸಲಾರದ್ದಾಗಿದೆ. ಇದಕ್ಕೆ ತುಲನಾತ್ಮಕ ಅಧ್ಯಯನ ನೇರ ಪಠ್ಯದೊಂದಿನ ಒಡನಾಟ ಅವಶ್ಯವೆಂದು ಅಭಿಪ್ರಾಯಸಿದ್ದಾರೆ.

**ಶಿಲಾಲತೆ**

ಕೆ.ಎಸ್. ನರಸಿಂಹಸ್ವಾಮಿಯವರು (೧೯೫೮) ರಚಿಸಿದ ಈ ಕೃತಿ ಡಿ.ಎಲ್.ಎನ್. ಮುನ್ನುಡಿ ಬರೆದಿದ್ದ ಶಬ್ಧರಚನೆಯಲ್ಲಿ ತುಂಬಾ ಚತುರರಾದ, ಎನ್.ಎನ್. ದಡದ ನಾಲಿಗೆ ನೀಡಿ ನೆಕ್ಕುವ ಹೊಳೆ ಮಳೆಬಿಲ್ಲು ಧ್ವಜವಾಗಿ ಮಾಡಿದು ಒಲುಮೆ, ಈ ಮೌನ ಹೊವಿರದ, ಹೆರಳು ಈ ತೆರನಾದ ಶಬ್ಧರಚನೆಯನ್ನು ಮೆಚ್ಚಿದ ಡಿ.ಎಲ್.ಎನ್. ಶಿಲಾಲತೆಯ ಕವನ

ಸಂಕಲನದ ಕಾವ್ಯ ವಿಶೇಷವನ್ನು ಪ್ರಸ್ತಾವನೆ ಭಾಗದಲ್ಲಿ ವಿಸ್ತಾರವಾಗಿ ವಿಷಾದಪಡಿಸಿದ್ದಾರೆ. ಈ ಮುನ್ನುಡಿ ಬಹಳ ಪ್ರಸಿದ್ಧವಾದದ್ದಾಗಿದ್ದು ಭಾವಗೀತೆಯೇ ಪರಿಪೂರ್ಣವಾದುದು ಎಂದು ಪ್ರತಿಪಾದಿತ ಕಾಲಘಟ್ಟದಲ್ಲಿ, 'ಭಾವಗೀತೆ ಎಷ್ಟೇ ಲೋಕೋತ್ತರವಾದರೂ ಕವಿ ಶಕ್ತಿಯ ಪೂರ್ಣಾವಿಷ್ಕರಣಕ್ಕೆ ಅಲ್ಲಿ ಅವಕಾಶ ಸಾಲದು ಎಂದು ಸ್ಪಷ್ಟೀಕರಿಸಿದ್ದಾರೆ.'[೨]

ಶಿಲಾಲತೆಯ ಕಾವ್ಯದ ಬಗೆಗೆ ಕೊನೆಯಲ್ಲಿ 'ಕವಿಬೆಳೆದ ಕಾಲಘಟ್ಟದ ವಿಚಾರವಾಗಿ ಮೆಚ್ಚುಗೆ ವ್ಯಕ್ತಪಡಿಸಿದ್ದರೂ ಮೈಸೂರು ಮಲ್ಲಿಗೆ ಸುಕುಮಾರು ಪ್ರಪಂಚ ಮರೆಯಾದದ್ದರ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿದ್ದಾರೆ. ಶಿಲಾಲತೆಯ ಕಾವ್ಯವನ್ನು ಸೊಗಸಾಗಿಯೇ ವಿಮರ್ಶೆಗೆ ಒಳಪಡಿಸಿ ಹೊಸಗನ್ನಡ ಕಾವ್ಯದ ಕುರಿತು ವಿನಮ್ರವಾಗಿ ಸ್ವಲ್ಪ ನಿಷ್ಟುರವಾದಿ ನುಡಿಗಳನ್ನಾಡಿದ್ದು ಗ್ರಹಿಸಬಹುದಾಗಿದೆ. ಭಾವಗೀತೆ ಎಷ್ಟೇ ಲೋಕೋತ್ತರವಾದರೂ ಕವಿಶಕ್ತಿಯ ಪೂರ್ಣಾವಿಷ್ಕರಣಕ್ಕೆ ಅಲ್ಲಿ ಅವಕಾಶ ಸಾಲದಾಗಿದೆ. ಮಾನವ ಜೀವನದ ಹತ್ತಾರು ದೃಶ್ಯಗಳನ್ನು ಎಷ್ಟೇ ಕಾವ್ಯದ ಮೂಲಕ ವಿಜೃಂಭಿಸುವಂತೆ ಮಾಡಿದರೂ ಕವಿ ಶಕ್ತಿಗೆ ಮಿಗಿಲಾದದ್ದು ಯಾವುದು ಇಲ್ಲದಂತಾಗಿದೆ. ಈ ಕವಿಶಕ್ತಿ ದೊಡ್ಡ ನದಿಯಾಗಿ ಹರಿಯಲಿ ಹಿಡಿಯಾಗಿ ಸಾಧಿಸಲಿ ಎಂಬ ಆಶಯವನ್ನು ವ್ಯಕ್ತಪಡಿಸಿದ್ದು ಉಚಿತವೆನಿಸಿದೆ.

**ಶಿವದಾಸ ಗೀತಾಂಜಲಿ**

ಎಲ್.ಬಸವರಾಜು ಅವರು ಸಂಪಾದಿತ ಈ ಕೃತಿ (೧೯೬೩)ಗೆ ಡಿ.ಎಲ್.ಎನ್. ಇಂಗ್ಲೀಷ್‌ನಲ್ಲಿ ಮುನ್ನುಡಿ ಬರೆದಿದ್ದಾರೆ "ಜಕ್ಕಣ್ಣನ ಏಕೋತ್ತರ ಷಟ್‌ಸ್ಥಲವನ್ನು 'ಎಲ್.ಬಸವರಾಜು ಅವರು ಶಾಸ್ತ್ರೀಯವಾಗಿ ಸಂಪಾದಿಸಿ 'ಶಿವದಾಸ ಗೀತಾಂಜಲಿ' ಎಂದು ಹೆಸರಿಸಿದ್ದಾರೆ.'[೩] ಇಲ್ಲಿ 'ಶಿವರಶರಣರು ಕರ್ನಾಟಕ ಸಂಗೀತಕ್ಕೆ ನೀಡಿದ ಕಾಣಿಕೆಯಂಥ ಹೊಸ ಪ್ರಯತ್ನವನ್ನು ಮಾಡಿದ್ದಾರೆಂದು ಗುರುತಿಸಿದ. ಎಲ್. ಬಸವರಾಜು ಅವರು ಶಿವಶರಣರನ್ನು ಶಿವದಾಸರೆಂದು ಸಂಕೇತಿಸಿದ್ದು ವಿಶೇಷವೆನಿಸಿದೆ. ಸಂಪಾದಿತ ಈ ಕೃತಿಯಲ್ಲಿ ಒಟ್ಟು ೧೮೮ ಹಾಡುಗಳಿದ್ದ ಇವುಗಳನ್ನು ರಾಗ, ತಾಳಗಳ ಉಲ್ಲೇಖದೊಂದಿಗೆ ಸಂಪಾದಿಸಿ ಅಲ್ಲಿರುವ ಅನುಭವ ರೂಪದ ಗ್ರಹಿಕೆಗಳನ್ನು ಡಿ.ಎಲ್.ಎನ್. ಮೆಚ್ಚಿಕೊಂಡಂತೆ ಕಂಡುಬಂದಿದೆ.'[೪] ೧೪೨ ಪುಟಗಳಷ್ಟು ವಿಸ್ತಾರವಾದ ಈ ಕೃತಿಯ ಮುನ್ನುಡಿಯು ಇತರೆ ವಿದ್ವತ್‌ಪೂರಿತ ಅಂಶಗಳಿಂದ ಕೂಡಿದ್ದಾಗಿದೆ.

**ಶರಣ ಚರಿತ ಮಾನಸಂ**

ಹೆಚ್.ದೇವಿರಪ್ಪ ಅವರು ಸಂಪಾದಿಸಿದ ಈ ಕೃತಿ (೧೯೬೮)ಗೆ ಡಿ.ಎಲ್.ಎನ್. ಅವರು ಸವಿಸ್ತಾರವಾದ ಮುನ್ನುಡಿಯನ್ನು ಬರೆದದ್ದು ಉತ್ತಮ ಸೂಕ್ಷ್ಮ ಚಿಂತನೆಗಳಿಗೆ ಹಿಡಿದ ಕೈಗನ್ನಡಿ ಎನಿಸಿದೆ. ಡಿ.ಎಲ್.ಎನ್. ಅವರಿಗೆ ಹರಿಹರ ಅಚ್ಚು ಮೆಚ್ಚಿನ ಕವಿಯಾಗಿದ್ದು ತುಂಬಾ ಪ್ರೀತಿ ಪೂರ್ವಕವಾಗಿ ಈ ಮುನ್ನುಡಿ ಬರೆದ ಬಗ್ಗೆ ತಿಳಿಸಿದ್ದು ಕಂಡುಬಂದಿದೆ

ಈ ಮುನ್ನುಡಿ ಬರೆಯಲಿಕ್ಕೆ ತಮಗೆ ಎರಡು ಅವಶ್ಯಕವಾದ ಕಾರಣಗಳಿವೆ ಎಂದು ತಿಳಿಸಿ ಅವರು ದೇವಿರಪ್ಪನವರೇ ಸುದೀರ್ಘ ವಿಸ್ತಾರವಾದ ಈ ಸಮಾವೇಶಿತ ರೂಪಕ್ಕೆ ಏನನ್ನು ಸೇರಿಸಬೇಕಾದದ್ದಿಲ್ಲ ನನ್ನ ಮೆಚ್ಚಿನ ಕನ್ನಡ ಕವಿಗಳಲ್ಲಿ ಹರಿಹರ ಅಗ್ರಗಣ್ಯ ಅವನ ಕಾವ್ಯಗಳನ್ನು ಅನೇಕ ಸಲ ಓದಿ, ಓದಿಸಿ ತೃಪ್ತಿಪಟ್ಟಿದ್ದೇನೆ. ಅವನ ಭಕ್ತಿಯ ಆವೇಶ ತಮ್ಮ ಹೃದಯವನ್ನು ಹೊಕ್ಕು ಅನುಭಾವದ ಅಲೆಗಳನ್ನು ಚಿಮ್ಮಿಸುವುದಕ್ಕಾಗಿ ತಾವು ಹರಿಹರನಿಗೆ ಸಲ್ಲಬೇಕಾದ ಪೂಜೆಯನ್ನು ಈ ಮುನ್ನುಡಿ ಮೂಲಕ ದೊರೆತಿರುವ ಅವಕಾಶವನ್ನು ಬಿಡಲಾರನಾಗಿದ್ದೇನೆ ಎಂದು ಅಭಿಪ್ರಾಯಿಸಿದ್ದು ಕಂಡು ಬಂದಿದೆ.

ಪ್ರಸ್ತಾವನೆಯಲ್ಲಿನ 'ಕಥಾ ಸಮೀಕ್ಷಾ ಭಾಗವನ್ನು ಗಮನಿಸಿ ಕೃತಿ ಪರೀಕ್ಷಣಾ ವಿಭಾಗದಲ್ಲಿ ಸಂಪಾದಕರ ಆರ್ದ್ರತೆ, ಅಭಿರುಚಿ, ರಸಿಕತೆ, ಕಲಾದೃಷ್ಠಿ ಮುಂತಾದವು, ಅಭಿವ್ಯಕ್ತವಾಗಿವೆ ಎಂದು ಹೇಳಿದ್ದರಿಂದ ಇವರ ಅಂತರ್‌ಶಿಸ್ತೀಯ ಅಧ್ಯಯನದ ಧೋರಣೆಗಳು ದೂರಗಾಮಿಯಾದ ಗುಣಾತ್ಮಕ ಆಲೋಚನೆಗಳು ಅಭ್ಯಾಸಪೂರ್ಣವಾಗಿ ಮೂಡಿಬರುವಂತೆ ಮಾಡಿದ್ದನ್ನು ಗ್ರಹಿಸಬಹುದಾಗಿದೆ. ಈ ಕೃತಿಯಲ್ಲಿ ಮೂಡಿಬಂದ ರಗಳೆಗಳ ಬಗ್ಗೆ ಹೇಳುತ್ತಾ ಡಿ.ಎ.ಲ್‌ಎನ್. ಎಷ್ಟೋ ಪ್ರಶಂಸೆ ಮಾತುಗಳನ್ನು ಹೇಳಿದರೂ ರಗಳೆಗಳ ಲಾವಣ್ಯವನ್ನು ರಗಳೆಗಳು ಪೂರ್ತಿ ಹೇಳಿದಂತಾಗದು. ಮಾತಿಗೆ ಮೀರಿದ ಅನುಭವದ ವ್ಯಾದ್ಯ ಚಿತ್ತಸಂಸ್ಕಾರ ಗೋಚರತೆಯ ಅನಂತತೆ ಈ ರಗಳೆಗಳಲ್ಲಿರುವುದು ಅವುಗಳ ಅತಿಶಯತೆಗೆ ಕಾರಣವೆಂದಿದ್ದಾರೆ. ಹರಿಹರನ ರಗಳೆಗಳ ತುಲನಾತ್ಮಕ ವಿಮರ್ಶೆಯ ಅಗತ್ಯವನ್ನು ಒತ್ತಿ ಹೇಳುವ ಡಿ.ಎಲ್.ಎನ್. ವಾಚಕರೂ ವಿಮರ್ಶಕರೂ ತಮ್ಮ ತಮ್ಮ ಶಕ್ತಿಗಳಿಗನುಗುಣವಾಗಿ ಅನಂತತೆಯಲ್ಲಿ ಪಾಲ್ಗೊಳ್ಳಬೇಕು ವಿಮರ್ಶೆ ಅಷ್ಟನ್ನೇ ಓದಿ ಸಂತಸಪಡದೆ ಪಡೆದೆ ರಗಳೆಗಳನ್ನು ಒಂದಲ್ಲ ಹತ್ತಾರು, ಸಲವಾದರೂ ಓದು ಬೇಕಾದ ಇನಿಯ ಕರ್ತವ್ಯವುಂಟು ಎಂದು ಅಭಿಪ್ರಾಯಿಸಿದ್ದು ಮುಖ್ಯವೆನಿಸಿದೆ.

ಕೊನೆಯಲ್ಲಿ ದೇವೀರಪ್ಪನವರು ಮಾಡಿರುವ ಸ್ತುತ್ಯವಾದ ಹರಹರ ಸೇವೆಯನ್ನು ಮೆಚ್ಚಿ ಕೊಂಡಾಡಿ ಹರಿಹರನ ರಗಳೆಗಳು ಲೌಕಿಕ ಪ್ರಪಂಚದ ಎಲ್ಲಾ ಮೂಲಗಳಿಂದ ಅಮರವಾಗಿ ವಿಶ್ವವ್ಯಾಪಕ ಗುಣಗಳನ್ನೊಂದಿವೆ, ಕನ್ನಡ ಸಾಹಿತ್ಯದ ರತ್ನ ಕಲಶಗಳಾಗಿವೆ, ಕನ್ನಡಿಗರೆಲ್ಲ ಇವನ್ನು ಆದರಿಸಲಿ ಎಂದು ಹಾರೈಸಿದ್ದು ಪ್ರಮುಖವೆನಿಸಿದೆ.

**ಸಂಶೋಧನಾ ತರಂಗ ಸಂಪುಟ–೨**

ಎಂ.ಚಿದಾನಂದಮೂರ್ತಿ ಅವರು (೧೯೭೦)ರಚಿಸಿದ ಲೇಖನಗಳು ಸಂಗ್ರಹ ರೂಪ, ಸಂಶೋಧನಾ ತರಂಗ ಸಂಪುಟ–೨, ಬೆಂಗಳೂರು ವಿ.ವಿ.ಯಿಂದ ಮೊದಲ ಬಾರಿಗೆ ಅಚ್ಚಾದ ಈ ಕೃತಿ. ಡಿ.ಎಲ್.ಎನ್. ಅವರ ಮುನ್ನುಡಿಯಿಂದ ವೈಶಿಷ್ಟ್ಯತೆಯನ್ನು ಹೆಚ್ಚಿಸಿಕೊಂಡದ್ದಾಗಿದೆ

ಮುನ್ನುಡಿಯ ಆರಂಭದಲ್ಲಿ ಡಿ.ಎಲ್.ಎನ್. ಅವರು ಚಿ. ಮೂ ಅವರ ಸಂಶೋಧನಾ ಸ್ವರೂಪವನ್ನು ಪ್ರಸ್ತಾಪಿಸುತ್ತಾ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಈ ಕೃತಿಯ ಮಹತ್ವ ಸಂಶೋಧನಾ ತರಂಗ ಪ್ರಥಮ ಭಾಗದ ಬಗ್ಗೆ ಅತಿಶಯೋಕ್ತಿ ಮಾತುಗಳನ್ನು ದಾಖಲಿಸಿದ್ದಾರೆ ಅಲ್ಲದೆ ಮುಂದುವರೆದು ಎ.ವೆಂಕಟಸುಬ್ಬಯ್ಯ ಅವರಿಗೆ ಈ ತರಂಗ ಸಂಪುಟ–೨ನ್ನು ಚಿ.ಮೂ. ಅವರು ಅರ್ಪಿಸಿರುವುದನ್ನು ಕುರಿತು ಶ್ಲಾಘಿಸಿದ್ದಾರೆ. ವೆಂಕಟಸುಬ್ಬಯ್ಯ ಅವರು ಮಾಡಿದ ಸಾಹಿತ್ಯ ಸೇವೆ 'ಪಂಚತಂತ್ರ' ಕೃತಿ 'ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ' ಕಲ್ಯಾಣಿ ಚಾಲುಕ್ಯರ ಚರಿತ್ರೆ ಇತ್ಯಾದಿ ಹತ್ತಾರು ಲೇಖನ ಪಾಶ್ಚಾತ್ಯ ಸಾಹಿತ್ಯದಲ್ಲಿ ಅವರಿಗಿದ್ದ ಪಾಂಡಿತ್ಯ ಇತರೆ ಹತ್ತಾರು ವಿಚಾರಗಳೊಂದಿಗೆ ಸಾಹಿತ್ಯ ಲೋಕದಲ್ಲಿ ಎಲೆಮರೆಯ ಕಾಯಂತಾದ ಇವರಿಗೆ ಕೃತಿ ಅರ್ಪಿಸಿದ್ದಕ್ಕೆ 'ಋಷಿಋಣ' ತೀರಿಸಿದ ವಿದ್ವಾಂಸರೆಂದು ಚಿ.ಮೂ. ಅವರಿಗೆ ಬೆನ್ನುತಟ್ಟಿ ಪ್ರೋತ್ಸಾಹದಾಯಕ ಮಾತುಗಳನ್ನಾಡಿದ್ದಾರೆ.

ಮುಂದುವರೆದು, ಈ ಕೃತಿಯಲ್ಲಿ ಸಂಕಲಿತಗೊಂಡ ೩೦ ಸಣ್ಣ, ದೊಡ್ಡ ಸಂಶೋಧನಾ ಪ್ರಬಂಧಗಳಲ್ಲಿ ಬಿತ್ತರಗೊಂಡ ಭಾಷೆ, ವ್ಯಾಕರಣ, ಛಂದಸ್ಸಿನ 'ಸಾಹಿತ್ಯ ಚರಿತ್ರೆ, ಜನಪದ ಸಾಹಿತ್ಯ, ಉಪಭಾಷೆ ಇತರೆ ಅಂಶಗಳನ್ನು ಅನುಲಕ್ಷಿಸಿ ಇವೆಲ್ಲದರಲ್ಲೂ ಸತ್ಯಾನ್ವೇಷಣೆ ಮಾಡುವ ವೈಜ್ಞಾನಿಕ ದೃಷ್ಟಿ ಎದ್ದು ಕಂಡಿದೆ. ಇವುಗಳಲ್ಲಿ ವಿಷಯ ವಿವರಣೆಗೆ ಬೇಕಾದ ಸಾಮಾಗ್ರಿ ಸಂಗ್ರಹ ಅವುಗಳ ಜೋಡಣೆ ಇವುಗಳಿಂದ ಕಂಡುಬಂದ ನಿರ್ಣಯವನ್ನು ಸಮಾಜದ ಮುಂದಿಟ್ಟು ನೋಡುವುದು'[೫] ಇತ್ಯಾದಿ ಕ್ರಮಗಳು ಈ ಪ್ರಬಂಧಗಳಲ್ಲಿ ಬಿತ್ತರಗೊಂಡಿದ್ದನ್ನು ಹೇಳಿದ್ದಾರೆ.

ಈ ಕೃತಿಯಲ್ಲಿ ಮೂಡಿಬಂದ ವಿಚಾರ, ಚರ್ಚೆಗಳು ತಮ್ಮದೇ ಕೊನೆ ಎಂಬ ಭಾವ ಅವರಿಗೂ ಇಲ್ಲ ಇತರರಿಗೂ ಇರಬೇಕಾಗಿಲ್ಲ. ಹೊಸ ಹೊಸ ಆಧಾರಗಳು ದೊರೆತಂತೆ ಅವುಗಳ ಸ್ವರೂಪ ಬದಲಾಗಬಹುದು, ದೊರೆತಿರುವ ಊಹೆಗಳಿಂದ ನಿರ್ಣಯಗೊಳ್ಳಲು ಯಾರಿಗೂ ಸಾಧ್ಯವಿಲ್ಲ ಹಾಗೂ ಇತರರ ಅಭಿಪ್ರಾಯವನ್ನು ಸ್ವಾಗತಿಸಿ ವಿವೇಚಿಸುವುದು, ಸಂಶೋಧಕನ ಲಕ್ಷಣ. ಈ ಎಲ್ಲಾ ಲಕ್ಷಣಗಳು ಚಿ.ಮೂ. ಅವರ ಈ ಪ್ರಬಂಧದಲ್ಲಿ ಕಂಡು ಬಂದಂತೆ ಡಿ.ಎಲ್.ಎನ್. ಅಭಿಪ್ರಾಯಿಸಿದ್ದಾರೆ.

ಸಂಬ್ಬಿಗ ಕಲ್ಯಾಣಿ ಚಾಲುಕ್ಯರ ಕಾಲದ ಕನ್ನಡ ಸಾಹಿತ್ಯ ವಿಚಾರ ಕುರಿತು ಡಿ.ಎಲ್.ಎನ್. ಈ ಮುನ್ನುಡಿಯ ಸಂಕ್ಷಿಪ್ತ ಪ್ರಸ್ತಾಪಿಸಿ ಹೇಗೆ ನಿರ್ಣಯಿಸಿದ್ದಾರೆಂದು ಎತ್ತಿ ತೋರಿದ್ದಾರೆ, ಒಟ್ಟಿನಲ್ಲಿ ಲೇಖಕರ ಅನ್ವೇಷಕ ದೃಷ್ಟಿ, ಬುದ್ದಿಚಾತುರ್ಯತೆ, ವಿಸ್ತಾರವಾದ ಗ್ರಂಥಪರಿಚಯ ವಿಶದವಾದ ಪ್ರತಿಪಾದನೆ ಇತ್ಯಾದಿ ಅಂಶಗಳನ್ನು ಸಂಶೋಧಕನ ಮನೋಧರ್ಮಕ್ಕೆ ಅಳವಡಿಸಿ ಕೃತಿಯನ್ನು ಸಾಹಿತ್ಯ ವಲಯಕ್ಕೆ ದಾಪುಗಾಲು ಹಾಕಿಸಿದ್ದಾರೆ. ಈ ಕೃತಿಯಿಂದ ಕನ್ನಡ

ಸಂಸ್ಕೃತಿಯ ಹಲವಾರು ಮುಖಗಳು ಬೆಳಕು ಕಾಣಲಿ, ಲೇಖಕರ ಪಾಂಡಿತ್ಯ ಪರಿಶ್ರಮಗಳು ಪರಿಮಳಿಸಲಿ ಎಂದು ಹಾರೈಸಿದ್ದಾರೆ.

**ಕನ್ನಡ ಛಂದ ಸ್ವರೂಪ**

ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರು(೧೯೭೮) ರಚಿಸಿದ ಈ ಕೃತಿಯು ಡಿ.ಎಲ್.ಎನ್. ಅವರ ಮುನ್ನುಡಿಯಿಂದ ತನ್ನ ಆದ್ರತೆಯನ್ನು ಹೆಚ್ಚಿಸಿಕೊಂಡದ್ದಾಗಿದೆ. ವಾಸ್ತವವಾಗಿ ಯಾವುದೇ ಒಂದು ಕೃತಿಗೆ ಮುನ್ನಡಿಯೇ ದ್ವಾರಬಾಗಿಲಾರುತ್ತೆ ಕೃತಿಯ ಯಶಸ್ಸನ್ನು ನಿರ್ಧರಿಸುವಲ್ಲಿ ಮುನ್ನುಡಿಯ ಪಾತ್ರ ತುಂಬಾ ಮುಖ್ಯವೆನಿಸುತ್ತದೆ. ಈ ಕೃತಿಗೆ ಬರೆದ ಮುನ್ನುಡಿಯು ಪರಿಚಯಾತ್ಮಕ ರೂಪದಲ್ಲಿ ಮೂಡಿಬಂದದ್ದು ಛಂದಸ್ಸಿಗೆ ಸಂಬಂಧಿಸಿದ ವಿಷಯಗಳ ಮೇಲೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಮೂಡಿಬಂದ ಆರು ಪ್ರಬಂಧಗಳು ಇಲ್ಲಿ ಸಂಕಲಿತವಾಗಿವೆ. ಡಿ.ಎಲ್.ಎನ್. ಅವರು ಆರು ಸಂಪ್ರಬಂಧಗಳ ಕುರಿತು ಈ ಮುನ್ನುಡಿ ಭಾಗದಲ್ಲಿ ಪರಿಚಯಾತ್ಮಕ ಅಂಶಗಳನ್ನು ನಿರೂಪಿಸುತ್ತಾ ಕನ್ನಡ ಛಂದೋಗ್ರಂಥಗಳ ಸಂಕ್ಷಿಪ್ತ ಚರಿತ್ರೆ ಕುರಿತು ಹೇಳುತ್ತಾ ನಾಗವರ್ಮನ ಛಂದೋಬುಧಿಯನ್ನು ಬಿಟ್ಟರೆ ಉಳಿದ ಗ್ರಂಥಗಳು ಅಷ್ಟೇನೂ ಪ್ರಮುಖವಾಗಿಲ್ಲ ಎಂದು ಪ್ರಸ್ತಾಪಿಸುತ್ತಾ ಗುಣಗಾಂಕಿಯಂ ಎಂಬ ಪ್ರಥಮ ಕನ್ನಡ ಛಂದೋಗ್ರಂಥ ನಾಗವರ್ಮನ ಛಂದೋವಿಚಿತ ಕವಿ ಜಿಹ್ವಾಬಂಧನ ನಂದಿ ಛಂದಸ್ಸು ಇತ್ಯಾದಿಗಳ ಕುರಿತು ಇದುವರೆಗೂ ಬಂದಂತಹ ಹತ್ತಾರು ಲೇಖನಗಳಿಂದ ಪ್ರಕೃತಿ ಲೇಖಕರು ಈ ವಿಷಯ ಪ್ರಸ್ತಾಪಿಸಿದ್ದಾರೆ ಎಂದು ಉಲ್ಲೇಖಿಸಿದ್ದಾರೆ. ಹಾಗೇಯೇ ಕನ್ನಡ ಛಂದಸ್ಸಿನ ಸಾಮಾನ್ಯ ಸ್ವರೂಪ ರಗಳೆಯ ರಹಸ್ಯವನ್ನು ಬೇದಿಸುವ ಅವರ ಕ್ರಮ ಛಂದೋಂಬುದಿ ಮತ್ತು ಜಯಕೀರ್ತಿಯ ಛಂದೋಶಾಸನ ಛಂದೋಂಬುದಿಯ ವರ್ಣವೃತ್ತಗಳು ಮತ್ತು ಕೆಲವು ನಾಮಪಾಠಗಳು, ಕವಿಜಿಹ್ವಾ ಬಂಧನ ವರ್ಣಗಣ ಮಾತ್ರಗಳ ಅಂಶಗಣಗಳೆಂಬ ಉಳಿದ ಅಧ್ಯಾಯಗಳ ಬಗ್ಗೆ ಸವಿಸ್ತಾರವಗಿ ಸಂಕ್ಷಿಪ್ತವಾಗಿ ವಿವರಿಸಿ ತಮ್ಮ ಅನಿಸಿಕೆಗಳನ್ನು ಕೃತಿಕುರಿತ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದು ಕಂಡು ಬಂದಿದೆ. ಒಟ್ಟಾರೆ ಈ ಕೃತಿ ಅಭ್ಯಾಸ ಪೂರ್ಣ ಯೋಗ್ಯಕೃತಿ ಎಂದು ಹಾರೈಸಿದ್ದು ಮುಖ್ಯವೆನಿಸಿದೆ.

**ಭಾಷಾ ವಿಜ್ಞಾನ**

ಹಂಪ ನಾಗರಾಜಯ್ಯ ಅವರು (೧೯೬೮) ಬರೆದ ಈ ಕೃತಿಗೆ ಡಿ.ಎಲ್.ಎನ್. ಅವರು ಬರೆದ ೧೦ ಪುಟಗಳಷ್ಟು ಸವಿಸ್ತಾರವಾದ ಮುನ್ನುಡಿಯು ಭಾಷಾ ಅಧ್ಯಯನದ ದೃಷ್ಠಿಯಿಂದ ಹೊಸ ರೀತಿಯ ಸಂಗತಿಗಳನ್ನು ಬಿಚ್ಚಿಕೊಡುವಂತೆ ಮಾಡಿದ್ದಾಗಿದೆ.

ಸಾಹಿತ್ಯ ಅಭ್ಯಾಸಿಯ ಬುದ್ಧಿವಿಕಾಸಕ್ಕೆ ವ್ಯವಸ್ಥಿತ ಆಲೋಚನಾ ಕ್ರಮಕ್ಕೆ ಇರುವ ಏಕೈಕ ಸಾಧ್ಯ ಭಾಷಾವಿಜ್ಞಾನ (ಪುಟ.iii) ಎನ್ನುವ ಡಿ.ಎಲ್.ಎನ್. ಅವರ ಮಾತು

ಗಮನಾರ್ಹವಾಗಿದೆ. ಭಾಷೆ ಹೇಗಾದರೂ ಬಂದಿರಲಿ ಅವುಗಳು ಇರುವುದಂತೂ ನಿಜ, ಭಾಷಾವಿಜ್ಞಾನದ ಕೆಲಸ ಅವುಗಳನ್ನು ವಿಶ್ಲೇಷಣೆ ಮಾಡಿ ಅವುಗಳ ಸ್ವರೂಪವನ್ನು, ರಚನೆಯನ್ನು ತಿಳಿಯುವುದು ಮುಖ್ಯ ಅಂಶವಾಗಿದೆ. ಈ ಕೃತಿಯು ೨೩ ಅಧ್ಯಾಯಗಳನ್ನೂಳಗೊಂಡಿದ್ದು ಪ್ರತಿ ಅಧ್ಯಯನದಲ್ಲಿ ಭಾಷಾಶಾಸ್ತ್ರದ ವಿಮರ್ಶನಾ ಕ್ರಿಯೆ ನಡೆದದ್ದು ಪ್ರಮುಖ ಅಂಶವಾಗಿ ಕಂಡು ಬಂದಿದೆ ಎಂದು ಅಭಿಪ್ರಾಯಿಸಿದ್ದಾರೆ.

'ಭಾಷಾವಿಜ್ಞಾನ ಮತ್ತು ಅದರಿಂದ ಸಂಜನಿತವಾಗುವ ಭಾಷೆಪ್ರಜ್ಞೆ, ಪ್ರಾದೇಶಿಕ ಭಾಷೆಗಳ ನೆರವನ್ನು ಬಳಲಿದ ಗ್ರಾಂಥಿಕ ಭಾಷೆಗೆ ನೀಡುವ ಕಾರ್ಯವನ್ನು ಮಾಡಿದೆ ಇದು ಆಗಾಗ ಅಗತ್ಯ ಪ್ರಾದೇಶಿಕ ಅಥವಾ ಗ್ರಾಮ್ಯಭಾಷೆಗಳ ಬಹುಸಾಧ್ಯತೆಗಳನ್ನು ನಿರಾಕರಿಸಿ ಶಾಸ್ತ್ರೀಯತೆ ಮತ್ತು ಪ್ರಾಮಾಣೀಕರಣದ ಹೆಸರಿನಲ್ಲಿ ಭಾಷೆಯ ಬಹು ಆಯಾಮಗಳನ್ನು ಸಂಹರಿಸುವ ನೆಲೆಗೆ ಚಿಕಿತ್ಸೆ ಮಾಡುವಂತೆ ಕಾಣುವ ಡಿ.ಎಲ್.ಎನ್. ಅವರ ಈ ಮಾತು ಗಮನಾರ್ಹವೆನಿಸಿದೆ. ಇಡಿ ಮುನ್ನುಡಿ ಭಾಗದಲ್ಲಿ ಪ್ರಪಂಚದ ಭಾಷಾ ಅಧ್ಯಯನದ ಜೊತೆಗೆ ಕನ್ನಡದಲ್ಲಿ ಪಂಪ, ವಚನಕಾರರು, ಕುಮಾರವ್ಯಾಸ, ಬೇಂದ್ರೆ, ಎಂ.ಎಸ್. ಪುಟ್ಟಣ್ಣಯ್ಯ ರವರಂತಹವರು, ಹುಟ್ಟುಹಾಕಿದ ಭಾಷೆಯ ವಿನ್ಯಾಸಗಳು ಅವು ಮಾಡಿದ ಪರಿಣಾಮಗಳನ್ನು ಕುರಿತು ಕುತೂಹಲಕರವಾದ ಚರ್ಚೆ ಬೆಳೆಸಿದ್ದಾರೆ. ಭಾಷೆ ಶಾಸ್ತ್ರೀಯವಾದಷ್ಟು ಗ್ರಾಂಥಿಕವಾದಷ್ಟು, ಅದು ಪಡೆದುಕೊಳ್ಳುವ ಶುಷ್ಕತೆ ಮತ್ತು ನಿಶ್ಚಲತೆಯನ್ನು ತುಂಬಾ ಅಭ್ಯಾಸಪೂರ್ಣ ಕಟ್ಟಿಕೊಂಡುತ್ತಾರೆ. ಈ ನಿಶ್ಚಲತೆಯನ್ನು ನೀಗುವ ಮಾರ್ಗವನ್ನಾಗಿ ಕನ್ನಡ ಪ್ರಾದೇಶಿಕ ಭಾಷೆಗಳ ನೆರವಿನ ಅಗತ್ಯತೆಯನ್ನು'[೬] ಸೂಚಿಸಿರುತ್ತಾರೆ.

ಒಟ್ಟಾರೆಯಾಗಿ ಭಾಷಾವಿಜ್ಞಾನದ ಆಳವಾದ ಪರಿಚಯ ಸಾಹಿತ್ಯಾಭ್ಯಾಸಿಗರಿಗೆ ಎಷ್ಟು ಅಗತ್ಯ ಎಂಬುದನ್ನರಿತು ಗ್ರಂಥ ರೂಪಿಸಿದ ಹಂಪನಾಗರಾಜಯ್ಯನವರಿಗೆ ಅಭಿನಂದನೆ ಸಲ್ಲಿಸುತ್ತದೆ ಎಂದು ಹಾರೈಸಿದ್ದಾರೆ.

**ಭಾರತೀಯ ಗ್ರಂಥ ಸಂಪಾದನ ಪರಿಚಯ**

ಎನ್.ಎಸ್. ಲಕ್ಷ್ಮೀ ನಾರಾಯಣಭಟ್ಟ ಅವರು (೨೦೦೫) ಕನ್ನಡಕ್ಕೆ ಅನುವಾದಿಸಿದ ಈ ಕೃತಿಯ ಮೂಲ. ಎಂ.ಎಸ್. ಕತ್ರೆ ಅವರಿಂದ ೧೯೪೧ರಲ್ಲಿ ರಚಿತ (ಭಾರತಿಯ ಗ್ರಂಥ ಸಂಪಾದನಾ ಪ್ರವೇಶ ಕೃತಿಗೆ) ಇಂಟರ್‌ಡಕ್ಸನ್ ಟು ಇಂಡಿಯನ್. ಟೆಕ್ಸಟ್ಟುವೆಲ್ ಕ್ರಿಟಿಸಿಜಂ ಎಂಬ ಇಂಗ್ಲಿಷ್ ಕೃತಿಯ ಮೂಲ ರೂಪದ ಅನುವಾದವಾಗಿದೆ. ಇವರು ಮೂಲ ಜರ್ಮನ್‌ನಲ್ಲಿ ನಡೆಸಿದ ಅಧ್ಯಯನದ ಫಲವಾಗಿ ಈ ಕೃತಿ ಮೂಡಿಬಂದದ್ದಾಗಿದೆ. ಈ ಕೃತಿಗೆ ಡಿ.ಎಲ್.ಎನ್. ಮುನ್ನುಡಿ ಬರೆದಿದ್ದು ಸೂಕ್ತವೆನಿಸಿದೆ. ಇದಕ್ಕೆ ಪ್ರತಿಯಾಗಿ ಅಂದಿನ ಕಾಲದಲ್ಲಿ ಈ ಕುರಿತು ವಿಶೇಷ ಪರಿಣಿತಿ ಅವಶ್ಯ ವಿಚಾರಗಳು, ಈ ವಿಷಯದಲ್ಲಿನ ಹೊಸ

ಅಧ್ಯಯನಗಳ ತುಡಿತ ವಿದ್ವಾಂಸರಲ್ಲಿ, ಎದ್ದು ಕಂಡಿದ್ದು ಇದಕ್ಕೆ ಸಾಕ್ಷಿ ಎಂಬಂತೆ ಇವರ ಅಧ್ಯಯನ ರೂಪಗಳೇ ಪ್ರಮುಖವೆನಿಸಿವೆ.

ಈ ಗ್ರಂಥಶಾಸ್ತ್ರದ ಮಹತ್ವವನ್ನು ಡಿ.ಎಲ್.ಎನ್. ಆರಂಭದಲ್ಲಿ ತಿಳಿಸಿ ಕನ್ನಡ ಗ್ರಂಥಸಂಪಾದನೆ ಕರ್ನಾಟಕದಲ್ಲಿ ಹೇಗೆ ಪ್ರಾರಂಭವಾಯಿತು ಸರಕಾರಿ ಹಾಗೂ ಸಂಘ ಸಂಸ್ಥೆಗಳ ಈ ಅಧ್ಯಯನ ಕುರಿತು ಪಾತ್ರವೇನು? ಕನ್ನಡ ಗ್ರಂಥ ಸಂಪಾವನೆ ನಮ್ಮ ವಿದ್ವಾಂಸರ ಕೊಡುಗೆಗಳೇನು? ಎಂಬ ಇತ್ಯಾದಿ ಅಂಶಗಳನ್ನು ಆರಂಭದಲ್ಲಿ ಡಿ.ಎಲ್.ಎನ್. ಆರಂಭದಲ್ಲಿ ಪ್ರಸ್ತಾಪಿಸಿದ್ದು ಉಂಟು. ಒಟ್ಟಾರೆ ಕನ್ನಡ ಗ್ರಂಥ ಸಂಪಾದನೆ ಬೆಳೆದು ಬಂದ ಇತಿಹಾಸ ಈ ಮುನ್ನುಡಿಯಲ್ಲಿದ್ದ ಕಾರಣ ಈ ಕೃತಿಗೆ ಇನ್ನೂ ಹೆಚ್ಚಿನ ಬಲಬಂದಾತಾಗಿದೆ. ಲಕ್ಷ್ಮೀನಾರಾಯಣ ಭಟ್ಟರ. ತರ್ಜುಮೆ ತುಂಬಾ ಉತ್ತಮವಾಗಿದ್ದು ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ, ಪರಿಷ್ಕರಿಸಿ, ಪ್ರಕಟಿಸುವ ವಿದ್ವಾಂಸರಿಗೆ ಇದೊಂದು ಕೈಪಿಡಿಯಂತಹ ಕೃತಿ ಎಂದು ಅಭಿಪ್ರಾಯಿಸಿದ್ದಾರೆ.

ಒಟ್ಟಾರೆ, ಮೂಲ ಭಾರತೀಯ ಗ್ರಂಥಸಂಪಾದನೆ ಎನ್ನುವ ತಾತ್ವಿಕ ನಿಲುವಿನ ಹಿಂದೆ ಭಾರತೀಯ ಎಂಬ ಚಿಂತನೆಯಡಿಯಲ್ಲಿ ಕನ್ನಡವೂ ಸೇರಿದಂತೆ ಭಾರತೀಯ ಎಲ್ಲಾ ಭಾಷೆಗಳ ಪುರಾತನ ಗ್ರಂಥ ಸಂಪಾದನೆಗೆ ಪಾಶ್ಚಾತ್ಯ (ಗ್ರೀಕ್, ಲ್ಯಾಟಿನ್, ಫ್ರೆಂಚ್) ಮೂಲದಿಂದ ದತ್ತವಾದ ಮಾಹಿತಿಯನ್ನು ಸಂಸ್ಕೃತ ಗ್ರಂಥಗಳಿಗೆ ಅನ್ವಯಿಸಿಕೊಂಡು

ಸಂಪಾದನಾ ಕಾರ್ಯದ ಮಾದರಿಯೊಂದನ್ನು ಅಳವಡಿಸಿಕೊಳ್ಳಬೇಕೆಂಬ ನಿಲುವು ಇಂದಿಗೂ ಚಾಲ್ತಿಯಲ್ಲಿದೆ. ಇದು ಒಂದು ಕಾಲದ ಅಗತ್ಯವಾಗಿದ್ದರೂ ವಾಸ್ತವಕ್ಕೂ ಅವಶ್ಯವೆನಿಸಿದೆ. ಆದರೆ, ಇದು ಪಾಶ್ಚಾತ್ಯ ಮತ್ತು ಸಂಸ್ಕೃತ ಮೂಲಕ್ಕಿಂತ ಭಿನ್ನವಾದ ಆಯಾ ಪ್ರಾದೇಶಿಕ, ದೇಶ, ಭಾಷೆಗಳ ಜಾಯಮಾನವನ್ನನುಸರಿಸಿದ ಸಂಪಾದನಾ ಶಾಸ್ತ್ರದ ಅಗತ್ಯವೆಂಬುದು ಗಮನಾರ್ಹವೆನಿಸಿದೆ

'ಒಟ್ಟಾರೆಯಾಗಿ ಏಕವ್ಯಕ್ತಿ, ಕರ್ತೃ ಕೇಂದ್ರಿತ ಮಾದರಿಗಳನ್ನು ನಿರಾಕರಿಸುವ ರೀತಿ ಡಿ.ಎಲ್.ಎನ್. ಅವರ ಎಲ್ಲಾ ಮುನ್ನುಡಿಗಳಲ್ಲಿ ಎದ್ದುಕಾಣುವ ನೆಲೆಯಾಗಿದೆ. ಪ್ರಾಚೀನ ಕೃತಿಗಳಲ್ಲಿನ ತಮ್ಮತನವನ್ನು ಉಳಸಿಕೊಳ್ಳಲು ಮೂಲಪಾಠ, ಕವಿಪಾಠ, ಪಾಠಶುದ್ಧತೆ ಎಡಗೆ ಹೆಚ್ಚು ಗಮನಹರಿಸಿ ಒಂದು ಅಚ್ಚಾದ ಪಠ್ಯವನ್ನು ಕೇಂದ್ರವಾಗಿರಿಸಿಕೊಂಡು ಸಂವಾದ ಬೆಳೆಸುವ ೬೦ರ ದಶಕದ ಕ್ರಮ ಇಲ್ಲಿದಾಗಿದೆ. ಡಿ.ಎಲ್.ಎನ್. ಅವರ ಬರಹಗಳು ತುಂಬಾ ಭಿನ್ನ, ಬಹುಮುಖಿಯಾದಂತಹ ವಿಚಾರಗಳನ್ನೊಳಗೊಂಡಿದ್ದು ಒಟ್ಟಾರೆ ವಿಶೇಷವೆನಿಸಿದೆ. ಚಲನಶೀಲತೆಯ ಸಾಹಿತ್ಯ, ಸಂಸ್ಕೃತಿಯನ್ನು ಮಂಡಿಸಿರುವ ಡಿ.ಎಲ್.ಎನ್. ಅವರ

ಆಲೋಚನಾಕ್ರಮ ಒಂದು ವಿಕಾಸ ಶೀಲ ಮತ್ತು ಅಂತಃಪ್ರಜ್ಞೆಯ ರೂಪವೆಂಬುದು ಪ್ರಮುಖವೆನಿಸಿದೆ.'[೭]

## ೮.೨. ಲಲಿತ ಪ್ರಬಂಧಗಳು ಮತ್ತು ಕವಿತೆಗಳು

ಬಹುಶ್ರುತ ಪ್ರತಿಭೆವುಳ್ಳ ಡಿ.ಎಲ್. ನರಸಿಂಹಾಚಾರ್ ಅವರು ಹಳಗನ್ನಡ ಸಾಹಿತ್ಯದಲ್ಲಿ ಒಲವುಳ್ಳ ಗಂಭೀರ ವಿದ್ವಾಂಸರು ಇಂತಹ ಒಲವಿನೊಂದಿಗೆ ಹೊಸಗನ್ನಡ ರೂಪಗಳಲ್ಲೊಂದಾದ ಲಲಿತಪ್ರಬಂಧಗಳು ಮತ್ತು ಕವಿತೆಗಳು ಎಂಬ ಕ್ಷೇತ್ರದಲ್ಲಿ ಪ್ರಧಾನ ಬಲವುಳ್ಳ ರೂಪ ತೋರಿಸಿದ ವಿದ್ವಾಂಸರು.

ಡಿ.ಎಲ್.ಎನ್. ಅವರು ತಮ್ಮ ಸಮಕಾಲೀನ ಹಿರಿಯ ವಿದ್ವಾಂಸರ ಚಿಂತನೆಗಳನ್ನು ಅನುಲಕ್ಷಿಸಿ, ಆ ಕಾಲದ ಸಾಮಾಜಿಕ ಸ್ಥಾನಮಾನಗಳು ತಮ್ಮ ಹಿರಿಯರಲ್ಲಿ ವ್ಯಕ್ತಿತ್ವವನ್ನು ಅನುಲಕ್ಷಿಸಿ ರಚಿಸಿದ ರೂಪಗಳೇ ಈ ಲಲಿತ ಪ್ರಬಂಧಗಳು ಮತ್ತು ಕವಿತೆಗಳು.

### ಲಾಳ ಕಟ್ಟಿಸಿಕೊಳ್ಳುವ ಎತ್ತು

ಕನ್ನಡ ನುಡಿಯ ಸಂಪುಟ–೧೦–ಸಂಚಿಕೆ ೪೨ರಲ್ಲಿ ಮೊದಲ ಬಾರಿಗೆ ಪ್ರಕಟಗೊಂಡ ಈ ವಿಷಯ ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ೨೦೦೮ರ ವೇಳೆಗೆ ಸಂಪಾದಿಸಿ ಸಂಕಲಿಸಿದ 'ಪ್ರೊ.ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು' ಕೃತಿಯ ೫ನೇ ಭಾಗದಲ್ಲಿ ಈ ವಿಷಯ ನಿರೂಪಿತಗೊಂಡದ್ದಾಗಿದೆ.

ಕನ್ನಡ ನುಡಿಯ ೧೯೪೮ರ ಸ್ವತಂತ್ರ ಸಂಚಿಕೆಯಲ್ಲಿ ಮೂಡಿ ಬಂದ ಈ ಲಲಿತ ಪ್ರಬಂಧ ಲಾಳ ಕಟ್ಟಿಸಿಕೊಳ್ಳುವ ಎತ್ತಿನ ಚಿತ್ರಣವನ್ನು ಬಿತ್ತರಿಸುತ್ತಾ ಅಂದಿನ ಪ್ರಸ್ತುತತೆಯನ್ನು ಅನುಲಕ್ಷಿಸಿ ನಿರೂಪಿಸಿದ್ದಾಗಿದೆ. ಎಷ್ಟೋ ವರ್ಷಗಳು ಪರಕೀಯರ ಸ್ವಾಧೀನದಲ್ಲಿ ಇದ್ದು ಎತ್ತಿನಂತೆ ಎರರಿಗೆ ದುಡಿಯುವ, 'ತನ್ನತನವನ್ನು ಬಿಟ್ಟು ದೇಶ ಸ್ವಾತಂತ್ರ್ಯಗೊಂಡಿದೆ, ಇದು ನಮ್ಮ ಹಿರಿಯರು ಹಿಂದೊಮ್ಮೆ ಭಗೀರಥನು ಗಂಗೆಯನ್ನು ಭೂಮಿಗೆ ಇಳಿಸಿದಂತೆ 'ಸ್ವಾತಂತ್ರವೆಂಬ ಗಂಗೆಯನ್ನು ದೇಶದಲ್ಲೇ ಹರಿಸಿದ್ದಾರೆ. ಈ ಪ್ರವಾಹ ಅನ್ಯದಾರಿ ಹಿಡಿಯದೇ ವ್ಯಕ್ತಿಗಿರುವ ಸ್ವಾತಂತ್ರ್ಯವೇನು? ಎಂಬದನ್ನು ಅರಿತು ವ್ಯಕ್ತಿ ಮಾಡುವ ಕಾರ್ಯಗಳಲ್ಲಿ ಕೆಲವು ಮಾತ್ರ ಸುಖ ದುಃಖಕಾರಕ ಮಿಕ್ಕ ಕೆಲವು ಇತರರಿಗೆ ಮಾತ್ರ ಹಿತಕಾರಿ ಉಳಿದವು ಇಡೀ ಸಮಾಜಕ್ಕೆ ಹಾನಿವುಂಟು ಮಾಡುತ್ತವೆ. ಎಲ್ಲಾ ದೃಷ್ಟಿಯಿಂದಲೂ ಒಳ್ಳೆಯ ಕಾರ್ಯ ಮಾಡುವ ಶಕ್ತಿ ಸ್ವತಂತ್ರ ವ್ಯಕ್ತಿಗಿದೆ ಆದ್ದರಿಂದ ಎಲ್ಲಾ ಸ್ವತಂತ್ರ ಚಿತ್ರವ್ಯಕ್ತಿಗಳಿಗೂ ಮಿತಿ ಉಂಟು ಇದನ್ನೆಲ್ಲ ಅರಿತು ಪ್ರತಿಯೊಬ್ಬನೂ ತನ್ನ ಪಾಲಿನ ರಾಷ್ಟ್ರಹಿತಕಾರಿಯಾದ ಕಾರ್ಯವನ್ನು ಶ್ರದ್ಧೆಯಿಂದ, ದಕ್ಷತೆಯಿಂದ, ವಿಶಾಲ ಮನಸ್ಸಿನಿಂದ ಮಾಡಿದಾಗಲೇ ಮೂಡಿರುವ ಸ್ವತಂತ್ರ ಚಿರಕಾಲ ಉಳಿಯುತ್ತದೆ. ಇಲ್ಲದಿದ್ದರೆ ಪ್ರಬಂಧದುದ್ದಕ್ಕೂ ಮೂಡಿದ ಬಾಳ ಕಟ್ಟಿಸಿಕೊಳ್ಳುವ

ಎತ್ತಿನ ನೋವು ಭಾವಗಳು ತುಂಬಿದ ಸ್ಥಿತಿಯೇ ನಮಗೆ ಮರಳಿ ಬಂದು ದುಃಖದಲ್ಲಿ ಮುಳುಗುವುದು ಸಾಧ್ಯವೆನಿಸುತ್ತದೆ.'[೮] ಎಂದು ಈ ಪ್ರಬಂಧದ ಚಿತ್ರಣದಲ್ಲಿ ವಿವರಿಸಿದ್ದು ಕಂಡು ಬಂದಿದೆ.

**ಕಣ್ಣೊ ಕುರುಡೊ?**

೧೯೪೯ರಲ್ಲಿ ಎಸ್.ಅನಂತನಾರಾಯಣ ಅವರು ಸಂಪಾದಿತ 'ಮುತ್ತುಹವಳ' ಕೃತಿಯಲ್ಲಿ ಮೊದಲಿಗೆ ಸಂಕಲಿತಗೊಂಡ ಈ ಲಲಿತ ಪ್ರಬಂಧವು ಮುಂದೆ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿದ 'ಪ್ರೊ.ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು' ಕೃತಿಯ ೫ನೇ ಭಾಗದಲ್ಲಿ ಸಂಕಲಿತಗೊಂಡದ್ದಾಗಿದೆ.

ಈ ಲಲಿತ ಪ್ರಬಂಧದಲ್ಲಿ ಡಿ.ಎಲ್.ಎನ್ ಅವರು ಹೋಮರ್ ಕವಿಯ 'ಒಡಿಸ್ಸಿ' ಎಂಬ ಮಹಾಕಾವ್ಯದಲ್ಲಿ 'ಪಾಲಿಫೀಮಸ್' ಎಂಬ ಒಕ್ಕಣ್ಣ ರಾಕ್ಷಸನ ಕಥೆಯನ್ನು ಪ್ರಸ್ತಾಪಿಸಿ ಜೀವ ಸಂಕುಲದಲ್ಲಿ ಒಂದು ಕಣ್ಣು, ಎರಡು ಕಣ್ಣು ಹಲವು ಕಣ್ಣುಗಳ ಪ್ರಾಣಿಗಳನ್ನು ಪ್ರಸ್ತಾಪಿಸಿ ಎರಡೆರಡಿರುವ ದ್ವಂದ್ವ ಪ್ರಪಂಚದಲ್ಲಿ ಎರಡೆರಡಿರುವುದೇ ಸುಂದರವೆನ್ನುವುದು ಸಹಜ! ಹಾಗೆಯೇ ಮುಖಕ್ಕೆ ಒಂದೇ ಮೂಗು ಹೇಗೆ ಸುಂದರವೂ ಹಾಗೆ ಪೂರ್ವದಿಂದಲೂ ಒಂದೇ ಕಣ್ಣು ಇದ್ದರೆ ಸಮಾಜ ಒಪ್ಪಿಕೊಳ್ಳುತಿತ್ತೊ? ಹೇಗೋ ಎಂದು ಅಭಿಪ್ರಾಯಿಸಿ ನಿತ್ಯ ಚಿತ್ತವಾಗಿ ನಡೆಯುವ ಲೋಕದ ಕಷ್ಟಕಾರ್ಪಣ್ಯ, ನೋವು ನಲಿವುಗಳ ನಾನಾ ನೋಟಗಳಿಗೆ ಒಂದಾಗಿ ನಮಗೆ ಕಾಣಿಸುವ ಕುಗ್ಗು, ಹಿಗ್ಗುಗಳ ಉಯ್ಯಾಲೆಯಲ್ಲಿ ನಿರಂತರವಾಗಿರುವಾಗ ತೋಗುವ, ತೋಗುವಾಗಲೇ ಬಿವುಟುವ ಕಾರ್ಯ ಕಣ್ಣಿನದು. ಕಿವಿ ಇಲ್ಲದ ಕಿವುಡ ಸಂತೆಯಲ್ಲೂ ನಿರ್ದೋಷಿಯಾಗಿ ಹೇಗೆ ಬಾಳ ಬಲ್ಲನೋ ಹಲ್ಲಿಲ್ಲದವನೂ ಕೃತಕ ಹಲ್ಲುಗಳನ್ನು ಹಾಕಿಕೊಂಡು ಕಟ ಕಟ ಶಬ್ದ ಮಾಡುವುದು ತರವೇ ಹಾಗೆಯೇ ಇರುವುದು ಲೇಸು ಅಲ್ಲವೇ, ಈ ಕಾರ್ಯಕ್ಕಾಗಿ ಹೋಮರನ ವಿಚಾರ ಬಾಹ್ಯ ದೃಷ್ಟಿಯಿಂದ ಶೂನ್ಯವಾದರೂ ಅಂತರದೃಷ್ಟಿಯಲ್ಲಿ ಪೂರ್ಣತ್ವವಾಗಿದೆ ಎಂಬ ವಿಚಾರ ತಿಳಿದು ಬರುತ್ತದೆ. ಮುಂದುವರೆದು ಗಾಂಧಾರಿ, ದೃತರಾಷ್ಟ್ರರನ್ನೂ ಉದಾಹರಿಸಿ ಇವರಂತೆ ಪರಿಪೂರ್ಣತೆ ಕಣ್ಣಿಲ್ಲದಿದ್ದಾರೂ ಸಾಧಿಸುವುದು ಮಾನವನ ಸರ್ವ ಪ್ರಯತ್ನ ಗುಣವೆಂದೂ ಈ ಪುರಾಣ ವಿಚಾರದಿಂದ ತಿಳಿಸಿದ್ದಾರೆ. ಇದೆಲ್ಲದರ ಒಟ್ಟಾರೆ ಅಂಶವಾಗಿ ಮಾನವ ಜೀವನದಲ್ಲಿ ಹೊರಗಣ್ಣಿನಿಂದ ಸಮಾಜವನ್ನು ನೋಡುವುದಕ್ಕೂ ಅಂತರಾಳದ ಒಳಗಣ್ಣಿನಿಂದ ಸಮಾಜವನ್ನು ನೋಡುವುದಕ್ಕೂ ತುಂಬಾ ವ್ಯತ್ಯಾಸವಿದ್ದು ಇದರಿಂದ ಅಂತರ್ಮುಖಿ ನಿಯಮ ರೂಪಗೊಳ್ಳುವಿಕೆ ಪ್ರಮುಖವೆನಿಸುತ್ತದೆ.

ಒಟ್ಟಾರೆಯಾಗಿ ಸಮಾಜ ವೀಕ್ಷಣೆಗೆ ಕಣ್ಣುಮುಖ್ಯವೊ? ಕುರುಡುತನ ಮುಖ್ಯವೋ? ಎಂಬ ವಿಚಾರವಾಗಿ ಡಿ.ಎಲ್.ಎನ್ ಅವರು ಚರ್ಚಿಸುತ್ತಾ ಏಕದಲ್ಲಿ ಅನೇಕ ಎಂಬ ವಿಜ್ಞಾನದ ನಂಬಿಕೆಯಿಂದ ಅನೇಕದಿಂದ ಏಕ ಎಂಬ ಒಟ್ಟಾರೆ ವಿಚಾರವನ್ನು ಕಣ್ಣಿನಿಂದ ಸಮಾಜ ನೋಡಬೇಕೋ? ಕಣ್ಣಿಲ್ಲದೆ ಕಣ್ಣಿರುವ ಮನುಷ್ಯನ ಒಳಗಣ್ಣಿನಿಂದ ಸಮಾಜ ಗ್ರಹಿಸಬೇಕೋ ಎಂಬ ನಿಯಮ ಪ್ರಸ್ತಾಪಗೊಂಡುದ್ದು ಎದ್ದು ಕಾಣುತ್ತದೆ.

**ವ್ಯಾಸಂಗದ ಹವ್ಯಾಸ**

ಪ್ರಬುದ್ಧ ಕರ್ಣಾಟಕ ೩೩ನೇ ಸಂಚಿಕೆಯ ಭಾಗ ೩ರಲ್ಲಿ ೧೯೫೧ರ ವೇಳೆಗೆ ಪ್ರಕಟವಾದ ಈ ಲೇಖನ ಮುಂದೆ ಟಿ.ವಿ.ವೆಂಕಟಾಚಾಲಶಾಸ್ತ್ರಿ ಅವರು ಸಂಪಾದಿಸಿದ 'ಪ್ರೋ.ಡಿ.ಎಲ್. ನರಸಿಂಹಾಚಾರ್ ಅವರ ಹೆಚ್ಚಿನ ಬರಹಗಳು ಭಾಷಣಗಳು' ಎಂಬ ಕೃತಿಯ ೫ನೇ ಭಾಗದಲ್ಲಿ ಬಿತ್ತರಗೊಂಡದ್ದಾಗಿದೆ.

ಕೆಲವನ್ನು ಬಲ್ಲವರಿಂದ (ತಿಳಿದವರಿಂದ) ಕಲಿಯಬೇಕು, ಕೆಲವನ್ನು ಶಾಸ್ತ್ರಗಳನ್ನು ನೋಡಿ ಕಲಿಯಬೇಕು ಎಂಬ ನಮ್ಮ ಹಿರಿಯರ ನುಡಿ ಯಾವ ಕಾಲಕ್ಕೂ ಪ್ರಸಿದ್ಧ ಪಡೆದದ್ದಾಗಿದೆ. ಯಾವುದೇ ವಿಷಯವನ್ನು ಒಟ್ಟಾಗಿ ಎಲ್ಲದನ್ನು ಓದಿ ಮುಗಿಸುತ್ತೇನೆಂಬ ಧ್ಯೇಯ ಅಸಾದ್ಯವಾದದ್ದು ಯಾವುದೇ ವ್ಯಕ್ತಿ ತನ್ನ ಬುದ್ದಿಮಟ್ಟಕ್ಕೆ ಯಾವುದು ಎಷ್ಟು ನಿಲುಕುತ್ತದೆ ಅಷ್ಟನ್ನು ಮಾತ್ರ ಅಭ್ಯಾಸಿಸಬೇಕು ಅಷ್ಟಕ್ಕೂ ಮೀರಿ ಹೆಚ್ಚಿನದಕ್ಕೆ ಕೈ ಹಾಕಿದರೆ ಅದೊಂದು ಕಷ್ಟ ಸಾಧ್ಯದ ಕೆಲಸವೆನಿಸುತ್ತದೆ ಗ್ರಂಥಾವಲೋಕನದಿಂದ ಜ್ಞಾನವನ್ನು ಗಳಿಸುವ ವಿಧಾನಕ್ಕೆ ವ್ಯಾಸಂಗವೆಂದು ಹೆಸರು ಕೈಗೆಟುಕಿಸಿಕೊಂಡ ವಿಷಯವನ್ನು ಆಸಕ್ತಿಯಿಂದ ಅಭ್ಯಾಸಿಸುವುದು ನಿಜವಾದ ವ್ಯಾಸಂಗವೆನಿಸಿದೆ. ಇದೇ ರೀತಿ ಹವ್ಯಾಸವೆಂದರೆ, ಗೀಳು ಆಸಕ್ತಿ ಅಭಿಲಾಷೆ ಎಂದು ಹೆಸರಿನದಾಗಿದೆ.

ವ್ಯಾಸಂಗದ ಹವ್ಯಾಸವು ಕೆಲವು ಲಕ್ಷಣಗಳನ್ನೊಂದಿದ್ದು ಈ ಕೆಳಗಿನಂತೆ ತಿಳಿಸಲಾಗಿದೆ.

* ಕೆಲವು ವ್ಯಾಸಂಗದ ಹವ್ಯಾಸಗಳು ಅವನ್ನಳವಡಿಸಿಕೊಂಡ ವ್ಯಕ್ತಿಗಳಿಗೆ ಮಾತ್ರ ಹಿತವನ್ನು ಅಹಿತವನ್ನು ನೀಡುವುವಾಗಿವೆ.

* ಕೆಲವುಗಳು ಸುತ್ತಲಿನ ಸಮಾಜಕ್ಕೆ ಮಾತ್ರ ಒಳ್ಳೆಯದು, ಕೆಟ್ಟದ್ದನ್ನು ನೀಡಬಹುದಾಗಿವೆ.

* ಕೆಲವುಗಳು ಏಕಕಾಲದಲ್ಲಿ ವ್ಯಕ್ತಿಗೂ, ಸಮಾಜಕ್ಕೂ, ಕ್ಷೇಮವನ್ನು, ಕ್ಷೋಭೆಯನ್ನು ನೀಡುವುದಾಗಿವೆ.

ಈ ಎಲ್ಲವುಗಳಲ್ಲಿ ಕಲಿತದ್ದವುದು ಒಳ್ಳೆಯದಾಗಿದ್ದವುಗಳಾದರೆ ಯಾರಿಗೂ ಕೆಡಕಾಗುವುದಿಲ್ಲದ್ದಾಗಿದೆ.

ಸ್ವತಃ ಜ್ಞಾನದಿಂದ ಬರುವ ತಿಳುವಳಿಕೆಯೇ ಉನ್ನತವಾದ ಜ್ಞಾನವಾಗಿದ್ದರೂ ಅದು ಎಲ್ಲರಿಗೂ ಎಲ್ಲಾ ವಿಷಯಗಳಲ್ಲಿ ಲಭ್ಯವಾಗುವುದಿಲ್ಲ. ಪ್ರತಿಯೊಬ್ಬನಿಗೂ ಮಿತಿ ಇದ್ದು ಆ ಮಿತಿಯನ್ನು ವಿಸ್ತರಿಸಿಕೊಳ್ಳುವುದು ವ್ಯಾಸಂಗದ ಅವಶ್ಯಕತೆಗೆ ಇದು ಪೂರಕವೆನಿಸಿದ್ದಾಗಿದೆ.

ಯಾವುದೇ ಅನುಭವದ ಜ್ಞಾನಕ್ಕೆ ವ್ಯಾಸಂಗದ ಜ್ಞಾನ ಪೂರಕವಾಗಿರುತ್ತದೆ.

ಇಷ್ಟೆಲ್ಲಾ ಪೂರೈಕೆಯಾದ ವ್ಯಾಸಂಗದ ಹವ್ಯಾಸ ಕೆಲವು ಅನರ್ಥಗಳಿಗೂ ಕಾರಣವಾಗಬಹುದು.

ಉದಾ: ಓದಿನ ಹವ್ಯಾಸ ಅತಿಯಾದರೆ ಹುಚ್ಚಾಗಿ ತಿರುಗಬಹುದು ಆದ್ದರಿಂದ ಓದಿನಲ್ಲಿ ಮಿತಿ ಇರಬೇಕು.

ಓದಿನ ಹವ್ಯಾಸ ನಮ್ಮ ಮನೊಬುದ್ಧಿಬಲವನ್ನು ಆಕ್ರಮಿಸಿಕೊಂಡು ನಮ್ಮನ್ನು ದಾಸ್ಯಕ್ಕೆ ಎಳೆಯುವ ಸ್ಥಿತಿಗಳುಂಟು ಆದ್ದರಿಂದ ಓದಿನಲ್ಲಿ ವಿರಾಮ ಅವಶ್ಯ, ಅತಿ ಅವಶ್ಯವೆನಿಸಿದೆ. ಸುಲಭವಾಗಿ ಕಾಲಕ್ಷೇತ್ರ ಮಾಡುವುದಕ್ಕೆ ವ್ಯಾಸಂಗದ ಹವ್ಯಾಸ ಉತ್ತಮವಾದ ಮಾರ್ಗವೆನಿಸಿದೆ.

ಒಟ್ಟಾರೆಯಾಗಿ ವ್ಯಾಸಂಗದ ಹವ್ಯಾಸವನ್ನು ಒಂದು ವಿಹಾರವನ್ನಾಗಿಸಿಕೊಂಡು ಓದುವುದು, ಓದಿನ ಮೂಲಕ ಕರಗತ ಮಾಡಿಕೊಳ್ಳುವುದು, ಕರಗತವನ್ನು ಜೀವನಕ್ಕೆ ಅಳವಡಿಸಿಕೊಳ್ಳುವುದು ವ್ಯಾಸಂಗದ ಹವ್ಯಾಸದ ಮುಖ್ಯಲಕ್ಷಣವೆನಿಸಿದೆ.

**ಬಿಡುಗಡೆ**

ಕರ್ನಾಟಕ ಸಂಘ ಮಹಾರಾಜ ಕಾಲೇಜು, ಮೈಸೂರು ೧೯೨೮ರಲ್ಲಿ ಹೊರ ತಂದ 'ಕಿರಿಯ ಕಾಣಿಕೆ' ಕವನ ಸಂಕಲನದಲ್ಲಿ ಮೂಡಿ ಬಂದ ಈ ಕವನ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದದ್ದಾಗಿದೆ. ದೇಶವು ಪರಕೀಯರ ಅಧೀನ ಕಾಲಘಟ್ಟದಲ್ಲಿ ಮೂಡಿ ಬಂದ ಈ ಕಾವ್ಯ 'ನವೋದಯ ಸಾಹಿತ್ಯ'ವನ್ನು ಪೂರ್ತಿಯಾಗಿ ಆವರಿಸಿಕೊಂಡದ್ದಾಗಿದೆ.

ಭಾರತಾಂಬೆಯು ಬಿಡುಗಡೆಗಾಗಿ ಹಪಹಪಿಸುವ ಕಾಲಘಟ್ಟದಲ್ಲಿ ಬಂಧನದಿಂದ ಈ ನಾಡನ್ನು ಮುಕ್ತಗೊಳಿಸುವ ದೇವರೇ ಈ ಸಂದಿಗ್ನ ಸಮಯದಲ್ಲಿ ಮರೆಯಾಗಬೇಡ ವಿಶ್ವಕ್ಕೆ ಅಧಿಪತಿಯಾಗಿ ಎಲ್ಲ ಭಾರವನ್ನು ಹೊತ್ತು ಇಂದು ನಾನೇ ಬಂಧಿಯಾಗಿದ್ದೇನೆ. ಸಾಕು ಬಿಡುಸು ನನ್ನನ್ನು ಒಟ್ಟಾರೆ ಮುಕುತಿ ಕೊಟ್ಟುಬಿಡು ನನಗೆ ಎಂದು ಭಾರತಾಂಬೆಯೇ ತನ್ನ ಅಳಲನ್ನು ತನ್ನ ಬಿಡುಗಡೆಗಾಗಿ ತಾನೆ ಹಪಹಪಿಸಿದ್ದಾಗಿ ಕಂಡುಬಂದಿದೆ.

ಈ ಕಾಲಘಟ್ಟದಲ್ಲಿ ಕುವೆಂಪು, ಪುತಿನ, ತೀ.ನಂ.ಶ್ರೀ.ಗಳವರಿತ್ಯಾದಿಗಳು ಕವನಗಳನ್ನು ಬರೆಯುತ್ತಿದ್ದರು. ಕುವೆಂಪು, ಪುತಿನ ಕಾವ್ಯ ರಚನೆಯಲ್ಲಿ ಮುಂದುವರೆದರು ತೀ.ನಂ.ಶ್ರೀ ಅವರು ಮಾತ್ರ ಆಗಾಗ ಕವಿತೆ ಬರೆಯುತ್ತಿದ್ದವರು ಆದರೆ ಡಿ.ಎಲ್.ಎನ್ ಅವರು 'ಕವಿತೆ ನನ್ನ ಸ್ವಧರ್ಮ ಅಲ್ಲ ಎಂಬ ಹೇಳಿಕೆಯಂತೆ' ಬಾಳಿದ ವ್ಯಕ್ತಿಯಾಗಿದ್ದು ಮುಂದೆ ಆದರೆ

ಇವರಿಗೆ ಹೊಸಗನ್ನಡದ ಸಾಹಿತ್ಯದ ಮೇಲೆ ತಾತ್ಸಾರವೇನೂ ಇರಲಿಲ್ಲದಂತೆ ಕಾಣುತ್ತದೆ. ಎಲ್ಲರೂ ಹೊಸಗನ್ನಡ ಸಾಹಿತ್ಯದೆಡೆಗೆ ಸಾಗಿದರೆ ನಮ್ಮ ಪ್ರಾಚೀನ ಸಾಹಿತ್ಯವನ್ನು ಮುನ್ನೆಡಸುವರಾರು ಎಂಬ ಹೇಳಿಕೆಯಂತೆ ಹೊಸಗನ್ನಡ ಪ್ರಕರಗಳಾದ ಕಾವ್ಯ, ಕಥೆ, ಕಾದಂಬರಿಗಳಿತ್ಯಾದಿಗಳಿಗೆ ತೊಡಗಿಸಿಕೊಳ್ಳದೇ ಪ್ರಾಚೀನ ಸಾಹಿತ್ಯಕ್ಕೆ ಮಣೆ ಹಾಕಿದವರಾಗಿದ್ದಾರೆ.

**ಜೀವನ**

'ಕಿರಿಯ ಕಾಣಿಕೆ' ಕವನ ಸಂಕಲನದಲ್ಲಿ ಮೊದಲ ಬಾರಿಗೆ ಅಚ್ಚಾದ ಕವಿತೆ 'ಜೀವನ. ಈ ಕವನ ಸಂಕಲನ ಕರ್ನಾಟಕ ಸಂಘ, ಮೈಸೂರು ನಿಂದ ೧೯೨೮ರಲ್ಲಿ ಪ್ರಕಟಗೊಂಡಿದ್ದು ಈ ಕೃತಿಯು ೯೨–೯ಳನೇ ಪುಟಗಳಲ್ಲಿ ಸಂಕಲಿತ ಈ ಕವಿತೆಯು ಮುಂದೆ ೨೦೦೮ರ ವೇಳೆಗೆ ಟಿ.ವಿ.ವೆಂಕಟಾಚಲ ಶಾಸ್ತ್ರಿ ಅವರು ಸಂಪಾದಿತ ಪ್ರೋಫೆಸರ್ 'ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು' ಕೃತಿಯ ೫ನೇ ಭಾಗದಲ್ಲಿ ಸಂಖಲಿತಗೊಂಡ ಕಾವ್ಯವಾಗಿದೆ.

ನವೋದಯ ಕಾಲಘಟ್ಟದ ಆಶಯದಂತೆ ರಚನೆಯಾದ ಈ ಕವಿತೆ ದೇಶಪ್ರೇಮ, ಪ್ರಕೃತಿ ಸೌಂದರ್ಯವನ್ನು ಮೈಗೂಡಿಸಿಕೊಂಡು ಮೂಡಿದ್ದಾಗಿದೆ.

ಸ್ವಾತಂತ್ರ್ಯ ಪೂರ್ವ, ದೇಶದ ಅಭದ್ರತೆಯ ಕಾಲಘಟ್ಟದ ಪರಿಸ್ಥಿತಿಯಲ್ಲಿ ಜೀವನವೆಂದರೆ ತಿಳಿಯದೇ ಯಾವುದು ಜೀವನಕ್ಕೆ ಆದಿ ಅಂತ್ಯವೆಂಬ ಗೋಳಾಟದಲ್ಲಿ ದಿನನಿತ್ಯದಂತೆ ಮೂಡಲಿನ ಸೂರ್ಯ ಮೂಡಿ ನಿತ್ಯದಂತೆ ಪಡುವಣದಲ್ಲಿ ಮುಳುಗುತ್ತಿದ್ದಾನೆ. ಹಕ್ಕಿಗಳು ಮರಳಿ ಸಂಜೆ ವೇಳೆಗೆ ಗೂಡು ಸೇರುತ್ತಿರುವಂತೆ ಸ್ವಾತಂತ್ರ್ಯಕ್ಕಾಗಿ ಅಲ್ಲಲ್ಲಿ ಜನ ಸೇರುತ್ತಿದ್ದಾರೆ ಸ್ವಾತಂತ್ರ್ಯಕ್ಕಾಗಿ ಹಪಹಪಿಸುತ್ತಿದ್ದಾರೆ. ಬೆಟ್ಟಗಳಲ್ಲಿ ಹರಿದಾಡುವ ನೀರಿನ ಓರಿಯಂತೆ ಹೂಗಳ ಇಂಪಾದ ಸುವಾಸನೆಗೆ ಸುತ್ತುವ ದುಂಬಿಯಂತೆ ಮತ್ತೆ ಮತ್ತೆ ಜನ ನಿತ್ಯ ಸೇರುತ್ತಾರೆ, ಹಗಲುತ್ತಾರೆ. ಹಾಗೆಯೇ ಬಿಸಿಲ ಬೇಗೆಗೆ ಬೆಂದು ಆಯಾಸಗೊಂಡು ಆಕಾಶಕ್ಕೆ ಮುಖ ಮಾಡಿರುವ ಸಸಿಗಳಂತೆ ದೇಶಭಕ್ತರು ಬಳಲಿದ್ದಾರೆ ಇವರನ್ನು ಸಂತೈಸಲು ಆಗದು ಹಸಿದು ಬಾಯಾರಿ ಮಳೆಗಾಗಿ ಕಾದು ಕುಳಿತ ಭೂಮಿಯಂತೆ ಸ್ವಾತಂತ್ರ್ಯಕ್ಕಾಗಿ ಕಾಯುತ್ತಾ ನಿತ್ಯ ಸತ್ತುಹುಟ್ಟುತ್ತಿರುವ ಮನಃಶಾಂತತೆಯನ್ನು ಭದ್ರಗೊಳಿಸಿ ಅನುದಿನವೂ ದೇಶಸೇವೆಯಲ್ಲಿ ನಿರತನಾಗುವ ಗೆದ್ದೆ ಗೆಲ್ಲುತ್ತೇವೆಂಬ ಆಶಯದೊಂದಿಗೆ ನಿತ್ಯ ಪಯಣಿಸಿದ್ದನ್ನು ಈ ಕವಿತೆಯಲ್ಲಿ ಡಿ.ಎಲ್.ಎನ್ ಸ್ವಾತಂತ್ರ್ಯ ಪೂರ್ವದೇಶದ ಅಭದ್ರತೆಯ ಪರಿಸ್ಥಿತಿಯ ಕಾಲಘಟ್ಟವನ್ನು ಕುರಿತು ಹೇಳಿದ್ದಾರೆ. ಅಂದಿನ ಜನಜೀವನವೆಂದರೆ ತಿಳಿಯದೇ ನಿತ್ಯ ಹಕ್ಕಿಗಳು ಬೆಳಗ್ಗೆ ಎದ್ದು ಎಲ್ಲೆಡೆ ಸೂರಾಡಿ ಸಂಜೆಗೂಡು ಸೇರುವ ಹಾಗೇ ಜನರೆಲ್ಲ ಹಗಲು ಸ್ವತಂತ್ರಕ್ಕಾಗಿ ಹರಿದಾಡಿ ಮತ್ತೆ ತಮ್ಮ ನೆಲೆಯಲ್ಲಿ ಸೇರುತ್ತಿದ್ದ ಈ ನಿತ್ಯದ ಪರಿಪಾಟದ ಚಿತ್ರಣವನ್ನು ಕಣ್ಣಿಗೆ

ಕಟ್ಟುವಂತೆ ಮೂಡಿಸಿದ್ದಾರೆ. ಅಲ್ಲದೇ ಬೆಟ್ಟಗಳಲ್ಲಿ ಹರಿದಾಡುವ ನೀರಿನ ಜರಿಯಂತೆ ಅರಳಿದ ಹೂವಿಗೆ ದುಂಬಿಯು ಬೆನ್ನತ್ತಿದ್ದ ಹಾಗೆ ಮತ್ತೆ ಮತ್ತೆ ಜನ ನಿತ್ಯ ಸೇರುವುದು ಹಾಗೆಯೇ ಬಿಸಿಲು ಬೇಗೆಗೆ ಬೆಂದು, ಅಕಾಶಕ್ಕೆ ಮುಖ ಮಾಡಿರುವ ಸಸಿಗಳಂತೆ ಸ್ವಾತಂತ್ರ್ಯಕ್ಕಾಗಿ ಹವಣಿಸಿದ ದೇಶ ಭಕ್ತರು ನಿತ್ಯ ಬಳಲುತ್ತಿದ್ದಾರೆ. ಹಸಿದು ನೀರಿಗಾಗಿ ಹವಣಿಸಿ ಬಿರುಕು ಬಿಟ್ಟ ಭೂಮಿಯಂತೆ ಸ್ವಾತಂತ್ರ್ಯಕ್ಕಾಗಿ ಹಪಿಹಪಿಸುವ ಜನತೆ ನಿತ್ಯ ಸತ್ತು ಹುಟ್ಟುತ್ತಾ ಗೆದ್ದೇ ಗೆಲ್ಲುತೇವೆ ಎಂಬ ಛಲದಿಂದ ಅನುದಿನವು ದೇಶಸೇವೆಯಲ್ಲಿ ನಿರತಗಿದ್ದನ್ನು ವಿವರಿಸಿದ್ದಾರೆ. ನಿತ್ಯ ತಮ್ಮಲ್ಲಿ ಪ್ರಜ್ವಲಿಸುವ ದುಗುಡ ದುಃಖದುಮ್ಮಾನಗಳೆಲ್ಲವನ್ನೂ ಸಹಿಸಿ ಇವೆಲ್ಲ ಸುಳ್ಳು ಜಾಲಗಳೆಂದು ತಮ್ಮನ್ನು ಕುಗ್ಗಿಸುವ ತಂತ್ರಗಳೆಂದು ಅವೆಲ್ಲವನ್ನು ಮನದ ಭಾವನೆಯಿಂದ ಕಿತ್ತೆಸೆದು, ಹೊಸತನದ ಬಯಕೆಯಿಂದ ಈಗ ಹಾತೊರೆಯುವ ಸ್ವಾತಂತ್ರ್ಯ ಪ್ರೀಯರಿಗೆ ಆನಂದಾನುಭಾವವನ್ನು ನೀಡುವ ದೇವರೆ ಎಂದು ಸ್ವಾತಂತ್ರ್ಯ ಪ್ರೀಯರ ಬಯಕೆಯನ್ನು ಈ ರೀತಿ ಡಿ.ಎಲ್.ಎನ್ ತಮ್ಮ ಕವಿತೆ ಮೂಲಕ ಬಿತ್ತರಿಸಿ ಕೊಂಡಿದ್ದು ಕಂಡುಬಂದಿದೆ.

**ಶ್ರೀಯವರಿಗೆ ಅಂಕಿತ**

೧೯೪೪ರಲ್ಲಿ ಮೊದಲ ಬಾರಿಗೆ ಒಟ್ಟಾಗಿ ಮುದ್ರಣ ಕಂಡ ವಡ್ಡರಾಧನೆಯ ಪರಿಷ್ಕೃತ ಕೃತಿಯ ಅರ್ಪಣೆಯಾಗಿ ಬಿ.ಎಂ.ಶ್ರೀ ಅವರು ಹೆಸರಿಗೆ ಡಿ.ಎಲ್.ಎನ್ ಬರೆದ ಪದ್ಯ ಇದಾಗಿದೆ. ನಂತರದಲ್ಲಿ ಟಿ.ವಿ.ವೆಂಕಟಾಚಾಲಶಾಸ್ತ್ರಿ ಅವರು ಸಂಪಾದಿತ 'ಪ್ರೋಫೆಸರ್ ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು' ಕೃತಿಯ ಐದನೆಯ ಭಾಗದಲ್ಲಿ ಸಂಕಲಿತಗೊಡದ್ದಾಗಿದೆ.

ಎರಡು ಚರಣ ಎಂಟು ಪಂಕ್ತಿಗಳುಳ್ಳ ಈ ಪುಟ್ಟ ಪದ್ಯ ಹಳಗನ್ನಡ ಕಾವ್ಯದಂತೆ ವಿದ್ವತ್ತಿನ ಗುರುವಾದ ಬಿ.ಎಂ.ಶ್ರೀ ಅವರನ್ನು ವರ್ಣಿತ ರೂಪವೆನಿಸಿದೆ.

ಡಿ.ಎಲ್.ಎನ್. ಅವರಿಗೆ ಹೊಸಗನ್ನಡಕ್ಕಿಂತ ಹಳಗನ್ನಡದ ಮೇಲೆ ಹೆಚ್ಚಿನ ಪ್ರೀತಿ, ಇದಕ್ಕೆ ಮೂಲ ಕಾರಣ ತನ್ನ ಅಜ್ಜ ಅಣ್ಣಾಸ್ವಾಮಿ ಅಯ್ಯಂಗಾರ್ ಅವರ ಪ್ರೇರಣೆ ಮತ್ತು ಕೌಟುಂಬಿಕ ಪರಿಸರ. ನವೋದಯ ಸಾಹಿತ್ಯ ಕಾಲಘಟ್ಟದ ಈ ಯುವ ಪೀಳಿಗೆಗಳಿಗೆಲ್ಲ ಬಿ.ಎಂ.ಶ್ರೀಯವರ ಪ್ರಭಾವ ಮತ್ತು ಪ್ರೇರಣೆ ಅಪಾರವಾಗಿದ್ದಾಗಿತ್ತು. ಈ ಪ್ರಭಾವಕ್ಕೆ ಒಳಗಾದ ಅನೇಕರು ಬರೆಯುಲು ತೊಡಗಿದರು. ಪ್ರಾರಂಭದಲ್ಲಿ ಡಿ.ಎಲ್.ಎನ್. ಕವಿತೆ ಬರೆದರಾದರೂ ಇವು 'ಕಿರಿಯ ಕಾಣಿಕೆ' ಯಲ್ಲಿ ಪ್ರಕಟವಾಗಿವೆ. ಆಗಾಗ ಕವಿತೆ ಬರೆಯುವ ಗೀಳಿದ್ದ ಇವರು ಹೆಚ್ಚಾಗಿ ಅತ್ತ ಕಡೆ ಗಮನಕೊಡದೆ ಹಳಗನ್ನಡ ಸಾಹಿತ್ಯದೆಡೆಗೆ ಕಾರ್ಯನಿರತರಾದವರು. ಈಗಿನ ಕಾಲದ ಕವಿಗಳು ಶಾಸ್ತ್ರ ಛಂದಸ್ಸು, ಕಂದ, ವೃತ್ತಗಳೆಡೆಗೆ ಗಮನವನ್ನು ನೀಡುವುದೇ ಇಲ್ಲವೆಂದು ಬೇಸರವಹಿಸಿದ್ದ ಡಿ.ಎಲ್.ಎನ್ ಕಂದ, ವೃತ್ತಗಳ ದಾಟಿಯಲ್ಲೇ ಕವಿತೆಗಳನ್ನು

ಬರೆಯಲು ಪ್ರಯತ್ನಿಸಿವರು. ಇದರ ಫಲವಾಗಿ ಒಮ್ಮೆ ಗೋರೂರು ರಾಮಸ್ವಾಮಿ ಅಯ್ಯಂಗಾರ ಅವರ ಮನೆಯ ಮಂಗಳ ಕಾರ್ಯಕ್ಕೆ ಕಂದಪದ್ಯದಲ್ಲೇ ಆಶೀರ್ವದಿಸಿ ಶುಭ ಕೋರಿದ ಉಲ್ಲೇಖ ಪದ್ಯವೊಂದನ್ನು ಕಳುಹಿಸಿದ್ದುಂಟು. ಹೀಗೆಯೇ ಬಿ.ಎಂ.ಶ್ರೀ ಕಂಠಯ್ಯರವರನ್ನು ಕುರಿತ ಅವರ ವಿದ್ವತ್ತನ್ನು ಕುರಿತು ಈ ಪದ್ಯ ರಚನೆಗೊಂಡಿದ್ದಾಗಿದೆ.

**'ಶ್ರೀ ಕಂಠ ಗುರುವ ಕಾವ್ಯವು ನಾಕರ್ಣಿಸಿ ರಸದ ಮಡುವೊಳಾವಿದ ನಾವಂ**

**ಕೇಕಿಕ ನೃತ್ಯದ್ ಬರ್ಹಾ ಲೋಕದ ವೋಲದುವೆ ಚಿತ್ರವರ್ಣಾಕೀರ್ಣಂ'**

ಹೀಗೆ ಆಧುನಿಕ ಸಾಹಿತ್ಯವನ್ನು ತಮ್ಮ ಪ್ರತಿಭೆಯಿಂದ ಪ್ರಾಚೀನತನಕ್ಕೆ ಹೋಲಿಸಿ ನೋಡುವ ವಿದ್ವತ್ತು ಇವರ ಕೀರ್ತಿಯನ್ನು ಹೆಚ್ಚಿಸುವಂತೆ ಮಾಡಿದೆ.

**ಸಂತ ಆಗ್ನೇಸಳ ಹಬ್ಬ**

ಸಂತ ಆಗ್ನೇಸಳ ಹಬ್ಬ ಇದರ ಮೂಲ ಜಾನ್‌ಕಿಟ್ಸ್ ಅವರು ರಚಿತದ ಇವೆನ್ ಆಫ್ಟ್ ಆಗ್ನೇನ್ಸ್ ಎಂಬ ಪದ್ಯದ ಭಾಷಾಂತರ ರೂಪವಾಗಿದೆ. ಇದೇ ಮೂಲ ಕಾವ್ಯದಲ್ಲಿ ೩೪ ಖಂಡಗಳನ್ನು ಹೊಂದಿದ್ದು ಡಿ.ಎಲ್.ಎನ್ ಅವರು ಅದರಲ್ಲಿ ಒಂಬತ್ತನ್ನು ಮಾತ್ರ ಕನ್ನಡೀಕರಿಸಿ ಅಪೂರ್ಣ ಪ್ರಮಾಣದಲ್ಲಿ ಸಂಪಾದಿಸಿದ ಕಾವ್ಯವೆನಿಸಿದೆ. ಈ ಅಪೂರ್ಣ ಕಾವ್ಯ ಮೊದಲಿಗೆ 'ಸಾಧನೆ' ಮಾಸಿಕ ಪತ್ರಿಕೆಯ ೨-೪ನೇ ಸಂಚಿಕೆಯಲ್ಲಿ ೧೯೭೪ರ ಕಾಲಘಟ್ಟದಲ್ಲಿ ಪ್ರಕಾಶಿತಗೊಂಡು ಮುಂದೆ ೨೦೦೪ರಲ್ಲಿ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿದ 'ಪ್ರೊ.ಡಿ.ಎಲ್. ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು' ಕೃತಿಯ ೫ನೇ ಭಾಗದಲ್ಲಿ ಸಂಕಲಿತಗೊಂಡದ್ದಾಗಿದೆ.

ಚಳಿಗಾಲದ ನಡುರಾತ್ರಿಯಲ್ಲಿ ಪ್ರಕೃತಿಯೇ ಬೆರಗಾಗುವಂತೆ ಕನ್ಯೆಯೊಬ್ಬಳು ಸುಂದರವಾಗಿ ಚಂದ್ರನ ಬೆಳೆದಿಂಗಳನ್ನೆ ಸಿಂಗರಿಸಿಕೊಂಡ ರೀತಿ ಅವಳ ಕಣ್ಣುಗಳಲ್ಲಿನ ಸಿಂಗಾರತೆ ಚಳಿಯನ್ನೆ ಸವಿಗನಸನ್ನೇರಿಸಿ ಕಡಲ ಸೇರುವಂತಿತ್ತೆಂದು ವರ್ಣಿಸುತ್ತಾ ಕಮಲದಂತಹ ಅವಳ ಕಣ್ಣುಗಳಲ್ಲಿ ಹೆಬ್ಬಯಕೆ ಒಂದು ಉಕ್ಕುತ್ತಿರಲು ಕನಸುಗಳ ಸುಗ್ಗಿ ಉಕ್ಕಿ ಬರುವಂತೆ ನುಡಿದವಳು ಸುಂದರ ಕನ್ಯೆ ನಿದ್ದೆ ಹಕ್ಕಿಯ ಸುಳಿಗೆ ಜೋಗುಳ ಹಾಡಿದಂತಾಗಿತ್ತೆಂದು ಕವಿತೆಯ ಉದ್ದಕ್ಕೂ ಪ್ರಕೃತಿ ಸೌಂದರ್ಯವನ್ನು ಸಮಾಜೀಕರಿಸಿ, ವರ್ಣಿಸಿದ್ದು ಎದ್ದು ಕಂಡಿದೆ, ಆದರೆ ಈ ಕವಿತೆ ಪೂರ್ಣ ಪ್ರಮಾಣದಲ್ಲಿದ್ದರೆ ಇನ್ನೂ ಇದರ ಗೂಡಾರ್ಥ ಬಗೆಗೊಳ್ಳಲು ಅವಕಾಶ ಸಿಗುತ್ತಿತೆಂದು ಗ್ರಹಿಸಲಾಗಿದೆ.

## ಕೊನೆ ಟಿಪ್ಪಣಿಗಳು

೧. ಡಿ.ಎಲ್. ನರಸಿಂಹಾಚಾರ್ ಅವರ ಶತಮಾನ ಸ್ಮರಣೆ (ಸಂ) ಎಫ್.ಟಿ. ಹಳ್ಳಿಕೇರಿ, ೨೦೦೫ ಪು. ೩೪೭

೨. ಅದೇ, ಪು.ಸಂ. ೩೪೫

೩. ಅದೇ, ಪು.ಸಂ. ೩೪೫

೪. ಡಿ.ಎಲ್. ನರಸಿಂಹಾಚಾರ್ (ಲೇ) ಎಸ್.ವಿದ್ಯಾಶಂಕರ, ೧೯೯೨, ಪು. ೧೦೭

೫. ಪ್ರೊ. ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು (ಸಂ) ಟಿ.ವಿ.ವೆಂಕಟಾಚಲಶಾಸ್ತ್ರಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೨೦೦೮, ಪು. ೧೯೦

೬. ಡಿ.ಎಲ್. ನರಸಿಂಹಾಚಾರ್ ಅವರ ಶತಮಾನ ಸ್ಮರಣೆ (ಸಂ) ಎಫ್.ಟಿ. ಹಳ್ಳಿಕೇರಿ, ೨೦೦೫ ಪು. ೩೪೬

೭. ಅದೇ, ಪು.ಸಂ. ೩೫೦

೮. ಪ್ರೊ. ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹಗಳು ಭಾಷಣಗಳು (ಸಂ) ಟಿ.ವಿ.ವೆಂಕಟಾಚಲಶಾಸ್ತ್ರಿ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೨೦೦೮, ಪು. ೨೧೦

೯. ಅದೇ, ಪು.ಸಂ. ೨೨೯

# ಅಧ್ಯಾಯ - ಒಂಭತ್ತು

## ಸಮಾರೋಪ

ಕನ್ನಡ ಸಾಹಿತ್ಯದ ಅವಿಸ್ತಾರವಾದ ಪರಿಧಿಯಲ್ಲಿ ಹಾದುಹೋದ ನವೋದಯ, ನವ್ಯ ಕಾಲಘಟ್ಟದ ಸಂದರ್ಭವು, ದೇಶಪ್ರೇಮ, ಪ್ರಕೃತಿವರ್ಣನೆಗಳಂತಹ ರೂಪದಲ್ಲಿ ಸಾಹಿತ್ಯ ರಚನೆಯಾಗುತ್ತಿದ್ದ ಕಾಲವಾಗಿತ್ತು. ಈ ಸಂದರ್ಭದಲ್ಲಿ ಮೂಡಿಬಂದಿದ್ದ ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಡಿ.ವಿ.ಜಿ., ಮಾಸ್ತಿ, ತೀ.ನಂ.ಶ್ರೀ, ಕ.ವೆಂ.ರಾಘವಾಚಾರ್, ಎನ್.ಅನಂತರಂಗಾಚಾರ್, ಪು.ತಿ.ನ, ಗೋರೂರುರಾಮಸ್ವಾಮಿ ಅಯ್ಯಂಗಾರ್, ಸ.ಸ. ಮಳವಾಡ ಮುಂತಾದ ವಿದ್ವಾಂಸರೂ ಸಾಹಿತ್ಯಲೋಕದ ವಿದ್ವತ್ ತಾರೆಗಳೆನಿಸಿದ್ದಾರೆ. ಇವರಂತೆ ಡಿ.ಎಲ್.ನರಸಿಂಹಾಚಾರ್ ಅವರೂ ಕೂಡಾ ಪ್ರಾಚೀನ ಆಧುನಿಕ ಕನ್ನಡ ಸಾಹಿತ್ಯ ವಲಯದಲ್ಲಿ ತಮ್ಮದೇ ಆದ ಕೈಂಕರ್ಯ ಮೆರೆದವರಾಗಿದ್ದಾರೆ. ಅಲ್ಲದೇ ಸಂಶೋಧನೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಸಾಹಿತ್ಯ ಚರಿತ್ರೆ, ವ್ಯಾಕರಣ, ಛಂದಸ್ಸು, ಗ್ರಂಥಸಂಪಾದನೆ, ನಿಘಂಟುಸೇವೆ, ಕವಿಕಾವ್ಯ ಕಾಲ ವಿಚಾರ, ವಿಮರ್ಶೆ, ಲಲಿತ ಪ್ರಬಂಧಗಳು, ಕವಿತೆಗಳು, ಉನ್ನತಮಟ್ಟದ ವಿಸ್ತಾರವಾದ ಚರ್ಚೆಯಿಂದ ಕೂಡಿದ ಮುನ್ನುಡಿಗಳ ರಚನೆಯಂತಹ ವಿಷಯದಲ್ಲಿ ಅವರ ಸೇವೆ ಮಹತ್ವದ್ದಾಗಿದೆ. ಗ್ರಂಥಸಂಪಾದನೆ ಮೂಲಕ ಹಳಗನ್ನಡ ಸಾಹಿತ್ಯ ಪ್ರಕಾರಗಳಾದ ಕಾವ್ಯ, ವ್ಯಾಕರಣ, ಛಂದಸ್ಸು, ಸಂಪಾದನೆಯನ್ನು ಹತ್ತು ಹಲವು ಪ್ರಕಾರಗಳಲ್ಲಿ ಕೃಷಿ ನಡೆಸಿದ್ದಾರೆ. ಇಷ್ಟೆ ಅಲ್ಲದೆ ಇಂದಿನ, ಮುಂದಿನ ಬೋಧನಾ ಪೀಳಿಗೆಯವರು ಅಳವಡಿಸಿಕೊಳ್ಳಬೇಕಾದ ಅಧ್ಯಯನ ಪ್ರಕಾರಗಳು, ಹೊಸ ವೈಚಾರಿಕ ಮನೋಧರ್ಮದಿಂದ ಎದುರಿಸಬೇಕಾದ ಸವಾಲು, ಸಮಸ್ಯೆಗಳ ಕುರಿತು ವಿವಿಧ ಕೃತಿಗಳಲ್ಲಿ ಉಲ್ಲೇಖಿಸಿದ ಪ್ರಸ್ತಾಪಗಳು ಕಂಡುಬಂದಿದೆ. ಈ ನಿಟ್ಟಿನಲ್ಲಿ ಡಿ.ಎಲ್.ಎನ್. ಅವರು ಮಾಡಿದ ಸಾಹಿತ್ಯ ಕೃಷಿಯನ್ನು ಪರಿಶೀಲಿಸಿ ಮಹಾಪ್ರಬಂಧದಲ್ಲಿ ವಿವರಿಸಿ ವಿಶ್ಲೇಷಿಸಲಾಗಿದೆ.

ಈ ಮಹಾಪ್ರಬಂಧದಲ್ಲಿ ವಿಭಿನ್ನ ನೆಲೆಗಳಿಂದ ಅವುಗಳ ಸಾಂಸ್ಕೃತಿಕ ಮಹತ್ವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಯಾವುದೇ ಅಧ್ಯಯನಕ್ಕೆ ಕೊನೆ ಎಂಬುದು ಇಲ್ಲ ಕಾಲಕ್ಕನುಗುಣವಾಗಿ ಪ್ರತಿ ಅಧ್ಯಯನ ಕ್ರಮವು ಮರು ನಿರ್ಮಾಣ ಹೊಂದುತ್ತಿರುತ್ತದೆ.

ಇದಕ್ಕನುಗುಣವಾಗಿ ಭಾಷೆ, ಕಾಲ, ಪರಿಸರವೂ ಹೊಂದಿಕೊಳ್ಳಬೇಕಾಗುತ್ತದೆ. ಪ್ರಸ್ತುತ ಈ ಅಧ್ಯಯನ ಮಹಾಪ್ರಬಂಧವು ಒಂದು ಅಧ್ಯಯನದ ಚೌಕಟ್ಟಿಗೆ ಒಳಪಟ್ಟಿದೆ. ಆದ್ದರಿಂದ ಅಧ್ಯಯನದ ಅಂತಿಮ ಹಂತದಲ್ಲಿ ಈ ಅಧ್ಯಯನದಿಂದ ಕಂಡುಕೊಂಡ ಮುಖ್ಯ ಫಲಿತಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

**ಫಲಿತಗಳು**

• ಡಿ.ಎಲ್.ಎನ್. ಅವರು ಕನ್ನಡ ಗ್ರಂಥಸಂಪಾದನೆಗೆ ಶೈಕ್ಷಣಿಕ ಶಿಸ್ತನ್ನು ತಂದುಕೊಟ್ಟಿದ್ದು ಅವರಿಗಿಂತ ಹಿಂದೆಯೇ ವಸಾಹತುಶಾಹಿ ವಿದ್ವಾಂಸರಾಗಿದ್ದ ಮೋಗ್ಲಿನ್, ಕಿಟೆಲ್, ಫ್ಲೀಟ್ ರೈಸ್ ರಂತಹ ಮುಂತಾದವರು ತಮ್ಮದೇ ಹಾದಿಯಲ್ಲಿ ಸಾಗಿದ್ದರು. ಇದೇ ಮಾರ್ಗವನ್ನು ಅನುಸರಿಸಿದ್ದ ದೇಶಿ ವಿದ್ವಾಂಸರುಗಳಾಗಿದ್ದ ಆರ್.ನರಸಿಂಹಾಚಾರ್, ಎಸ್.ಜಿ.ನರಸಿಂಹಾಚಾರ್, ಕೆ.ಬಿ. ಪಾಠಕ್ ರಂತಹ ಮುಂತಾದ ವಿದ್ವಾಂಸರು ಇದೇ ಜರ್ಮನ್ ಗ್ರಂಥ ಸಂಪಾದ ಮಾರ್ಗವನ್ನು ಅನುಸರಿಸಿದ್ದರು ಆದರೆ ಡಿ.ಎಲ್.ಎನ್. ರವರು ಇದನ್ನು ಪರಿಷ್ಕರಿಸಿ ಅಭ್ಯಾಸಪೂರ್ಣ ಪ್ರಾವಿಣ್ಯತೆ ತೋರಿದ್ದು ಸಾಹಿತ್ಯ ಲೋಕದ ಅನನ್ಯತೆ ಎನಿಸಿದೆ.

• ಕನ್ನಡ ಸಂಶೋಧನೆಗೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಯಾಮ ಸೇರಿಸಿದ್ದು ಡಿ.ಎಲ್.ಎನ್.ರವರ ಹೆಚ್ಚುಗಾರಿಕೆಯಾಗಿದೆ.

• ಭಾಷೆಯ ವಿಚಾರವಾಗಿ ಡಿ.ಎಲ್.ಎನ್. ಪುಟ್ಟ, ಪುಟ್ಟ ವಾಕ್ಯಗಳನ್ನು ಎತ್ತಿಕೊಂಡು ಅದರ ಪೂರ್ವಪರ ವಿಚಾರಗಳೊಂದಿಗೆ ಚರ್ಚಿಸಿದ್ದು ಅವರ ಹೆಗ್ಗಳಿಕೆಯ ವಿಷಯವಾಗಿದೆ.

• ಕವಿಕಾವ್ಯ-ಕಾಲದ ವಿಚಾರವಾಗಿ ಡಿ.ಎಲ್.ಎನ್. ನಿರ್ಣಯವು, ಧಾರ್ಮಿಕ, ಮತಧರ್ಮ, ಕಾಲಕ್ಕನುಗುಣವಾದ ರಾಜಮನೆತನಗಳ ಇತಿಹಾಸ, ಕೃತಿಯ ವಸ್ತುವಿನ ಆಯ್ಕೆಗಳ ಮೂಲಕ ನಿರ್ಣಯಿಸುವ ಪರಿಯಿಂದ ಕವಿಕಾಲ ನಿರ್ಣಯವನ್ನು ಖಚಿತವಾಗಿ ಹೇಳಿರುವ ಪರಿ ಇಲ್ಲಿ ಎದ್ದುಕಂಡಿದೆ.

• ಉನ್ನತ ವಿಮರ್ಶೆ ವಿಚಾರವಾಗಿ ಡಿ.ಎಲ್.ಎನ್. ಅವರು ರಚಿಸಿದ ವಿಸ್ತಾರವಾದ ಮುನ್ನುಡಿಗಳು, ಆಳವಾದ ಚರ್ಚೆ, ಯಾವುದೇ ವಿಷಯವನ್ನು ಒಳಹೊಕ್ಕು ನೋಡಿದ ಪರಿ ಇಲ್ಲಿ ಕಂಡುಬಂದಿದೆ.

• ಡಿ.ಎಲ್.ನರಸಿಂಹಾಚಾರ್ ಅವರ ಸಮಗ್ರ ಸಾಹಿತ್ಯ ಅಧ್ಯಯನದಲ್ಲಿ ಅವರು ರಚಿಸಿದ ಎಲ್ಲ ಸಾಹಿತ್ಯ ಕೃತಿ ಲೇಖನಗಳನ್ನು ಹಲವು ಪ್ರಕಾರಗಳಾಗಿ ವಿಂಗಡಿಸಿಕೊಂಡು ಚರ್ಚಿಸಿ ವಿಶ್ಲೇಷಿಸಲಾಗಿದೆ.

• ಇವರ ಸಂಪಾದನೆ, ಸೃಜನಸಾಹಿತ್ಯ ವಿಷಯಗಳ ಕುರಿತು ಕಾಲದಿಂದ ಕಾಲಕ್ಕಾದ ಬದಲಾವಣೆಗಳನ್ನು ಕಂಡುಕೊಂಡು ಅಭ್ಯಾಸಕ್ಕೆ ಒಳಪಡಿಸಿದ್ದಾಗಿದೆ.

• ಇವರಲ್ಲಿನ ಪ್ರಾಚೀನ ಸಾಹಿತ್ಯದ ಒಲುವಿನ ಬಗೆಯನ್ನು ಇವರು ಸಂಪಾದಿಸಿ ಪ್ರಕಟಿಸಿ ಶಬ್ದಮಣಿದರ್ಪಣ, ವಡ್ಡಾರಾಧನೆ ಮೊದಲಾದ ಕೃತಿಗಳು ಪಾಶ್ಚಾತ್ಯ ವಿದ್ವಾಂಸರಿಂದ ಸಂಪಾದಿತಗೊಂಡ ಈ ಸಾಹಿತ್ಯ ಪ್ರಕಾರಗಳು ದೇಶಿ ಅಧ್ಯಯನ ಮಟ್ಟದಲ್ಲಿ ಹೇಗೆ ಕಲಿಕೆಗೆ ಅಳವಡಿಸಬೇಕೆಂಬ ಇವರ ನಿರ್ಧರಿತ ಅಧ್ಯಯನ ಕ್ರಮವನ್ನು ಸಂಪಾದನೆಗಳ ಮೂಲಕ ಪಾಠ ಸಂಸ್ಕರಣೆಯನ್ನು ಮರುವಿನ್ಯಾಸಗೊಳಿಸಿ ಸಾಹಿತ್ಯ ವಲಯಕ್ಕೆ ನೀಡಿದ ವಿಧಾನವನ್ನು, ಆಯಾಕೃತಿ ಬೆಳೆದು ಬಂದ ಬಗೆಯನ್ನು ಸವಿಸ್ತಾರವಾಗಿ ಚರ್ಚಿಸಿದ್ದಾಗಿದೆ.

• ಪ್ರಾಚೀನ ಸಾಹಿತ್ಯ ಕೃತಿಗಳನ್ನು ಸಂಪಾದಿಸುವಾಗ ಆಯಾ ಕಾಲಘಟ್ಟದ, ಕವಿ, ಸ್ಥಾನದಲ್ಲಿ ನಿಂತು ಪ್ರತಿ ಪದ್ಯದ ಅರ್ಥವನ್ನು ಸಂದರ್ಭಕ್ಕನುಗುಣವಾಗಿ ತಮ್ಮ ನಿಷ್ಠಪೂರ್ಣತೆಯನ್ನು ಸೂಚಿಸಿದ ಮನೋಭಾವ ಅವರ ಸಂಪಾದನೆ ವಿಧಾನದಲ್ಲಿ ಅಡಗಿದ್ದನ್ನು ಅವರ ಸಾಹಿತ್ಯ ಕೃತಿಗಳ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

• ಡಿ.ಎಲ್.ಎನ್. ಅವರ ಕನ್ನಡ ಗ್ರಂಥಸಂಪಾದನೆ, ಪೀಠಿಕೆಗಳು ಲೇಖನಗಳು, ಪಂಪಭಾರತ ದೀಪಿಕೆ ಯಂತಹ ಕೃತಿಗಳು ಪ್ರತಿಯೊಂದು ಪ್ರತ್ಯೇಕವಾಗಿ ಸಂಶೋಧನಾ ಕ್ರಮವನ್ನು ಅಳವಡಿಸಿಕೊಂಡು ತನ್ನದೇ ಆದ ವಿಶಿಷ್ಟತೆಯನ್ನು ಹೊಂದಿದ್ದ ಕೃತಿಗಳಾಗಿದ್ದಲ್ಲದೆ, ಪ್ರತಿ ಓದುಗ, ಪ್ರಾಧ್ಯಾಪಕ, ಸಂಶೋಧಕನೂ ಮೆಚ್ಚುಗೆ ವ್ಯಕ್ತಪಡಿಸುವಂತಹ ಕೃತಿಗಳಾಗಿ ಇತರೆ ಸಾಹಿತಿಗಳ ಕೃತಿಗಳಿಗಿಂತ ಹೇಗೆ ಭಿನ್ನವಾಗಿ ಮೂಡಿಬಂದಿವೆ ಎಂಬುದನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

• ಡಿ.ಎಲ್.ಎನ್. ಅವರ ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನದ ಸಂಪಾದಿತ ಚರಿತ್ರೆ ಕ್ರಮದಲ್ಲಿ ಪಂಪನಿಂದ, ಪಂಪನ ಪೂರ್ವಸೂರಿಗಳ ಸಾಹಿತ್ಯದಿಂದ ಪ್ರಸ್ತುತ ಆಧುನಿಕ ೨೦ರ ದಶಕದ, ತಮ್ಮ ಜೀವಿತಾವಧಿವರೆಗೂ ಅಧ್ಯಯನದ ಎಲ್ಲಾ ರಂಗದಲ್ಲೂ, ಪಾಶ್ಚಾತ್ಯದ ಪ್ರಭಾವವನ್ನಳವಡಿಸಿಕೊಂಡು ಆಯಾ ವಲಯಕ್ಕೆ ಸಂಬಂಧಿತ ಅಧ್ಯಯನದ ಸಾಧ್ಯತೆ ಮತ್ತು ಅಗತ್ಯತೆಗಳನ್ನು ತಿಳಿಸುವ ಅವರ ಸಂಶೋಧನಾ ಕ್ರಮವನ್ನು ಈ ಅಧ್ಯಯನದಲ್ಲಿ ತಿಳಿಸಲಾಗಿದೆ.

• ಡಿ.ಎಲ್.ಎನ್. ಅವರ ವಿಮರ್ಶಾ ಸಂಕಲನಗಳಲ್ಲಿ ಸಾಹಿತ್ಯ-ತತ್ವ ಮತ್ತು ಪ್ರಾಯೋಗಿಕ ವಿಮರ್ಶೆಯನ್ನು ಸಮಪ್ರಮಾಣದಲ್ಲಿ ಕಾಣಬಹುದಾಗಿದೆ. ಇವರು ಸಂಕಲಿತ ೪೬ ವಿಮರ್ಶಾ ಲೇಖನಗಳು ಹಿತಮಿತವಾದ ಪ್ರಮಾಣದಲ್ಲಿ ಕೂಡಿಕೊಂಡಿದ್ದವಾಗಿವೆ. ನಿಧಾನವಾದಷ್ಟು ಮಟ್ಟಿಗೆ ಇಂತಹ ತಾತ್ವಿಕತೆಯು ಲೇಖಕನ, ವೈಯಕ್ತಿಕ ಅನುಭವಲೋಕ ಮತ್ತು ಐಡಿಯಾಲಜಿಗಳನ್ನು ಮೀರಿ ನಿಲ್ಲುವುದರಲ್ಲಿ ಯಶಸ್ವಿಯಾಗುತ್ತವೆ. ಅವರ ವಿಮರ್ಶೆಯ ಇನ್ನೊಂದು ಮುಖ್ಯ ಲಕ್ಷಣವೆಂದರೆ ಕಾಲಕ್ಕನುಗುಣವಾದ ಪಾಂಡಿತ್ಯ ಮತ್ತು ವಿಮರ್ಶನಾ ಕಾರ್ಯಗಳ ಹದವಾದ ಸಂಯೋಜನೆ. ವ್ಯಾಕರಣದ ಪ್ರಕಾರಗಳಾದ ಛಂದಸ್ಸು, ಅಲಂಕಾರ,

ಭಾಷೆ ಮುಂತಾದ ಕ್ಷೇತ್ರಗಳಲ್ಲಿ ಅವುಗಳನ್ನು ತಿರುಗಿಸಿ ನೋಡುವ ತೀಕ್ಷ್ಣತೆಯ ಕ್ರಮವನ್ನು, ಅವರಲ್ಲಿರುವ ಪಾಂಡಿತ್ಯ ಪೂರ್ಣ ವಿಮರ್ಶ ಕ್ರಮದಿಂದ ಕಂಡುಕೊಳ್ಳಲಾಗಿದೆ.

- ಡಿ.ಎಲ್.ಎನ್. ಅವರು ಲಲಿತ ಪ್ರಬಂಧ ಮತ್ತು ಕವಿತೆಗಳ ಬರವಣಿಗೆ ಕಾರ್ಯದಲ್ಲಿಯೂ ಗುರುತಿಸಿಕೊಂಡಿದ್ದನ್ನು ಇವರ ಲಾಳಕಟ್ಟಿಸಿಕೊಳ್ಳುವ ಎತ್ತು, ಕಣ್ಣೊಕುರುಡೂ, ಲಲಿತ ಪ್ರಬಂಧಗಳು ಶ್ರೀಯರಿಗೆ ಅಂಕಿತ, ಸಂತ ಆಗ್ನೇಸಳ ಹಬ್ಬಗಳಂತಹ ಕೆಲವು ಶತಮಾನಗಳಿಂದ ನಾನು ಪರರಿಗೆ ದುಡಿಯುವ ಜನಪದರ ಪಾಡಾಗಿ ಬಂದ ಸಂಕಟಗಳನ್ನೆಲ್ಲಾ ಕರ್ಮ ಫಲವೆಂದ ಉಂಡು ಕಂಗೆಟ್ಟಿರುವ ಸಮಾಜದ ಸ್ಥಿತಿಯನ್ನು ಚಿತ್ರೀಕರಿಸಿದ್ದು ಪ್ರಬಂಧದಿಂದ ತಿಳಿದುಬಂದಿದ್ದರೆ, ಗುರುವಂದನೆ ರೂಪವಾಗಿ ಸೃಜಿಸಿದ ಕಾವ್ಯ ಶ್ರೀಯವರಿಗೆ ಅಂಕಿತವಾಗಿ ಗುರುಭಕ್ತಿ ಮೆರೆದಿದ್ದು ಕಂಡುಬಂದಿದೆ. ಜೊತೆಗೆ ಪಾಶ್ಚಾತ್ಯದ ಸಾಹಿತ್ಯದ ಒಲವಿನ ಸಾಂಕೇತವಾಗಿ, ಕನ್ನಡಿಕರಿಸಿದ ಸಂತ ಆಗ್ನೇಸಳ ಹಬ್ಬ ಕಾವ್ಯವು ಮೂಲ ಜಾನ್ ಕಿಟ್ಸ್ ಕಾವ್ಯವಾಗಿದ್ದು ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಿಸಿದ್ದ ಕಾವ್ಯವಾಗಿ ೯ ಖಂಡಕಾವ್ಯಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಿದ್ದು ಇತರೆ ಭಾಷೆಯಲ್ಲಿನ ಸಾಹಿತ್ಯದಲ್ಲಿ ಪ್ರಪಂಚವನ್ನು ಹೇಗೆ ನೋಡಬಹುದು ಎಂಬ ವಿಧಾನವನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

- ಡಿ.ಎಲ್.ಎನ್. ಅವರ ಬರಹ ಶೈಲಿಯೂ ಅಂದಿನ ಮೂಲಕ್ಕೆ ಹೊಂದಿ ಕೊಂಡಂತ್ತಿದ್ದರೂ, ಕ್ರಮವಾಗಿ ಇದರ ರೂಪು ಬದಲಾವಣೆಗೊಂಡ ಕ್ರಮವನ್ನು ಕಂಡುಕೊಳ್ಳಲಾಗಿದೆ. ಸಾಹಿತ್ಯದಲ್ಲಿ ಒಂದು ಅಕಾಡೆಮಿಕ್ ಶಿಸ್ತನ್ನು ಇವರ ಬರವಣಿಗೆ ಹೊಂದಿದ್ದರು ಶಬ್ದಗಳ ಗಂಭೀರತೆ, ವಾಕ್ಯ ಬಳಕೆಯ ಸ್ವರೂಪ, ಆಳಕ್ಕಿಳಿದು ನೋಡುವ ಕ್ರಮ ನೇರವಾಗಿ, ಸರಳವಾಗಿ ದೇಶಿ ಬರಹ ರೂಪದಲ್ಲಿ ಬಿತ್ತರಿಸಿದ ಕ್ರಮವನ್ನು ಕಂಡುಕೊಳ್ಳಲಾಗಿದೆ.

ಡಿ.ಎಲ್.ಎನ್. ಅವರ ಒಟ್ಟಾರೆ ಬರವಣಿಗೆ ಇಂದಿನ ಮುಂದಿನ ಸಾಹಿತ್ಯಿಕ ಪೀಳಿಗೆಗೆ ಕೈದೀವಿಗೆಯಂತೆ ಬೆಳಕಾಗಿ ನಿಲ್ಲುವ ಒಟ್ಟಾರೆ ಚಹರೆ ಹೊಂದಿದ ಸಾಹಿತ್ಯ ಎಂದು ಕಂಡುಕೊಳ್ಳಲಾಗಿದೆ.

## ಅನುಬಂಧಗಳು

- ಸಂಕ್ಷೇಪ ಸೂಚಿ
- ಡಿ.ಎಲ್.ನರಸಿಂಹಾಚಾರ್ ಅವರ ವಂಶವೃಕ್ಷ
- ಡಿ.ಎಲ್.ನರಸಿಂಹಾಚಾರ್ ಅವರ ಬದುಕಿನ ಪ್ರಮುಖ ಘಟನಾವಳಿಗಳು
- ಡಿ.ಎಲ್.ನರಸಿಂಹಾಚಾರ್ ಅವರ ಕೃತಿ, ಲೇಖನಗಳ ಸೂಚಿ
  - ಅ. ಸ್ವತಂತ್ರ ಕೃತಿಗಳು
  - ಆ. ಸಂಪಾದಿತ ಕೃತಿಗಳು
  - ಇ. ಸಂಶೋಧನ ಲೇಖನಗಳು
- ಸಂಶೋಧನ ಸಾಹಿತ್ಯ ಕುರಿತು ಡಿ.ಎಲ್.ಎನ್. ಅವರ ಹಿತ ನುಡಿಗಳು
- ಗ್ರಂಥಋಣ

## ಸಂಕ್ಷೇಪ ಸೂಚಿ

| | | |
|---|---|---|
| ಅಟಿ | – | ಅಡಿಟಿಪ್ಪಣಿ |
| ಅನು | – | ಅನುವಾದ |
| ಆ | – | ಆಶ್ವಾಸ |
| ಗ್ರಂ.ಸಂ. | – | ಗ್ರಂಥಸಂಪಾದನೆ |
| ಸ.ವೈ.ಸಂ.ಸಾ | – | ಸಕಲವೈದ್ಯ ಸಂಹಿತಾ ಸಾರಾರ್ಣವ |
| ಪಂದೀ | – | ಪಂಪಭಾರತ ದೀಪಿಕೆ |
| ಕಕಚ | – | ಕರ್ನಾಟಕ ಕವಿಚರಿತೆ |
| ಡಿ.ಎಲ್.ಎನ್ | – | ದೊಡ್ಡ ಬೆಲೆ ಲಕ್ಷ್ಮೀನರಸಿಂಹಾಚಾರ್ |
| ಮೈ.ವಿ.ವಿ. | – | ಮೈಸೂರು ವಿಶ್ವವಿದ್ಯಾಲಯ |
| ಬೆಂ.ವಿ.ವಿ. | – | ಬೆಂಗಳೂರು ವಿಶ್ವವಿದ್ಯಾಲಯ |
| ಬೆಂ.ಸೆಂ.ಕಾ | – | ಬೆಂಗಳೂರು ಸೆಂಟ್ರಲ್ ಕಾಲೇಜು |
| ಕಸಾಪ | – | ಕನ್ನಡ ಸಾಹಿತ್ಯ ಪರಿಷತ್ತು |
| ಕನು | – | ಕನ್ನಡ ನುಡಿ |
| ಕಸಾಪಪ | – | ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ |
| ಕವಿವಿಹಂ | – | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಪೀಲೇ | – | ಪೀಠಿಕೆಗಳು ಲೇಖನಗಳು |
| ಆನೇಉ | – | ಆ.ನೇ. ಉಪಾಧ್ಯೆ |
| ಹಂಹ | – | ಹಂಪೆಯ ಹರಿಹರ |
| ಶವಿ | – | ಶಬ್ದವಿಹಾರ |
| ಕಗ್ರಸಂ | – | ಕನ್ನಡ ಗ್ರಂಥಸಂಪಾದನೆ |

| | | |
|---|---|---|
| ಗೋ | – | ಗೋವಿನಹಾಡು |
| ಪಂರಾಸಂ | – | ಪಂಪರಾಮಾಯಣ ಸಂಗ್ರಹ |
| ಭೀಪ | – | ಭೀಷ್ಮಪರ್ವ |
| ವರಾ | – | ವಡ್ಡಾರಾಧನೆ |
| ಸುಚ | – | ಸುಕುಮಾರ ಚರಿತಂ |
| ಶದ | – | ಶಬ್ದಮಣಿದರ್ಪಣಂ |
| ಸಿಚಾ | – | ಸಿದ್ಧರಾಮ ಚಾರಿತ್ರ |
| ಸಿರಾಚಸಂ | – | ಸಿದ್ಧರಾಮ ಚರಿತೆಯ ಸಂಗ್ರಹ |
| ಪ್ರಕ | – | ಪ್ರಬುದ್ಧ ಕರ್ಣಾಟಕ |
| ಜಕ | – | ಜಯ ಕರ್ಣಾಟಕ |
| ದೇಗಂ | – | ದೇವಗಂಗೆ |
| ಸಾನಂ | – | ಸಾಹಿತ್ಯನಂದನ |
| ತರಂ | – | ತರಂಗರಂಗ |
| ಜೀ | – | ಜೀವನ |
| ಬಾ | – | ಬಾಗಿನ |
| ಶಸಾ | – | ಶರಣ ಸಾಹಿತ್ಯ |
| ಎಪುವ | – | ಎಲ್ಲಪುರಾತನರ ವಚನಗಳು |
| ಕಛಂ | – | ಕನ್ನಡ ಛಂಧೋವಿಕಾಸ |
| ಕಸಾಚ | – | ಕನ್ನಡ ಸಾಹಿತ್ಯ ಚರಿತ್ರೆ |
| ಕಸಂಶಾ | – | ಕನ್ನಡ ಸಂಶೋಧನಾ ಶಾಸ್ತ್ರ |
| ರುನಾ | – | ರುದ್ರ ನಾಟಕೋಪನ್ಯಾಸಗಳು |
| ಸಶ | – | ಸರಳ ಶಬ್ದಮಣಿದರ್ಪಣ |
| ಸವ | – | ಸರಳ ವಡ್ಡಾರಾಧನೆ |

| | | |
|---|---|---|
| ವಿಕ | – | ವಿಜ್ಞಾನ ಕರ್ನಾಟಕ |
| ತವೆಂಸ್ಮಾಗ್ರಂಮಾ | – | ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ |
| ಸನೆ | – | ಸವಿನೆನಪು |
| ಕಪ | – | ಕರ್ನಾಟಕ ಪರಂಪರೆ |
| ಕಿಕಾ | – | ಕಿರುಕಾಣಿಕೆ |
| ಸಂ | – | ಸಂಭಾವನೆ |
| ಅ | – | ಅಭಿನಂದನೆ |

## ಪ್ರೊ.ಡಿ.ಎಲ್.ನರಸಿಂಹಾಚಾರ್ ಅವರ ವಂಶಾವಳಿ



## ಡಿ.ಎಲ್.ನರಸಿಂಹಾಚಾರ್ ಅವರ ಬದುಕಿನ ಪ್ರಮುಖ ಘಟನಾವಳಿಗಳು

| | | |
|---|---|---|
| ಜನನ | : | ೨೭.೧೦.೧೯೦೬ |
| ತಂದೆ | : | ಶಾಮೈಯ್ಯಂಗಾರ್ |
| ತಾಯಿ | : | ಲಕ್ಷ್ಮಮ್ಮ |
| ಜನ್ಮಸ್ಥಳ | : | ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯ ತಾಯಿಯ ತಂದೆ ಅಣ್ಣಾಸ್ವಾಮಿ ಅಯ್ಯಂಗಾರ್ ಮನೆ |
| ಹುಟ್ಟ ಹೆಸರು | : | ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್ |
| ತಂದೆಯ ತಂದೆ (ತಾತನ)ಹೆಸರು | : | ಕೃಷ್ಣಮಾಚಾರ್, ದೊಡ್ಡಬೆಲೆಯ ಕೂಲಿ ಮೇಷ್ಟ್ರಾಗಿ ಕರ್ತವ್ಯದಲ್ಲಿದ್ದವರು. |
| ತಂದೆಯ ವೃತ್ತಿ | : | ಸಬ್ ರಿಜಿಸ್ಟ್ರರ್ ಆಫೀಸ್‌ನ ಗುಮಾಸ್ತ ವೃತ್ತಿ |
| ತಾಯಿಯ ತಂದೆ | : | ಅಣ್ಣಾಸ್ವಾಮಿ ಅಯ್ಯಂಗಾರ್, ಚಿಕ್ಕನಾಯಕನಹಳ್ಳಿಯ ತಾಲ್ಲೂಕು ಕಚೇರಿಯಲ್ಲಿ ರೆಕಾರ್ಡ್ ಕೀಪರ್ ಆಗಿದ್ದರು. ಮತ್ತು ಭಾರತ ವಾಚನದಲ್ಲಿ ಪ್ರವೀಣರಾಗಿದ್ದರು. |
| ಹೆಂಡತಿ ಹೆಸರು | : | ಮುತ್ತಮ್ಮ ಡಿ.ಎಲ್.ಎನ್. |
| ಮೂಲ | : | ಇವರ ಪೂರ್ವಿಕರು ಸೇಲಂ ಜಿಲ್ಲೆಯಿಂದ ಬಂದವರಾಗಿದ್ದು ಗಂಡಿಕೋಟೆ ಮೂಲ ನೆಲೆಯಾಗಿತ್ತು. ವಿಜಯನಗರ ತಾತಾಚಾರ್ಯರ ಕಾಲದಲ್ಲಿ ತುಮಕೂರಿನ ಕಡೆ ಬಂದವರೆನ್ನಲಾಗಿದೆ. ಇವರು ತಿರುಪತಿ ತಿಮ್ಮಪ್ಪನ ಒಕ್ಕಲಾಗಿದ್ದರೂ, ಈಚೆಗೆ ದೊಡ್ಡಬೆಲೆಗೆ ಬಂದು ನೆಲೆಸಿದ ಮೇಲೆ ದೇವರಾಯದುರ್ಗದ ಲಕ್ಷ್ಮೀನರಸಿಂಹ ದೇವರನ್ನು ಮನೆ ದೇವರನ್ನಾಗಿಸಿಕೊಂಡು ಈ ಭಕ್ತಿಗಾಗಿ ಲಕ್ಷ್ಮೀನರಸಿಂಹಾಚಾರ್ ಎಂದು ಡಿ.ಎಲ್.ಎನ್. ಅವರಿಗೆ ಹೆಸರಿಸಿದ್ದಾಗಿದೆ. ಮುಂದೆ ಆಂಗ್ಲೋವರ್ನಾಕುಲರ್ ಸ್ಕೂಲ್‌ನ ಹಾಜರಿ ಪುಸ್ತಕದಲ್ಲಿ (ಎ.ವಿ.ಸ್ಕೂಲ್) ಡಿ.ಎಲ್.ನರಸಿಂಹಾಚಾರ್ ಎಂದು ನಮೂದಿಸಿದ್ದು ಕಂಡುಬಂದಿದೆ. |

| | | |
|---|---|---|
| ಇಂಗ್ಲೀಷ್ ಭಾಷೆಯ ವ್ಯಾಮೋಹ | : | ಕನ್ನಡ, ಸಂಸ್ಕೃತಗಳ ಮೇಲೆ ಇರುವಷ್ಟು ಆಸಕ್ತಿ ಇಂಗ್ಲೀಷ್ ಮೇಲೆ ಬೆಳೆಯಿತು. ಇವರ ಇಂಗ್ಲಿಷ್ ಲೇಖನಗಳ ಅಧ್ಯಯನದಿಂದ ಇವರ ಅಭ್ಯಾಸದ ಸ್ಫುಟುತ್ವ ತಿಳಿಯಬಹುದಾಗಿದೆ. |
| ೧೯೨೨ | : | ಮೊದಲ ಬಾರಿಗೆ ಹೈಸ್ಕೂಲಿನ ಸ್ಕೂಲ್ ಫ್ಲೋಕ್‌ನಲ್ಲಿ ದೊಡ್ಡ ಮನುಷ್ಯ ಯಾರು? ಎಂಬ ಲೇಖನ ಪ್ರಕಟವಾಯಿತು. |
| ೧೯೨೪ | : | ಎಂಟ್ರೆನ್ಸ್ ವಿದ್ಯಾರ್ಥಿಯಾಗಿದ್ದಾಗ ಮೊದಲ ಸಲ ಬಿ.ಎಂ.ಶ್ರೀ ಯವರ ಭೇಟಿ. |
| ೧೯೨೪ | : | ಬೆಂಗಳೂರು ಸೆಂಟ್ರಲ್ ಕಾಲೇಜು ವಿಜ್ಞಾನ ವಿಭಾಗಕ್ಕೆ ಸೇರಿದರು. ಮುಂದುವರೆಯುತ್ತ ಬಿ.ಎ., ವಿಜ್ಞಾನ ವಿಭಾಗಕ್ಕೆ ಅವಕಾಶ ಸಿಗದೆ, ಭಾಷೆ ಮತ್ತು ರಸಾಯನಶಾಸ್ತ್ರ(ಆರ್ಟ್ಸ್) ವಿಭಾಗಕ್ಕೆ ಸೇರಿದರು. |
| ೧೯೨೭ | : | ಬಿ.ಎ. ಪ್ರಥಮ ಸ್ಥಾನದೊಂದಿಗೆ ಕೇಣಿಸಿದ್ಧಪ್ಪನವರ ಚಿನ್ನದ ಪದಕ ಮತ್ತು ಭಾಸ್ಕರಮ್ಮಾಳ ಬಹುಮಾನ ಪಡೆದರು. |
| ೧೯೨೭ | : | ಮೈಸೂರು ಮಹಾರಾಜ ಕಾಲೇಜಿಗೆ ಎಂ.ಎ. ಸ್ನಾತಕೋತ್ತರ ಪದವಿಗೆ ಸೇರ್ಪಡೆ. |
| ೧೯೨೮ | : | ಎಂ.ಎ. ಮೊದಲನೆ ವರ್ಷದಲ್ಲಿದ್ದಾಗಲೇ 'ಕರ್ನಾಟಕ ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆ, ಪ್ರೌಢ ಪ್ರಬಂಧ ರಚನೆ(೩.೩.೧೯೨೮ರಲ್ಲಿ ಕ.ಪ. ಪತ್ರಿಕೆಯಲ್ಲಿ) ಪ್ರಕಟವಾಗಿದೆ. |
| ೧೯೨೯ | : | ಎಂ.ಎ. ಸ್ನಾತಕೋತ್ತರ ಪದವಿ ತೇರ್ಗಡೆಯ (ಕನ್ನಡ) ಪ್ರಥಮ ಸ್ಥಾನಕ್ಕಾಗಿ ಪ್ರಥಮ ವೈಸ್ ಛಾನ್ಸಲರ್ ಎಚ್.ವಿ.ನಂಜುಂಡಯ್ಯನವರ ಸುವರ್ಣ ಪದಕದೊಂದಿಗೆ ಗೌರವ ಸಲ್ಲಿಕೆ. |
| ೧೯೩೦ | : | ಮೈಸೂರು ಮಹಾರಾಜ ಕಾಲೇಜಿನಲ್ಲಿ ಪೂರ್ಣಕಾಲಿಕ ಕನ್ನಡ ಪಂಡಿತರಾಗಿ ನೇಮಕ. |
| ೧೯೩೯ | : | ಮೈಸೂರಿನ ಯುವರಾಜ ಕಾಲೇಜಿಗೆ ಕನ್ನಡ ಅಧ್ಯಾಪರಾಗಿ ವರ್ಗಾವಣೆ. |
| ೧೯೪೦ | : | ಮೊದಲ ಮಗಳು ರಾಜಲಕ್ಷ್ಮೀ ಜನನ. |
| ೧೯೪೧ | : | ಮಹಾರಾಜ ಕಾಲೇಜಿಗೆ ವರ್ಗಾವಣೆ. |

೧೯೪೫ : ಉಪಪ್ರಾಧ್ಯಾಪಕರಾಗಿ ಬಡ್ತಿಹೊಂದಿ ಬೆಂಗಳೂರು ಸೆಂಟ್ರಲ್ ಕಾಲೇಜಿಗೆ ವರ್ಗಾವಣೆ.

೧೯೪೮ : ಮತ್ತೆ ಮಹಾರಾಜ ಕಾಲೇಜಿಗೆ ವರ್ಗಾವಣೆ.

೧೯೫೪ : ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ನೇಮಕ.

೧೯೫೭ : ಕನ್ನಡ ಪ್ರಾಧ್ಯಾಪಕರಾಗಿ ಬಡ್ತಿ ಪಡೆದು ಮೈಸೂರು ಮಹಾರಾಜ ಕಾಲೇಜಿಗೆ ವರ್ಗಾವಣೆ.

೧೯೫೯ : ಪ್ರಬುದ್ಧ ಕರ್ಣಾಟಕ ನಿಯತಕಾಲಿಕೆಯ ಪ್ರಧಾನ ಸಂಪಾದಕರಾಗಿ ಕಾರ್ಯನಿರ್ವಹಣೆ (೧೯೭೯ರ ವರೆಗೆ).

೧೯೬೦ : ಬೀದರ್‌ನಲ್ಲಿ ನಡೆದ ೪೧ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ಅಲಂಕಾರ.

೧೯೬೦ : "ಜ್ಞಾನೋಪಾಸಕ" ಅಭಿನಂದನಾ ಕೃತಿ ಶಿಷ್ಯ–ಮಿತ್ರ ವೃಂದದಿಂದ ಸಮರ್ಪಣೆ ಮತ್ತು ಸನ್ಮಾನ.

೩೧.೩.೧೯೬೨ : ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತಿ.

೧೯೬೩ : ಯು.ಜಿ.ಸಿ. ಸಂಶೋಧಕ ವಿದ್ವಾಂಸರಾಗಿ ಆಯ್ಕೆ.

೧೯೬೬ರಿಂದ ೭.೫.೧೯೭೧ರವರೆಗೆ ತೀ.ನಂ.ಶ್ರೀ ಅವರ ಸ್ಥಾನದಿಂದ ತೆರವಾಗಿದ್ದ ಕನ್ನಡ–ಕನ್ನಡ ನಿಘಂಟಿನ ಅಧ್ಯಕ್ಷ ಹಾಗೂ ಪ್ರಧಾನ ಸಂಪಾದಕ ಸ್ಥಾನದ ಜವಾಬ್ದಾರಿಗೆ ಭಾಜನ.

೧೯೬೭ : ಶಿಷ್ಯಮಿತ್ರ ವೃಂದದಿಂದ ೬೦ ವರ್ಷ ಸಂದ ಸಂದರ್ಭದಲ್ಲಿ 'ಉಪಾಯನ' ಅಭಿನಂದನ ಗ್ರಂಥದ ಸಮರ್ಪಣೆ ಮತ್ತು ಸನ್ಮಾನ.

೧೯೬೭ : ಮೈಸೂರು ಸರ್ಕಾರದಿಂದ ರಾಜ್ಯ ಪ್ರಶಸ್ತಿಗೆ ಭಾಜನ.

೧೯೬೮ : ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಪ್ರಶಸ್ತಿ ಪ್ರಧಾನ.

೧೯೬೯ : ಮೈಸೂರು ವಿಶ್ವವಿದ್ಯಾಲಯಿಂದ ಗೌರವ ಡಾಕ್ಟರೇಟ್ ಪದವಿ ಪ್ರಧಾನ.

೧೯೭೦ : ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವದ ನಿಘಂಟಿನ ಮೊದಲ ಸಂಪುಟ ಬಿಡುಗಡೆ.

೧೯೭೧ : 'ಪಂಪಭಾರತ ದೀಪಿಕೆ' ಕೃತಿ ಲೋಕಾರ್ಪಣೆ.

೭.೫.೧೯೭೧ : ಹೃದಯಾಘಾತದಿಂದ ಮೈಸೂರಿನ ಸರಸ್ವತಿಪುರಂನ ಸ್ವಗೃಹದಲ್ಲಿ ನಿಧನ. ೫ ಜನ ಪುತ್ರಿಯರು ಮತ್ತು ಪತ್ನಿಯಿಂದ ಕನ್ನಡ ಸಾರಸ್ವತ ಗ್ರಂಥಸಂಪಾದನ ಲೋಕದಿಂದ ಅಗಲಿಕೆ ಸಾಹಿತ್ಯಕ್ಕೆ ತುಂಬಲಾರದ ನಷ್ಟದ ದಿನ.

## ಡಿ.ಎಲ್.ನರಸಿಂಹಚಾರ್ ಅವರ ಕೃತಿ – ಲೇಖನಗಳ ಸೂಚಿ

### ಅ. ಸ್ವತಂತ್ರ ಕೃತಿಗಳು

೧. ಹಂಪೆಯ ಹರಿಹರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೩೯

೨. ಶಬ್ದವಿಹಾರ, ಶಾರದಾ ಮಂದಿರ, ಮೈಸೂರು, ೧೯೫೬

೩. ಕನ್ನಡ ಗ್ರಂಥ ಸಂಪಾದನೆ, ಶಾರದ ಮಂದಿರ, ಮೈಸೂರು, ೧೯೬೪

೪. ಪೀಠಿಕೆಗಳು, ಲೇಖನಗಳು, (ಸಂಶೋಧನ ಲೇಖನಗಳ ಸಮುಚ್ಚಯ ಗ್ರಂಥ) ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೧೯೭೧

### ಆ. ಸಂಪಾದಿತ ಕೃತಿಗಳು

೧. ಸಕಲವೈದ್ಯಸಂಹಿತ ಸಾರಾರ್ಣವಂ, ಪ್ರಾಚ್ಯವಸ್ತು ಸಂಶೋಧನಾಲಯ, ಮೈಸೂರು, ೧೯೩೯

೨. ಪಂಪರಾಮಾಯಣ ಸಂಗ್ರಹ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೩೯

೩. ಸಿದ್ಧರಾಮ ಚಾರಿತ್ರ, ಪ್ರೊ.ಟಿ.ಎಸ್.ವೆಂಕಣ್ಣಯ್ಯನವರೊಡನೆ, ಕರ್ನಾಟಕ ಸಂಘ ಶಿವಮೊಗ್ಗ, ೧೯೪೧

೪. ವಡ್ಡಾರಾಧನೆ, ಕನ್ನಡ ಸಾಹಿತ್ಯ ಪರಿಷತ್ತು, ೧೯೪೯

೫. ಭೀಷ್ಮ ಪರ್ವ ಸಂಗ್ರಹ, ಪ್ರಾಚ್ಯವಸ್ತು ಸಂಶೋಧನಾಲಯ, ಮೈಸೂರು, ೧೯೫೦

೬. ತುರುಗಾಯಿ ರಾಮಣ್ಣನ ವಚನಗಳು

೭. ರಾಘವಾಂಕ ಕವಿಯ ಸಿದ್ಧರಾಮ ಚರಿತೆಯ ಸಂಗ್ರಹ ಶಾರದ ಮಂದಿರ, ಮೈಸೂರು, ೧೯೮೪

೮. ಸುಕುಮಾರಚರಿತಂ, ಟಿ.ಎಸ್.ಶಾಮರಾವ್ ಅವರೊಡನೆ ಕರ್ನಾಟಕ ಸಂಘ, ಶಿವಮೊಗ್ಗ, ೧೯೫೪

೯. ಗೋವಿನ ಹಾಡು, ಶಾರದರ ಮಂದಿರ, ಮೈಸೂರು, ೧೯೬೦

೧೦. ಶಬ್ದಮಣಿದರ್ಪಣ, ಶಾರದ ಮಂದಿರ, ಮೈಸೂರು, ದ್ವಿತೀಯ ಮುದ್ರಣ, ೧೯೩೯

ಇ. ಸಂಶೋಧನಾ ಬಿಡಿ ಲೇಖನಗಳು

೧. ಹಂಪೆಯ ಹರಿಹರ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೩೯

೨. ಅಗ್ಗಳದೇವ, ಪ್ರಬುದ್ಧ ಕರ್ಣಾಟಕ, ೩೫–೪

೩. ಪೊನ್ನನೊ ಕಾಳಿದಾಸನೊ, ಪ್ರಬುದ್ಧ ಕರ್ಣಾಟಕ–೧೨–೨

೪. ಪೊನ್ನನ ಭುವನೈಕ್ಯರಾಮಾಭ್ಯುದಯ, ಪ್ರಬುದ್ಧ ಕರ್ಣಾಟಕ–೧೫–೨

೫. ಗಜಾಂಕುಶ– ಪ್ರಬುದ್ಧ ಕರ್ಣಾಟಕ–೧೪–೨

೬. ರುದ್ರಭಟ್ಟ, ಪ್ರಬುದ್ಧ ಕರ್ಣಾಟಕ–೩೨–೪

೭. ವಡ್ಡಾರಾಧನೆ ಕೆಲವು ವಿಚಾರಗಳು, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ–೨೫

೮. ಜಟಾಸಿಂಹ ನಂದಿಯ ವರಾಂಗ ಚರಿತೆ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ–೨೫–೨ (೧೯೪೩)

೯. ಪದ್ಮನಾಭನ ಜಿನದತ್ತರಾಯ ಚರಿತೆ, ಬಾಗೀನ–೧೯೫೪

೧೦. ಕೆಲವು ರಗಳೆಯ ಕವಿಗಳು ಪ್ರಬುದ್ಧ ಕರ್ಣಾಟಕ–೧೭–೪

೧೧. ಕೆಲವು ವಚನಕಾರರು–ಪ್ರಬುದ್ಧ ಕರ್ಣಾಟಕ–೧೯–೪

೧೨. ಜನ್ನನೊ ವಾದಿರಾಜನೊ– ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ–೧೫–೪

೧೩. ಆದಿದೇವ (ಅಜ್ಞಾತಕವಿ) ಜಯಕರ್ನಾಟಕ ೧೦–೪

೧೪. ಸಿದ್ಧ ಲಿಂಗೇಶ (ಅಜ್ಞಾತಕವಿ) ಜಯಕರ್ನಾಟಕ ೯–೪

೧೫. ಶಿವಸಿದ್ಧರಾಮ (ಅಜ್ಞಾತಕವಿ) ಜಯಕರ್ನಾಟಕ–೯–೮

೧೬. ದೇವಾಂಗ ದಾಸಿಮಯ್ಯನ ಪುರಾಣ–೧೯೫೩

೧೭. ರನ್ನಕವಿಯ ಸಹಸ್ರ ವಾರ್ಷಿಕೋತ್ಸವ ಭಾಷಣ– ಕನ್ನಡ ನುಡಿ–೧೨–೬

೧೮. ಕುಮಾರರಾಮನ ಸಾಂಗತ್ಯ, ಕನ್ನಡ ನುಡಿ–೩–೪೪

೧೯. ದೇವಚಂದ್ರನ ಗುಪ್ತ ನಾಟಕ–ಪ್ರಬುದ್ಧ ಕರ್ಣಾಟಕ–೧೪–೨೨

೨೦. ನಾಲ್ಕನೆಯ ಮಂಗರಸ–ಕನ್ನಡ ಸಾಹಿತ್ಯ ಪರಿಷತ್ ಪತ್ರಕೆ ೧೮–೧

೨೧. ಚೌಂಡರಸ ಕಾಲವಿಚಾರ–ಜಯಕರ್ನಾಟಕ ೮–೧೧

೨೨. ಕೆಲವು ಅಜ್ಞಾತ ಕವಿಗಳೂ ಕಾವ್ಯಗಳು, ಚನ್ನ ವಿರೇಶ್ವರ (ಕಾಲ, ಸು, ೧೫೦೦) ಜಯಕರ್ನಾಟಕ ೬–೧೨

೨೩. ಅಶ್ವಘೋಷನ ರಾಷ್ಟ್ರಪಾಲ ನಾಟಕ–ಪ್ರಬುದ್ಧ ಕರ್ಣಾಟಕ–೨೧–೨

೨೪. ಮಂಗರಾಜನ ಅಭಿನವಾಭಿದಾನಂ–ಪ್ರಬುದ್ಧ ಕರ್ಣಾಟಕ–ಕಾ,ಲೋ–೩೫–೪

೨೫. ಪಂಪ ವಸಂತೋತ್ಸವ ಭಾಷಣ, ಬೆಂಗಳೂರು– ೫.೬.೧೯೪೮

೨೬. ಹರಿಹರ ಕವಿ, ಮತ್ತು ಅವನ ಕೆಲವು ರಗಳೆಗಳು–ಫಗುಹಳಕಟ್ಟಿ ಸ್ಮಾರಕ ಪ್ರತಿಷ್ಠಾನ–೧೯೬೮

೨೭. ಕವಿ ಕುವೆಂಪು–ಪ್ರಬುದ್ಧ ಕರ್ನಾಟಕ–೪೩–೪

೨೮. ಲಕ್ಷ್ಮೀಶನ ಕಾಲವಿಚಾರ–ಪ್ರಬುದ್ಧ ಕರ್ಣಾಟಕ–೧೩–೧

೨೯. ಅಭಿನವ ಪಂಪನ ಕಾಲವಿಚಾರ–ಪ್ರಬುದ್ಧ ಕರ್ಣಾಟಕ–೧೬–೩

೩೦. ಜಕ್ಕಣಾಚಾರ್ಯ–ಪ್ರಬುದ್ಧ ಕರ್ಣಾಟಕ–೧೮–೩

೩೧. ಕರ್ನಾಟಕ ಸಾಹಿತ್ಯದಲ್ಲಿ ಪ್ರಕೃತಿ ವರ್ಣನೆ–ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ –೧೩–೨

೩೨. ಕುಮಾರವ್ಯಾಸನ ದೃಷ್ಟಿಯಲ್ಲಿ ಕರ್ಣ–ಪ್ರಬುದ್ಧ ಕರ್ಣಾಟಕ–೩೮–೧

೩೩. ಕಣ್ಮರೆಯಾದ ಕನ್ನಡ ಮಹರಾಷ್ಟ್ರದ ಮೂಲ–ಶಂಬಾಜೋಷಿ

೩೪. ಮರಳಿ ಮಣ್ಣಿಗೆ–ಪ್ರಬುದ್ಧ ಕರ್ಣಾಟಕ–(ಸಂ) ೨೪–೪

೩೫. ವೈದ್ಯರಾಜ–ಪ್ರಬುದ್ಧ ಕರ್ಣಾಟಕ–(ಸಂ) ೧೪–೨

೩೬. ಕನ್ನಡ ನುಡಿಯ ಹುಟ್ಟು–ಪ್ರಬುದ್ಧ ಕರ್ಣಾಟಕ– (ಸಂ) ೧೯–೨–೩

೩೭. ಅಕ್ಕಮಹಾದೇವಿ–ಪ್ರಬುದ್ಧ ಕರ್ಣಾಟಕ–(ಸಂ) ೧೯–೨–೩

೩೮. ವೀಣಾನಾದ–ಪ್ರಬುದ್ಧ ಕರ್ಣಾಟಕ–(ಸಂ) ೧೯–೧೭–೧

೩೯. ಜೀವನಯಾತ್ರೆ, ಪೀ.ಲೇ(ಪು–೬೫೩) (ಪೀಠಿಕೆಗಳು ಲೇಖನಗಳು)

೪೦. ಪ್ರೇಮಾಹುತಿ – (ಪೀ.ಲೇ) ಪು. ೬೫೪

೪೧. ತಿಳಿಗನ್ನಡ ವ್ಯಾಕರಣ. ಪೀಲೇ(ಪು–೫೫)

೪೨. ಕರ್ನಾಟಕ ದರ್ಶನ–ಪ್ರಬುದ್ಧ ಕರ್ಣಾಟಕ–ಸಂ–೨೦, ಸಂ.೧

೪೩. ಗಂಡುಗೊಡಲಿ ಮತ್ತು ಹನಿಗಳು – ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಸಂ,೨೦, ಸಂ–೧

೪೪. ಕನ್ಯಾಬಲಿ ಅಥವಾ ಸೂಳೆಯ ಸಂಸಾರ–ಪ್ರಬುದ್ಧ ಕರ್ಣಾಟಕ– (ಸಂ–೧೪, ಸಂ–೪)

೪೫. ಹಾವು ಪೀಲೇ, ಪು. ೬೬೪

೪೬. ಮಹಾದೇವಿಯಕ್ಕ–ಪ್ರಬುದ್ಧ ಕರ್ಣಾಟಕ–(ಸಂ–೨೧, ಸಂ–೧)

೪೭. ಇಂದಿನ ಕನ್ನಡ ಕವಿತೆ–ತರಂಗರಂಗ

೪೮. ಮೆಹೆಂಜೋದಾರೊದಲ್ಲಿ ಈಚೆಗೆ ನಡೆದ ಭೂ ಸಂಶೋಧನೆ–ಪ್ರಬುದ್ಧ ಕರ್ಣಾಟಕ–೧೬–೪

೪೯. ದಿವಂಗತ ಆಟೋಸುಸ್ಪರ್ಸನ್ (೧೮೬೦–೧೯೪೩) ಪ್ರಬುದ್ಧ ಕರ್ಣಾಟಕ–೨೫–೧

೫೦. ಪುನರಾಲೋಕನ, ಸಿದ್ಧರಾಮನ ವೀರಶೈವತ್ವ–ಪ್ರಬುದ್ಧ ಕರ್ಣಾಟಕ–೪೫–೩

೫೧. ಡಾ.ಆ.ನೇ ಉಪಾಧ್ಯೆ ಅವರು, ಅಭಿಷೇಕ, ೪೬ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಶ್ರ.ಬೆ. ೧೯೬೭

೫೨. ಭಾರತೀಯ ಜ್ಞಾನಗಂಗೆ–ಅವಲೋಕನ, ಗೀತಾ ಬುಕ್‌ಹೌಸ್, ಬೆಂಗಳೂರು ೧೯೬೯

೫೩. ವಿಜಯನಗರ ಕಾಲದ ಕನ್ನಡ ಸಾಹಿತ್ಯ (ಕ್ರಿ.ಶ. ೧೩೩೬–೧೫೬೫) ಕರ್ನಾಟಕ ಪರಂಪರೆ ಸಂ.೨

೫೪. ದಿವಂಗತ ಪೂಜ್ಯ ವೆಂಕಣ್ಣಯ್ಯನವರು–ಸವಿನೆನಪು, ತ.ವೆಂ.ಸ್ಮಾ.ಗ್ರಂ. ಮೈಸೂರು, ೧೯೭೦

೫೫. ದಿವಂಗತ ಆರ್ ಎಲ್. ನರಸಿಂಹಯ್ಯನವರು, ವಿಜ್ಞಾನ ಕರ್ನಾಟಕ ೧.೪.೧೯೬೯

೫೬. ಬಹುಮುಖ ಶಕ್ತಿಯ ಕುಲಪತಿ, ಅಂತಃಕರಣ, ೧೯೭೨

೫೭. ಕನ್ನಡವನ್ನು ಜನಪ್ರಿಯವಾಗಿಸುವಕ, ವಿಧಾನ, ಜೀವನ, ೯–೧೦

೫೮. ಕನ್ನಡ ಸಾಹಿತ್ಯ ಸೊಬಗು, ಕನ್ನಡ ನುಡಿ, ೧೬–೨

೫೯. ತೇದಿಯುಳ್ಳ ಪ್ರಾಚೀನತಮ ಕನ್ನಡ ಪದ, ಸಾಧನೆ–೧–೩

೬೦. ೪೧ನೇಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ ಬೀದರ್ ಪ್ರಬುದ್ಧ ಕರ್ನಾಟಕ–೪೩–೪

೬೧. ಭಾಷಾ ವಿಹಾರ (ಒಂದು ವಿಮರ್ಶೆ) ಕನ್ನಡ ನುಡಿ, ೧೫

೬೨. ಕುಮುದೇಂದು ರಾಮಾಯಣದ ಪರಿಷ್ಕರಣ ವಿಚಾರ–ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ (ಸಂ.೨೨೪)ಸಂ–೩

೬೩. ಬಸವಣ್ಣನವರ ಕೆಲವು ವಚನಗಳ ಪಾಠ, ಶರಣಸಾಹಿತ್ಯ (ಸಂ–೧೧–ಸಂ.೭)

೬೪. ಸೋವಿಯತ್ ರಷ್ಯಾದಲ್ಲಿ ಮಕ್ಕಳ ರಂಗಭೂಮಿ–ಜ.ಕ. ೧೯.೮.೧೯೪೧

೬೫. ಸಾಹಿತ್ಯ ಚರಿತ್ರೆಯ ಸ್ವರೂಪ, ಪೀಲೇ, ಪು. ೯೯೩

೬೬. ಅರ್ಧನೇಮಿಯ ಒಂದು ಪದ್ಯ ಟಿಪ್ಪಣಿ–ಪ್ರಬುದ್ಧ ಕರ್ಣಾಟಕ–೧೯೬೭

೬೭. ಗದಾಯುದ್ಧದ ಒಂದು ಪದ್ಯದ ಅರ್ಥ ವಿಚಾರ–ಕನ್ನಡ ನುಡಿ–೧೯೬೭

೬೮. ರೆ.ಎಫ್.ಕಿಟೆಲ್–ಪ್ರಬುದ್ಧ ಕರ್ಣಾಟಕ–೪೦–೩

೬೯. ಶ್ರೀ ಪ್ರಭುದೇವರ ಪುರಾಣ (ಎಳಂದೂರು ಹರೀಶ್ವರ ಕೃತ)–ಪ್ರಬುದ್ಧ ಕರ್ಣಾಟಕ–ಸಂ–೨೨–೧

೭೦. ಗುಣವರ್ಮಕೃತಮಪ್ಪ ಪುಷ್ಪದಂತ ಪುರಾಣ–ಪ್ರಬುದ್ಧ ಕರ್ಣಾಟಕ–ಸಂ.೧೬, ಸಂ–೧

೭೧. ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣ–ಪ್ರಬುದ್ಧ ಕರ್ಣಾಟಕ–೨೩–೨

೭೨. ಸಾಹಿತ್ಯದ ಹಿನ್ನೆಲೆ–ಪೀ.ಲೇ, ಪುಟ. ೯೬೪

೭೩. ಶಿಲಾಲತೆ–ಪೀ.ಲೇ, ಪು. ೯೬೮

೭೪. ಪುರಾಣಗಳಕಾಲ–ಪ್ರಬುದ್ಧ ಕರ್ಣಾಟಕ–(ಸಂ–೨೧)

೭೫. ಲಿಂಗಾರ್ಚನೆ, ಲಿಂಗಾಧಾರಣೆ–ಜಯಕರ್ನಾಟಕ–(ಸಂ–೧೩–ಸಂ–೧)

೭೬. ಶರಣಚರಿತ ಮಾನಸಂ–ಪೀ.ಲೇ, ೧೦೧೦

೭೭. ತೋಮರ ರಗಳೆ–ಪ್ರಬುದ್ಧ ಕರ್ಣಾಟಕ–೩೪–೧

೭೮. ಧವಳವೆಂಬ ಹಾಡಿನ ಸ್ವರೂಪ, ಪೀ.ಲೇ, ಪುಟ. ೬೭೯

೭೯. ಮಾನಸೋಲ್ಲಾಸದಲ್ಲಿ ಛಂದಸ್ಸು, ಪೀ.ಲೇ, ಪುಟ ೬೮೮

೮೦. ಕನ್ನಡ ಛಂದಸ್ಸು ಪೀ.ಲೇ, ಪುಟ. ೧೦೧೮

೮೧. ಮೂರು ಷಟ್ಪದಿಗಳು ಪೀ.ಲೇ, ೯೭೬

೮೨. ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ್ಯ

೮೩. ಕನ್ನಡದಲ್ಲಿ ವಿಡಂಬನ ಸಾಹಿತ್ಯ ಪು. ೧೬೮

೮೪. ಸೊನ್ನಲಾಪುರದ ಸಿದ್ಧರಾಮಕೃತ ಬಸವಸ್ತೋತ್ರಗೀತೆ ೧೬೮

೮೫. ವ್ಯವಹಾರಿಕ ಕನ್ನಡ ೧೬೩

೮೬. ಗೋವಿನ ಹಾಡು ೧೭೪

೮೭. ತೂಗು ದೀವಿಗೆ ೧೭೬

೮೮. ವೀರಶೈವ ಧರ್ಮ ಸಂಸ್ಕೃತಿ ೧೭೭

೮೯. ಸಂಶೋಧನ ರತ್ನ ಮಾಲಿಕೆ ೧೮೨

೯೦. ಒಂಬತ್ತು ನರಭಕ್ಷಕಗಳು ಮತ್ತು ಒಂದು ಪುಂಡ ಆನೆ, ೧೮೫

೯೧. ಸಂಶೋಧನ ತರಂಗ–ಸಂಪುಟ, ೧೮೯

೯೨. ಭಾರತೀಯ ಗ್ರಂಥ ಸಂಪಾದನೆ ಪರಿಚಯದ ಮುನ್ನುಡಿ ಪೀ.ಲೇ, ಪು. ೭೫೫

೯೩. ಲಾಳ ಕಟ್ಟಿಸಿಕೊಳ್ಳುವ ಎತ್ತು-ಮುತ್ತು ಹವಳ, ಉಪನ್ಯಾಸ ಮಾಲೆ-೧೯೪೯

೯೪. ಕಣ್ಣೋ ಕುರುಡೊ? ಮುತ್ತು ಹವಳ ಉಪನ್ಯಾಸ ಮಾಲೆ, ೧೯೪೯

೯೫. ವ್ಯಾಸಂಗದ ಹವ್ಯಾಸ, ಪ್ರಬುದ್ಧ ಕರ್ಣಾಟಕ, ೩೩-೨

೯೬. ಬಿಡುಗಡೆ-ಕಿರಿಯ ಕಾಣಿಕೆ, ೧೯೨೮

೯೭. ಶ್ರೀಯವರಿಗೆ ಅಂಕಿತ ಡಿ.ಎಲ್.ಎನ್. ಅ.ಬ.ಭಾ. ಪುಟ. ೨೨೯

೯೮. ಸಂತ ಅಗ್ನಿಸಳ ಹಬ್ಬ ಸಾಧನೆ ೩-೪

೯೯. ಭಾಷಾ ವಿಜ್ಞಾನ, ಪೀ.ಲೇ, ಪು. ೧೦೨೪

೧೦೦. ಪ್ರಾಕೃತ ಭಾಷೆಗಳ ಹೆಸರುಗಳು-ಪ್ರಬುದ್ಧ ಕರ್ಣಾಟಕ-ಸಂ, ೨೧-೪

೧೦೧. ಪದಗಳ ಹುಟ್ಟುಸಾವು-ಕೈಲಾಸ, ಸೆಪ್ಟೆಂಬರ್, ೧೯೬೩

೧೦೨. ನಿಘಂಟು ರಚನೆ, ಕನ್ನಡ ನುಡಿ, ಸಂ. ೧೯-೪

೧೦೩. ತರ್ಕ್ಕೋರ್ಮೆ ಅರ್ಥ ವಿಚಾರ ಮತ್ತು ನಿಷ್ಪತ್ತಿ, ದೇವಗಂಗೆ, ೧೯೬೮

೧೦೪. ಪಕ್ಷಿ>ಹಕ್ಕಿಗೆ ಸಮಾನ ಕನ್ನಡ ಶಬ್ದ-ಪ್ರಬುದ್ಧ ಕರ್ಣಾಟಕ-೪೪-೨

೧೦೫. ಭಗವತೀಯೇಟು-ಪ್ರಬುದ್ಧ ಕರ್ಣಾಟಕ-೪೪-೨

೧೦೬. ಕನ್ನಡದಲ್ಲಿ ಶಬ್ದರಚನೆ, ಪೀ.ಲೇ, ೩೬೮

೧೦೭. ಕನ್ನಡಕ್ಕೆ ಹೊಸ ನಿಘಂಟು, ಸಂಭಾವನೆ, ೧೯೪೧

೧೦೮. ಪೊರಸು ಒಂದು ವಿಚಾರ, ಪೀ.ಲೇ, ಪು. ೮೪೩

೧೦೯. ಬಾದುಬೆ, ಕನ್ನಡ ನುಡಿ (ಸಂ-೧೫)

೧೧೦. ತ್ರಾಸು, ಕನ್ನಡ ನುಡಿ (ಸಂ-೧೫)

೧೧೧. ಅಗ್ರಹಾರ ಒಂದು ಸೂಚನೆ, ಕನ್ನಡ ನುಡಿ, ೧೯೪೬

೧೧೨. ಕಾಳಸೆ-ಕಾಳಸ-ಕಾಳಾಸ-ಕಳಾಸ-ಕನ್ನಡನುಡಿ, ೧೯೪೭

೧೧೩. ಡಂಗುಹಾಕು ಎಂದರೇನು? ಜೀವನ ೧೯೫೨

೧೧೪. ರಪಣ-ರವಣ ಎಂಬುದರ ಅರ್ಥ ಮತ್ತು ನಿಷ್ಪತ್ತಿ ಅಭಿವಂದನೆ-೧೯೫೭

೧೧೯. ಮದನಾವತಾರ-ಪ್ರಬುದ್ಧ ಕರ್ಣಾಟಕ-೩೮-೪

೧೨೦. ಕಾರೋಹಣದ ಪಳಿ-ಪ್ರಬುದ್ಧ ಕರ್ಣಾಟಕ-೪೨-೧

೧೨೧. ಪಟಿಂಗಾಸು-ಪ್ರಬುದ್ಧ ಕರ್ಣಾಟಕ-೪೨-೨

೧೨೨. ಈಮಿಲ್ ಎಂದರೇನು? ಪ್ರಬುದ್ಧ ಕರ್ಣಾಟಕ-೪೪-೨

೧೨೩. ಗುಯ್ಯಲ್ ಇದರ ಅರ್ಥ ನಿಷ್ಪತ್ತಿ-ಪ್ರಬುದ್ಧ ಕರ್ಣಾಟಕ-೪೪-೪

೧೨೪. ಮೇಕು ಇದರ ಅರ್ಥ ಮತ್ತು ನಿಷ್ಪತ್ತಿ-ಪ್ರಬುದ್ಧ ಕರ್ಣಾಟಕ-೪೫-೧

### ಇಂಗ್ಲೀಷ್‌ನಲ್ಲಿನ ಲೇಖನಗಳು

1. The Genealogy of Arikesarin II Jcurnal of Andhra Historica Society, Vol. 7
2. Kannada Literature under Vijayanagar-Vijayanagara Six centenary Volume
3. Old kannada Literature : A brief Survey, Karnataka Darshan
4. The Talangere Inscription of Jayasimha (in collaboration with N.L.N Rao) El-Vol.29
5. Social and religious Life in Karnataka the Satavahanas : Karnataka Through the Ages
6. Four Etymos from old Kannada-(Emeneau Presentation Volume)
7. Empires of Karntaka -Lecture delivered on the occasion of the Golden Jubliee of the Historical Association Maharaja's College Mysore (To be published)

## ಸಂಶೋಧನಾ ಸಾಹಿತ್ಯ ಕುರಿತು ಡಿ.ಎಲ್.ಎನ್. ಅವರ ಹಿತನುಡಿಗಳು

೧. 'ಸಂಶೋಧಕ ತನಗೆ ಗೊತ್ತಿದ್ದರೆ ಗೊತ್ತಿದೆ ಎನ್ನಬೇಕು, ಇಲ್ಲದಿದ್ದರೆ ಗೊತ್ತಿಲ್ಲ ಎನ್ನಬೇಕು. ಎಷ್ಟುಗೊತ್ತಿದೆಯೋ ಅಷ್ಟು ಮಾತ್ರ ಗೊತ್ತಿದೆ ಎಂದು ಹೇಳಬೇಕು. ಅಷ್ಟೆ ಅಲ್ಲ, ಸಂಶೋಧಕನು ತನ್ನ ಸಂಪ್ರಬಂಧದಲ್ಲಿ ಏನಾದರೂ ಹೊಸ ಅಂಶ ಜ್ಞಾನವನ್ನು ವಿಸ್ತರಿಸುವ ಹೊಸ ಸಂಗತಿ, ಚಿಂತನೆ ಇದ್ದರೆ ಮಾತ್ರ ಅದನ್ನು ಬರೆಯಬೇಕು ಕೊನೆಯಪಕ್ಷ 'ಹೊಸಸರಿ' ಹೇಳಲು ಸಾಧ್ಯವಿಲ್ಲದಿದ್ದರೂ ಒಂದು ಹೊಸತಪ್ಪು ಆದರೂ ಬರಹದಲ್ಲಿ ಇರಬೇಕು.' (ಹಸ್ತಪ್ರತಿ ಅಧ್ಯಯನ ಸಂ-೩, ಸಂಚಿಕೆ-೧, ಜು.ಡಿ.೨೦೦೫, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವರ್ಷ ೨೦೦೬, ಪು. ೪೩)

೨. 'ಗ್ರಂಥಸಂಪಾದಕನಿಗೆ ಎರಡು ಕಣ್ಣುಗಳಿಗಿಂತ ನಾಲ್ಕು ಕಣ್ಣುಗಳಿರಬೇಕು.' (ಕನ್ನಡ ಗ್ರಂಥ ಸಂಪಾದನೆ ಪು. ೪೬, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು)

೩. 'ಪ್ರತಿಯೊಬ್ಬ ಕವಿ ತಾನು ಎಂಬ ಹೊಸ ವಸ್ತುವನ್ನು ಪ್ರಪಂಚಕ್ಕೆ ತರುತ್ತಾನೆ ಕಾವ್ಯದಲ್ಲಿ ಕವಿಯ ವ್ಯಕ್ತಿತ್ವ ಮನೋಧರ್ಮ ಜ್ಞಾತವಾಗಿಯೋ, ಅಜ್ಞಾತವಾಗಿಯೋ ಇದ್ದೇ ಇರುತ್ತದೆ.' (ಕನ್ನಡ ಸಾಹಿತ್ಯ ಇತಿಹಾಸ, ೧೯೮೧, ಪು. ೧)

೪. 'ಸರಸ್ವತಿಯ ರಾಜ್ಯದಲ್ಲಿ ಜಾತೀಯತೆ, ಮತಿಯತೆಗಳಿಗೆ ಸ್ಥಾನವಿಲ್ಲ' (ಡಿ.ಎಲ್. ನರಸಿಂಹಾಚಾರ್, ಎಸ್.ವಿದ್ಯಾಶಂಕರ ಪು. ೯೯)

೫. 'ಕವಿ-ವಿಮರ್ಶಕ-ಜಾತಿಯತೆ ಈ ವಿಷಯಗಳಿಗೆ ಸಂಬಂಧಿಸಿದ ಮನ ಕಷಾಯಗಳು ತೊಲಗಿ ಶುದ್ಧ ವಾಯುಗುಣ ನೆಲೆಗೊಂಡ ಹೊರತು ಕನ್ನಡ ಸಾಹಿತ್ಯ ವಿಮರ್ಶೆ ಬೆಳೆಯದು.' (೪೧ನೇ, ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷೀಯ ಭಾಷಣ ಕನ್ನಡ ನುಡಿ, ೨೩.೩, ಪು. ೧೪)

## ಗ್ರಂಥಋಣ

೧. ಅಂಗಡಿ ಎಸ್.ಎಸ್, ೨೦೧೧, ಎಂ.ಚಿದಾನಂದಮೂರ್ತಿ ಸಾಹಿತ್ಯ ಮತ್ತು ಸಾಧನೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು

೨. ಅಂಗಡಿ ಎಸ್.ಎಸ್. ೨೦೦೭, ಕನ್ನಡ ಗ್ರಂಥಸಂಪಾದನೆ ಬಂಧ ವಿನ್ಯಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩. ಅಂಗಡಿ ಎಸ್.ಎಸ್. (ಸಂ), ೨೦೧೨, ಕರ್ನಾಟಕ ಗ್ರಂಥಸಂಪಾದನೆ, ತನುಮನ ಪ್ರಕಾಶನ, ಮೈಸೂರು.

೪. ಅಂಗಡಿ ಎಸ್.ಎಸ್. (ಸಂ) ೨೦೧೨, ಸರಳ ಶಬ್ದಮಣಿದರ್ಪಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫. ಅಂಗಡಿ ಎಸ್.ಎಸ್. (ಸಂ) ೨೦೧೬, ಸರಳವಡ್ಡಾರಾಧನೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೬. ಅಂಗಡಿ ಎಸ್.ಎಸ್. (ಸಂ) ೨೦೧೫, ಸರಳಯಶೋಧರ ಚರಿತೆ, ಮಂಗಳ ಪ್ರಕಾಶನ, ಹೊಸಪೇಟೆ

೭. ಅನಂತರಾಮಯ್ಯ ಆರ್.ಎಲ್. (ಸಂ) ೨೦೧೨, ವಡ್ಡಾರಾಧನೆ ಕಥಾ ಲೋಕ, ಸಧಾನ ಪ್ರಕಾಶನ, ಬೆಂಗಳೂರು.

೮. ಅಬ್ದುಲ್ ಬಷೀರ್ ಜಿ. (ಸಂ) ೨೦೧೫, ಶಬ್ದಮಣಿದರ್ಪಣ ದೀಪಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯. ಕರ್ಕಿ ಡಿ.ಎಸ್. ೧೯೭೫, ಒಂದನೇಯ ನಾಗವರ್ಮನ ಛಂದೋಬುದಿ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೧೦. ಕರ್ಕಿ ಡಿ.ಎಸ್, ೨೦೦೪, ಕನ್ನಡ ಛಂದೋವಿಕಾಸ, ಭಾರತ ಪ್ರಕಾಶನ, ಧಾರವಾಡ

೧೧. ಕರ್ಕಿ ಡಿ.ಎಸ್, (ಸಂ) ೧೯೭೪, ಸಾಹಿತ್ಯ ಸಂಸ್ಕೃತಿ ಸ್ಮೃತಿ, ಐ.ಗ.ಬಿ.ಎಚ್. ಪ್ರಕಾಶನ, ಬೆಂಗಳೂರು

೧೨. ಕಲಬುರ್ಗಿ ಎಂ.ಎಂ, ೨೦೧೬, ಕನ್ನಡ ಗ್ರಂಥಸಂಪಾಧನಾ ಶಾಸ್ತ್ರ, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೧೩. ಕಲಬುರ್ಗಿ ಎಂ.ಎಂ, ೨೦೧೫, ಕನ್ನಡ ಗ್ರಂಥಸಂಪಾಧನಾ ಶಾಸ್ತ್ರ, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೧೪.ಕಲಬುರ್ಗಿ ಎಂ.ಎಂ, (ಸಂ) ೨೦೦೧, ಕೊಮಾರ ರಾಮನ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೫.ಕಲಬುರ್ಗಿ ಎಂ.ಎಂ, ೨೦೧೦, ಮಾರ್ಗ ಸಂಪುಟ–೦೨, ಸಪ್ನ ಬುಕ್ ಹೌಸ್, ಬೆಂಗಳೂರು.

೧೬. ಕಲಬುರ್ಗಿ ಎಂ.ಎಂ, ೨೦೧೦, ಮಾರ್ಗಸಂಪುಟ–೦೪, ಸಪ್ನ ಬುಕ್ ಹೌಸ್ ಬೆಂಗಳೂರು.

೧೭. ಕರೀಗೌಡ ಬೀಚನಹಳ್ಳಿ, ೨೦೧೩, ಬಿ.ಎಂ.ಶ್ರೀಕಂಠಯ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೮. ಕವಲಿ ಪಂಡಿತ, ೨೦೧೪, ಕಸ್ತೂರಿಕೋಶ, ಶ್ರೀರಾಮಾಯಣ ಪ್ರಕಾಶನ, ಧಾರವಾಡ.

೧೯. ಕಮಲಾ ಹಂಪನಾ (ಸಂ), ೧೯೮೩, ಡಿ.ಎಲ್.ಎನ್. ಅವರ ಆಯ್ದ ಲೇಖನಗಳು ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು.

೨೦. ಕೀರ್ತಿನಾಥ ಕುರ್ತುಕೋಟಿ, ೨೦೧೪, ಕನ್ನಡ ಸಾಹಿತ್ಯ ಸಂಗಾತಿ, ಕುರ್ತುಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ.

೨೧. ಕೀರ್ತಿನಾಥ ಕುರ್ತುಕೋಟಿ, (ಸಂ), ೧೯೫೫, ನಡೆದುಬಂದದಾರಿ–೧, ಮನೋಹರ ಗ್ರಂಥಮಾಲೆ, ಧಾರವಾಡ

೨೨. ಕೀರ್ತಿನಾಥ ಕುರ್ತುಕೋಟಿ, ೨೦೦೯, ಭಾಷೆ ಮತ್ತು ಸಂಸ್ಕೃತಿ, ಕುರ್ತುಕೋಟಿ, ಮೆಮೋರಿಯಲ್ ಟ್ರಸ್ಟ್, ಧಾರವಾಡ

೨೩. ಕೇಶವಭಟ್ಟ ಟಿ, (ಸಂ) ೨೦೧೩, ಶಿವಕೋಟ್ಯಾಚಾರ್ಯರ ವಡ್ಡಾರಾಧನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೪. ಕೃಷ್ಣಯ್ಯ ಎಂ.ಎಚ್, ೨೦೧೫, ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ಅಂಕಿತ ಪ್ರಕಾಶನ, ಬೆಂಗಳೂರು.

೨೫. ಕುಮಾರ ನಿಜಗುಣ (ಸಂ) ೨೦೦೮, ಛಂದೋವಿಲಾಸ ವೈಭವ, ರಾಜಪ್ರಕಾಶನ, ಮೈಸೂರು.

೨೬. ಗಂಗನಾರಾಯಣ, ವೈ.ಸಿ. ಭಾನುಮತಿ (ಸಂ), ೨೦೧೧, ಅಕಾರಾಧಿ ನಿಘಂಟು ಮತ್ತು ವೈದ್ಯ ನಿಂಘಟು  ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು.

೨೭. ಗಂಗಾನಾಯಕ್ ಕೆ.ಎನ್., ಚಂದ್ರಶೇಖರ್ ಎನ್.ಬಿ. (ಸಂ), ೨೦೧೧, ಪ್ರಾಚೀನ ಕನ್ನಡ ಸಾಹಿತ್ಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಬೆಂಗಳೂರು.

೨೮. ಚಿದಾನಂದಮೂರ್ತಿ ಎಂ, ೧೯೯೮, ಹೊಸತು ಹೊಸತು, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೨೯. ಜವರೇಗೌಡ ದೇ, ೨೦೦೯, ಪೂರ್ವಕವಿಗಳಿಗೆ ನುಡಿ ನಮನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೦. ಜ್ಯೋಷಿ ಕೆ.ಟಿ, ೧೯೭೪, ಚಂಪೂಕಾವ್ಯಗಳು, ಪ್ರತಿಭಾ ಗ್ರಂಥಮಾಲೆ ಧಾರವಾಡ.

೩೧. ತಾರಾನಾಥ ಎನ್.ಎಸ್, (ಸಂ), ೨೦೦೧, ಶತಮಾನದ ಸಂಶೋಧನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೨. ತಿಪ್ಪೇರುದ್ರಸ್ವಾಮಿ ಎಚ್, ೨೦೧೧, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೩೩. ನರಸಿಂಹಾಚಾರ್ ಆರ್, ೨೦೧೨, ಕನ್ನಡ ರತ್ನಕೋಶ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೩೪. ನರಸಿಂಹಾಚಾರ್ ಆರ್, ೨೦೧೧, ಕರ್ನಾಟಕ ಕವಿಚರಿತೆ (ಸಂ)–೧, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೩೫. ಅದೇ, ಸಂಪುಟ–೨, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೩೬. ಅದೇ, ಸಂಪುಟ–೩, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು.

೩೭. ನರಸಿಂಹಾಚಾರ್ ಡಿ.ಎಲ್., ೨೦೧೫, ಕನ್ನಡ ಗ್ರಂಥ ಸಂಪಾದನೆ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು

೩೮. ನರಸಿಂಹಾಚಾರ್ ಡಿ.ಎಲ್., ೨೦೧೨, ಪೀಠಿಕೆಗಳು ಲೇಖನಗಳು, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು

೩೯. ನರಸಿಂಹಾಚಾರ್ ಡಿ.ಎಲ್., ೨೦೧೫, ವಡ್ಡಾರಾಧನೆ, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು

೪೦. ನರಸಿಂಹಾಚಾರ್ ಡಿ.ಎಲ್., ೨೦೧೩, ಶಬ್ದವಿಹಾರ, ಶಾರದಾ ಮಂದಿರ ಮೈಸೂರು

೪೧. ನರಸಿಂಹಾಚಾರ್ ಡಿ.ಎಲ್., (ಸಂ) ೨೦೧೩, ಕೇಶಿರಾಜ ವಿರಚಿತ ಶಬ್ದಮಣಿದರ್ಪಣ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೪೨. ನರಸಿಂಹಾಚಾರ್ ಡಿ.ಎಲ್., ವೆಂಕಣ್ಣಯ್ಯ ಟಿ.ಎಸ್, (ಸಂ) ೧೯೪೧, ಸಿದ್ದರಾಮ ಚಾರಿತ್ರ್ಯ ಕರ್ನಾಟಕ ಸಂಘ, ಶಿವಮೊಗ್ಗ

೪೩. ನರಸಿಂಹಾಚಾರ್ ಡಿ.ಎಲ್., ೧೯೫೧, ಸಿದ್ಧರಾಮ ಚರಿತೆಯ ಸಂಗ್ರಹ, ಶಾರದಾ ಮಂದಿರ ಮೈಸೂರು

೪೪. ನರಸಿಂಹಾಚಾರ್ ಡಿ.ಎಲ್., ಶಾಮರಾವ್ ಟಿ.ಎಸ್. (ಸಂ) ೧೯೫೪, ಸುಕುಮಾರ ಚರಿತಂ, ಕರ್ನಾಟಕ ಸಂಘ, ಶಿವಮೊಗ್ಗ

೪೫. ನರಸಿಂಹಾಚಾರ್ ಡಿ.ಎಲ್., ೨೦೦೫, ಹಂಪೆಯ ಹರಿಹರ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೪೬. ನರಸಿಂಹಾಚಾರ್ ಡಿ.ಎಲ್., (ಸಂ) ೧೯೯೦, ಗೋವಿನಹಾಡು, ಶಾರದಾ ಮಂದಿರ ಮೈಸೂರು

೪೭. ನರಸಿಂಹಾಚಾರ್ ಡಿ.ಎಲ್., ೨೦೧೨, ಪಂಪಭಾರತ ದೀಪಿಕೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೪೮. ನಾಗೇಂದ್ರಪ್ಪ ಕೆ. ಜವರೇಗೌಡ ದೇ, (ಸಂ) ೧೯೯೩, ವಡ್ಡಾರಾಧನೆಯ ಕಥೆಗಳು ಸಂಸ ಸಾಹಿತ್ಯ ಪ್ರಕಾಶನ, ಮೈಸೂರು

೪೯. ನಾಯಕ ಡಿ.ಬಿ., (ಸಂ) ೨೦೦೮, ಶಬ್ದಮಣಿದರ್ಪಣ ಸಂಗ್ರಹ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ

೫೦. ನಾರಾಯಮ ಪಿ.ವಿ., (ಸಂ) ೨೦೧೩, ನಾಗಚಂದ್ರಕವಿಯ ಪಂಪರಾಮಾಯಣ, ಕಾಮಧೇನು ಪುಸ್ತಕ ಭವನ, ಬೆಂಗಳೂರು

೫೧. ನಾರಾಯಣ ಪಿ.ವಿ. (ಸಂ) ೨೦೧೩, ಹಳಗನ್ನಡ ಪದಸಂಪದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫೨. ನಾಗಭೂಷಣ ಸಿ, ೧೯೯೯, ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ, ಅಮೃತ ವರ್ಷಿಣಿ ಪ್ರಕಾಶನ, ಸಂಡೂರು

೫೩. ನೇಗಿನಾಳ ಎಂ.ಬಿ. (ಸಂ) ೧೯೯೯, ರಾಘವಾಂಕ ವಿರಚಿತ ಸಿದ್ಧರಾಮ ಚಾರಿತ್ರ್ಯ, ತೋಂಟದಾರ್ಯ ವೀರಶೈವ ಅಧ್ಯಯನ ಸಂಸ್ಥೆ, ಗದಗ

೫೪. ಪರಮಶಿವಯ್ಯ ಜಿ.ಶಂ., ಕೃಷ್ಣನ (ಸಂ) ೧೯೯೯, ಜ್ಞಾನೋಪಾಸಕ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫೫. ಪುಟ್ಟಯ್ಯ ಬಿ.ಎಂ., ೨೦೧೫, ವಡ್ಡಾರಾಧನೆ ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫೬. ಮಾಡ್ತಾವಿಲ್ಯಂ, ಕುಲಕರ್ಣಿ ಆರ್.ವಾಯ್, (ಸಂ) ೧೯೯೪, ನಿಘಂಟು ರಚನಾ ವಿಜ್ಞಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ

೫೭. ಮುತ್ತಮ್ಮ ಡಿ.ಎಲ್.ಎನ್, ೧೯೭೭, ಡಿ.ಎಲ್.ಎನ್. ಅವರ ಆಯ್ದ ಲೇಖನಗಳು, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೫೮. ಬಸವರಾಜು ಎಲ್ (ಸಂ), ೨೦೦೮, ನೂರಾರು ಶರಣರ ಸಾವಿರಾರು ವಚನಗಳು, ಮುದ್ಧಶ್ರೀ ಗ್ರಂಥಮಾಲೆ, ಬೆಂಗಳೂರು

೫೯. ಬಸವರಾಧ್ಯ ಎನ್ (ಸಂ), ೨೦೧೧, ಹಳಗನ್ನಡ ಶಬ್ದಾರ್ಥಕೋಶ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೬೦. ಬಸವರಾಜ ಸಾದರ (ಸಂ), ೨೦೦೨, ಮೊದಲ ಇಪ್ಪತ್ತನೇಯ ಶತಮಾನದ ಸಾಹಿತ್ಯ ಘಟ್ಟಗಳು, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ

೬೧. ಭಾನುಮತಿ ವೈ.ಸಿ, ೨೦೦೯, ಗ್ರಂಥಸಂಪಾದನೆ ಎಳೆಗಳು, ವಿಸ್ಮಯ ಪ್ರಕಾಶನ, ಮೈಸೂರು

೬೨. ಬ್ರಹ್ಮಪ್ಪ. ಜಿ, (ಸಂ) ೨೦೧೨, ವಡ್ಡಾರಾಧನೆಯ ಕಥೆಗಳು, ತನುಮನ ಪ್ರಕಾಶ, ಮೈಸೂರು

೬೩. ಮುಗಳಿ ರಂ.ಶ್ರೀ. ೨೦೧೪, ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಮೈಸೂರು

೬೪. ರವೀಂದ್ರನಾಥ ಕೆ, ೨೦೧೪, ಕನ್ನಡ ದಾಖಲೀಸಾಹಿತ್ಯ, ಮಂಗಳಾ ಪ್ರಕಾಶನ, ಹೊಸಪೇಟೆ

೬೫. ರವೀಂದ್ರನಾಥ ಕೆ, ನಾವಡ ಎ.ವಿ, (ಸಂ) ೨೦೦೬, ಕವಳಿಗೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೬೬. ರಾಜೂರ ವೀರಣ್ಣ (ಸಂ), ೨೦೦೬, ಎಲ್ಲಾ ಪುರಾತನರ ವಚನಗಳು ಭಾಗ–೧, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು

೬೭. ಲಕ್ಷ್ಮೀನಾರಾಯಣ ಭಟ್ಟ ಎನ್.ಎಸ್, (ಸಂ) ೨೦೧೦, ಸಾಹಿತ್ಯ ರತ್ನ ಸಂಪುಟ, ಕನ್ನಡ ಪುಸ್ತಕ ಪ್ರಾಧೀಕಾರ, ಬೆಂಗಳೂರು

೬೮. ವಿದ್ಯಾಶಂಕರ ಎಸ್, ೧೯೯೨, ಡಿ.ಎಲ್.ನರಸಿಂಹಾಚಾರ್, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

೬೯. ವಿದ್ಯಾಶಂಕರ ಎಸ್, (ಸಂ) ೧೯೯೩, ಸಂಕೀರ್ಣ ವಚನ ಸಂಪುಟ–೧, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು

೭೦. ವಿವೇಕ ರೈ.ಬಿ., (ಸಂ) ೨೦೦೪, ರಾಘವಾಂಕನ ಸಮಗ್ರಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೭೧. ವೀರೇಶ ಬಡಿಗೇರ (ಸಂ), ೨೦೧೪, ಸರ್ವಜ್ಞ ಸಾಹಿತ್ಯ ಕುರಿತ ಅಧ್ಯಯನಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೭೨. ವೃಷಬೇಂದ್ರ ಸ್ವಾಮಿ ಎಸ್.ಎಂ., (ಸಂ) ೧೯೮೧, ಡಿ.ಎಲ್.ಎನ್. ಬೋಧಿಸಿದ ಕನ್ನಡ ಸಾಹಿತ್ಯ ಇತಿಹಾಸ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೭೩. ವೆಂಕಟಾಚಲಶಾಸ್ತ್ರೀ ಟಿ.ವಿ, ೧೯೯೬, ಕನ್ನಡ ಛಂದಸ್ವರೂಪ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

೭೪. ವೆಂಕಟಾಚಲಶಾಸ್ತ್ರೀ ಟಿ.ವಿ, (ಸಂ), ೨೦೦೪, ಗ್ರಂಥಸಂಪಾದನೆ ಪಾರಿಭಾಷಿಕ ಕೋಶ, ಬಿ.ಎಂ. ಪ್ರತಿಷ್ಠಾನ, ಬೆಂಗಳೂರು

೭೫. ವೆಂಕಟಾಚಲಶಾಸ್ತ್ರೀ ಟಿ.ವಿ, (ಸಂ) ೨೦೦೮, ಪಂಪ, ಸಾಹಿತ್ಯ ಅಕಾದೆಮಿ, ಬೆಂಗಳೂರು

೭೬. ವೆಂಕಟಾಚಲಶಾಸ್ತ್ರೀ ಟಿ.ವಿ, (ಸಂ) ೨೦೦೮, ಪ್ರೊ.ಡಿ.ಎಲ್.ನರಸಿಂಹಾಚಾರ್ಯರ ಹೆಚ್ಚಿನ ಬರಹ ಮತ್ತು ಭಾಷಣಗಳು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೭೭. ವೆಂಕಟಾಚಲಶಾಸ್ತ್ರೀ ಟಿ.ವಿ, (ಸಂ), ೧೯೮೯, ರುದ್ರನಾತಕೋಪನ್ಯಾಸಗಳು, ವಾಗ್ದೇವಿ ಪುಸ್ತಕ ಪ್ರಕಾಶನ ಮಳಿಗೆ, ಮೈಸೂರು

೭೮. ವೆಂಕಟಾಚಲಶಾಸ್ತ್ರೀ ಟಿ.ವಿ, (ಸಂ), ೨೦೦೯, ಶ್ರೀವತ್ಸ ನಿಘಂಟು, ಕನ್ನಡ ಪುಸ್ತಕ ಪ್ರಾಧೀಕಾರ, ಬೆಂಗಳೂರು

೭೯. ವೈಕುಂಠರಾಜು ಬಿ.ವಿ., ೧೯೯೨, ಡಿ.ಎಲ್.ನರಸಿಂಹಾಚಾರ್, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು

೮೦. ಶಾಮರಾಯ ತ.ಸು, ೨೦೧೪, ಕನ್ನಡ ಸಾಹಿತ್ಯ ಚರಿತ್ರೆ ತ.ವೆಂ.ಸ್ಮಾರಕ ಗ್ರಮಾ, ಮೈಸೂರು

೮೧. ಶಿವರುದ್ರಪ್ಪ ಜಿ.ಎಸ್, ೨೦೦೭, ಕನ್ನಡ ಸಾಹಿತ್ಯ ಸಮೀಕ್ಷೆ, ತ.ವೆಂ.ಸ್ಮಾ.ಗ್ರಮಾ. ಮೈಸೂರು

೮೨. ಶಿವರುದ್ರಪ್ಪ ಜಿ.ಎಸ್, ೧೯೮೧, ನವೋದಯ, ನೆಲೆಮನೆ ಪ್ರಕಾಶನ, ಬೆಂಗಳೂರು

೮೩. ಶಿವಾನಂದ ವಿ. (ಸಂ) ೧೯೯೨, ಶಬ್ದಮಣಿದರ್ಪಣದಲ್ಲಿ ಗ್ರಾಂಥಿಕ ವ್ಯವಹಾರಿಕ ಶೈಲಿಗಳು ಒಂದು ಸಮಾಜೋಭಾಷಿಕ ವಿಶ್ಲೇಷಣೆ, ಶ್ರೀ ಶಿವಕುಮಾರ ಏಜೆನ್ಸಿ, ಗದಗ.

೮೪. ಶ್ರೀನಿವಾಸಾಚಾರ್ ಡಿ, ನರಸಿಂಹಾಚಾರ್ ಡಿ.ಎಲ್, ೧೯೬೪, ಸಕಲವೈದ್ಯ ಸಂಹಿತಾ ಸಾರಾಣವ (ಸಂ-೧) ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೮೫. ಶ್ರೀಕಂಠಯ್ಯ ತೀ.ನಂ, ೨೦೧೫, ಕನ್ನಡ ಮಾಧ್ಯಮ ವ್ಯಾಕರಣ, ಗೀತಾ ಬುಕ್ ಹೌಸ್, ಮೈಸೂರು

೮೬. ಶ್ರೀಮತಿ ಎಚ್.ಎಸ್, (ಸಂ), ೧೯೯೩, ಹಳಗನ್ನಡ ಸಾಹಿತ್ಯಾಧ್ಯಾಯನ ಸಮೀಕ್ಷೆ ಅಜಂತಾ ಪ್ರಕಾಶ,ನ ಹೊಸಪೇಟೆ

೮೭. ಶೇಷಗಿರಿರಾವ್ ಎಲ್.ಎಸ್, ೧೯೮೧, ಹೊಸಗನ್ನಡ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೮೮. ಶೇಷಗಿರಿ ಎಲ್.ಎಸ್, (ಸಂ) ೧೯೯೩, ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಉದಯ ಭಾನುಪ್ರಕಾಶನ, ಬೆಂಗಳೂರು

೮೯. ಸೀತಾರಾಮಯ್ಯ ವಿ, ೨೦೧೨, ರಾಘವಾಂಕ, ಸಪ್ನ ಬುಕ್ ಹೌಸ್, ಬೆಂಗಳೂರು

೯೦. ಸೀತಾರಾಮಯ್ಯ ವಿ, (ಸಂ), ೨೦೧೨, ವಡ್ಡಾರಾಧನೆ, ಸಪ್ನ ಬುಕ್ ಹೌಸ್, ಬೆಂಗಳೂರು

೯೧. ಸುಬ್ಬಣ್ಣ ರೈ, ಮಾಧವ ಪೆರಾಜೆ ಎ, (ಸಂ), ೨೦೧೩, ಸಂಕ್ಷಿಪ್ತ ಆಧುನಿಕ ಕನ್ನಡ ನಿಘಂಟು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೯೨. ಹರಿಕೃಷ್ಣ ಭರಣ್ಯ, ೧೯೯೦, ಹೊಸಗನ್ನಡ ಸಾಹಿತ್ಯ ಉಗಮ ಮತ್ತು ವಿಕಾಸ, ಪ್ರಭಸ ಬಿಡುಗಡೆ, ಮೈಸೂರು

೯೩. ಹಳ್ಳಿಕೇರಿ ಎಫ್.ಟಿ, ೨೦೦೫, ಹಸ್ತಪ್ರತಿ ಅಧ್ಯಯನ (ಸಂ-೩, ಸಂಚಿಕೆ-೧) ಜುಲೈ-ಡಿಸೆಂಬರ್ ನಿಘಂಟು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೯೪. ಹಳ್ಳಿಕೇರಿ ಎಫ್.ಟಿ, ರವೀಂದ್ರನಾಥ ಕೆ, ೨೦೦೨, ಸಿರಿಸಂಪದ, ಬಿ.ವಿ.ಶಿರೂರ ಅಭಿನಂದನ ಸಮಿತಿ, ಯಲಬುರ್ಗಾ

೯೫. ಹಳ್ಳಿಕೇರಿ ಎಫ್.ಟಿ, (ಸಂ), ೨೦೦೫, ಡಿ.ಎಲ್.ನರಸಿಂಹಾಚಾರ್ ಶತಮಾನ ಸ್ಮರಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೯೬. ಹಾವನೂರು ಶ್ರೀನಿವಾಸ, ೨೦೦೦, ಹೊಸಗನ್ನಡ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೯೭. ಉಪಾಯನ (ಸಂ) ೧೯೬೭, ಗೆಳೆಯ ಮತ್ತು ಶಿಷ್ಯ ವೃಂದ, ಡಿ.ಎಲ್.ಎನ್. ಸಂಭಾವಾ ಗ್ರಂಥ ಪ್ರಕಾಶನ, ಸಮಿತಿ, ಬೆಂಗಳೂರು

೯೮. ಗೋವಿನಹಾಡು, ೨೦೧೦, (ಸಂ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

## ಪಿಎಚ್.ಡಿ. ಮಹಾಪ್ರಬಂಧಗಳು

೧. ಕುಮಾರ ಎಂ, ೨೦೦೮, ಕನ್ನಡ ಕಾವ್ಯಗಳಲ್ಲಿ ಪರ್ಯಾವರಣ: ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨. ನಾಗರಾಜಯ್ಯ ಹಂ.ಪ., ೧೯೯೯, ವಡ್ಡಾರಾಧನೆ : ಸಮಗ್ರ ಅಧ್ಯಯನ ಸಿ.ವಿ.ಜೆ. ಪಬ್ಲಿಕೇಷನ್, ಬೆಂಗಳೂರು

೩. ಪರಡ್ಡಿ ಎಸ್.ಎಸ್, ೨೦೦೮, ಡಿ.ಎಸ್. ಕರ್ಕಿ : ಸಮಗ್ರ ಸಾಹಿತ್ಯ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೪. ಬಸವರಾಜ ಆರ್, ೨೦೧೬, ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ (ಅಪ್ರಕಟಿತ ಪಿಎಚ್.ಡಿ. ನಿಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫. ರವೀಂದ್ರ ಎಂ, ೨೦೧೫, ಡಿ.ಎಲ್. ನರಸಿಂಹಾಚಾರ್ ಮತ್ತು ಕನ್ನಡ ವಿದ್ವತ್ ಪರಂಪರೆ, ಬೆಂಗಳೂರು ವಿಶ್ವವಿದ್ಯಾಲಯ (ಅಪ್ರಕಟಿತ ಪಿಎಚ್.ಡಿ. ನಿಬಂಧ) ಬೆಂಗಳೂರು

೬. ಶಶಿಕಲಾ ಎಸ್, ದಂಡಿಗಿಮಠ, ೨೦೦೮, ಡಾ.ಆರ್.ಸಿ.ಹಿರೇಮಠ ಅವರ ಜೀವನ ಹಾಗೂ ಸಾಧನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೭. ಶಿವಣ್ಣ ಎಸ್, ೨೦೦೮, ಚಂದ್ರಶೇಖರ ಪಾಟೀಲರ ಸಾಹಿತ್ಯ ಸಮಗ್ರ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೮. ಶಿವನಗೌಡ ಪಾಟೀಲ, ೨೦೧೬, ರಂ.ಶ್ರೀ. ಮುಗಳಿ ಅವರ ಸಮಗ್ರ ಸಾಹಿತ್ಯ (ಅಪ್ರಕಟಿತ ಪಿಎಚ್.ಡಿ. ನಿಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

